ವಿಷ್ಣುಕಾಂತೆ

# ಶಾಂತಲಾ

(ಐತಿಹಾಸಿಕ ಕಾದಂಬರಿ)

ಬರೆದವರು:

ಕೆ. ವಿ. ಅಯ್ಯರ್







ವ್ಯಾಯಾಮಶಾಲಾ
ಬೆಂಗಳೂರು ೫೬೦೦೦೪

## ಅರಿಕೆ

ಬೇಲೂರು ಹಳೆಯಬೀಡುಗಳ ಕೇಶವಾಲಯ ಶಿವಾಲಯಗಳನ್ನು ಅನೇಕ ವರ್ಷಗಳ ಹಿಂದೆ ನೋಡಿದ್ದೆ. ಬೊಂಬಾಯಿ ಪ್ರಾಂತದ ಸ್ನೇಹಿತರೊಬ್ಬರಿಗೆ ಆ ದೇವಾಲಯಗಳನ್ನು ತೋರಿಸಲು ಸುಮಾರು ಎರಡೂವರೆ ವರ್ಷದ ಹಿಂದೆ ಮತ್ತೆ ಹೋದೆ.

ನಾವು ಹಳೆಯಬೀಡನ್ನು ಸೇರಿದಾಗ ಹೊತ್ತು ಇಳಿದು ಸಂಜೆಯಾಗಿತ್ತು. ಹೊಯಿಸಳೇಶ್ವರ ದೇವಾಲಯದ ದಕ್ಷಿಣದ್ವಾರಕ್ಕೆ ಸ್ವಲ್ಪ ದೂರದಲ್ಲಿ, ಪೂರ್ಣ ದೇವಾಲಯವನ್ನು ದೃಷ್ಟಿಗೆ ಅಳವಡಿಸಿಕೊಂಡು ನೋಡುತ್ತ ನಿಂತೆ. ಎಷ್ಟು ಹೊತ್ತು ನೋಡುತ್ತ ನಿಂತೆನೊ! ಇಳಿಬಿಸಿಲಿನ ಹೊಂಬಣ್ಣ ದೇವಾಲಯಕ್ಕೆ ಕನಕಾಭಿಷೇಕ ಮಾಡಿದಂತೆ ಕಂಡಿತು. ಶಿಲ್ಪಕಲೆಯ ಆ ನಿಧಿ ಯಾವುದೊ ಮೇಲಿನ ಲೋಕದಿಂದ ಭೂಮಿಗೆ ಇಳಿದುಬಂದಂತೆ ಇತ್ತು. ಆ ದೃಶ್ಯ ನನ್ನ ಚಿತ್ತವನ್ನು ಭ್ರಮೆಗೊಳಿಸಿತು. ಅನಂತರ ದೇವಾಲಯದೊಳಕ್ಕೆ ಹೋದೆ.

ಗರ್ಭಗುಡಿಯೊಳಗೆ ಒಬ್ಬ ವಟು ಮಹಾದೇವನ ಮುಂದೆ ಒಂದು ಚಿಕ್ಕ ಸೊಡರನ್ನು ಹಚ್ಚಿ ಬೆಳಕು ಮಾಡುತ್ತಿದ್ದ. ಮಹಾದೇವನಿಗೆ ಹಣ್ಣು ಕಾಯಿ ಹೂ ಅರ್ಪಿಸಿ, ಕರ್ಪೂರಾರತಿ ಮಾಡಿಸಿ, ದರ್ಶನಭಾಗ್ಯ ಪಡೆದೆ. ನನ್ನ ಚಿತ್ತ ವಿಭ್ರಮ ಭಾವೋದ್ರೇಕಕ್ಕೆ ಏರಿತು. ಮಹಾದೇವನ ಮುಂದೆ ಇದ್ದ ವರ್ತುಳಾಕಾರದ ಶಿಲಾಪೀಠದ ಮೇಲೆ ಕುಳಿತು ಕಣ್ಮುಚ್ಚಿದೆ. ಭಾವಜೀವಿಯೂ ರಸಾತ್ಮಿಕೆಯೂ ಆದ ಮಹಾರಾಣಿ ಶಾಂತಲಾದೇವಿ ಭಕ್ತಿಪರವಶಳಾಗಿ ದೇವನ ಮುಂದೆ ನರ್ತಿಸುತ್ತಿದ್ದ ಶಿಲಾಪೀಠವಿದೆಂದು ನನ್ನ ಹೃದಯ ಹೇಳಿತು. ಆಗ ನನ್ನನ್ನು ಹಿಡಿದ ಭಾವಾವೇಶ ಈಗ ಹೀಗೆ ಈ ಕೃತಿರೂಪವಾಗಿದೆ. ಇದರಲ್ಲಿ ಒಂದೆಡೆ ಕುವರವಿಷ್ಣು ತಾನು ಕಂಡ ಒಂದು ಕನಸನ್ನು ತನ್ನ ಅಕ್ಕ ಶಾಂತಲೆಗೆ ಬಣ್ಣಿಸುತ್ತಾನೆ; ಆ ಕನಸು ಆ ರಾತ್ರೆ ನಾನು ಕಂಡದ್ದು.

ಈ ಕಥೆಯನ್ನು ಬರೆಯುವ ಮುಂಚೆ ಬೇಲೂರು ಹಳೆಯಬೀಡುಗಳು ನನ್ನನ್ನು ತಮ್ಮಲ್ಲಿಗೆ ಮತ್ತೊಮ್ಮೆ ಸೆಳೆದವು. ಈ ಸಲ ನನ್ನ ಮನೆಯ ಬಳಗದ ಜೊತೆಗೆ ಗೆಳೆಯರಾದ ಶ್ರೀ ರಾಜರತ್ನಂ ಅವರನ್ನೂ ಕೂಡಿ ಹೋದೆ.

ಶ್ರವಣಬೆಳುಗೊಳ, ಬೇಲೂರು, ಹಳೆಯಬೀಡುಗಳ ಇತಿಹಾಸ ಈ ಮಿತ್ರರಿಗೆ ತುಂಬ ಇಷ್ಟ. ಈ ಸಲದ ಪ್ರಯಾಣ ಸಾರ್ಥಕವಾಯಿತು. ಶಾಂತಲೆಯ ಕತೆಯನ್ನು ಬರೆಯುವ ಇಚ್ಛೆ ಉತ್ಕಟವಾಯಿತು. ನನ್ನ ಎಲ್ಲ ಕನ್ನಡ ಬರಹಗಳಿಗೂ ಕಾರಣರಾದ ಇವರೇ ಇದಕ್ಕೂ ಕಾರಣರಾದರು.

ಶಾಂತಲೆಗೆ ಸಂಬಂಧಿಸಿದ ಶಾಸನಾಧಾರಗಳನ್ನು ನೋಡಿದ್ದರ ಜೊತೆಗೆ ತಂಜಾವೂರಿನ ಸರಸ್ವತೀಭಂಡಾರದ ಇತಿಹಾಸ ಗ್ರಂಥಗಳ ಅವಲೋಕನದಿಂದ ಹೊಯಿಸಳ ವಿಷ್ಣುವರ್ಧನನ ಸಮಕಾಲೀನರ ವಿಷಯಗಳನ್ನೂ ಸಂಗ್ರಹಿಸಿಕೊಂಡು ಈ ಕಥೆಯನ್ನು ಬರೆದಿದ್ದೇನೆ. ಬರವಣಿಗೆ ಸಾಗಿದಂತೆಲ್ಲ, ಸಹೃದಯರಾದ ಶ್ರೀ ರಾಜರತ್ನಂ ಅದನ್ನು ಓದಿಸಿ ಕೇಳಿದ್ದಾರೆ. ಈ 'ಶಾಂತಲಾ' ಕೃತಿ ಪ್ರಕಟವಾಗಿರುವುದು ಇವರ ಮಿತ್ರಕಾರ್ಯದ ಫಲವಾಗಿ.

ಹೊಯಿಸಳ ರಾಜ್ಯದ ಮಹಾ ಸಂಪತ್ತನ್ನು ಮಲ್ಲಿಕ್ ಕಾಫೂರನೂ ಗಂಗೂ ಸಲಾರನೂ ಆ ಕಾಲದಲ್ಲಿ ದೋಚಿದ್ದು ಇರಲಿ, ದೇವಾಲಯದ ಮೂರ್ತಿಗಳನ್ನು ಭಿನ್ನ ಮಾಡಿದ್ದೂ ಇರಲಿ—ಅನುಪಮವಾದ ಹಳೆಯಬೀಡಿನ ಸುಂದರ ವಿಗ್ರಹಗಳ ಕೈಕಾಲು ಮುರಿದು, ಕಣ್ಣು ಕಿತ್ತು, ಮುಖ ತಲೆಗಳನ್ನು ಜಜ್ಜಿರುವವರು ನಾವು, ನಮ್ಮವರು. ಮಂಗನ ಕೈಯ ಮಾಣಿಕ್ಯವಾಗಿದೆ ಈ ಬೃಹತ್ ಕಲಾಸೃಷ್ಟಿ. ಕನ್ನಡನಾಡಿನ ಪೀಳಿಗೆಯ ಈ ರೂಕ್ಷಕೃತ್ಯಗಳಿಗೆ ವಿಷ್ಣುವರ್ಧನ ಶಾಂತಲೆಯರ ಆತ್ಮಗಳು ಎಷ್ಟು ನೋಯುವುವೊ! ಈ ಕತೆ ಅದಕ್ಕಾಗಿ ನನ್ನ ಹೃದಯ ಮಿಡಿದ ಕಂಬನಿಯಾದರೂ ಅಂತರ್ಯದಲ್ಲಿ ಇದು ಒಂದು ಪ್ರೇಮಮಯ ಸಂಸಾರದ ಚಿತ್ರ.

೧೭–೫–೧೯೫೪

* * * *

ಎರಡನೆಯ ಮುದ್ರಣದಲ್ಲಿ ಕೆಲವು ಹೊಸ ಸಹಾಯಕ ಸಾಮಗ್ರಿಗಳನ್ನು ಒದಗಿಸಿಕೊಟ್ಟದ್ದಕ್ಕಾಗಿ ಶ್ರೀ ರಾಜರತ್ನಂ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

೩೧–೧೨–೧೯೫೫

* * * *

ಇದು ಎಂಟನೆಯ ಮುದ್ರಣ.

ವ್ಯಾಯಾಮಶಾಲಾ }
೧೪-೧-೧೯೭೪ }

ಕೆ. ವಿ. ಅಯ್ಯರ್

# ಒ ಳ ಪಿ ಡಿ

# ಚಿ ತ್ರ ಗ ಳು

ಯಾರ ಸನ್ನಿಧಿಯೂ ದರ್ಶನವೂ
ಈ ಕೃತಿರಚನೆಗೆ ಬೇಕಾದ ಭಾವಸ್ಫೂರ್ತಿಯನ್ನು
ನನಗೆ ಕರುಣಿಸಿದುವೊ
ಭಗವಂತನಾದ ಆ
ಹೊಯಿಸಳೇಶ್ವರ-ಶಾಂತಳೇಶ್ವರ-ಚೆನ್ನಕೇಶವ-ವಿಜಯನಾರಾಯಣ
ದೇವನ ಪಾದಾರವಿಂದಗಳಲ್ಲಿ
ಈ ಶಾಂತಲಾ ಕೃತಿಯನ್ನು
ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಿದ್ದೇನೆ.

## ವಿಖ್ಯಾತಾ ಶಾಂತಲಾಖ್ಯಾ

ಪ್ರಭಾಚಂದ್ರಮುನೀಂದ್ರಸ್ಯ ಪದಪಂಕಜಷಟ್ಪದಾ
ವಿಖ್ಯಾತಾ ಶಾಂತಲಾಖ್ಯಾ ಸಾ
ರಾಜತೇ ರಾಜಸಿಂಹೀವ ಪಾರ್ಶ್ವೇ ವಿಷ್ಣುಮಹೀಭೃತಃ

(ಶ್ರವಣಬೆಳ್ಗೊಳ ೧೩೧)

ಬೆಸನಂ ಪತಿಹಿತದಲ್ಲಿಯೆ
ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗಱ್ದಾ
ಬೆಸನಂ ನೋಂಪಿಗಳಲ್ಲಿಯೆ
ಬೆಸನಂಗಳ್ ಶಾಂತಿದೇವಿಯೊಳ್ ಪೆಱವೊಳವೇ

ಪತಿಯು ಕಳಂಕಮನಾತ್ಮ-
ದ್ಯುತಿಯಿಂದಪಹರಿಸಳೆಂದು ಸಲೆ ರೋಹಿಣಿಯುಂ
ಪತಿಹಿತೆ ಶಾಂತಲದೇವಿಯ
ಸಿತಕೀರ್ತಿಜ್ಯೋತ್ಸ್ನೆ ಸಂತತಂ ನಗುತಿರ್ಕುಂ

ಗಿರಿಜೆಯು ಪಾದಪದ್ಮನಿಗಳಜ್ಜಳದಿಂದಮೆ ಕೊರ್ಬಿ ನೀತಿ ವಿ-
ಸ್ತರಿಸಿರೆ ಸೊಂಪುವೆತ್ತು ಪುರುಷವ್ರತದಿಂ ದಳವೇಱಿ ಭಾಗ್ಯಮಂ-
ಜರಿಗಳನಾಂತು ರಂಜಿಸುವ ಶಾಂತಲದೇವಿಯು ರೂಪಕಲ್ಪವ-
ಲ್ಲರಿಯಡರ್ದತ್ತು ವಿಷ್ಣುನೃಪನೆಂಬ ಸಮುನ್ನತಕಲ್ಪವೃಕ್ಷಮಂ

(ಹಾಸನ ೧೧೬)

## ಶ್ರೀ ವೀರ ವಿಷ್ಣುವರ್ಧನ ದೇವಂ

ಯದುಕುಳ ಕುಳಾದ್ರಿ ಶಿಖರದೊ-
ಳುದಯಿಸಿದಂ ದುರ್ನಿರೀಕ್ಷ್ಯತೇಜೋಹೃತಸಂ-
ಪದರಾತಿರಾಜಮಂಡಲ-
ಸುದಾತ್ತಗುಣರತ್ನವಾರ್ಧಿ ವಿನಯಾದಿತ್ಯಂ

(ಚೆನ್ನರಾಯಪಟ್ಟಣ ೧೪೯)

ಆತನ ತನಯಂ ಸಕಳಮ-
ಹೀತಳ ಸಾಮ್ರಾಜ್ಯಲಕ್ಷ್ಮಿಯುಂ ತನಗೇಕ-
ಶ್ವೇತಾತಪತ್ರಮಾಗೆ ಪು-
ರಾತನ ನೃಪರೆಣೆಗೆವಂದನೆಱೆಯಂಗ ನೃಪಂ

(ಚೆನ್ನರಾಯಪಟ್ಟಣ ೧೪೯)

ಆತನ ವಧು ಪತಿಹಿತಗುಣ-
ಸೀತೆ ಬುಧವ್ರಾತಕಲ್ಪವಲ್ಲರಿ ಭುವನ-
ಖ್ಯಾತೆ ಜನವಿನುತವಿನಯಾ-
ನ್ವಿತೆ ಮಹಾದೇವಿ ಲಕ್ಷ್ಮಿದೇವಿಯೆ ಜಗದೊಳ್

(ಅರಸಿಯಕೆರೆ ೧೦೨)

ಅಂತವರೊಳ್ ವಿಷ್ಣುಮಹೀ-
ಕಾಂತಂ ನಿಮಿರ್ದೆಸೆಯೆ ಕೂರ್ಪುಮಾರ್ಪುಂ ಜಸಮಾ-
ದಂ ತೊಳಗಿ ಬೆಳಗೆ ಪೆರ್ಮೆಯ-
ನಾಂತಂ ನಳನಹುಷಭರತಚರಿತಪ್ರತಿಮಂ

(ಬೇಲೂರು ೧೨೪)

ನೆನೆಯಲ್ ಪಾಪಕ್ಷಯಂ ನೋಡಿದೊಡಭಿಮತಸಂಸಿದ್ಧಿ ಸದ್ಭಕ್ತಿಯಿಂದಂ
ಮನವೊಲ್ದಾರಾಧಿಸಲ್ಕಾ ಸುಕೃತದೊದವನೇವೇೞ್ವುದೆಂಬನ್ನೆಗಂ ಮು-
ನ್ನಿನ ಪುಣ್ಯಂ ವೀರರಪ್ಪಾ ನಳನಹುಷರೊಳನ್ಯೂನನಾದಂ ಜಗತ್ಪಾ-
ವನ ಸತ್ಯತ್ಯಾಗಶೌಚಾಚರಣಪರಿಣತಂ ವೀರವಿಷ್ಣುಕ್ಷಿತೀಶಂ

(ಚೆನ್ನರಾಯಪಟ್ಟಣ ೧೪೯)

ಯಾದವರಾದವರೊಳ್ ಮು-
ನ್ನಾದವರಿನ್ನಪ್ಪರಿವನ ಪಡಿಯಿಲ್ಲೆನೆ ಶೌ-
ರ್ಯೋದಯದಿಂ ಪಸರಿಸಿದಂ
ಮೇದಿನಿಯಂ ವೀರವಿಷ್ಣುವರ್ಧನದೇವಂ

(ಕಡೂರು ೯೬)

ಮೊದಲೊಳ್ ಪೊಯ್ಸಳರಾಜ್ಯಲಕ್ಷ್ಮಿಯೊದವಂ ತೋಳ್ಪಲ್ಪಿನಿಂ ತಾಳ್ದಿ ತ-
ನ್ನುದಯಂ ರಂಜಿಸೆ ತನ್ನ ಬಲ್ಪೊದವೆ ತನ್ನಾರ್ಪೇಱೆ ತನ್ನಾಜ್ಞೆ ಮೀ-
ಱೆ ದಿಶಾಚಕ್ರಮನೊತ್ತಿ ಕೊಂಡು ತಳಕಾಡಂ ಗಂಗರಾಜ್ಯಕ್ಕೆ ತಾಂ
ಮೊದಲಾದಂ ಯದುವಂಶವರ್ಧನಕರಂ ಶ್ರೀ ವಿಷ್ಣುಭೂಪಾಳಕಂ

(ಹಾಸನ ೬೫)

ಪೊಡರದೆ ಸಾಧ್ಯಮಾಯ್ತು ಮಲೆಯೆಲ್ಲಮುಮಾ ತುಳುದೇಶಮೆಲ್ಲಮುಂ
ನಡೆಯೆ ಕುಮಾರನಾಡು ತಳಕಾಡುಗಳೆಂಬಿವು ಕೆಯ್ಗೆ ಸಾರ್ದುವ-
ತ್ತಡಿಯಿಡೆ ಮುಂಚಿ ಕಂಚಿ ಬೆಸಕೆಯ್ವುದು ವಿಷ್ಣುನೃಪಂ ಕೃಪಾಣಮುಂ
ಜಡಿಯದ ಮುನ್ನೆ ಕೊಂಗನೃಪರಿತ್ತರಿಭಂಗಳನೇಂ ಪ್ರತಾಪಿಯೋ

(ಬೇಲೂರು ೧೨೪)

ಪ್ರಕಟಾಟೋಪದ ಚಕ್ರಗೊಟ್ಟದೊಡೆಯಂ ಸೋಮೇಶ್ವರಂ ಬಳ್ಕೆ ತ-
ನ್ನ ಕರಾಳಾಸಿಯ ಕೂರ್ಪನೇಂ ಮೆಱೆದನೋ ಗೌಡಾಂಧಕಾರಪ್ರಚಂ-
ಡಕರಂ ಮಾಳವಮೇಘಜಾಳಪವನಂ ಚೋಳೋಗ್ರಕಾಳಾನಳಂ
ತ್ರಿಕಳಿಂಗತ್ರಿಪುರತ್ರಿಣೇತ್ರನವಟಂ ಶ್ರೀ ವಿಷ್ಣುಭೂಪಾಳಕಂ

(ಮೂಡಗೆರೆ ೨೨)

ಅತಿದೀರ್ಘಘ್ರಾಣಹಸ್ತಂ ನಿಶಿತದಶನದಂಷ್ಟ್ರಾಂಕುರಂ ಪಕ್ಷರಕ್ಷಾ-
ಯತಪಕ್ಷಂ ತಾರ್ಕ್ಷ್ಯನಂತೋವಗಿಸಿ ತುಱಿಯೆ ತನ್ನಾನೆ ಪಾಂಡ್ಯಾವನೀಭೃ-
ತ್ಪ್ರೃತನಾವಿಧ್ವಂಸನೋಪಾರ್ಜಿತಜಯುವಧುವಂ ವಿಷ್ಣು ತುಚ್ಛಾಜಿಲಜ್ಜಾ-
ಸ್ಮಿತನಾಂತಂ ಚೋಟಿಗೌಳಾಸುರಸಮರಜಯಶ್ರೀ ಸಮಾಲಿಂಗಿತಾಂಗಂ

(ಬೇಲೂರು ೧೭)

ಚೋಳನೃಪಾಳಪಾಂಡ್ಯ ನೃಪಕೇರಳಭೂಪಭುಜಾವಲೇಪವಿ-
ಸ್ಫಾಳನನಂಧ್ರಗಂಧಗಜಕೇಸರಿ ಲಾಟವರಾಟಧಾರಿಣೀ-
ಪಾಳಘನಾನಿಳಂ ಕದನಶೂರಕದಂಬವನಾಗ್ನಿ ವಿಷ್ಣುಭೂ-
ಪಾಳನವಾರ್ಯಶೌರ್ಯನಿಧಿಯಾತನ ಶೌರ್ಯಮನಾರೊ ಕೀರ್ತಿಪರ್

(ಬೇಲೂರು ೧೨೪)

ಕೊಂಗೇೞುಂ ಮಲೆಯೇೞುಮ-
ನಂಗೆಯ್ಗಳವಡಿಸಿ ಲೊಕ್ಕಿಗುಂಡಿವರಂ ದೇ-
ಶಂಗಳನಿೞ್ಕುೞಿಗೊಂಡ ನೃ-
ಸಿಂಗಂ ಶ್ರೀ ವಿಷ್ಣುವರ್ಧನೋರ್ವೀಪಾಳಂ

(ಶ್ರವಣಬೆಳ್ಗೊಳ ೩೮೪)

ಆದಿಯಮನೋಡಿದೋಟಮನೆ ಜೋಡಿಸಿ ಕಲ್ತು ನೃಸಿಂಹವರ್ಮನೋ-
ಡಿದನವನೋಟಮಂ ಗುಣಿಸಿ ಚೆಂಗಿರಿ ಚೆಂಗಿರಿಯಲ್ಲಿ ಕಲ್ತುಕೊಂ-
ಡಪಟಿನ ಕೊಂಗರಾನೆಗಳ್ದಿ ಕೊಂಗರನೀಕ್ಷಿಸಿ ಪಾಂಡ್ಯನೋಡಿದಂ
ಯದುತಿಳಕಂಗೆ ವಿಷ್ಣುಧರಣೀಪತಿಗೋಡದರಾರ್ ಧರಿತ್ರಿಯೊಳ್

(ಚೆನ್ನರಾಯಪಟ್ಟಣ ೧೪೯)

ಕೆಲರಂ ಕಿೞ್ತಿಕ್ಕಿ ಬೇರಂ ಬಿದಿರ್ದು ಕೆಲರನತ್ಯುಗ್ರಸಂಗ್ರಾಮದೊಳ್ ಬಾ-
ಚ್ಚಿಲೆಗೊಂಡಾಕ್ಷೇಪದಿಂದಂ ಕೆಲರ ತಲೆಗಳಂ ಮೆಟ್ಟಿ ನಿಂದುಗ್ರಕೋಪಂ
ನುಲೆವತ್ಯುದ್ವೃತ್ತರಂ ತೊತ್ತೞದುೞಿದು ನಿಜಪ್ರಾಜ್ಯಸಾಮ್ರಾಜ್ಯಮಂ ತೋ-
ಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಳಂ ವಿಷ್ಣು ಜಿಷ್ಣುಪ್ರತಾಪಂ

(ಶ್ರವಣಬೆಳ್ಗೊಳ ೧೩೨)

ಇವನೀತೋಳ್ಗಂಬದೊಳ್ ಪುತ್ಥಳಿಯವೊಲವನೀದೇವಿ ತಾನಿರ್ಪಳೆಂದುಂ
ತವದಿರ್ಕುಂ ವಿಕ್ರಮಶ್ರೀ ಪೊಗರ್ವೊಲಿವನ ತೀವ್ರಾಸಿಯೊಳ್ ಬಿಟ್ಟವಂದಾ
ಜವನಿರ್ಕುಂ ಕೋಣನಿಂದಂ ಪಗೆವರ ಪೆಣನಂ ಪೇೞಲೀ ವಿಷ್ಣುವಂ ಕಾ-
ದುವನಾವಂ ಗೆಲ್ವನಾವಂ ನಡುಗದಿದಿರೊಳಾಟಂದು ಬಂದಿರ್ಪನಾವಂ

(ಹಾಸನ ೬೫)

ದುರ್ಬಾರಾರಿಧರಾಧರಾಳಿಕುಳಿಶಂ ಶ್ರೀವಿಷ್ಣುಭೂಪಾಳನಾ-
ರ್ದೆರ್ಬಟ್ಟಿಲ್ ಸಡೆದೋಡಿ ಪೋಗಿ ಭಯದಿಂದಾಬಂದನೆಂ-
ಬುರ್ಬೀಪಾಳರ ಕಣ್ಗೆ ಲೋಕಮನಿತುಂ ತದ್ರೂಪಮಾಗಿರ್ಪುದುಂ
ಸರ್ಬಂ ವಿಷ್ಣುಮಯಂ ಜಗತ್ತೆನಿಪುದೇಂ ಪ್ರತ್ಯಕ್ಷಮಾಗಿರ್ದುದೋ

(ಬೇಲೂರು ೧೭೦)

ಹಿಮದಿಂ ಸೇತುವರಂ ಮು-
ತ್ತೆ ಮಗುಟ್ದು ಸೇತುವಿಂ ಹಿಮಂಬರೆಗಂ ವಿ-
ಕ್ರಮಕೇಳಿಯಿಂ ತೊಟಿಲ್ವಂ
ಸಮದಕ್ಷತ್ರಿಯರನಜಿಸಿ ವಿಷ್ಣುನೃಪಾಳಂ

(ಹಾಸನ ೧೩೦)

ದೆಸೆಗಳನೊತ್ತಿ ಕೊಂಡೆ ಧನದಿಂದಮಿವಂ ಸಲೆ ಮಾಡುವಧ್ವರ-
ಪ್ರಸರದೊಳಂಜುತುಂ ಹವಿಗೆ ನೀಡುವ ಶಕ್ರನ ಕೆಯ್ಯ ಕಂಪಮುಂ
ಪ್ರಸರಿಪ ಧೂಮಸಂಚಯದೆ ಕಾಡಿಗೆಗೊಳ್ವ ಸರೋಜಜಾಂಡಮುಂ
ಬೆಸಗೊಳವೇಡ ವಿಷ್ಣು ಪುರುಷೋತ್ತಮನೆಂದಿವು ತಾವೆ ಪೇಟಿವೇ

(ಬೇಲೂರು ೫೮)

ಜಳಧಿವ್ಯಾವೇಷ್ಟಿತೋರ್ವೀಪತಿಯೆನಿಸಿ ಸುಖಂ ಬಾಟ್ದ್ಗೆ ಚಂದ್ರಾರ್ಕತಾರಂ
ತಳಕಾಡಂ ಕೊಂಡ ಗಂಡಂ ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ
ತಳವಾರಲ್ ತಳ್ತ ಭೂಪಾಳರ ಹೆಡತಲೆಯಂ ಥೊಪ್ಪೆನಲ್ ಹೊಯ್ದು ಗಂಡಂ
ಬಳವದ್ರಾಜ್ಯಂಗಳಂ ತನ್ನಲಗಿನ ಮೊನೆಯೊಳ್ ಪೊಯ್ದು ಕೆಯ್ಕೊಂಡ ಗಂಡಂ

(ನಾಗಮಂಗಲ ೭೬)

ಶ್ರೀಕಾಂತಾನೇತ್ರನೀಳೋತ್ಪಳವದನಸರೋಜಾತಸಸ್ಮೇರಲೀಲಾ-
ಲೋಕಂ ಲೋಕತ್ರಯೋಜ್ಜೃಂಭಿತವಿಶದಯಶಶ್ಚಂದ್ರಿಕಾದೋಃಪ್ರತಾಪ-
ವ್ಯಾಕೀರ್ಣಂ ತ್ಯಕ್ತಯುಕ್ತಕ್ರಮಕಳಿತಕುಭೃಚ್ಚಕ್ರಖೇದಪ್ರಮೋದ-
ಶ್ರೀಕಂ ಶ್ರೀವಿಷ್ಣುಭೂಪಂ ಬೆಳಗುಗೆ ಜಗಮಂ ರಾಜಮಾರ್ತಂಡರೂಪಂ

(ನಾಗಮಂಗಲ ೭೬)

## ಶಾಂತಲದೇವಿ

ಆ ನೆಗೞ್ದ ವಿಷ್ಣುನೃಪನ ಮ-
ನೋನಯನಪ್ರಿಯೆ ಚಳಾಳನೀಳಾಳಕಿ ಚಂ-
ದ್ರಾನನೆ ಕಾಮನ ರತಿಯೊಲು
ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವಿ

ಪತಿಭಕ್ತಿ ಭವದ್ವಯಕಂ
ಹಿತಮೆಂಬುದನಱಿದು ವಿನಯದಿಂ ವಿಷ್ಣುಮಹೀ-
ಪತಿಯಂ ಮೆಚ್ಚಿಸುತೆ ಮಹಾ-
ಸತಿ ಶಾಂತಲದೇವಿ ಪಟ್ಟಮಂ ಧರಿಯಿಸಿದಳ್

ಸತತಂ ನೋೞ್ಪೊಡೆ ಲಕ್ಷ್ಮಿದೇವತೆ ರಣವ್ಯಾಪಾರದೊಳ್ ಖಡ್ಗದೇ-
ವತೆ ಬೆಣ್ಪಂದಮ ಭೂಮಿದೇವತೆ ಜನಕ್ಕೆಲ್ಲಂದದಿಂದಂ ಪುಣ್ಯದೇ-
ವತೆ ವಾಗ್ದೇವತೆ ವಿದ್ಯೆಯೊಳ್ ಸಕಳಕಾರ್ಯೋದ್ಯೋಗದೊಳ್ ಮಂತ್ರದೇ-
ವತೆ ನಾಥಂಗೆನೆ ಶಾಂತಿದೇವಿಯನದಿನ್ನೇವಣ್ಣಿಪಂ ಬಣ್ಣಿಪಂ

ಧುರದೊಳ್ ವಿಷ್ಣುನೃಪಾಲಕಂಗೆ ವಿಜಯಶ್ರೀ ವಕ್ಷದೊಳ್ ಸಂತತಂ
ಪರಮಾನಂದದಿನೊತ್ತು ನಿಲ್ವ ವಿಪುಳಶ್ರೀ ತೇಜದುದ್ಭಾಸಿಯಂ
ವರದಿಗ್ಭಿತ್ತಿಯನೆಯ್ದಿಸಲ್ ನೆಱೆವ ಕೀರ್ತಿಶ್ರೀಯೆನುತ್ತಿರ್ಪುದೀ
ಧರೆಯೊಳ್ ಶಾಂತಲದೇವಿಯಂ ನೆಱೆಯೆ ಬಣ್ಣಿಪ್ಪಣ್ಣನೇವಣ್ಣಿಪಂ

ಗುರುಗಳ್ ಪ್ರಭಾಚಂದ್ರಸಿದ್ಧಾಂತದೇವರೆ ಪೆತ್ತ ತಾಯ್ ಗುಣನಿಧಿ ಮಾಚಿಕಬ್ಬೆ
ಪಿರಿಯ ಪೆರ್ಗಡೆ ಮಾರಸಿಂಗಯ್ಯಂ ತಂದೆ ಮಾವನುಂ ಪೆರ್ಗಡೆ ಸಿಂಗಿಮಯ್ಯಂ
ಅಸರಂ ವಿಷ್ಣುವರ್ಧನನೃಪಂ ವಲ್ಲಭಂ ಜಿನನಾಥಂ ತನಗೆಂದುಮಿಷ್ಟದೆಯ್ವಂ
ಅರಸಿ ಶಾಂತಲದೇವಿಯ ಮಹಿಮೆಯಂ ಬಣ್ಣಿಸಲ್ಬಕ್ಕುಮೆ ಭೂತಳದೊಳ್

(ಶ್ರವಣಬೆಳ್ಗೊಳ ೧೪೩; ಹಾಸನ ೧೧೬)

## ಶ್ರೀ ವಿಷ್ಣುವರ್ಧನ ಪೊಯ್ಸಳದೇವರ

## ಶ್ರೀಮತ್ ಪಿರಿಯರಸಿ ಪಟ್ಟಮಹಾದೇವಿ ಶಾಂತಲದೇವಿ

ಸ್ವಸ್ತಿ
ಶ್ರೀಮುದ್ಧರ್ಮೇಶ್ವರದೇವಲಬ್ಧವರಪ್ರಸಾದೆಯುಂ
ನಗರಾಜನಂದನಾಪದಾರವಿಂದವಂದನವರ್ಧಿತಾನಂದೆಯುಂ
ಜಿನಗನ್ಧೋದಕಪವಿತ್ರೀಕೃತೋತ್ತಮಾಂಗೆಯುಂ

ಲಾವಣ್ಯಸಿಂಧುವೇಲಾಲೀಲಾಯಮಾನಕೇಕರಾತಿಬಂಧುರೆಯುಂ
ಮನೋಜರಾಜವಿಜಯಪತಾಕೆಯುಂ
ದಯಾರಸಾಮೃತಾಪೂರ್ಣವದನವಿಧುಬಿಂಬೆಯುಂ
ಸಮಸ್ತಮಂಗಳಾಭ್ಯುದಯಕರಲಕ್ಷಣಾಭಿರಾಮೆಯುಂ

ಗೀತವಾದ್ಯನೃತ್ಯಸೂತ್ರಧಾರೆಯುಂ ಸಂಗೀತಸಂಗತಸರಸ್ವತಿಯುಂ
ವಿಚಿತ್ರನರ್ತನಪ್ರವರ್ತನಪಾತ್ರಶಿಖಾಮಣಿಯುಂ
ಭರತಾಗಮಭವನನಿಹಿತಮಹನೀಯಮತಿಪ್ರದೀಪೆಯುಂ
ವಿವೇಕೈಕಬೃಹಸ್ಪತಿಯುಂ ಪ್ರತ್ಯುತ್ಪನ್ನವಾಚಸ್ಪತಿಯುಂ

ಶ್ರೀವಿಷ್ಣುವರ್ಧನಮನೋರಾಗಸಾಗರಾಭಿವರ್ಧನಚಂದ್ರಲೇಖೆಯುಂ
ಅಭಿನವರುಕ್ಮಿಣೀದೇವಿಯುಂ ಪತಿಹಿತಸತ್ಯಭಾಮೆಯುಂ
ಪತಿವ್ರತಾಪ್ರಭಾವಪ್ರಸಿದ್ಧಸೀತೆಯುಂ

ಸಕಳಸಮಯರಕ್ಷಾಮಣಿಯುಂ ಚತುಸ್ಸಮಯಸಮುದ್ಧರಣಕಾರಣೆಯುಂ
ಸಮ್ಯಕ್ತ್ವಚೂಡಾಮಣಿಯುಂ ಜಿನಸಮಯಸಮುದಿತಪ್ರಾಕಾರೆಯುಂ
ವ್ರತಗುಣಶೀಲಚಾರಿತ್ರಾಂತಃಕರಣೆಯುಮಪ್ಪ

ಶಾಂತಲದೇವಿಗೆ ಸದ್ಗುಣ-
ವಂತೆಗೆ ಸೌಭಾಗ್ಯಭಾಗ್ಯವತಿಗೆ ವಚಃಶ್ರೀ-
ಕಾಂತೆಯುಮುಗಜೆಯುಮಚ್ಯುತ-
ಕಾಂತೆಯುಮೆಣೆಯಲ್ಲದುಳಿದ ಸತಿಯರ್ ದೊರೆಯೇ

(ಶ್ರವಣಬೆಳ್ಗೊಳ ೧೪೩; ಬೇಲೂರು ೫೮.)

# 'ಶಾಂತಲಾ' ಕಾದಂಬರಿಯಲ್ಲಿ ಬರುವ ಪಾತ್ರಗಳ, ಕ್ಷೇತ್ರಗಳ ಪರಿಚಯ

## I. ದೇವತಾ ವಿಶೇಷಗಳು

ವಾಸಂತಿಕಾದೇವಿ—ಹೊಯಿಸಳರ ಕುಲದೇವತೆ.

ಧರ್ಮೇಶ್ವರ—ಈ ದೇವರ ವರಪ್ರಸಾದದಿಂದ ಶಾಂತಲೆಯ ಜನನ.

ವಿಜಯನಾರಾಯಣ—ಬೇಲೂರಿನಲ್ಲಿ ಶ್ರೀ ವಿಷ್ಣುವರ್ಧನರು ಪ್ರತಿಷ್ಠೆ ಮಾಡಿಸಿದ ವಿಷ್ಣು ಮೂರ್ತಿ. ಚೆನ್ನಕೇಶವನೆಂದು ಸಾಮಾನ್ಯವಾಗಿ ಪ್ರಚಾರ.

ಸೌಮ್ಯಕೇಶವ—ಬೇಲೂರಿನಲ್ಲಿ ಶಾಂತಲಾ ಪ್ರತಿಷ್ಠೆ ಮಾಡಿಸಿದ ವಿಷ್ಣುಮೂರ್ತಿ. ಕಪ್ಪೆ ಚೆನ್ನಿಗರಾಯನೆಂದು ಸಾಮಾನ್ಯವಾಗಿ ಪ್ರಚಾರ.

ಹೊಯಿಸಳೇಶ್ವರ, ಶಾಂತಳೇಶ್ವರ—ಹಳೆಯಬೀಡಿನ ಜೋಡಿ ದೇವಾಲಯದ ಶಿವಮೂರ್ತಿಗಳು.

ಗಂಗಾಧರೇಶ್ವರ, ಹೊನ್ನಾದೇವಿ—ಶಿವಗಂಗೆಯ ಬೆಟ್ಟದ ಶಿವಶಕ್ತಿಯರು.

ಶ್ರೀ ನರಸಿಂಹ—ಕಿರಿಯ ರಾಣಿಯಾದ ಲಕ್ಷ್ಮಿಯ ಇಷ್ಟದೈವ.

ಶಾಂತಿನಾಥ—ಹದಿನಾರನೆಯ ತೀರ್ಥಂಕರ. ಮಾಚಿಕಬ್ಬೆಯ ಇಷ್ಟದೇವತೆ.

ಆದಿನಾಥ—ಮೊದಲನೆಯ ತೀರ್ಥಂಕರ. ಗಂಗರಾಜರ ಇಷ್ಟದೇವತೆ.

ಬಾಹುಬಲಿ—ಶ್ರವಣಬೆಳ್ಗೊಳದ ಗೋಮಟೇಶ್ವರಸ್ವಾಮಿ.

ಪಾರ್ಶ್ವನಾಥ—ಇಪ್ಪತ್ತಮೂರನೆಯ ತೀರ್ಥಂಕರ. ದ್ವಾರವತಿಯಲ್ಲಿ ಈ ತೀರ್ಥಂಕರನ ಮೂರ್ತಿಯನ್ನು ಬೊಪ್ಪಣ ಪ್ರತಿಷ್ಠೆ ಮಾಡಿಸಿದ.

ಬ್ರಾಹ್ಮೀ—ಶಾಂತಲೆಯ ಉಪಾಸ್ಯ ದೇವತೆ. ಶಾರದೆ.

## II. ಪ್ರಧಾನ ಪಾತ್ರಗಳು

ಶ್ರೀ ವಿಷ್ಣುವರ್ಧನ—ಹೊಯಿಸಳ ವಂಶದ ರಾಜ, ದಿಗ್ವಿಜಯಿ.

ಮಹಾರಾಜ್ಞೀ ಮಹಾದೇವಿ—ರಾಜೇಂದ್ರ ಚೋಳ ಪೃಥ್ವೀ ಕೊಂಗಾಳ್ವರ ತಮ್ಮಂದಿರಾದ ಇರುಕ್ಕುಪಾಲರ ಮಗಳು. ಶ್ರೀ ವಿಷ್ಣುವರ್ಧನರ ತಾಯಿ. ಇವರು ಹೊಯಿಸಳ ಪ್ರಭು ಎರೆಯಂಗರ ಕೈಹಿಡಿದು, ಬಲ್ಲಾಳ, ಬಿಟ್ಟಿದೇವ, ಉದಯಾದಿತ್ಯರೆಂಬ ಮೂವರು ಮಕ್ಕಳನ್ನು ಪಡೆದರು. ಇವರಲ್ಲಿ ಬಿಟ್ಟಿದೇವರೇ ಶ್ರೀ ವಿಷ್ಣುವರ್ಧನರು.

ಶಾಂತಲೆ—ಶ್ರೀ ವಿಷ್ಣುವರ್ಧನರ ಪಟ್ಟಮಹಿಷಿ. ಡಣಾಯಕ ಮಾರಸಿಂಗಮಯ್ಯ ನವರು ಡಣಾಯಕಿತಿ ಮಾಚಿಕಬ್ಬೆಯವರ ಒಬ್ಬಳೇ ಮಗಳು.

ಲಕ್ಷ್ಮಿ—ಶಾಂತಲೆಯ ಜೀವದ ಗೆಳತಿ. ಪಂಡಿತ ಪೆರುಮಲೆಯವರ ಮಗಳು. ಮಾಚಿ ಕಬ್ಬೆಯವರ ಸಾಕುಮಗಳು. ಶ್ರೀ ವಿಷ್ಣುವರ್ಧನರ ಕಿರಿಯ ರಾಣಿ.

ಕುವರವಿಷ್ಣು—ಎರೆಯಂಗರ ಕಾಲದ ಚೆನ್ನಮ ದಂಡಾಧೀಶರ ಮಗ. ತಾಯಿ—ಮಹಾಸತಿ ಚಂಡಲೆ. ಮಹಾರಾಜ್ಞೀ ಮಹಾದೇವಿ ಈತನ ಸಾಕುತಾಯಿ. ವಿಷ್ಣುವರ್ಧನರಿಗೆ ಮಗನಂತೆ, ಶಾಂತಲಾ ಲಕ್ಷ್ಮಿಯರಿಗೆ ತಮ್ಮನಂತೆ ಇದ್ದವನು.

ಸೋವಲೆ—ಹೊಯಿಸಳರ ಅಮಾತ್ಯ ವೀರದೇವನ ಮಗಳು. ಕುವರ ವಿಷ್ಣುವಿನ ಪತ್ನಿ. ಪತಿಯೊಡನೆ ಸಹಗಮನಮಾಡಿ ಸತಿಯಾದವಳು.

## III. ಆನುಷಂಗಿಕ ಪುರುಷ ಪಾತ್ರಗಳು

ಗಂಗರಾಜರು—'ಭೀಷ್ಮ'ರೆಂದು ಇವರಿಗೆ ಅಡ್ಡಹೆಸರು. ಎರೆಯಂಗರ ಕಾಲದಲ್ಲಿ ಸರ್ವಸೇನಾಪತಿಯಾಗಿದ್ದು, ವಿಷ್ಣುವರ್ಧನರ ಕಾಲಕ್ಕೆ ಮಹಾಪ್ರಧಾನ ಪದವಿಯಲ್ಲಿದ್ದವರು.

ತಂತ್ರಪಾಲ ಹೇಮಾದ್ರಿ<br>ವೀರದೇವ<br>ಅಚ್ಚುತ (ಅಚ್ಯುತ)<br>ಗೋವಿಂದ ಪಂಡಿತ —ಹೊಯಿಸಳ ರಾಜ್ಯದ ಪಂಚಪ್ರಧಾನರಲ್ಲಿ ಉಳಿದ ನಾಲ್ವರು.

ಮಾರಸಿಂಗಮಯ್ಯ—ಹೊಯಿಸಳ ರಾಜ್ಯದ ಡಣಾಯಕ(ದಂಡನಾಯಕ). ಶಾಂತಲಾ ದೇವಿಯ ತಂದೆ.

ಶ್ರೀಪಾಲತ್ರೈವಿದ್ಯದೇವರು—ಶ್ರೀ ವಿಷ್ಣುವರ್ಧನರ ಆಸ್ಥಾನದ ಮುಖ್ಯ ಪಂಡಿತರು. ಕುವರವಿಷ್ಣುವಿಗೆ ಗುರುಗಳು.

ಪ್ರಭಾಚಂದ್ರ ಸಿದ್ಧಾಂತದೇವರು—ಶಾಂತಲೆಯ ವಿದ್ಯಾಗುರುಗಳು.

ಶ್ರೀ ರಾಮಾನುಜಾಚಾರ್ಯರು—ಶ್ರೀರಂಗದಿಂದ ಹೊಯಿಸಳ ರಾಜ್ಯಕ್ಕೆ ಬಂದು ಅನುಗ್ರಹ ಮಾಡಿದ ಆಚಾರ್ಯವರ್ಯರು.

ಪಂಡಿತ ಪೆರುಮಲೆಯವರು—ವಿಷ್ಣುವರ್ಧನರ ತಂದೆ ಎರೆಯಂಗರು ಕಂಚಿಯಿಂದ ಕರೆದುತಂದ ಪಂಡಿತರು. ಲಕ್ಷ್ಮಿಯ ತಂದೆ.

ಪುನೀಸ, ಬೊಕ್ಕಣ, ಬೋಕಿ ಗರುಡ, ಚಾವುದೇವ,<br>ಗರುಡ ಬಾಗಿಪ್ಪಯ್ಯ, ಚಿಕ್ಕಮರಿಯಾನೆ —ಹೊಯಿಸಳ ದಂಡನಾಯಕರು.

ಬೊಪ್ಪಣ(ಏಚಣ್ಣ)—ಗಂಗರಾಜರ ಮಗ. ಇಮ್ಮಡಿ ದಂಡನಾಯಕ.

ಕೇತಮಲ್ಲ—ಮಾರಸಿಂಗಮಯ್ಯನವರ ಸೋದರಳಿಯ. ವ್ಯಾಪಾರಿ. ತಲವನಪುರದಿಂದ ಹೊಯಿಸಳ ರಾಜ್ಯಕ್ಕೆ ಬಂದು ನೆಲಸಿದವ. ಹಳೆಯಬೀಡಿನ ಹೊಯಿಸಳೇಶ್ವರ–ಶಾಂತಳೇಶ್ವರ ದೇವಾಲಯಗಳನ್ನು ಕಟ್ಟಿಸಿದವ.

ಕುಲ್ಹಣರಾಹುತ—ದ್ವಾರವತಿಗೆ ಬಂದು ನೆಲಸಿದ ಒಬ್ಬ ಶ್ರೀಮಂತ ಭಕ್ತ. ಈತನೂ ಈತನ ಪತ್ನಿಯಾದ ಸಹಜದೇವಿಯೂ ದೊಡ್ಡ ಗದ್ದುಂಬಳ್ಳಿಯ ಮಹಾಲಕ್ಷ್ಮೀ ದೇವಾಲಯಗಳನ್ನು ಕಟ್ಟಿಸಿದವರು.

ಲೆಂಕರಾಯ—ಹಾನುಗಲ್ಲು ದುರ್ಗದಲ್ಲಿ 'ಭೈರವ'ನಾದ ಹೊಯಿಸಳ ವೀರ.

ಬೋಕಿಮಯ್ಯ—'ರಣಬಲಿ'ಯಾದ ಒಬ್ಬ ಹೊಯಿಸಳ ವೀರ.

ದೇಚ—ಮಾರಸಿಂಗಮಯ್ಯನವರ ಮನೆಯ ಆಳು. ಶಾಂತಲೆಯನ್ನು ಎತ್ತಿ ಆಡಿಸಿ ಬೆಳಸಿದ ಮುದುಕ.

ಲಕ್ಕಣ—ಕುವರವಿಷ್ಣುವನ್ನು ಚಿಕ್ಕಂದಿನಿಂದಲೂ ಹೊತ್ತು ಆಡಿಸಿದ ವೃದ್ಧ.

## IV. ಸ್ತ್ರೀ ಪಾತ್ರಗಳು

ಮಾಚಿಕಬ್ಬೆ—ಮಾರಸಿಂಗಮಯ್ಯನವರ ಪತ್ನಿ. ಶಾಂತಲೆಯ ತಾಯಿ. ಲಕ್ಕಿಗೆ ಸಾಕುತಾಯಿ.

ಲಕ್ಷ್ಮೀಮತಿ—ಮಹಾಪ್ರಧಾನ ಗಂಗರಾಜರ ಪತ್ನಿ. ದಂಡನಾಯಕಿತಿ.

ಜಕ್ಕಿಯಬ್ಬೆ—ಕೇತಮಲ್ಲನಾಯಕನ ಪತ್ನಿ. ಚಂದಲೆಯ ತಾಯಿ.

ಚಂದಲೆ—ಕೇತಮಲ್ಲನಾಯಕ, ಜಕ್ಕಿಯಬ್ಬೆಯರ ಮಗಳು. ಶಾಂತಲೆಯ ಮರಣಾನಂತರ ಶ್ರೀ ವಿಷ್ಣುವರ್ಧನರ ಕೈಹಿಡಿದು 'ಶಾಂತಲೆ' ಆದವಳು.

ಬಮ್ಮಲೆ, ರಾಜಲೆ, ಚವ್ವಲೆ, ಬಿಜ್ಜಲೆ, ದೇವಕಿ — ವಿಷ್ಣುವರ್ಧನರ ಅಂತಃಪುರದವರು. ಇವರಲ್ಲಿ ಬಮ್ಮಲೆ ಅಶ್ವಹೃದಯದಲ್ಲಿ ಪ್ರವೀಣೆಯಾಗಿದ್ದಳು. ದೇವಕಿದೇವಿ ಮುಳ್ಳೂರನ್ನು ಆಳುತ್ತಿದ್ದಳು.

## V. ಶತ್ರುಪಕ್ಷದವರು

ಗಂಗರು, ಕೊಂಗರು, ಚೆಂಗಾಳ್ವರು, ಕೊಂಗಾಳ್ವರು, ಸಿಂದರು, ಸಂತಾರರು, ಕದಂಬರು, ಚೋಳರು, ಚಾಲುಕ್ಯರು, ಪಾಂಡ್ಯರು, ಚೇರರು, ಮಲೆಪರು. — ಹೊಯಿಸಳ ರಾಜ್ಯಕ್ಕೆ ಶತ್ರುಪಕ್ಷದವರು. ಅವರಲ್ಲಿ—

ಮಾಸಣ—ಹೊಯಿಸಳ ರಾಜ್ಯದ ಶತ್ರು. ಪೊಂಬುರುಚದಲ್ಲಿ ಸೋತವನು.

ದಾಮೋದರ—ತಲವನಪುರದ (ತಲಕಾಡಿನ) ಗಂಗರಸ. ರಾಷ್ಟ್ರಕೂಟರ ಸಾಮಂತ.

ಆದಿಯಮ—ಚೋಳ ಸೇನಾಧಿಪತಿ. ದಾಮೋದರನ ಸಹಾಯಕ.

ನರಸಿಂಹವರ್ಮ—ಚೋಳರ ಸಾಮಂತ.

ಇರುಂಗೋಲ—ಇನ್ನೊಬ್ಬ ಚೋಳ ಸಾಮಂತ.

ಜಗದ್ದೇವ—ಮಾಳವದ ಸಂತಾರರಾಜ. ಚಾಲುಕ್ಯ ಸಾಮಂತ.

ವಿಕ್ರಮಾದಿತ್ಯ (ಅರಸೆಯು)—ಚಾಲುಕ್ಯರ ದೊರೆ.

ಜಯಕೇಶಿ—ಕದಂಬರ ರಾಜ. ಗೋವೆ, ಬೆಳವಲ, ಹಲಸಿಗೆಗಳ ದೊರೆ.

ಜಯಸಿಂಹ—ನೊಳಂಬವಾಡಿಯನ್ನು ಆಳುತ್ತಿದ್ದವ. ಪಾಂಡ್ಯ ಅರಸರ ಸಾಮಂತ.

ಮಲ್ಲಿಕಾರ್ಜುನ—ಹಾನಗಲ್ಲು ದುರ್ಗದ ಅಧಿಪತಿ.

ಕುಂಜುಶೆಟ್ಟಿ—ಮಲ್ಲಿಕಾರ್ಜುನನ ಚಮೂಪತಿ. ಅತ್ಯುತ್ತಮ ಧನುರ್ಧಾರಿ.

## VI. ಕ್ಷೇತ್ರಗಳು

ವೇಲಾಪುರ—ಯಗಚಿ ನದಿಯ ದಡದಲ್ಲಿ. ಎರೆಯಂಗರ ಕಾಲದ ಹೊಯಿಸಳ ರಾಜಧಾನಿ. ವಿಜಯನಾರಾಯಣ, ಸೌಮ್ಯಕೇಶವ ದೇವಾಲಯಗಳ ಈಗಿನ ಬೇಲೂರು.

ದ್ವಾರವತಿ—ಹೊಯಿಸಳರ ಹೊಸ ರಾಜಧಾನಿ. ಹೊಯಿಸಳೇಶ್ವರ, ಶಾಂತಳೇಶ್ವರ, ವಿಜಯಪಾರ್ಶ್ವನಾಥ ದೇವಾಲಯಗಳ ಈಗಿನ ಹಳೆಯಬೀಡು.

ತಿರುನಾರಾಯಣಪುರ—ಚೆಲುವನಾರಾಯಣದೇವರ ದಿವ್ಯ ಕ್ಷೇತ್ರ. ಇದಕ್ಕೆ ಈಗ 'ಮೇಲುಕೋಟೆ' ಎಂದು ಜನಸಾಮಾನ್ಯರಲ್ಲಿ ಹೆಸರು.

ಶಿವಗಂಗಾ—ಶಾಂತಲೆ ದೇಹವಿಸರ್ಜನೆ ಮಾಡಿದ ಶಿವಕ್ಷೇತ್ರ. (ಬೆಂಗಳೂರಿಗೆ ಸುಮಾರು ನಲವತ್ತು ಮೈಲಿಗಳ ದೂರದಲ್ಲಿದೆ.)

ತಲವನಪುರ—ಅಥವಾ ತಲೆಯೂರು. ವಿಷ್ಣುವರ್ಧನರ ಪ್ರಥಮ ದಿಗ್ವಿಜಯದ ಸ್ಥಾನ. ಈಗ ಇದನ್ನು ತಲಕಾಡು ಎನ್ನುತ್ತಾರೆ.

| | |
|---|---|
| ಪೊಂಬುರುಚ, ಹಂಜೇರು, ತಲೆಯೂರು,<br>ಚಕ್ರಗೊಟ್ಟ, ಕೋಳಾಲ, ಚಂಗೇರಿ,<br>ನಂಗಲಿ, ನೊಳಂಬವಾಡಿ, ಗಂಗವಾಡಿ,<br>ರಾಮರಾಯಪುರ, ಬಂಕಾಪುರ, ಉಚ್ಚಂಗಿ,<br>ಹಾನುಗಲ್ಲುದುರ್ಗ, ಬನವಸೆ, ಬೆಳವಲ,<br>ಸಂತಲಿಗೆ, ಹಲಸಿಗೆ, ಹುಲಿಕೆರೆ, ಸವಿಮಲೆ,<br>ಲೊಕ್ಕಿಗುಂಡಿ . . . ಇತ್ಯಾದಿ. | ವಿಷ್ಣುವರ್ಧನರ ಹೊಯಿಸಳ ಸೇನೆ ಯುದ್ಧಮಾಡಿ ಗೆದ್ದುಕೊಂಡ ಕೆಲವು ಸ್ಥಳಗಳು |



ಶ್ರೀ ವಿಷ್ಣುವರ್ಧನ—ಶಾಂತಲಾ

(ಬೇಲೂರು ಚೆನ್ನಕೇಶವ ದೇವಾಲಯ ದ್ವಾರದ ಎಡಗಡೆಯ ಗೋಡೆಯಿಂದ)

# ಮೊದಲನೆಯ ಭಾಗ

ಸ್ವಸ್ತಿ ಶ್ರೀ ಸ್ವಸ್ತಿ

ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇ
ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ

ಮಹಾರಾಜ್ಞೀ ಮಹಾದೇವಿಯವರ ಸನ್ನಿಧಾನದಿಂದ ಒಸಗೆ. ಇದೇ ಶಕವರ್ಷ ೧೦ಳಳ ಶುಭಕೃತು ಸಂವತ್ಸರದ ಶ್ರಾವಣ ಶುದ್ಧ ಚತುರ್ದಶಿ ಗುರುವಾರ ಸೂರ್ಯೋದಯಾನಂತರ ಸಲ್ಲುವ ಶುಭ ಕಟಕ ಲಗ್ನದಲ್ಲಿ ಪರಮಪದವಾಸಿಗಳಾದ. ಶ್ರೀ ಚೆನ್ನಮ ದಂಡಾಧೀಶ ಅವರ ಮಹಾಸತಿ ಚಂದಲೆ ಇವರ ದ್ವಿತೀಯ ಪುತ್ರರೂ, ನಮ್ಮ ಸಾಕು ಮಕ್ಕಳೂ ಆದ ಕುವರ ವಿಷ್ಣುವಿಗೆ ಬ್ರಹ್ಮೋಪದೇಶ ನಡಸಲು ಪೂಜ್ಯರಾದ ಕುಲಗುರುಗಳೂ ನಮ್ಮ ದ್ವಿತೀಯ ಸುಕುಮಾರರಾದ ಶ್ರೀ ಶ್ರೀ ಶ್ರೀ ತ್ರಿಭುವನಮಲ್ಲ ವೀರಗಂಗ ಪೊಯಿಸಳ ವಿಷ್ಣುವರ್ಧನ ಮಂಡಲೇಶ್ವರರೂ ದೈವಪ್ರೇರಿತರಾಗಿರುವುದರಿಂದ ನೀವು ಪತ್ನೀಪುತ್ರ ಮಿತ್ರಾದಿ ಸಮೇತರಾಗಿ, ರಾಜಗೃಹದ ವಿಜಯ ಸಿಂಹಾಸನೋಲಗ ಶಾಲೆಗೆ ಈ ಉತ್ಸವಕ್ಕಾಗಿ ಬಂದು ವಟುವನ್ನು ಆಶೀರ್ವದಿಸಿ ನಮ್ಮ ಮನಸ್ಸಂತೋಷಪಡಿಸುವುದು.

ದ್ವಾರವತಿ ಡಣಾಯಕ ಶ್ರೀ ಮಾರಸಿಂಗಮಯ್ಯನವರಿಗೆ
ರಾಜಗೃಹ. ಡಣಾಯಕಿತಿ ಶ್ರೀ ಮಾಚಿಕಬ್ಬೆಯವರಿಗೆ

ಅರಮನೆಯ ಅವಸರದ ಸವಾರನೊಬ್ಬ ಈ ಓಲೆಯನ್ನು ಡಣಾಯಕ ಮಾರಸಿಂಗಮಯ್ಯನವರಿಗೆ ಒಪ್ಪಿಸಲು ತಂದ. ಪಡೆಯೊಡನೆ ಪೊಂಬುರುಚಕ್ಕೆ ಹೋಗಿದ್ದ ಮಾರಸಿಂಗಮಯ್ಯನವರು, ಅಲ್ಲಿ ಹೊಯಿಸಳ ರಾಜ್ಯಕ್ಕೆ ಬಹು ತೊಂದರೆ ಕೊಡುತ್ತಿದ್ದ ಮಾಸಣನನ್ನು ರಾಜ್ಯದ ಗಡಿಯಿಂದಾಚೆಗೆ ಅಟ್ಟಿ, ಅದೇತಾನೆ ದ್ವಾರವತಿಗೆ ಬಂದು, ಮನೆಯನ್ನು ಸೇರಿ, ಸ್ನಾನಮಾಡಿ ಶಿವ ಪೂಜೆಯನ್ನು ಮುಗಿಸಿದ್ದರು. ರಾಜಮಾತೆ ಮಹಾದೇವಿ ಅಕ್ಕನವರು ಗೋಪ್ಯ

ವಾಗಿ ನಡಸಿದ ಏರ್ಪಾಡಿನಿಂದಲೇ ಮಾರಸಿಂಗಮಯ್ಯ ಅಂದು ದ್ವಾರವತಿಯನ್ನು ಸೇರಲು ಸಾಧ್ಯವಾಯಿತು.

ಪೊಂಬುರುಚಕ್ಕೆ ದಂಡೆತ್ತಿಹೋಗಿದ್ದ ಮಾರಸಿಂಗಮಯ್ಯ ಮುಂದಕ್ಕೆ ಹಂಜೇರಿನ ಮೇಲೆ ದಾಳಿ ನಡೆಸಬೇಕೆಂದಿದ್ದರು. ಅಷ್ಟರಲ್ಲಿ ರಾಜಮಾತೆ ಮಂತ್ರಿವರ್ಯ ತಂತ್ರಪಾಲ ಹೇಮಾದ್ರಿಯವರ ಮೂಲಕ ಮಾರಸಿಂಗಮಯ್ಯನವರಿಗೆ "ದಂಡನ್ನು ಅಲ್ಲಿಯೆ ನಿಲ್ಲಿಸಿ, ಅದರ ರಕ್ಷಣೆಗೆ ತಕ್ಕವರನ್ನು ನಿಯಮಿಸಿ, ನೀವು ಮಾತ್ರ ರಾಜಕಾರ್ಯ ನಿಮಿತ್ತ ದ್ವಾರವತಿಗೆ ಅತಿ ತ್ವರೆಯಿಂದ ಬರತಕ್ಕದ್ದು" ಎಂದು ಓಲೆ ಬರೆಯಿಸಿ ಕಳಿಸಿದ್ದರು. ಆದ್ದರಿಂದ ಮಾರಸಿಂಗಮಯ್ಯ ತಮ್ಮ ಮೈಗಾವಲವರೊಂದಿಗೆ ವೇಗದಿಂದ ದ್ವಾರವತಿಗೆ ಹಿಂದಿರುಗಿದ್ದರು. ಮಾರ್ಗಾಯಾಸವನ್ನು ಮಜ್ಜನದಿಂದ ಪರಿಹರಿಸಿಕೊಂಡು, ಅನಂತರ ಹೇಮಾದ್ರಿಗಳನ್ನು ಕಾಣುವುದೆ ಸರಿಯೆಂದು ನಿಶ್ಚಯಿಸಿ, ಮಜ್ಜನಮಾಡಿ, ಮನಶ್ಶಾಂತಿಗಾಗಿ ಮಹಾದೇವನ ಪೂಜೆಯನ್ನೂ ಮುಗಿಸಿದರು.

ಮಾರಸಿಂಗಮಯ್ಯ ಊರಿಗೆ ಬಂದರೆಂದು ತಿಳಿದ ತತ್‌ಕ್ಷಣವೆ ರಾಜಮಾತೆ ಸವಾರನೊಬ್ಬನ ಕೈಯಲ್ಲಿ ಲಗ್ನದ ಕರೆಯೋಲೆಯನ್ನು ಕೊಟ್ಟು ಕಳಿಸಿದ್ದರು.

'ತನ್ನನ್ನು ಅಷ್ಟು ಆತುರದಿಂದ ಬರಮಾಡಿಕೊಂಡ ರಾಜಕಾರಣವು ಯಾವುದೋ ಅಕಸ್ಮಾತ್ ಉದ್ಭವಿಸಿರುವ ಯುದ್ಧಕಾರಣವೆ ಇರಬಹುದೆಂದು ಮಾರಸಿಂಗಮಯ್ಯ ಯೋಚಿಸಿಯಾರು, ಆದ್ದರಿಂದ ಅವರ ಮನಸ್ಸಿನ ಶಂಕೆಯನ್ನು ನಿವಾರಿಸುವುದು ತಮ್ಮ ಪ್ರಥಮ ಕರ್ತವ್ಯ' ಎಂದು ತಿಳಿದು, ಪ್ರಾಜ್ಞರಾದ ರಾಜಮಾತೆ ಮಂಗಳದ ಸುದ್ದಿಯನ್ನೆ ಮುಂದಾಗಿ ಕಳಿಸಿದ್ದರು.

ಮಹಾದೇವನ ಪೂಜೆಯನ್ನು ಮುಗಿಸಿ ಏಳುತ್ತಿದ್ದ ಮಾರಸಿಂಗಮಯ್ಯನವರಿಗೆ 'ಅರಮನೆಯ ಸವಾರನೊಬ್ಬ ಓಲೆಯನ್ನು ತಂದಿದ್ದಾನೆ, ಬಾಗಿಲಲ್ಲಿ ನಿಂತಿದ್ದಾನೆ' ಎಂದು ಮನೆಯ ಆಳು ದೇಜ ಬಂದು ತಿಳಿಸಿದ. ರಾಜಮಾತೆಯವರಿಂದಲೊ ಹೊಯಿಸಳೇಶ್ವರರಿಂದಲೊ ಕರೆ ಬಂದಿರಬೇಕೆಂದೆಣಿಸಿ, ಮಾರಸಿಂಗಮಯ್ಯ ಉಟ್ಟ ಮಡಿಯಲ್ಲೆ ಹೆಬ್ಬಾಗಿಲಿಗೆ ಬಂದರು.

ಡಣಾಯಕರಿಗೆ ನಮಸ್ಕರಿಸಿ, ವಿನಯದಿಂದ ಓಲೆಯನ್ನು ಒಪ್ಪಿಸಿ, ಸವಾರ ಹಿಂದಕ್ಕೆ ಸರಿದು ನಿಂತ. ಚೌಕಟ್ಟಿನ ಒಳಸಾಲೆಯಲ್ಲಿ ಮಾರಸಿಂಗಮಯ್ಯ ಓಲೆಯನ್ನು ಓದುತ್ತ ನಿಂತರು.

ಶಾಂತಿನಾಥಜಿನನ ದರ್ಶನಕ್ಕೆ ಹೋಗಿದ್ದ ಮಾರಸಿಂಗಮಯ್ಯನವರ ಸತಿ ಮಾಚಿಕಬ್ಬೆ ಆಗ ಬಸದಿಯಿಂದ ಹಿಂದಿರುಗಿ ಮನೆಯ ಹೊಸ್ತಿಲನ್ನು ಸೇರಿ, ಪತಿಯನ್ನು ಕಂಡು ಅವಾಕ್ಕಾಗಿ ನಿಂತರು. ಅವರು ಅಂದು ಊರಿಗೆ ಬರುವು ದನ್ನು ಆಕೆ ಅರಿಯರು. ಆ ದಿನ ಪ್ರಾತಃಕಾಲ ಎದ್ದೊಡನೆ ಸ್ನಾನಮಾಡಿ ಮಡಿಯುಟ್ಟು ಆಳಿನ ಕೈಯಲ್ಲಿ ಪೂಜಾಸಾಮಗ್ರಿಗಳನ್ನು ಹೊರಿಸಿಕೊಂಡು ಮಾಚಿಕಬ್ಬೆ ಶಾಂತಿನಾಥಜಿನನ ಮಸ್ತಕಾಭಿಷೇಕಕ್ಕೆ ಚೈತ್ಯಾಲಯಕ್ಕೆ ಹೋಗಿ ದ್ದರು. ಬಿಸಿಲಿನಲ್ಲಿ ನಡೆದುಬಂದ ಆಯಾಸದಲ್ಲಿ ಆಕೆ ವಸ್ತ್ರದಿಂದ ಹಣೆಯ ಬೆವರನ್ನು ಒರಸಿಕೊಳ್ಳುತ್ತಾ, ಓಲೆಯನ್ನು ಓದುತ್ತ ನಿಂತಿದ್ದ ಪತಿಯನ್ನು ಕುರಿತು 'ಚೈತ್ಯಾಲಯಕ್ಕೆ ದೇಚನೊಡನೆ ಹೇಳಿಕಳುಹಿಸಬಾರದಿತ್ತೆ? ಬೇಗ ಬರುತ್ತಿದ್ದೆನಲ್ಲ' ಎಂದರು.

ಮಾರಸಿಂಗಮಯ್ಯ ಒಂದು ಸಲ ಕತ್ತೆತ್ತಿ ಪತ್ನಿಯನ್ನು ನೋಡಿ ನಸು ನಕ್ಕು ಮತ್ತೆ ಓಲೆಯ ಓದಿನಲ್ಲಿ ಮಗ್ನರಾದರು. ಮಾಚಿಕಬ್ಬೆ ಮಾತನ್ನು ಮುಂದುವರಿಸಿ, "ಇನ್ನೂ ನೀವು ಮನೆಗೆ ಬಂದಿರೊ ಇಲ್ಲವೊ, ಆಗಲೆ ಅರಮನೆಯಿಂದ ಕರೆ ಬಂದಿತೆ? ನಿಮಗೆ ಬಿಡುವು ಕೊಡದಿದ್ದರೆ ಹೋಗಲಿ, ಪಾಪ! ತಿಂಗಳುಗಟ್ಟಲೆ ರಣಭೂಮಿಯಲ್ಲೇ ಇದ್ದು ಹೋರಾಡಿ ಹೋರಾಡಿ, ಉಳಿದ ಜೀವ ಉಳಿದ ಕೈಕಾಲುಗಳೊಂದಿಗೆ—ಮನೆಯನ್ನು ಕಂಡೇವೆ! ಮಡದಿ ಯನ್ನು ಕಂಡೇವೆ! ಮಕ್ಕಳನ್ನು ಕಂಡೇವೆ!—ಎಂದು ಈಗ ತಾನೆ ಹಿಂದಿರುಗಿ ರುವ ಜನ ಊರು ಸೇರಿ ನಾಲ್ಕು ದಿನಗಳಾದರೂ ನೆಮ್ಮದಿಯಾಗಿ ಉಂಡು ಹೆಂಡಿರು ಮಕ್ಕಳ ಜೊತೆಯಲ್ಲಿ ಇರಬಾರದೆ? ಪುನಃ ಅವಸರದ ಆಜ್ಞೆ ಇನ್ನೆಲ್ಲಿಗೊ? ತಲೆಯೂರಿನ ಕೆಲವು ತುಂಟರು ಸುತ್ತ ಇರುವ ನಮ್ಮ ಹಳ್ಳಿಗರನ್ನು ದೋಚಿ ಅವರ ಗೋವುಗಳನ್ನು ಕೊಂಡು ಹೋದರೆಂದು ಸುದ್ದಿ. ಇನ್ನೇನು! ಈ ಓಲೆ ಅದೇ ಇದ್ದೀತು! ನೀವೇ ಹೋಗಿಬನ್ನಿ. ಆ ಪುಂಡರು ಇನ್ನು ಗಡಿ ದಾಟದಂತೆ ಮಾಡಿ, ಗೋವುಗಳನ್ನು ಸಾಕಿದ್ದವರಿಗೆ ದೊರಕಿಸಿಕೊಟ್ಟು ಆ ಪುಂಡರ ಕಡೆಯಿಂದ ನೂರು ಹೊನ್ನು ಗದ್ಯಾಣ ಅಪರಾಧ ಕಾಣಿಕೆಯನ್ನು ಪ್ರಭುಗಳಿಗೆ ತಂದೊಪ್ಪಿಸಿ" ಎನ್ನುತ್ತಿರುವಾಗ ಅಲ್ಲಿಯೇ ನಿಂತಿದ್ದ ಅರಮನೆಯ ಸವಾರ, ಕುದುರೆಯ ಬೆನ್ನಿನ ಮೇಲೆ ಇದ್ದ ಚೀಲದಿಂದ ಇನ್ನೊಂದು ಓಲೆ ಯನ್ನೆತ್ತಿಕೊಂಡು, ಮುಂದೆ ಬಂದು, ಅದನ್ನೂ ಮಾರಸಿಂಗಮಯ್ಯನವರಿಗೆ

ಒಪ್ಪಿಸಿ, 'ಗಂಗರಾಜ ಮಹಾಅಮಾತ್ಯರು ಇದನ್ನು ತಮಗೆ ಒಪ್ಪಿಸಿ ಬಾ ಎಂದು ಹೇಳಿದ್ದಾರೆ. ತಾವು ಓದಿನೋಡಿ ಏನಾದರೂ ಅಪ್ಪಣೆ ಕೊಡಿಸಿದರೆ, ಅದನ್ನು ತತ್‌ಕ್ಷಣ ಬಂದು ತಿಳಿಸತಕ್ಕದ್ದು ಎಂದೂ ಅಪ್ಪಣೆ ಮಾಡಿದ್ದಾರೆ' ಎಂದು ಹೇಳಿ ನಾಲ್ಕು ಹೆಜ್ಜೆ ಹಿಂದೆ ಸರಿದು ಕೈಕಟ್ಟಿ ನಿಂತ.

ಮಾರಸಿಂಗಮಯ್ಯ ಆ ಓಲೆಯನ್ನೂ ಓದಿಕೊಂಡರು. ಅದರಲ್ಲಿ ಹೀಗೆ ಒಕ್ಕಣೆಸಿತ್ತು:

ಪರಮಮಿತ್ರ ಮಾರಸಿಂಗಮಯ್ಯನಿಗೆ. ನಾಳೆ ನಡೆಯುವ ಕುವರ ವಿಷ್ಣುವಿನ ಬ್ರಹ್ಮೋಪದೇಶಮಹೋತ್ಸವಕ್ಕೆ ಸತಿ ಮಾಚಿಕಬ್ಬೆಯನ್ನೂ ಮಗಳು ಶಾಂತಲೆಯನ್ನೂ ತಪ್ಪದೆ ಕರೆತರಬೇಕೆಂದು ರಾಜಮಾತೆ ಅಪೇಕ್ಷೆ ಪಟ್ಟಿದ್ದಾರೆ. ಇದು ಕರ್ತವ್ಯವೆಂದು ಪರಿಗಣಿಸತಕ್ಕದ್ದು.

ದ್ವಾರವತಿ, ಗಂಗರಾಜ
ಶ್ರಾವಣ ಶುದ್ಧ ತ್ರಯೋದಶಿ.

ಓಲೆಯನ್ನು ಓದಿಯಾದಮೇಲೆ ಮಾರಸಿಂಗಮಯ್ಯ ಸವಾರನೊಡನೆ ಹೇಳಿದರು: 'ಗಂಗರಾಜರಲ್ಲಿ ಹೋಗಿ ತಿಳಿಸು, ಉತ್ಸವಕ್ಕೆ ಎಲ್ಲರನ್ನೂ ಕರೆತರುವೆನೆಂದು.' ಬಳಿಕ ಪತ್ನಿಯ ಕಡೆ ತಿರುಗಿ ನೋಡಿದರು. ಅವಸರದ ಓಲೆಗಳು ಏನಿರಬಹುದೆಂದು ಮಾಚಿಕಬ್ಬೆ ಕುತೂಹಲವನ್ನು ವ್ಯಕ್ತಪಡಿಸುತ್ತ ನಿಂತಿದ್ದರು.

'ಮೇನೆಯಲ್ಲಿ ಹೋಗಬಾರದಿತ್ತೆ? ಕಡೆಗೆ ಕಾಲಿಗೆ ಮರದ ರಕ್ಷೆಯನ್ನಾದರೂ ಮೆಟ್ಟಿ ಹೋಗಬಹುದಾಗಿತ್ತಲ್ಲ?' ಎಂದರು ಮಾರಸಿಂಗಮಯ್ಯ.

ಮಾಚಿಕಬ್ಬೆ ನಸುನಕ್ಕು, 'ನಿಮ್ಮ ಹೆಂಡತಿ ಬಿಸಿಲಿಂದ ಬಾಡಿಹೋದಳೆ! ಎಷ್ಟು ಜನ ಬಿಸಿಲಿನಲ್ಲಿ ಓಡಾಡುತ್ತಿಲ್ಲ? ಎಷ್ಟು ಜನ ದುಡಿಯುತ್ತಿಲ್ಲ? ಹಿರಿಯರ ದರ್ಶನಕ್ಕೆ, ಗುರುಗಳ ದರ್ಶನಕ್ಕೆ, ರಾಜದರ್ಶನಕ್ಕೆ, ದೇವತಾದರ್ಶನಕ್ಕೆ ವಾಹನಗಳಲ್ಲಿ ಹೋಗಬಾರದು, ಪಾದರಕ್ಷೆಗಳನ್ನು ಮೆಟ್ಟಿ ಹೋಗಬಾರದು. ಅದು ಶ್ರದ್ಧೆಯಲ್ಲ, ಭಕ್ತಿಯಲ್ಲ. ಜಿನಧರ್ಮಕ್ಕೆ ಅದು ಸಲ್ಲದು; ಶಿವಧರ್ಮಕ್ಕೂ ಅದು ಸಲ್ಲದೆಂದು ತಿಳಿದಿದ್ದೇನೆ. ನಿಮ್ಮ ಶಿವಶಕ್ತಿ ಪಂಡಿತರನ್ನಾಗಲಿ, ನಾಗರುದ್ರರನ್ನಾಗಲಿ ಕೇಳಿ ತಿಳಿಯಿರಿ. ನಾನು ತಿಳಿದಿರುವುದು—ಯಾವ ಮತಸ್ಥರೇ ಆಗಲಿ ಗುರುದರ್ಶನಕ್ಕೆ ದೇವತಾದರ್ಶನಕ್ಕೆ ಹೋಗುವಾಗ ಸಾಮಾನ್ಯರಂತೆ ನಡೆದುಹೋಗಬೇಕು. ಅಲ್ಲವೆ?' ಎಂದರು.

"ಒಪ್ಪಿದೆ ಮಾಚಿ, ನೀನು ಪ್ರಾಜ್ಞಳು. ಶ್ರದ್ಧೆಯೆಂದರೆ ಹೀಗೆ ಇರಬೇಕು. ಇಗೋ, ಈ ಓಲೆಗಳು ದಂಡು ದಾಳಿಗಳಿಗೆ ಸಂಬಂಧಪಟ್ಟವು ಅಲ್ಲ. ನಾಳೆ ಅರ ಮನೆಯಲ್ಲಿ ಕುವರ ವಿಷ್ಣುವಿಗೆ ಬ್ರಹ್ಮೋಪದೇಶವಂತೆ, ಈ ಓಲೆ ಆ ಉತ್ಸವಕ್ಕೆ ಒಸಗೆ. ಇನ್ನೊಂದು—ಮಹಾದೇವಿ ಅಕ್ಕನವರು ತಾವೇ ಗಂಗರಾಜರಿಗೆ ಹೇಳಿ ಬರೆಯಿಸಿ ಕಳುಹಿಸಿರುವುದು. ಒಕ್ಕಣೆ—ಈ ಉತ್ಸವಕ್ಕೆ ನಿನ್ನನ್ನೂ ಶಾಂತಲೆ ಯನ್ನೂ ಖಂಡಿತ ಕರೆದುಕೊಂಡು ಬರುವುದೆಂದು."

"ಹೌದೆ! ಬಹು ಸಂತೋಷ. ನಾವೂ ಬರುತ್ತೇವೆ. ಅದಿರಲಿ, ನೀವು ಊರಿಗೆ ಬರುವ ಸುದ್ದಿಯೆ ಇರಲಿಲ್ಲವಲ್ಲ!"

"ಅಕ್ಕನವರೋ, ಅಥವಾ ಪ್ರಭುಗಳೇಯೋ ಕರೆಸಿಕೊಂಡಿರಬೇಕು. ತ್ವರೆ ಯಿಂದ ರಾಜಧಾನಿಗೆ ಬರಬೇಕೆಂದು ಮಹಾದೇವಿ ಅಕ್ಕನವರೆ ಹೇಮಾದ್ರಿಗಳ ಮೂಲಕ ಬರೆಯಿಸಿ ಕಳಿಸಿದ್ದರು. ಸಂದರ್ಭವೇನೋ ಮುಂದೆ ತಿಳಿದೀತು."

"ಅಕ್ಕನವರದು ಬಹು ವಾತ್ಸಲ್ಯ. ಈಗ ತಿಂಗಳ ಹಿಂದೆ—ಆಗ ನೀವು ದಂಡಿನೊಡನೆ ಪೊಂಬುರುಚದಲ್ಲಿದ್ದಿರಿ—ವಾಸಂತಿಕಾದೇವಿಯ ಆಲಯದಲ್ಲಿ ಸಂಜೆಯ ಪೂಜೆಯನ್ನು ಮುಗಿಸಿಕೊಂಡು ಅರಮನೆಗೆ ಹಿಂದಿರುಗುತ್ತಿದ್ದ ಅಕ್ಕ ನವರು, ಅದೇ ದಾರಿಯಲ್ಲಿ ಮನೆಗೆ ನಡೆದುಬರುತ್ತಿದ್ದ ನಮ್ಮ ಮಗು ಶಾಂತಲೆ ಯನ್ನು ಕಂಡರು. ಸ್ವಲ್ಪಹೊತ್ತು ಹಾಗೆಯೇ ನೋಡಿದ ಮೇಲೆ ಮೇನೆಯನ್ನು ಅಲ್ಲಿಯೇ ನಿಲ್ಲಿಸಿಕೊಂಡು, ಶಾಂತಲೆಯನ್ನು ಬಳಿಗೆ ಕರಸಿ, 'ನೀನಾರ ಮಗಳೆ, ಲಕ್ಷ್ಮಿ?' ಎಂದು ಕೇಳಿದರಂತೆ. ಮಗು ತಲೆಯನ್ನು ಬಾಗಿಸಿ ಲಜ್ಜೆಯಿಂದ 'ನನ್ನ ಹೆಸರು ಶಾಂತಲೆ' ಎಂದಳಂತೆ."

"ಶಾಂತಲೆಗೆ ಅವರು ಮಹಾದೇವಿ ಅಕ್ಕನವರೆಂದು ತಿಳಿಯಲಾಗಲಿಲ್ಲವೆ?"

"ಅರಮನೆಯ ಬೋಯಿಗಳು ಹೊತ್ತು, ರಾಜಚಿಹ್ನೆಯಿಂದ ಅಲಂಕೃತ ವಾದ ಮೇನೆಯನ್ನು ಕಂಡಾಗಲೆ ಶಾಂತಲೆ ತಿಳಿದುಕೊಂಡಳಂತೆ—ತನ್ನನ್ನು ಬಳಿಗೆ ಕರಸಿದವರು ರಾಜಮಾತೆ ಎಂಬುದನ್ನು."

"ಅನಂತರ?"

"ದೂರದಲ್ಲಿ ಕೈಜೋಡಿಸಿ ತಲೆಬಾಗಿ ನಿಂತಿದ್ದ ಮಗುವನ್ನು 'ಬಳಿಗೆ ಬಾ ಶಾಂತಲೆ' ಎಂದು ಹತ್ತಿರಕ್ಕೆ ಕರೆದುಕೊಂಡು, ತಲೆ ತಡವಿ, ಗಲ್ಲವನ್ನು ಹಿಡಿದೆತ್ತಿ, ಮಗುವಿನ ಕುತ್ತಿಗೆಯಲ್ಲಿದ್ದ ಮುತ್ತಿನ ಹಾರವನ್ನು ಮುಟ್ಟಿನೋಡಿ,

'ಎಳೆತಾವರೆ ಹೂವಿನಂತೆ ಹೊಳೆಯುವ ನಿನ್ನ ಮುಖಕ್ಕೆ ಈ ಚೆಂದದ ಮುತ್ತುಗಳು ಚೆನ್ನಾಗಿ ಒಪ್ಪಿವೆ. ಶಾಂತಲೆ! ಎಷ್ಟು ಸೊಗಸಾದ, ಎಷ್ಟು ಗಂಭೀರವಾದ ಹೆಸರೆ ನಿನ್ನದು . . . !' "

ಮಾರಸಿಂಗಮಯ್ಯ ಮಾತಿಗೆ ಅಡ್ಡವಾಗಿ "ಈ ವಿಷಯದಲ್ಲಿ ಜಾಣ್ಮೆ ಸ್ತ್ರೀಜಾತಿಗೆ ಸಹಜವಾದುದು. ಆಮೇಲೆ?" ಎಂದರು.

"ಅದೇನು ನೀವಂದ 'ಜಾಣ್ಮೆ'? ಸ್ತ್ರೀಯರಿಗೆ ಇರುವುದೇನು? ಪುರುಷರಿಗೆ ಇಲ್ಲದಿರುವುದೇನು?"

"ಹೇಳುತ್ತೇನೆ, ಮುಂದಕ್ಕೆ ಏನಾಯಿತು?"

"'ನೀ ಯಾರ ಮಗಳವ್ವ?' ಎಂದು ಕೇಳಿದರಂತೆ. ಅದಕ್ಕೆ ಶಾಂತಲೆ 'ಮಾಚಿಕಬ್ಬೆಯವರ ಮಗಳು' ಎಂದಳಂತೆ. ಅಕ್ಕನವರು 'ಯಾವ ಮಾಚಿಕಬ್ಬೆಯೆ?' ಎಂದು ಕೇಳಿದರಂತೆ. ಅದಕ್ಕೆ ಶಾಂತಲೆ 'ನನ್ನ ಅಯ್ಯ ಡಣಾಯಕ ಮಾರಸಿಂಗಮಯ್ಯನವರು' ಎಂದಳಂತೆ. ಶಾಂತಲೆ ಹಾಗೆನ್ನುತ್ತಲೆ, ಅಕ್ಕನವರು 'ಮಾಚಕ್ಕನ ಮಗಳೇನೆ ನೀನು! ಚಿನ್ನ!' ಎಂದು ಶಾಂತಲೆಯ ತಲೆಯನ್ನು ತಡವಿ, 'ನಿನ್ನವ್ವೆಗೆ ನಮ್ಮ ನೆನಪು ಮಾಡಿಕೊಡು. ನಮ್ಮನ್ನು ಕಾಣಲು ಬರಹೇಳು, ಅಥವಾ ನಾವೇ ಅರಮನೆಗೆ ಕರಸಿಕೊಳ್ಳುತ್ತೇವೆ. ಶಾಂತಲೆ, ನಿನ್ನ ಮುಖ ಸೊಂಪೆರೆಯುತ್ತದೆ. ಪದ್ಮೆ, ಉಮೆ, ವಾಣಿ ಈ ಮೂವರ ಕಳೆಗಳೂ ನಿನ್ನ ಮುಖದಲ್ಲಿವೆ. ಸೊಬಗಿ, ನೀ ಹೊಕ್ಕ ಮನೆಯಲ್ಲಿ ಹೊನ್ನು ಉಕ್ಕಿಹರಿದೀತು. ನಿನ್ನ ಅವ್ವೆಗೆ ನಾವು ಕೇಳಿದೆವೆಂದು ತಿಳಿಸು' ಎಂದು ಹೇಳಿ ಒಂದು ಕೈಬುಟ್ಟಿಯ ತುಂಬ ಹಣ್ಣು ಹೂಗಳನ್ನು ತುಂಬಿ ಮಗುವಿನ ಕೈಯಲ್ಲಿ ಕೊಟ್ಟುಕಳಿಸಿದರು. ಶಾಂತಲೆ ಅಕ್ಕನವರಿಗೆ ಭಕ್ತಿವಿನಯಗಳಿಂದ ನಮಸ್ಕರಿಸಿ ಮನೆಗೆ ಬಂದು ನಡೆದುದನ್ನೆಲ್ಲಾ ನನ್ನೊಡನೆ ಹೇಳಿದಳು. ತಂದಿದ್ದ ಹೂಹಣ್ಣುಗಳನ್ನು ಕೊಟ್ಟಳು. ಮಾರನೆಯ ದಿನ ಬೆಳಗಾಗಲಿಲ್ಲ, ಆಗಲೆ ಅರಮನೆಯ ಮೇನೆ ನಮ್ಮ ಮನೆಯ ಮುಂದೆ ಬಂದಿಳಿಯಿತು. 'ರಾಜಮಾತೆಯರು ಹೇಳಿಕಳಿಸಿದ್ದಾರೆ. ಶಾಂತಲೆಯನ್ನು ಕರೆದುಕೊಂಡು ತಾವು ಅರಮನೆಗೆ ಬರಬೇಕು' ಎಂದು ಚಿನ್ನದ ಕೋಲಿನ ಹರಿಕಾರ ನನಗೆ ಬಂದು ಹೇಳಿಹೋದ . . . ಈಗ ಹೇಳಿ, ಅದೇನು 'ಸ್ತ್ರೀಜಾಣ್ಮೆ' ಎಂದಿರಲ್ಲ!"

"ಹೇಳುತ್ತೇನೆ, ಹೇಳುತ್ತೇನೆ . . . . ಆಮೇಲೆ ನೀವು ಅರಮನೆಗೆ ಹೋದಿರಿ. ಏನಂದರು ಅಕ್ಕನವರು? ಏನೇನು ನಡೆಯಿತು?"

"ನೋಡಿ, ನಿಮಗೆ ಎಷ್ಟು ಆತುರವೋ ನಮಗೂ ಹಾಗೆಯೆ ಎಂದು ತಿಳಿಯಬಾರದೇಕೆ? ಅದೇನು 'ಜಾಣ್ಮೆ' ಅದನ್ನು ಮೊದಲು ಹೇಳಿಬಿಡಿ."

"ಇನ್ನೂ ತಿಳಿಯಲಿಲ್ಲವೆ! ಕುತ್ತಿಗೆಯ ಮುತ್ತಿನ ಹಾರವನ್ನು ಮುಟ್ಟಿ ನೋಡಿದ್ದರ ಮೊದಲನೆಯ ಸೂಕ್ಷ್ಮ 'ಇವಳು ಭಾಗ್ಯವಂತರ ಮಗಳೆ? ಅಥವಾ ಅದು ಬಡವರೂ ಧರಿಸುವ ಬಿಳಿಯ ಮಣಿಗಳ ಸರವೆ?' ಎಂದು. ಎರಡನೆಯ ಸೂಕ್ಷ್ಮ 'ಇವಳು ಕನ್ಯೆಯೆ ಅಥವಾ ಮದುವೆಯಾದವಳೆ? ಕುತ್ತಿಗೆಯಲ್ಲಿ ಮಂಗಳಸೂತ್ರವಿದೆಯೆ?' ಎಂದು ಅರಿತುಕೊಳ್ಳುವುದು. ಈ ಚೋಳದೇವಿ ಬಹು ಬುದ್ಧಿಮತಿ. ಆಮೇಲೆ ಅರಮನೆಯಲ್ಲಿ ಏನಾಯಿತು? ಅಕ್ಕನವರು ಏನೇನು ಕೇಳಿದರು? ಏನೇನು ಹೇಳಿದರು?"

"ಅಲ್ಲಿ ಮಾತನಾಡಿದ್ದೆಲ್ಲ ನಿಮ್ಮ ಮುಂದೆ ಹೇಳುವುದಕ್ಕಾಗುತ್ತದೆಯೇ? ಹಿಂದಿನ ಕಾಲದ ಎಷ್ಟೋ ಸಂಗತಿಗಳು, ಎಷ್ಟೋ ನೆನಪುಗಳು, ಸಿಹಿ, ಕಹಿ ಎಲ್ಲ ನೆನಪಿಗೆ ಬಂದವು. ಪ್ರಭು ಎರೆಯಂಗರ ಕಾಲದ ನೆನಪುಗಳು . . . ಆಗ ತಾನೆ ಮಹಾದೇವಿ ಅಕ್ಕನವರು ಎರೆಯಂಗರ ಕೈಹಿಡಿದು ಪಟ್ಟಮಹಿಷಿ ಯಾದ ಕಾಲ: ಎರೆಯಂಗ ಪ್ರಭುಗಳು ಹೊಸದರಲ್ಲಿ ಅಕ್ಕನವರನ್ನು 'ಹೇ ಚೋಳದೇವಿ!' ಎಂದೇ ಕರೆಯುತ್ತಿದ್ದರು. ಆಮೇಲೆ 'ಮಹಾದೇವಿ' ಎಂದು ಕರೆದರು. ಆಮೇಲೆ ಕುವರ ವಿಷ್ಣುವಿನ ತಂದೆ ಚೆನ್ನಮ ದಂಡಾಧೀಶ, ಅವರ ಮಹಾಸತಿ ಚಂದಲೆ ಇವರ ವಿಷಯಗಳು ಜ್ಞಾಪಕಕ್ಕೆ ಬಂದುವು. ಅನಂತರ ಅಕ್ಕನವರು ಗತಿಸಿದ ತಮ್ಮ ಹಿರಿಯ ಮಕ್ಕಳು ಬಲ್ಲಾಳರಾಜರನ್ನು ನೆನಸಿ ಕೊಂಡು ದುಃಖಪಟ್ಟರು. ನಮ್ಮ ಶಾಂತಲೆಯ ವಿದ್ಯೆ, ವಿನಯ, ಗುಣ, ನಡೆ, ನುಡಿ ಇವುಗಳನ್ನು ಅಕ್ಕನವರು ಬಹಳ ಮೆಚ್ಚಿಕೊಂಡರು. ಶಾಂತಲೆ ವೀಣೆಯನ್ನು ನುಡಿಸಿದಳು, ಹಾಡಿದಳು. ಅಕ್ಕನವರ ದುಃಖವೆಲ್ಲ ಮರೆಯಿತು, ಆನಂದಪಟ್ಟರು. ಕಡೆಗೆ ಅಕ್ಕನವರು ಮಗುವಿನ ಕೈಯಿಂದ ನೃತ್ಯವನ್ನು ಸಹ ಮಾಡಿಸಿ ತೃಪ್ತಿಪಟ್ಟರು. ಆಬಳಿಕ ನನ್ನನ್ನು ನೋಡಿ, 'ಮಾಚಿ, ನಿನ್ನ ಎಷ್ಟು ತಪಸ್ಸಿನ ಫಲವೆ ಇದು! ಯಾವ ನೋಂಪಿಯ ಫಲವೆ?' ಎಂದು ಕೇಳಿದರು. 'ಶಾಂತಲೆ ಧರ್ಮೇಶ್ವರನ ವರಪ್ರಸಾದ, ನಮ್ಮ ಆರು ವರುಷಗಳ

ನಿಯಮ ನಿಷ್ಠೆಗಳ ಫಲ. ಬ್ರಾಹ್ಮಿಯೆ ಶಾಂತಲೆಯ ಉಪಾಸ್ಯದೇವತೆ; ಈ ವಿದ್ಯೆ, ಈ ಕುಶಲತೆ ಎಲ್ಲವೂ ಆ ಮಹಾತಾಯಿಯ ಕರುಣೆ' ಎಂದೆ ನಾನು."

"ಭಲೆ! ಚೆನ್ನಾಗಿ ಹೇಳಿದೆ. ಇನ್ನೇನು ಕೇಳಿದರು?"

"ಅಕ್ಕನವರು ಶಾಂತಲೆಯ ಕೈಯಿಂದ ರಾಮಾಯಣವನ್ನೂ ಓದಿಸಿ ಕೇಳಿದರು."

"ಹೊ! ವಿದ್ವತ್ ಪರೀಕ್ಷೆಯೂ ನಡೆಯಿತು!"

"ಶಾಂತಲೆ ರಸಪುಷ್ಟಿಯುಂಟಾಗುವಂತೆ ಓದಿದಳು. ಆಗ ಶ್ರೀಪಾಲ ತ್ರೈವಿದ್ಯದೇವರು ಧರ್ಮೋಪದೇಶ ಮಾಡುವುದಕ್ಕೆ ಅಲ್ಲಿಗೆ ಬಿಜಯಮಾಡಿದರು. ಶಾಂತಲೆ ಓದಿದ ಕೆಲವು ಭಾಗಗಳ ಅರ್ಥವಿವರಣೆಯನ್ನು ಕೇಳಿದರು. ಶಾಂತಲೆ ತೃಪ್ತಿಕರವಾದ ಉತ್ತರವಿತ್ತಳು. ಶ್ರೀಪಾಲತ್ರೈವಿದ್ಯದೇವರು ಸಂತೋಷಪಟ್ಟು 'ಮಗಳೆ, ಯಾರಲ್ಲಿ ಕಲಿತೆ?' ಎಂದು ಕೇಳಿದರು."

"'ಪ್ರಭಾಚಂದ್ರಸಿದ್ಧಾಂತದೇವರ ಪಾದಪದ್ಮೋಪಜೀವಿ ನಾನು' ಎಂದಳು ಶಾಂತಲೆ."

"ಭಲೆ! ಭಲೆ! ಆಮೇಲೆ?"

"'ಅಂತಹ ಗುರುಗಳ ಕೃಪೆ ಪೂರ್ವಪುಣ್ಯವಿಶೇಷ. ನಿನ್ನ ಭಾಷೆ, ಉಚ್ಚಾರಣೆ, ಸಾಹಿತ್ಯಜ್ಞಾನ ಚೆನ್ನಾಗಿದೆ, ವ್ಯಾಕರಣ ಶುದ್ಧವಾಗಿದೆ. ನಮಗೆ ಬಹು ಸಂತೋಷವಾಯಿತು' ಎಂದು ಶಾಂತಲೆಯನ್ನು ಹರಸಿದರು."

"ಈಗ ನಮ್ಮ ವಂಶ ಉದ್ಧಾರವೇ ಆಯಿತು."

"ಆಮೇಲೆ ಅಕ್ಕನವರು ಶಾಂತಲೆಗೆ, ನನಗೆ, ಉಡುಗೊರೆ ಫಲಪುಷ್ಪಗಳನ್ನು ಕೊಟ್ಟರು."

"ಮತ್ತೇನನ್ನೂ ಹೇಳಲಿಲ್ಲವೆ?"

"ನಾವು ಹೊರಡುವುದಕ್ಕೆ ಎದ್ದಾಗ ನನ್ನನ್ನು ಬಳಿಗೆ ಕರೆದು ಕಿವಿಯಲ್ಲಿ 'ಮಾಚಿ, ಯಾರಿಗೆ ನಿಶ್ಚಯವಾಗಿದೆ?' ಎಂದು ಕೇಳಿದರು. ಅದಕ್ಕೆ ನಾನು 'ಆ ಯೋಚನೆಯನ್ನೆ ನಾವು ಇನ್ನೂ ಮಾಡಿಲ್ಲ. ಶಾಂತಲೆಯನ್ನು ಕೇಳಿದರೆ ತನಗೆ ಮದುವೆ ಬೇಡವೆಂದೇ ಹೇಳುತ್ತಾಳೆ. ನಮಗಿರುವ ಸೌಭಾಗ್ಯವೆಲ್ಲ ಇವಳೊಬ್ಬಳೆ. ಇವಳಿಂದ ಬೇರೆಯಾಗಿ ನಾವು ಜೀವಿಸಿರುವುದು ಹೇಗೆ? ಎಂದೆನಿಸಿದೆ ನಮಗೆ' ಎಂದೆ. ಅದಕ್ಕೆ ಅಕ್ಕನವರು ನಕ್ಕು 'ಉಂಟೇನೆ ಮಾಚಿ!

ಅರಿಯದವಳೇನೆ ನೀನು? ಹೆಣ್ಣು ಸೇರಿದ ಮನೆಯ ಒಡತಿ, ಹುಟ್ಟಿದ ಮನೆಯ ಕೀರುತಿ' ಎಂದು ಹೇಳಿ ನಮ್ಮನ್ನು ಕಳಿಸಿಕೊಟ್ಟರು."

"ಮಾಚಿ, ಮುಂದಿನ ಶುಭಕ್ಕೆ ಇದು ಪೀಠಿಕೆಯಂತಿದೆ. ಮನಸ್ಸಿನಲ್ಲಿ ದೊಡ್ಡ ಆಶೆಯನ್ನು ಹುಟ್ಟಿಸುತ್ತಿದೆ. ಮಗಳೆಲ್ಲಿ? ಬಂದಾಗಿನಿಂದ ಕಾಣೆ."

"ನೀವು ಊರಿಗೆ ಬರುವುದನ್ನು ಅವಳೂ ಅರಿಯಳು. ಕೆಳದಿಯ ರೊಡನೆ ಬೆಳಗ್ಗೆ ಶಾರದಾಲಯಕ್ಕೆ ಹೋದವಳು, ದೇಚನ ಕೈಯಲ್ಲಿ ಅಲ್ಲಿಗೇ ವೀಣೆಯನ್ನು ತರಿಸಿಕೊಂಡಳು. ಈಗಲೂ ಅಲ್ಲಿಯೇ ಇರಬಹುದು. ದೇಚನನ್ನು ಕರೆದು ಕೇಳುತ್ತೇನೆ."

ಮಾಚಿಕಬ್ಬೆ ದೇಚನನ್ನು ಕೂಗಿ ಕರೆದರು. 'ಬಂದೆ ಅವ್ವಾ' ಎನ್ನುತ್ತ ದೇಚ ಹೂತೋಟದ ಬಾಗಿಲ ಕಡೆಯಿಂದ ಬಂದು, ಒಡೆಯರೂ ಒಡತಿಯೂ ಮಾತನಾಡುತ್ತಾ ನಿಂತಿರುವುದನ್ನು ಕಂಡು, ಕೈಜೋಡಿಸಿಕೊಂಡು ದೂರದಲ್ಲಿ ನಿಂತು, 'ಒಡೆಯರು ಬಂದುದನ್ನು ಕಂಡು ಶಿವಪೂಜೆಗೆ ಬಿಲ್ವಪತ್ರೆ ತುಂಬೆಹೂ ಗಳನ್ನು ತಂದಿಟ್ಟು, ಸೊಡರಿಗೆ ತುಪ್ಪದ ಬತ್ತಿಗಳನ್ನಿಟ್ಟು, ಮಡಿಗಳನ್ನು ಇರಿಸಿ, ಶಾಂತಲವ್ವೆಗೆ ವೀಣೆಯನ್ನು ತೆಗೆದುಕೊಂಡುಹೋಗಿ ಕೊಟ್ಟುಬಂದೆ' ಎಂದ. 'ಶಾಂತಲವ್ವೆ ಈಗ ಎಲ್ಲಿದ್ದಾರೆ?' ಎಂದು ಕೇಳಿದರು ಮಾರಸಿಂಗಮಯ್ಯ. 'ವಾಣೀ ಪೂಜೆಯಲ್ಲಿ ಇದ್ದಾರು. ಹೋಗಿ ಅಯ್ಯ ಬಂದರೆಂದು ತಿಳಿಸಲೆ?' ಎಂದು ಕೇಳಿದ ದೇಚ. 'ಬೇಡ, ನಾವೆ ಅಲ್ಲಿಗೆ ಹೋಗುತ್ತೇವೆ' ಎನ್ನುತ್ತ ಮಾರಸಿಂಗಮಯ್ಯ ತಮ್ಮ ಸತಿಯೊಡಗೂಡಿ, ಮನೆಯ ಹಿಂದಿನ ಶಾರದಾಲಯದ ಕಡೆಗೆ ನಡೆದರು. ದೇಚ ಅವರ ಆರೋಗಣೆಗೆ ಅಣಿಮಾಡಿಸಲು ಮನೆಯೊಳಕ್ಕೆ ಹೋದ.

§

ಶಾರದಾದೇವಿಯ ಆಲಯವಿದ್ದುದು ಮನೆಯ ಹಿಂಭಾಗದ ದೇವಮೂಲೆ ಯಲ್ಲಿ. ಮಗಳ ವಿದ್ಯಾಭ್ಯಾಸಕ್ಕೆ, ನರ್ತನ ಗಾಯನ ಅಭ್ಯಾಸಗಳಿಗೆ, ಶಾರದೆಯ ಪೂಜೆಗೆ, ಮಾರಸಿಂಗಮಯ್ಯ ಭವ್ಯವಾದ ಪೂಜಾಗೃಹವನ್ನೂ ಅದಕ್ಕೆ ಸೇರಿ ದಂತೆ ವಿಶಾಲವಾದ ಒಂದು ಕೈಸಾಲೆಯನ್ನೂ ಕಟ್ಟಿಸಿದ್ದರು. ರೂವಾರಿ ಮಲ್ಲಿತಮ್ಮ ಶಾರದಾಂಬೆಯ ವಿಗ್ರಹವನ್ನು ಮೆತುವಾದ ಕಲ್ಲಿನಲ್ಲಿ ಸರ್ವಾಂಗ ಸುಂದರವಾಗಿ ಕಡೆದಿದ್ದ. ಶಾಂತಲೆಯ ಎಂಟನೆಯ ಹುಟ್ಟಿದ ದಿನ ಶಾರದೆಯ

ಮೂರ್ತಿಯ ಪ್ರತಿಷ್ಠಾಪನೆಯಾಯಿತು. ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಶಾಂತಲೆ ಶಾರದೆಯ ಉಪಾಸನೆಗೆ ಮೊದಲಿಟ್ಟಳು. ತಂದೆ ಪಂಡಿತ ಪ್ರಭಾ ಚಂದ್ರಸಿದ್ಧಾಂತ ದೇವರನ್ನು ಕರೆತಂದು ಮಗಳಿಗೆ ವಿದ್ಯಾಗುರುಗಳನ್ನಾಗಿ ಮಾಡಿಕೊಂಡರು. ಅವರು ಶಾಂತಲೆಯ ನಡೆ, ನುಡಿ, ಗುಣ, ನಿಷ್ಠೆಗಳನ್ನು ಕಂಡು, ಶಿಷ್ಯಳನ್ನಾಗಿ ಸ್ವೀಕರಿಸಿ ವಿದ್ಯಾವತಿಯನ್ನಾಗಿ ಮಾಡಿದರು. ಶಾಂತಲೆ ಗಾಯನ ನರ್ತನ ಕಲೆಗಳಲ್ಲೂ ನೈಪುಣ್ಯವನ್ನು ಅಭ್ಯಾಸದಿಂದ, ಕಠಿಣವಾದ ದೇಹಶ್ರಮದಿಂದ ಸಾಧಿಸಿಕೊಂಡಳು. ಶಾರದೆಯ ಆಶೀರ್ವಾದದಿಂದಲೇ ಶಾಂತ ಲೆಗೆ ಈ ವಿದ್ಯೆಗಳು ಲಭಿಸಿದುವು. ಆತ್ಮಸಂತೋಷಕ್ಕಾಗಿಯೆ ಹಾಡಿದಳು, ನರ್ತಿಸಿದಳು. ಭಕ್ತಿಭಾವದ ಅಭ್ಯಾಸದಿಂದ ಕಾಲಕ್ರಮೇಣ ಶಾಂತಲೆಯ ಮುಖದಲ್ಲಿ ಒಂದು ದೈವೀತೇಜಸ್ಸು ನೆಲಸಿತು. ವಯೋನುಗುಣವಾದ ಬೆಳ ವಣಿಗೆಗೆ ತಕ್ಕ ಮೈಕಟ್ಟು, ನರ್ತನಾಭ್ಯಾಸಬಲದಿಂದ ನೀಳವಾಗಿ, ದೃಢವಾಗಿ, ಸರ್ವಾಂಗಸುಂದರವಾಗಿ ರೇಖೆಗೊಂಡಿತು. ಶಾಂತಲೆಗೆ ಈಗ ಹದಿನಾರು ವಯಸ್ಸು ತುಂಬಿತ್ತು.

ಮಗಳು ಹದಿನೈದು ವರ್ಷದವಳಿದ್ದಾಗ ಮಾಚಿಕಬ್ಬೆ ಪತಿಯೊಡನೆ ಅವಳ ಮದುವೆಯ ಪ್ರಸ್ತಾಪವನ್ನು ಮಾಡಿದರು. 'ಈಗಲೇ ಅವಸರವೆ!' ಎಂದುಬಿಟ್ಟರು ಮಾರಸಿಂಗಮಯ್ಯ. ಮಾಚಿಕಬ್ಬೆ ಶಾಂತಲೆಯ ವಿದ್ಯಾಗುರು ಗಳ ಬಳಿಯೂ ಒಂದು ದಿನ ಅದೇ ಪ್ರಸ್ತಾಪ ಮಾಡಿದರು. 'ಮಗುವಿನ ವಿದ್ಯಾಭ್ಯಾಸ ಪೂರ್ಣವಾಗುವವರೆಗೂ ದಯವಿಟ್ಟು ಈ ಪ್ರಸ್ತಾಪ ಬೇಡ' ಎಂದರು ಪ್ರಭಾಚಂದ್ರರು. ಹೆತ್ತೊಡಲು 'ಅದು ಮುಗಿಯುವುದೂ ಇದೆಯೇ!' ಎಂದು ಕೇಳಿತು. 'ಕಲಿಯುವ ಆಶೆ ಮುಗಿದಾಗ ವಿದ್ಯೆಯೂ ಮುಗಿದಂತೆಯೆ' ಎಂದು ಉತ್ತರ ಬಂದಿತು. ಇಷ್ಟಾದರೂ ತಾಯಿಯ ಚಪಲ ತೀರಲಿಲ್ಲ. ಒಂದು ದಿನ ಮಗಳೊಡನೆ ಸಂತೋಷದಿಂದ ಸಲ್ಲಾಪಿಸುತ್ತ 'ನೀನ್ಯಾರನ್ನು ಮದುವೆಯಾಗಲಿಚ್ಛಿಸುವೆ?' ಎಂದು ಕೇಳಿದರು. ಶಾಂತಲೆ ನಗುತ್ತ 'ಶಿವನನ್ನೆ —ಅವ್ವಾ, ಶಿವನನ್ನೆ ಮದುವೆಯಾಗುತ್ತೇನೆ' ಎಂದು ಸರಸದಿಂದ ನುಡಿದಳು. ಜಾಣೆಯಾದ ತಾಯಿ ಮತ್ತೆ ಮಗಳ ಮನಸ್ಸನ್ನು ಕೆದಕಲಿಲ್ಲ. 'ಜಿನೇಶನೆ ದಿಕ್ಕು ತೋರಲಿ' ಎಂದು ಸುಮ್ಮನಾಗಿಬಿಟ್ಟರು.

ಶಾಂತಲೆಯ ಕೆಳದಿಯರಲ್ಲನೇಕರಿಗೆ ಮದುವೆಯಾಗಿ ಅವರೆಲ್ಲ ತಮ್ಮ

ತಮ್ಮ ಪತಿಗೃಹಗಳಿಗೆ ಹೋಗಿ ನೆಲಸಿದ್ದರು. ಗೆಳತಿ ಲಕ್ಷ್ಮಿ ಮಾತ್ರ ಇನ್ನೂ ಮದುವೆಯಾಗದೆ ಶಾಂತಲೆಯ ನೆರಳಿನಂತೆ ಇದ್ದಳು.

ಲಕ್ಷ್ಮಿ ಶಾಂತಲೆಯನ್ನು 'ಅಕ್ಕ' ಎಂದು ಕರೆಯುತ್ತಿದ್ದಳು. ರೂಪದಲ್ಲಿ ಗುಣದಲ್ಲಿ ಲಕ್ಷ್ಮಿ ಶ್ರೀಮಹಾಲಕ್ಷ್ಮಿ. ಶಾಂತಲೆ, ಲಕ್ಷ್ಮಿ ಇಬ್ಬರೂ ಎಳೆತನದಿಂದಲೂ ಒಟ್ಟಿಗೆ ಆಡಿ, ಪಾಡಿ, ಬೆಳೆದವರು. ದೈವಭಕ್ತಿ, ಮಾತಾಪಿತೃಭಕ್ತಿ, ಗರುಭಕ್ತಿ, ಗುಣ, ಸೌಶೀಲ್ಯ, ಧರ್ಮ, ಹೃದಯವೈಶಾಲ್ಯ ಇವುಗಳಲ್ಲೂ ಸಮಾನವಾಗಿ ಬೆಳೆದರು. ಒಬ್ಬಳ ಮೈಗೆ ಆಲಸ್ಯವಾಗಲಿ ದೇಹಾಯಾಸವಾಗಲಿ ಆದರೆ ಅದು ಇನ್ನೊಬ್ಬಳಿಗೂ ಆಲಸ್ಯವಾಯಿತು, ಆಯಾಸವಾಯಿತು. ಹೀಗೆ ಅನ್ಯೋನ್ಯ ವಾಗಿ, ಏಕದೇಹನ್ಯಾಯವಾಗಿ ಬೆಳೆಯಿತು ಈ ಮಕ್ಕಳ ಸಖ್ಯ. ಅದು ಏಕಾತ್ಮಕ ವಾಗಿಯೂ ಆಯಿತು.

ಒಂದು ದಿನ ಇಬ್ಬರೂ ಕೆಳದಿಯೊಬ್ಬಳ ಮದುವೆಗೆ ಹೋಗಿದ್ದರು. ಮನೆಗೆ ಹಿಂದಿರುಗುವಾಗ ಲಕ್ಷ್ಮಿ ಬಹು ಯೋಚನೆಯಲ್ಲಿದ್ದಂತೆ ಶಾಂತಲೆಗೆ ಕಂಡುಬಂದಿತು. 'ಏಕೆ ಲಕ್ಷ್ಮಿ! ಬೇಸರವೇನು?' ಎಂದು ಕೇಳಿದಳು ಶಾಂತಲೆ. ಲಕ್ಷ್ಮಿ ಕಣ್ಣುಗಳಲ್ಲಿ ನೀರು ತಂದುಕೊಂಡು, 'ಅಕ್ಕ, ನೀನು ಮದುವೆಯಾಗಿ ಬೇರೆ ಊರಿಗೆ ಹೊರಟುಹೋದರೆ ನನ್ನ ಜೀವವಿರದು!' ಎಂದು ದುಃಖದಿಂದ ಅಂದಳು.

ಅಂತಃಕರಣಜೀವಿಯೂ ಸಹೃದಯೆಯೂ ಆದ ಶಾಂತಲೆಗೆ, ಲಕ್ಷ್ಮಿ ಆಗ ಅಂದ ಮಾತು ಶಾಶ್ವತವಾಗಿ ಎದೆಯಲ್ಲಿ ನೆಟ್ಟುಹೋಯಿತು; ಕಣ್ಣೀರು ತುಂಬಿ ಬಂದಿತು. ಆದರೂ ಅವಳು ಹುಸಿನಗೆ ನಕ್ಕು, 'ಹುಚ್ಚಿ! ಹುಚ್ಚಿ!' ಎಂದು ಮಾತ್ರ ಹೇಳಿ ತಾನೂ ಗಾಢವಾದ ಯೋಚನೆಯಲ್ಲಿ ಮಗ್ನಳಾದಳು. ಆತ್ಮಕ್ಕೆ ಮುಟ್ಟಿತು ಲಕ್ಷ್ಮಿ ಆಗ ಅಂದ ಮಾತು.

ಲಕ್ಷ್ಮಿ ಪಂಡಿತ ಪೆರುಮಲೆಯವರ ಒಬ್ಬಳೇ ಸಂತಾನ. ತಾಯನ್ನು ಚಿಕ್ಕಂದಿನಲ್ಲಿಯೇ ಕಳೆದುಕೊಂಡಿದ್ದಳು. ಆದ್ದರಿಂದ ಲಕ್ಷ್ಮಿ ತಂದೆಯ ಸರ್ವಸ್ವ ವಾಗಿ ಬೆಳೆದಳು.

ರಾಜಮಾತೆಯ ಪತಿ ಪ್ರಭು ಎರೆಯಂಗರು ಒಮ್ಮೆ ಕಂಚಿಗೆ ಹೋಗಿ ದ್ದರು. ಆಗ ಚಿಕ್ಕವರಾಗಿದ್ದ ಬಲ್ಲಾಳ, ಬಿಟ್ಟಿದೇವ, ಉದಯಾದಿತ್ಯ, ಮೂವರೂ ತಂದೆಯ ಜೊತೆಯಲ್ಲಿಯೇ ಇದ್ದರು. ಪ್ರಭುಗಳು ಮಕ್ಕಳ ಸಂಗಡ ವರದ

ರಾಜಸ್ವಾಮಿಯ ದರ್ಶನಕ್ಕೆ ಹೋದರು. ಅಲ್ಲಿನ ಪ್ರಜೆಗಳೂ ಭಟ್ಟರೂ ಶೈವರಾದ ಚೋಳರಿಂದ ದೇವಾಲಯಕ್ಕೆ ಆಗುತ್ತಿದ್ದ ಕಿರುಕುಳಗಳನ್ನು ಪ್ರಭು ಗಳಲ್ಲಿ ಹೇಳಿಕೊಂಡರು. ಶೈವನಾದ ಚೋಳಸಾಮಂತನೊಬ್ಬ ದೇವಾಲಯದ ಧರ್ಮಸ್ವತ್ತುಗಳನ್ನು ಅಪಹರಿಸಿರುವುದನ್ನು ಕಂಡು, ಪ್ರಭುಗಳು ಆ ಸಾಮಂತನ ಮೇಲೆ ದಂಡುನಡಸಿ, ಅವನು ತನ್ನದು ತಪ್ಪಾಯಿತೆಂದು ಒಪ್ಪಿಕೊಂಡಾಗ ಧರ್ಮದತ್ತಿಗಳನ್ನು ದೇವಾಲಯಕ್ಕೆ ಬಿಡಿಸಿಕೊಟ್ಟು, ತಾವೂ ದೇವರ ಅಖಂಡ ದೀಪಕ್ಕೆ ಶಾಶ್ವತಮಾನ್ಯಗಳನ್ನು ಕೊಂಡುಕೊಟ್ಟು, ದೇವದೇವಿಯರಿಗೆ ವಸ್ತ್ರಾಲಂಕಾರಭೂಷಣಗಳನ್ನು ಸಮರ್ಪಿಸಿದ ಮೇಲೆ, ತಮ್ಮ ರಾಜ್ಯದಲ್ಲಿರುವ ವಿಷ್ಣುಭಕ್ತರ ಧರ್ಮೋದ್ದೀಪನೆಗೆ ಕಂಚಿಯಿಂದ ಒಬ್ಬ ಪಂಡಿತಶ್ರೇಷ್ಠರನ್ನು ಕರೆದುಕೊಂಡು ಹೋಗಲು ನಿಶ್ಚಯಿಸಿ, ಅಂತಹ ಪಂಡಿತೋತ್ತಮರು ಅಲ್ಲಿ ಯಾರಿರುವರೆಂದು ವಿಚಾರಿಸಿದರು. ಶ್ರೀರಂಗದ ಯಾಮುನಾಚಾರ್ಯರ ಶಿಷ್ಯ ರಾದ ಪಂಡಿತ ಪೆರುಮಲೆಯವರು ತಕ್ಕವರೆಂದು ಆರಿಸಿ, ಅವರನ್ನು ತಮ್ಮೊಡನೆ ಬರುವಂತೆ ಕೇಳಿಕೊಂಡರು. ಬಹು ಕಷ್ಟದಿಂದ ಅವರನ್ನು ಒಪ್ಪಿಸಿದರು. ಶ್ರೀಮನ್ನಾರಾಯಣನಿಗಾಗಿಯೆ ತಮ್ಮ ರಾಜಧಾನಿಯಾದ ವೇಲಾಪುರದಲ್ಲಿ ಒಂದು ಅಸದೃಶವಾದ ದೇವಾಲಯವನ್ನು ಕಟ್ಟಿಸುತ್ತೇವೆಂದು ಮಾತುಕೊಟ್ಟು, ಪಂಡಿತರನ್ನು ತಮ್ಮೊಡನೆಯೆ ಕರೆತಂದರು. ಮಗುವಾಗಿದ್ದ ಲಕ್ಷ್ಮಿಯೂ ಆಗ ತಂದೆಯೊಡನೆ ಬಂದಳು.

ಎರಡೇ ವರ್ಷಗಳನಂತರ ಪ್ರಭು ಎರೆಯಂಗರು ದೈವಾಧೀನರಾದರು. ಪಂಡಿತ ಪೆರುಮಲೆಯವರು ಇನ್ನು ಕಂಚಿಗೆ ಹಿಂದಿರುಗುವುದೆಂದು ಯೋಚಿಸಿ ದರು. ಆಗ ಎರೆಯಂಗರ ಮೂವರು ಮಕ್ಕಳೂ ತಂದೆಯಿತ್ತ ಮಾತನ್ನು ತಾವು ನಡಸಿಕೊಡುವುದಾಗಿ ಭರವಸೆ ಕೊಟ್ಟು ಪಂಡಿತರನ್ನು ತಮ್ಮ ರಾಜ್ಯದಲ್ಲಿಯೇ ಉಳಿಸಿಕೊಂಡರು.

ತಂದೆಯ ಸಿಂಹಾಸನವನ್ನೇರಿದ ಬಲ್ಲಾಳ ಮಹಾರಾಜರು ರಾಜ್ಯವಾಳಿ ದುದು ನಾಲ್ಕೇವರ್ಷ. ಜನ್ಮಾಂತರದ ಪೀಡೆಯಂತಿದ್ದ ಒಂದು ರೋಗ ಇವರನ್ನು ಕೊಂಡೊಯ್ದಿತು. ಅನಂತರ ಪಟ್ಟವನ್ನೇರಿದ ಬಿಟ್ಟಿದೇವ ಪೆರುಮಲೆ ಪಂಡಿತರ ಧರ್ಮವನ್ನು ಸ್ವೀಕಾರಮಾಡಿ, 'ವಿಷ್ಣುವರ್ಧನ' ಎಂಬ ಸಾರ್ಥಕ ನಾಮದಿಂದ ಹೊಯಿಸಳ ರಾಜ್ಯ, ಶ್ರೀ, ಕೀರ್ತಿಗಳನ್ನು ಬೆಳಸಿ ಬೆಳಗಿಸಿದರು. ಸಿಂಹಾಸನ

ವನ್ನೇರಿದ ವರ್ಷವೇ ತಮ್ಮ ತಂದೆಯ ಕಾಲದ ರಾಜಧಾನಿ ವೇಲಾಪುರದಲ್ಲಿ ವಿಜಯನಾರಾಯಣಸ್ವಾಮಿಯ ದೇವಾಲಯದ ಶಂಕುಸ್ಥಾಪನೆಯನ್ನು ಮಾಡಿದರು. ಪ್ರಭು ವಿಷ್ಣುವರ್ಧನರ ಹೃದಯವೈಶಾಲ್ಯ, ಸರ್ವಮತಸಮಾನಾನುರಾಗ, ದೈವಭಕ್ತಿ, ಧರ್ಮದೃಷ್ಟಿ, ಇವುಗಳನ್ನು ಕಂಡು ಪೆರುಮಲೆಯವರು ಹೊಯಿಸಳ ರಾಜ್ಯದ ಹೊಸ ರಾಜಧಾನಿಯಾದ ದ್ವಾರವತಿಯಲ್ಲೇ ಬಂದು ನೆಲಸಿದರು.

ದ್ವಾರವತಿಯ ರಾಜವೀಧಿಯಲ್ಲಿ ಪಂಡಿತ ಪೆರುಮಲೆಯವರ ಮನೆ. ಮಾರಸಿಂಗಮಯ್ಯನವರ ಮನೆಯೂ ಅದೇ ಸಾಲಿನಲ್ಲೇ. ಆದ್ದರಿಂದ ಶಾಂತಲೆಯೂ ಲಕ್ಷ್ಮಿಯೂ ಒಂದೇ ಬೀದಿಯವರಾದರು. ಒಂದೇ ವಯಸ್ಸಿನವರು ಒಡನಾಡಿಗಳೂ ಆದರು.

§

ಮಾರಸಿಂಗಮಯ್ಯ ಮಾಚಿಕಬ್ಬೆ ಇಬ್ಬರೂ ಹೂತೋಟವನ್ನು ದಾಟಿ ಶಾರದಾದೇವಾಲಯದ ಕೈಸಾಲೆಯನ್ನು ಸೇರಿದರು. ಶಾಂತಲೆ ಆಗ ದೇವಿಯ ಗರ್ಭಗೃಹದಲ್ಲಿ ಪದ್ಮಾಸನದಲ್ಲಿ ಕುಳಿತು ಧ್ಯಾನಾಸಕ್ತಳಾಗಿದ್ದಳು. ತನ್ನ ತಾಯಿತಂದೆ ಆಲಯದೊಳಕ್ಕೆ ಬಂದದ್ದು ಚಿತ್ತವೃತ್ತಿನಿರೋಧದಲ್ಲಿದ್ದ ಶಾಂತಲೆಗೆ ತಿಳಿಯಲಿಲ್ಲ. ಮಗಳ ಚಿತ್ತೈಕಾಗ್ರತೆಗೆ ಸಂತೋಷಪಡುತ್ತ ಸತಿಪತಿಯರು ಸದ್ದಿಲ್ಲದೆ ಕೈಸಾಲೆಯಲ್ಲಿ ಕುಳಿತರು.

ದೇವಿಯ ಗರ್ಭಗೃಹದಲ್ಲಿ ಹೊರಗಿನ ಬೆಳಕಿಗೆ ಹೆಚ್ಚು ಅವಕಾಶವಿರಲಿಲ್ಲ. ಧ್ಯಾನಕ್ಕೆ ಅದು ಅಡ್ಡಿತರುವುದೆಂದು ರೂವಾರಿ ಮಲ್ಲಿತಮ್ಮ ಸುತ್ತು ಎಲ್ಲಿಯೂ ಜಾಲಂಧ್ರಗಳನ್ನಿಡದೆ, ದೇವಿಯ ಮುಖಭಾವ ಮಾತ್ರ ಚೆನ್ನಾಗಿ ಕಾಣಬರುವಂತೆ, ಮಧ್ಯಾಹ್ನದ ಬಿಸಿಲು ದೇವಿಯ ಮುಖಪದ್ಮವನ್ನು ಬೆಳಗುವಂತೆ, ಸೂರಿನಲ್ಲಿ ಎರಡು ದ್ವಾರಗಳನ್ನು ಕೊರೆದಿದ್ದ. ಒಂದರಲ್ಲಿ ಉತ್ತರಾಯಣದಲ್ಲಿಯೂ ಇನ್ನೊಂದರಲ್ಲಿ ದಕ್ಷಿಣಾಯನದಲ್ಲಿಯೂ, ಮಧ್ಯಾಹ್ನಕಾಲಕ್ಕೆ ಬಿಸಿಲು ದೇವಿಯ ಮುಖಪದ್ಮವನ್ನು ಬೆಳಗುತ್ತಿತ್ತು. ಶಾಂತಲೆ ಧ್ಯಾನಕ್ಕೆ ಕುಳಿತುಕೊಳ್ಳುವ ಕಾಲವೂ ಅದೇ ಆಗಿತ್ತು.

ಕತ್ತಲೆಯಿದ್ದ ಆ ಗರ್ಭಗೃಹದಲ್ಲಿ ಮೇಲಿನ ದ್ವಾರದಿಂದ ಬಂದ ಬಿಸಿಲು ಇಂದು ದೇವಿಯ ಮುಖಪದ್ಮದ ಮೇಲೆ ಹರಡಿ, ಕಣ್ಮನಗಳನ್ನು ಮುಗ್ಧ

ಗೊಳಿಸುವ ಒಂದು ಅಪೂರ್ವಶೋಭೆಯನ್ನು ಕಲ್ಪಿಸಿತ್ತು. ಚಂದನ, ಅಗರು, ಕರ್ಪೂರ, ನವಕುಸುಮ ಇವುಗಳ ಸೌರಭ ಮನಸ್ಸಿಗೆ ಶಾಂತಿ ಆಹ್ಲಾದಗಳನ್ನು ಈಯುತ್ತಿತ್ತು.

ಇಂತಹ ಚೆಲುವಿನ ಮೂರ್ತಿಯ ಉಪಾಸನೆಯಲ್ಲಿ, ಶಾಂತಲೆ, ದೇವಿಯಂತೆಯೇ ಚೆಲುವಿನ ದೇಹಭಾವವುಳ್ಳವಳೂ, ಚೆಲುವಿನ ಮನೋಭಾವವುಳ್ಳವಳೂ ಆದಳು. ಶಾಂತಲೆಯ ಸಹಜವಾದ ಸೌಂದರ್ಯಕ್ಕೆ ಆಭರಣಗಳ ಬೆಡಗು ಬೇಕಾಗಿರಲಿಲ್ಲ. ಶುಭ್ರವಸ್ತ್ರಧಾರಿಣಿಯಾಗಿ ದೇವಿಯ ಮುಂದೆ ಕುಳಿತಿದ್ದ ಶಾಂತಲೆ, ಆಗ . . . ಪುಂಡರೀಕನು ಶಾಪಜನ್ಮಗಳು ಕಳೆದು, ಪುನಃ ಪುಂಡರೀಕನಾಗಿಯೆ ತನ್ನ ಬಳಿಗೆ ಬರುವವರೆಗೂ, ಕಾಲಗತಿಯನ್ನು ತಪೋನುಷ್ಠಾನಗಳಿಂದ ಜಯಿಸಿ, ಪರಮೇಶ್ವರನ ಮುಂದೆ ನಿಶ್ಚಲಧ್ಯಾನದಲ್ಲಿ ಕುಳಿತಿದ್ದ 'ಮಹಾಶ್ವೇತೆ'ಯಂತೆ ಕಂಡುಬಂದಳು. ತಂದೆ ದಕ್ಷಬ್ರಹ್ಮನ ಪತಿನಿಂದನೆಯನ್ನು ಕೇಳಿ ತಡೆಯಲಾಗದ ದುಃಖದಿಂದ, ಆತನು ಎಸಗುತ್ತಿದ್ದ ವೈಷ್ಣವಯಾಗಾಗ್ನಿಗೆ ತನ್ನ ದೇಹವನ್ನು ಅರ್ಪಿಸಿಕೊಂಡ ದಾಕ್ಷಾಯಿಣಿ ಮತ್ತೆ ತನು ಪಡೆದು, ಬೆಳೆದು, ಪರಶಿವನಿಗಾಗಿ ಹಿಮಗಿರಿಯ ಶ್ವೇತಶಿಖರದಲ್ಲಿ ಕುಳಿತು ತಪವನ್ನಾಚರಿಸುತ್ತಿದ್ದ ಗಿರಿಜೆಯಂತೆ ಕಂಡುಬಂದಳು.

ಪೆದ್ದ ದೇಚ ಆಗ 'ಅಯ್ಯಾ, ಅವ್ವಾ, ಆರೋಗಣೆಗೆ ಚಿತ್ತೈಸಬೇಕು' ಎಂದು ಕೂಗುತ್ತ ಬಾರದಿದ್ದಿದ್ದರೆ, ಶಾಂತಲೆ ಇನ್ನೆಷ್ಟು ಕಾಲ ಧ್ಯಾನದಲ್ಲಿರುತ್ತಿದ್ದಳೊ ಏನೊ! ಆ ಪೆದ್ದನ ಕೂಗು ಶಾಂತಲೆಯ ಧ್ಯಾನವನ್ನು ಭಂಗಪಡಿಸಿತು. ಹೀಗೆ ಕೂಗಿದವರಾರೆಂದು ಶಾಂತಲೆ ಬೆದರಿದ ಮೃಗಶಾಬದಂತೆ ಕಣ್ತೆರೆದು ಅತ್ತ ಇತ್ತ ನೋಡಿದಾಗ ಕೈಸಾಲೆಯಲ್ಲಿ ಮೌನದಿಂದ ಕುಳಿತಿದ್ದ ತಂದೆತಾಯಿಗಳನ್ನು ಕಂಡಳು.

ತನ್ನಿಂದ ಅಪಚಾರವಾಯಿತು ಎನ್ನುವ ತೆರದಲ್ಲಿ ಶಾಂತಲೆ ತಟ್ಟನೆ ಎದ್ದು ಬಂದು ತಂದೆತಾಯಿಗಳಿಗೆ ನಮಸ್ಕರಿಸಿ, 'ಅಯ್ಯ, ಬಂದುದು ಯಾವಾಗ! ಅಯ್ಯ ಸುಖವಾಗಿ ಬರಲಿ, ಬೇಗ ಬರಲಿ ಎಂದು ಪ್ರಾರ್ಥಿಸುತ್ತಿದ್ದೆ' ಎನ್ನುತ್ತ ಪುಷ್ಪಪ್ರಸಾದವನ್ನು ವಿನಿಯೋಗಿಸಿ ಬಳಿಯೇ ಕುಳಿತಳು. ಮಾರಸಿಂಗಮಯ್ಯ ಉಕ್ಕಿಬರುತ್ತಿದ್ದ ಅಕ್ಕರೆಯಿಂದ ಮಗಳ ತಲೆಯನ್ನು ನೇವರಿಸಿ, 'ಇದೇ ತಾನೆ ಇಲ್ಲಿ ಬಂದು ಕುಳಿತೆವು. ಊರಿಗೆ ಬಂದು ಮಜ್ಜನ ಮುಗಿಸಿ ಶಿವಪೂಜೆಯನ್ನು

ಮಾಡುತ್ತಿದ್ದಾಗಲೆ ಅರಮನೆಯ ಅವಸರದ ಸವಾರನೊಬ್ಬ ಇದೋ ಈ ಎರಡು ಓಲೆಗಳನ್ನು ತಂದೊಪ್ಪಿಸಿದ. ನಿನ್ನ ಅವ್ವೆ ಆದೆ ತಾನೆ ಬಸದಿಯಿಂದ ಬಂದರು' ಎನ್ನುತ್ತ, ಎರಡು ಓಲೆಗಳನ್ನೂ ಮಗಳ ಕೈಗೆ ಓದಲು ಕೊಟ್ಟರು.

ಶಾಂತಲೆ ಆ ಎರಡು ಓಲೆಗಳನ್ನೂ ಓದಿನೋಡಿ ಆಶ್ಚರ್ಯದಿಂದ, ತೃಪ್ತಿಯಿಂದ, ಪ್ರಫುಲ್ಲವದನಳಾಗಿ 'ರಾಜಮಾತೆಯರಿಗೆ ನಮ್ಮ ಮೇಲೆ ಬಹು ವಾತ್ಸಲ್ಯ . . . ಅಲ್ಲವೇ ಅವ್ವ? . . . ಅರಮನೆಯಲ್ಲಿ ನಾಳೆ ನಡೆಯುವ ಈ ಉಪನಯನೋತ್ಸವ ಅದ್ಭುತವಾಗಿರುವುದಲ್ಲವೆ ಅಯ್ಯಾ?' ಎಂದಳು.

"ಇರುವುದಿಲ್ಲವೆ! ಅದ್ಭುತವಾಗಿಯೇ ಇರುವುದು. ಅರಮನೆಯಲ್ಲಿ ಯಾವುದಕ್ಕೆ ಏನು ಕಡಮೆ? ಅರಮನೆಯಲ್ಲಿ ಮಂಗಳ ಉತ್ಸವಗಳು ನಡೆದೇ ಎಷ್ಟೋ ಕಾಲವಾಯಿತು. ಕುವರ ವಿಷ್ಣುವಿನಲ್ಲಿ ಪ್ರಭುಗಳು ಆತ್ಮಜನೆಂದೇ ವಾತ್ಸಲ್ಯವಿಟ್ಟಿರುವರು. ಪರಮಪದವಾಸಿ ಚೆನ್ನಮ ದಂಡಾಧೀಶರು, ಈ ಪ್ರಭುಗಳ ತಂದೆ ಎರೆಯಂಗರಿಗೆ ಸಲ್ಲಿಸಿದ ಸೇವೆ ಅಷ್ಟೆ? ಇಷ್ಟೆ? ವಿಷ್ಣುವರ್ಧನ ಪ್ರಭುಗಳು ಅದನ್ನೆಂದಿಗೂ ಮರೆಯರು. ಚೆನ್ನಮ ದಂಡಾಧೀಶರ ಸತಿ ಚಂದಲೆ ಪತಿಯೊಡನೆ ಸಹಗಮಿಸಿದಾಗ ಕುವರ ವಿಷ್ಣುವಿಗೆ ಎರಡೇ ವರ್ಷ. ಇವನಿಗೆ ಒಂದೂವರೆ ವರ್ಷ ಹೆಚ್ಚಿನ ಅಣ್ಣನೊಬ್ಬನಿದ್ದ. ಈ ಎರಡು ಮಕ್ಕಳನ್ನೂ ಮಹಾಸತಿ ಚಂದಲೆ ರಾಜಮಾತೆಯ ತೊಡೆಯಲ್ಲಿಟ್ಟು, 'ಅಕ್ಕನವರು ಅಪ್ಪಣೆಕೊಡಬೇಕು, ಇನ್ನು ಸಂತೋಷದಿಂದ ತೆರಳುತ್ತೇನೆ' ಎಂದು ಹೇಳಿ, ಸುಮಂಗಲಿಯ ಅಲಂಕಾರಗಳಲ್ಲಿ ಚಿತಾಗ್ನಿಗೆ ಬಲವಂದು ಅದರಲ್ಲಿ ದುಮುಕಿ, ಮಹಾಸತಿಯಾದರು. ಆದ್ದರಿಂದ ಕುವರವಿಷ್ಣುವಿನ ಉಪನಯನ ಅರಮನೆಯಲ್ಲಿ ನಡೆಯಬೇಕಾದ್ದೇ, ವಿಜೃಂಭಣೆಯಿಂದ ನಡೆಯಬೇಕಾದ್ದೇ! ಈ ಹೊತ್ತಿಗೆ ನಾನು ಕೂಡ ಊರಿಗೆ ಬಂದೆನಲ್ಲಾ! ಬಹುಶಃ ಈ ಸಂತೋಷದಲ್ಲಿ ಪಾಲುಗೊಳ್ಳಲೆಂದೇ ರಾಜಮಾತೆಯರು ನನ್ನನ್ನು ಕರಸಿರಲೂ ಬಹುದು" ಎನ್ನುತ್ತ ಮಾರಸಿಂಗಮಯ್ಯ ಎಲ್ಲರೊಡನೆ ಎದ್ದು ಮನೆಯ ಭೋಜನಶಾಲೆಯ ಕಡೆಗೆ ನಡೆದರು.

ಮಾಚಿಕಬ್ಬೆ ನಡೆಯುತ್ತಾ, ಪತಿಯನ್ನು ಸಂಬೋಧಿಸಿ, 'ಕುವರ ವಿಷ್ಣುವನ್ನು ನಾನೂ ಎರಡು ಮೂರು ಸಲ ನೋಡಿದ್ದೇನೆ. ವರ್ಚಸ್ವಿಯಾದ ಸುಂದರ ರೂಪು, ಬಹು ಒಳ್ಳೆಯ ನಡತೆ ಉಳ್ಳ ಹುಡುಗ' ಎಂದರು. ಮಾರ

ಸಿಂಗಮಯ್ಯ ಎಂದರು: 'ಗಂಗರಾಜರೂ ನನ್ನೊಡನೆ ಒಂದೆರಡಾವರ್ತಿ ಹೇಳಿದ್ದಾರೆ, ಆ ಬಾಲಕನಲ್ಲಿ ಉದಾತ್ತವಾದ ಗುಣಗಳಿವೆಯೆಂದು.'

ಅಷ್ಟು ಹೊತ್ತಿಗೆ ಎಲ್ಲರೂ ಊಟದ ಮನೆಯನ್ನು ಸೇರಿದರು.

೩

ಅರಮನೆಯಲ್ಲಿ ಉಪನಯನ ಮಹೋತ್ಸವದ ಕಾರ್ಯಗಳು ಬಹು ಬಿರುಸಿನಿಂದ ಸಾಗಿದ್ದವು. ವಿಶಾಲವಾದ ವಿಜಯಸಿಂಹಾಸನದ ಓಲಗಶಾಲೆ ಅದ್ಭುತವಾಗಿ ಅಲಂಕರಿಸಲ್ಪಟ್ಟಿತ್ತು. ಬಂಧುಬಳಗದವರಿಗೆ, ಸಾಮಂತರಿಗೆ, ಗುರುಶ್ರೇಣಿಯವರಿಗೆ, ವಿಪ್ರರಿಗೆ, ಪೌರರಿಗೆ, ಅರಮನೆಯ ದೇಶಕೋಶದ ಅಧಿಕಾರಿಗಳಿಗೆ, ಆಹ್ವಾನಿತರಿಗೆ, ಸ್ತ್ರೀಯರಿಗೆ, ಮಕ್ಕಳಿಗೆ, ಅವರವರ ಅಂತಸ್ತು, ಅಧಿಕಾರ, ಗೌರವಗಳಿಗೆ ತಕ್ಕಂತೆ ಸುಖಾಸನಗಳನ್ನು ಹಾಕಲಾಗಿತ್ತು. ಎತ್ತರದ ಪ್ರದೇಶದಲ್ಲಿ ಯಜ್ಞವೇದಿಯನ್ನು ನಿರ್ಮಿಸಿ, ಕುಲಪುರೋಹಿತರಿಗೆ, ಆಚಾರ್ಯವರ್ಗದವರಿಗೆ, ವಿಪ್ರರಿಗೆ, ಕುವರ ವಿಷ್ಣುವಿಗೆ, ಅವನ ಪಿತೃಸಮಾನರೇ ಆದ ಪ್ರಭುಗಳಿಗೆ ಪೀಠಗಳನ್ನೂ ಸುಖಾಸನಗಳನ್ನೂ ಹಾಕಲಾಗಿತ್ತು. ಪೂಜೆಗೆ, ಹವನ ಹೋಮಾದಿಗಳಿಗೆ ಬೇಕಾಗುವ ಸಮಸ್ತ ವಸ್ತುಗಳನ್ನು ಸಿದ್ಧಪಡಿಸಿಟ್ಟಿದ್ದರು. ಪುಷ್ಪ, ಫಲ, ಸುಗಂಧದ್ರವ್ಯ ಎಲ್ಲವೂ ಯಥೇಚ್ಛವಾಗಿ ಸಂಗ್ರಹವಾಗಿದ್ದುವು.

ಓಲಗಶಾಲೆಯಲ್ಲಿ ಈ ಏರ್ಪಾಡುಗಳೆಲ್ಲ ಅದಕ್ಕಾಗಿ ನಿಯಮಿತರಾಗಿದ್ದ ಅಧಿಕಾರಿಗಳ ನೇತೃತ್ವದಲ್ಲಿ ಸಮರ್ಪಕವಾಗಿ ನಡೆಯುತ್ತಿದ್ದಾಗ, ರಾಣೀವಾಸದಲ್ಲಿ ರಾಜಮಾತೆಯರು ಅಮಾತ್ಯಶ್ರೇಷ್ಠರಾದ ತಂತ್ರಪಾಲ ಹೇಮಾದ್ರಿಯವರನ್ನೂ, ವೀರದೇವ, ಅಚ್ಯುತದೇವ, ಗೋವಿಂದಪಂಡಿತರನ್ನೂ ಗೋಪ್ಯವಾದ ಒಂದು ಆಲೋಚನೆಗಾಗಿ ಕರಸಿಕೊಂಡಿದ್ದರು. ಪಂಚಪ್ರಧಾನರಲ್ಲಿ ಮುಖ್ಯರಾದ ಗಂಗರಾಜರು ಇನ್ನೂ ಬಂದಿರಲಿಲ್ಲವಾದ್ದರಿಂದ ಎಲ್ಲರೂ ಅವರ ಆಗಮನವನ್ನೇ ನಿರೀಕ್ಷಿಸುತ್ತಿದ್ದರು.

ಮಹಾಪ್ರಧಾನ ಗಂಗರಾಜರು ಇವರೆಲ್ಲರಿಗಿಂತ ವಯಸ್ಸಿನಲ್ಲಿ ಹಿರಿಯರು, ಜ್ಞಾನವೃದ್ಧರು. ಇವರದು ಉನ್ನತವಾದ ಗಂಭೀರ ಆಕೃತಿ. ಎರೆಯಂಗರ ಕಾಲದಲ್ಲಿ ಸರ್ವಸೇನಾಪತಿಯಾಗಿದ್ದವರು. ಅನೇಕಾನೇಕ ಪುಂಡು ಪಾಳೆಯ

ಗಾರರನ್ನೂ ದೈವಭಕ್ತಿಯಿಲ್ಲದ ಪ್ರಜಾನುರಾಗಿಗಳಲ್ಲದ ದೇಶಹಿತೈಷಿಗಳಲ್ಲದ ಸ್ವಾರ್ಥಿಗಳನ್ನೂ ದ್ರೋಹಿಗಳನ್ನೂ ಸದೆಬಡಿದು, ದೇಶವನ್ನು ಸುರಕ್ಷಿತವನ್ನಾಗಿ ಮಾಡಿ, ಹೊಯಿಸಳ ರಾಜ್ಯವನ್ನು ವಿಸ್ತರಿಸಿದವರು ಗಂಗರಾಜರು. ಎರೆಯಂಗರ ತರುವಾಯ ಈಗಿನ ಪ್ರಭು ವಿಷ್ಣುವರ್ಧನರಿಗೂ ಇವರು ಸರ್ವಸೇನಾಪತಿ ಮಾತ್ರವಲ್ಲದೆ, ಮಹಾಪ್ರಧಾನರೂ ಆಗಿದ್ದರು. ಎರೆಯಂಗರ ಅವಸಾನಕಾಲ ದಲ್ಲಿ ಗಂಗರಾಜರು ಅವರ ಬಳಿಯೆ ಇದ್ದರು. ಮರಣ ಸನ್ನಿಹಿತವಾದುದನ್ನು ಎರೆಯಂಗರು ಅರಿತು, ಆಗ ಇನ್ನೂ ಎಳೆಯರಾಗಿದ್ದ ಬಲ್ಲಾಳ, ಬಿಟ್ಟಿದೇವ, ಉದಯಾದಿತ್ಯ ಇವರುಗಳನ್ನು ಬಳಿಗೆ ಬರಮಾಡಿಕೊಂಡು, ತಮ್ಮ ಸತಿಯನ್ನೂ ಗಂಗರಾಜರನ್ನೂ ನೋಡಿ, 'ಇನ್ನು ನಾನು ಹೋಗುತ್ತೇನೆ. ನೀವಿಬ್ಬರೂ ಈ ಮಕ್ಕಳನ್ನೂ ರಾಜ್ಯವನ್ನೂ ಮುಂದಕ್ಕೆ ತನ್ನಿರಿ' ಎನ್ನುತ್ತಿರುವಾಗ್ಗೆ ಮಹಾ ರಾಣಿ ಮಹಾದೇವಿ ಅಕ್ಕನವರು ಕಣ್ಣೀರು ತುಂಬಿ ಗದ್ಗದಕಂಠೆಯಾಗಿ, 'ನಾನು ಸಹಗಮಿಸುವವಳು. ನನಗೆ ಇನ್ನು ಇಲ್ಲಿ ಏನು ಕೆಲಸ?' ಎಂದರು. ಪ್ರಭುಗಳು ಕುಗ್ಗಿದ ಧ್ವನಿಯಲ್ಲಿ 'ದೇವಿ, ನಮಗಿಂತ ನಮ್ಮ ಮಕ್ಕಳ ಮುಂದಿನ ಜೀವನ ಹೆಚ್ಚಿನದು. ಎಲ್ಲಕ್ಕಿಂತ ರಾಜ್ಯದ ಕ್ಷೇಮ ಹೆಚ್ಚಿನದು, ಆದ್ದರಿಂದ ನೀ . . .' ಎಂದು ಹೇಳುತ್ತಿರುವಾಗ ಮಾತು ಅರ್ಧದಲ್ಲೆ ನಿಂತುಹೋಯಿತು. ಮರುಕ್ಷಣ ದಲ್ಲಿಯೇ ದೀರ್ಘನಿಶ್ವಾಸದೊಂದಿಗೆ ಎರೆಯಂಗರು ದೇಹಮುಕ್ತರಾದರು.

'ಸಹಗಮಿಸುವೆ' ಎಂದು ಪುನಃ ಯೋಚಿಸಿದ ಮಹಾದೇವಿ ಅಕ್ಕನವ ರನ್ನು ಗಂಗರಾಜರು ಬಹುವಾಗಿ ಸಮಾಧಾನಪಡಿಸಿ, 'ಈ ಮಕ್ಕಳನ್ನು ಕಾಪಾಡುವ, ಈ ಮಹಾರಾಜ್ಯವನ್ನು ಕಾಪಾಡುವ ಭಾರವನ್ನು ಪ್ರಭುಗಳು ನಮ್ಮಿಬ್ಬರಿಗೂ ಹಂಚಿ ಹೋದರು. ಆ ಮಾತನ್ನು ಹೇಳಿಯೆ ಸಮಾಧಾನ ದಿಂದ ಅಸುವನ್ನು ನೀಗಿದರು. ನೀವು ಈಗ ಸಹಗಮಿಸಿದರೆ, ಈ ಮಕ್ಕಳನ್ನು ನೋಡಿಕೊಳ್ಳುವವರು ಯಾರು? ಯಾರನ್ನು ನಂಬುವುದು? ರಾಜ್ಯದಲ್ಲಿ ಅಲ್ಲ ಕಲ್ಲೋಲಗಳೇಳಬಹುದು. ದ್ರೋಹಿಗಳು ಇದ್ದಾರೆ. ಆದ್ದರಿಂದ ನಿಮ್ಮ ಸಹಗಮನದಿಂದ ಆ ಆತ್ಮಕ್ಕೆ ಅತೃಪ್ತಿ ಆಗಬಹುದು' ಎಂದು ಹೇಳಿ ಅಕ್ಕನವರ ಸಹಗಮನವನ್ನು ತಡೆದರು.

ಮಹಾದೇವಿ ಅಕ್ಕನವರು ರಾಜೇಂದ್ರಚೋಳ ಪೃಥ್ವೀಕೊಂಗಾಳ್ವರ ತಮ್ಮಂದಿರಾದ ಇರಕ್ಕುಪಾಲರ ಮಗಳು. ತೌರುಹೆಸರು ಅಮ್ಮಾಂಗದೇವಿ.

ಎರೆಯಂಗರು ಒಮ್ಮೆ ಒರೆಯೂರಿನ ಮೇಲೆ ದಂಡೆತ್ತಿಹೋಗಿ, ಹೊಯಿಸಳ ನೆಲವನ್ನು ದುರಾಕ್ರಮಮಾಡಿದ್ದ ತಮಿಳು ಚೋಳಸಾಮಂತನನ್ನು ಹಿಂದು ಹಿಂದಕ್ಕೆ ಒತ್ತುತ್ತ, ತಿರುಚಿರಪ್ಪಳ್ಳಿಯವರೆಗೂ ಹೋಗಿದ್ದರು. ರಾಜತಂತ್ರಜ್ಞ ರಾದ ಗಂಗರಾಜರು ಇಂತಹ ತೊಂದರೆಗಳು ಇನ್ನು ಮುಂದೆ ಬರದಂತೆ ಮಾಡಲು, ಈ ಚೋಳರಾಜಕುವರಿಯನ್ನು ತಂದುಕೊಂಡು ಎರೆಯಂಗರಿಗೆ ಮದುವೆಮಾಡಿ ಸಿದರು. ಇದರಿಂದ ತಮಿಳು ಚೋಳರಾಜ್ಯಕ್ಕೂ ಹೊಯಿಸಳ ರಾಜ್ಯಕ್ಕೂ ಕೆಲಕಾಲ ಸಮಾಧಾನವೇರ್ಪಟ್ಟಿತು. ಮನೆಗೆ ಬಂದ ಮಡದಿಯನ್ನು ಪ್ರಭುಗಳು ಮೊದಲುಮೊದಲು 'ಹೇ ಚೋಳದೇವಿ!' ಎಂದೇ ಸಂಬೋಧಿಸಿದರು. ಈ ಚೋಳದೇವಿ ಪಟ್ಟಮಹಿಷಿಯಾದಾಗ 'ಮಹಾದೇವಿ' ಎಂಬ ಹೊಸ ಹೆಸರಿನಿಂದ ಪಟ್ಟವನ್ನು ಧರಿಸಿದರು.

ಮದುವೆಯಾದ ಹೊಸದರಲ್ಲಿ ಮಹಾದೇವಿ ಅಕ್ಕನವರು ಒಮ್ಮೆ ಗಂಗ ರಾಜರೊಡನೆ 'ಭೀಷ್ಮರು ಅಂಬಿಕೆಯನ್ನು ಮಾತ್ರ ತಂದರೆ! ಇನ್ನು ಅಂಬೆ, ಅಂಬಾಲಿಕೆ?' ಎಂದು ಹಾಸ್ಯವಾಡಿದರು. ವಾಕ್ಚತುರರಾದ ಗಂಗರಾಜರು ನಮ್ರತೆಯಿಂದ ನಕ್ಕು, 'ಅಂಬಾಲಿಕೆ ಸಿಕ್ಕಿದರೆ ತಂದು ತಮಗೆ ಸವತಿಯಾಗಿಸು ತ್ತೇನೆ. ಅಂಬೆ ಮಾತ್ರ ಆಗದು . . . ಆಗದು' ಎಂದರು.

ಪತಿ ಪರಂಧಾಮವನ್ನೈದಿದ ಮೇಲೆ ಮಹಾದೇವಿ ಅಕ್ಕನವರು ಗಂಗ ರಾಜರನ್ನು ಮಹಾಸಚಿವಸ್ಥಾನಕ್ಕೆ ತಂದುಕೊಂಡರು. ಆಗ ಪಂಚಪ್ರಧಾನರಲ್ಲಿ ಗಂಗರಾಜರೇ ಮಹಾಪ್ರಧಾನರಾದರು. ಸರ್ವಸೇನೆಗಳ ಮೇಲಿನ ಆಧಿಪತ್ಯವೂ ಅವರಿಗೇ ಸೇರಿದ್ದಿತು.

ಇಂತಹ ಗಂಗರಾಜರ ಆಗಮನವನ್ನು ನಿರೀಕ್ಷಿಸುತ್ತಿದ್ದಿತು, ರಾಜ ಮಾತೆಯು, ಇತರ ಪ್ರಧಾನಿಗಳ ಈ ಸಭೆ. ಗಂಗರಾಜರು ಸ್ವಲ್ಪ ತಡವಾಗಿ ಬಂದರು. ಬಂದವರು ಕಾಲಮೀರಿ ಬಂದುದಕ್ಕೆ ಸಭೆಯವರ, ರಾಜಮಾತೆ ಯವರ ಕ್ಷಮೆಯನ್ನು ಕೇಳಿ ಕುಳಿತುಕೊಂಡರು. ತಂತ್ರಪಾಲ ಹೇಮಾದ್ರಿಗಳು ಗಂಗರಾಜರ ಬಳಿ ಕುಳಿತು, ರಾಜಮಾತೆಯವರ ಅಂತರ್ಯವನ್ನು ವಿವರಿಸಿ, 'ಉಪನಯನ ಮಹೋತ್ಸವಕ್ಕೆ ಎಲ್ಲ ಸಾಮಂತರ, ರಾಜವರ್ಗದವರ, ಉನ್ನತ ಉದ್ಯೋಗಸ್ಥರ, ಯಶೋವಂತರಾದ ವಣಿಜರ, ನಾಗರಿಕರ ಆಗಮನವನ್ನು ಕೋರಿರುವುದು ಇದಕ್ಕಾಗಿಯೆ' ಎಂದರು.

ಗಂಗರಾಜರು ಸ್ವಲ್ಪ ಯೋಚಿಸಿ ಅನಂತರ ತಲೆದೂಗಿ 'ಆಗಬಹುದು. ಅಕ್ಕನವರದು ಸರಿಯಾದ ಯೋಚನೆ' ಎಂದರು. ಹಲವಾರು ರಾಜಕೀಯ ವಿಷಯಗಳ ಚರ್ಚೆಯಾದನಂತರ, ಗಂಗರಾಜರು ರಾಜಮಾತೆಯ ಬಳಿಗೆ ಬಂದು, 'ಅಕ್ಕನವರ ಆಶೆ ಕೈಗೂಡಲಿ. ತಮ್ಮ ದ್ರಾವಿಡಬುದ್ಧಿಸೂಕ್ಷ್ಮಕ್ಕೆ ಮೆಚ್ಚಿದೆ. ಈ ವಿಷಯ ಪ್ರಭುಗಳಿಗೆ ತಿಳಿಯಬಾರದು ತಾನೆ?' ಎಂದರು.

"ಉಂಟೆ? ಹಾಗಿದ್ದರೆ ನಿಮ್ಮನ್ನೆಲ್ಲ ಇಲ್ಲಿಗೆ ಬರಮಾಡಿಕೊಳ್ಳುವ ಪ್ರಮೇಯವಾದರೂ ಏನಿದ್ದಿತು? ರಾಜವಂಶವೃದ್ಧಿಗೆ ಒಂದು ಕುಸುಮ ವಾದರೂ ಆಗಬೇಕಲ್ಲ? ಇಷ್ಟು ದೊಡ್ಡ ರಾಜ್ಯವನ್ನು ನಿರುಪಾಧಿಕವಾಗಿ ನಡಸುತ್ತಿರುವ ನೀವುಗಳು ಇದನ್ನು ಯೋಚಿಸಬೇಡವೆ? ಅಕಾಲಮೃತ್ಯುವಿಗೆ ತುತ್ತಾದ ನಮ್ಮ ಹಿರಿಯಮಕ್ಕಳು ಬಲ್ಲಾಳರಾಜರಿಗೆ ಒಂದು ಗಂಡುಮಗು ವಾಗಿದ್ದರೆ ನಮಗೆ ಯಾವ ಯೋಚನೆಯೂ ಇರುತ್ತಿರಲಿಲ್ಲ. ಆ ಮೂವರು ಸೊಸೆಯರ ಮಡಿಲೂ ಬರಿದಾಯಿತು. ಅದೆಲ್ಲ ನೆನಸಿಕೊಂಡಷ್ಟೂ ದುಃಖ ಉಂಟಾಗುತ್ತದೆ. 'ದ್ವಾರವತಿಯನ್ನು ಸುಟ್ಟು ಭಸ್ಮಮಾಡಿದಲ್ಲದೆ ಹಿಂದಕ್ಕೆ ಹೋಗೆ' ಎಂದು ನಮ್ಮ ರಾಜ್ಯದ ಮೇಲೆ ದಂಡೆತ್ತಿಬಂದು ಪೌರುಷಕೊಚ್ಚಿದ ಆ ಸಂತಾರರಾಜ ಮಾಳವ ಜಗದ್ದೇವ . . . ಆ ಚಾಲುಕ್ಯಸಾಮಂತ, ಅವನ ಪೌರುಷವಾಕ್ಯಗಳಿಗೆ ಎದೆಗೆಡದೆ ನಮ್ಮ ಮಕ್ಕಳು, 'ಅವ್ವೆ, ನಿಮ್ಮ ಪಾದದಾಣೆ ಆ ಖಳನನ್ನು ನಾವು ತುಂಡಿಸಿಯೆ ಬರುವೆವು' ಎಂದು ಹೇಳಿ, ಉಡುಗಿ ಹೋಗಿದ್ದ ನಮ್ಮ ಮನಸ್ಸಿಗೆ ಧೈರ್ಯ ತಂದುಕೊಟ್ಟು, ರಣರಂಗವನ್ನು ಪ್ರವೇಶಿಸಿ, ಮತ್ತವಾರಣಗಳು ಜೊಂಡನ್ನು ಕಿತ್ತು ಚೆಲ್ಲಾಡುವಂತೆ ಶತ್ರು ಸೈನ್ಯಗಳನ್ನು ಸವರಿ, ಸೆರೆಸಿಕ್ಕಿದ ಆ ಜಗದ್ದೇವನ ಬಾಯಲ್ಲಿ 'ದೇಹಿ' ಎಂದು ಹೇಳಿಸಿ, ಅವನ ಜಂಬದ ಎದೆಯ ಮೇಲಿದ್ದ ಅನರ್ಘವಾದ ಪಚ್ಚೆಯನ್ನು ಕಿತ್ತು ಕೊಂಡು, ವಿಜಯೋತ್ಸಾಹದಿಂದ ನಗರವನ್ನು ಪ್ರವೇಶಿಸಿ, ನಮಗೆ ಬಂದು ನಮಸ್ಕರಿಸಿ, 'ಅವ್ವೆ, ಇದೊ ಆ ಖಳನ ಎದೆಯ ಮೇಲೆ ಮೆರೆಯುತ್ತಿದ್ದ ಪಚ್ಚೆ' ಎಂದು ನಮಗೊಪ್ಪಿಸಿದ ದಿನವನ್ನು ಹೇಗೆ ಮರೆಯುವುದು? . . . ನಮ್ಮ ಯಜಮಾನರ ಅಂತ್ಯವನ್ನೇ ಕಾಯುತ್ತಿದ್ದ ಚಕ್ರಗೊಟ್ಟ, ತಲೆಯೂರು, ಕೋಳಾಲ, ಚಂಗೇರಿ, ಹಂಜೇರು, ಈ ಊರುಗಳ ಸಾಮಂತರೂ ನಾಯಕರೂ ದ್ರೋಹಿಗರಾದಾಗ, ನಮ್ಮ ಮಕ್ಕಳೂ ಆಗ ಅಧೈರ್ಯಪಟ್ಟಾಗ, ಅಣ್ಣದಿರು

ನೀವು ಅವರನ್ನೆಲ್ಲ ಸದೆಬಡಿದು, ಇನ್ನೆಂದಿಗೂ ಅವರು ತಲೆಯೆತ್ತದಂತೆ ಮಾಡಲಿಲ್ಲವೆ? ಈ ನಿಮ್ಮೆಲ್ಲರ ಸ್ವಾಮಿಭಕ್ತಿ, ದೇಶಸೇವೆ ನಮ್ಮ ನೆನಪಿನಿಂದ ಅಳಿಸಿಹೋಗಿಲ್ಲ. ಇಷ್ಟಾದರೂ ನಮ್ಮ ದುರ್ದಿನಗಳು ಕಳೆದವೆ! ಪಟ್ಟಾಭಿಷೇಕದ ನಾಲ್ಕನೆಯ ವರ್ಷವೇ ನಮ್ಮ ಹಿರಿಯಮಕ್ಕಳು ಬಲ್ಲಾಳರಾಜರು ಕೆಟ್ಟಗ್ರಹದ ಉಲ್ಬಣೆಗೆ ಸಿಕ್ಕಿ ಸತ್ತರಲ್ಲ, ಆಗಲೂ ನಿಮ್ಮ ಸಮಾಧಾನವೇ ನಮ್ಮ ದುಃಖವನ್ನು ನುಂಗಿಕೊಳ್ಳುವಂತೆ ಮಾಡಿತು. ಆತನ ಮೂವರು ಪತ್ನಿಯರಿಗೆ, ಒಂದೇ ತಾಯಿಮಕ್ಕಳಿಗೆ ಏಕಕಾಲದಲ್ಲಿ ಉಂಟಾದ ದುರ್ಗತಿ, ಘೋರದುಃಖ, ಇವುಗಳನ್ನು ಕಂಡು ನಮ್ಮ ಎರಡನೆಯ ಮಕ್ಕಳು ಈ ಬಿಟ್ಟಿದೇವ, ವಿಷ್ಣುವರ್ಧನರು, ಹೆಣ್ಣುಜನ್ಮವೆ ದುಃಖಸಾಗರವೆಂದೆಣಿಸಿ ತಾವು ಮದುವೆಯಾಗೆನೆಂದೇ ಹೇಳುತ್ತಿರುವರು. ಎಷ್ಟು ವಿಧವಾಗಿ ಹೇಳಿಕೊಂಡರೂ, ಕೇಳಿಕೊಂಡರೂ ಅವರ ನಿರ್ಧಾರ ಇನ್ನೂ ಆ ದುಃಖದ ಮೇಲೆಯೆ ನೆಲಸಿದೆ. 'ಅಮ್ಮೆ, ಇತರ ಆತ್ಮಗಳು ನಮ್ಮ ದೆಸೆಯಿಂದ ದುಃಖಕ್ಕೆ ಈಡಾಗಬಾರದು. ಅತ್ತಿಗೆಯರ ದುಃಖ ನಮ್ಮಿಂದ ನೋಡಲಾಗುವುದಿಲ್ಲ. ಸಿಂಧಗೆರೆಯಲ್ಲಿ ಅವರ ತಂದೆಯ ಮನೆಯಲ್ಲಿ ಅವರು ಇರುವರಾದರೂ, ನಮ್ಮೆದೆಯಲ್ಲಿಯೆ ಕುಳಿತು ನಿಟ್ಟುಸಿರುಬಿಡುವಂತಿದೆ. ಸಿಂಹಾಸನದ ಮೇಲೆ ಕುಳಿತಿರುವ ನಮಗೆ ಸಿಂಹದ ಮೇಲೆ ಕುಳಿತಂತಿದೆ. ನೆಮ್ಮದಿ ಇಲ್ಲ. ಎದ್ದರೆ, ಕುಳಿತರೆ, ಹೋದರೆ, ಬಂದರೆ, ಅನ್ನದಲ್ಲಿ, ನೀರಿನಲ್ಲಿ, ಹಾಲಲ್ಲಿ, ಹಾಸಿಗೆಯಲ್ಲಿ, ರಣದಲ್ಲಿ, ಆಪ್ತರೆಂದೂ ಹಿತವರೆಂದೂ ನಂಬಿದವರ ಕೈಯಲ್ಲಿ ಯಾವಾಗ ಹೇಗೆ ಆಹುತಿ ತೆಗೆದುಕೊಳ್ಳಲಿ ಎಂದು ಮೃತ್ಯುವು ಹವಣಿಸುತ್ತಿರುತ್ತದೆ. ನಮಗೆ ಮದುವೆ ಬೇಡ. ತಮ್ಮಯ್ಯ ಉದಯಾದಿತ್ಯರಿಗೆ ಬೇಕಾದರೆ ಮದುವೆಮಾಡಿರಿ. ಅವರಿಗೆ ಒಂದು ಗಂಡುಮಗುವಾದರೆ ಅದು ನಮಗೆ ಆದಂತೆಯೇ' ಎನ್ನುತ್ತಿದ್ದರು. ಅದನ್ನು ಕೇಳಿ ಕೇಳಿ ನಮಗೂ ಸಾಕಾಯಿತು. ಒಂದು ವೇಳೆ ನಮ್ಮ ಕಿರಿಯ ಮಕ್ಕಳು ಉದಯಾದಿತ್ಯರಿಗೆ ಮದುವೆಮಾಡಿದರೆ ಸರಿ ಎಂದುಕೊಂಡೆ. ಆಗ ಮೃತ್ಯು ಮತ್ತೊಮ್ಮೆ ನಮ್ಮ ಹೃದಯಕ್ಕೆ ಕಿಚ್ಚೊಡ್ಡಿತು. ಅಣ್ಣದಿರೆ, ನೀವರಿಯಿರೆ? . . . ಕೆಲವತ್ತಿಯಲ್ಲಿ ನಮ್ಮ ಮೂರನೆಯ ಮಕ್ಕಳು ವಿಷಜ್ವರಕ್ಕೆ ತುತ್ತಾದರು. ಹೀಗೆ ದುಃಖಪರಂಪರೆಗಳು ಬಂದು ಕಡೆಗೆ ನಮ್ಮ ಕಣ್ಣೀರೆ ಬತ್ತಿಹೋಯಿತು. ಸಾವಿನ ಮೇಲೆ ಸಾವು, ಭಯದ ಮೇಲೆ ಭಯ; ಅನ್ನ ಬೇಡ, ನಿದ್ರೆ ಬೇಡ.

'ಬೀದಿಯ ತಿರುಕರು ನಮಗಿಂತ ಚಿಂತೆಯಿಲ್ಲದವರು, ಸಂತೋಷಚಿತ್ತರು' ಎನ್ನಿಸಿತು ನಮಗೆ. ನಮ್ಮ ಮಕ್ಕಳು ವಿಷ್ಣುವರ್ಧನರು ಹೇಳಿದ ಮಾತು: 'ಅವ್ವೆ, ಸಿಂಹಾಸನದ ಮೇಲೆ ಕುಳಿತವರ ತಲೆ ಯಾವ ಕ್ಷಣದಲ್ಲಿ ಮುಂಡದಿಂದ ಕಳಚಿ ಉರುಳುವುದೊ ಹೇಳಲಾಗುವುದೆ!' ಎಂದದ್ದು ಎಷ್ಟು ನಿಜ! ಎಷ್ಟು ನಿಜ! ಇತ್ತೀಚೆಗೆ ನಮ್ಮ ಮನಸ್ಸಿಗೂ ನೆಮ್ಮದಿ ಇಲ್ಲ. ಈ ದುಃಖದಲ್ಲಿಯೆ ಇದ್ದರೆ ನಮಗೆ ಚಿತ್ತಭ್ರಮಣೆಯಾದೀತು. ಒಂದೇ ಒಂದು ಆಶೆಯ ಮೇಲೆ ಈ ಜೀವ ಬಿಗಿಹಿಡಿದು ನಿಂತಿದೆ. ವಿಷ್ಣುವರ್ಧನರಿಗೆ ಮದುವೆಯಾಗಿ, ವಂಶಾಭ್ಯುದಯಕ್ಕೆ ದೈವವು ಒಂದೇ ಒಂದು ಗಂಡುಮಗುವನ್ನಾದರೂ ಕರುಣಿಸಿದರೆ ಸಾಕು. 'ಈ ದುಃಖವನ್ನೆಲ್ಲ ನುಂಗಿಕೊಂಡು ಇಷ್ಟೆಲ್ಲ ಸಹಿಸಿಕೊಂಡು ಬದುಕಿದ್ದುದು ಇದೊಂದಕ್ಕಾಗಿ' ಎಂದು ಸಮಾಧಾನ ತಂದುಕೊಳ್ಳುವೆವು. ಅವರ ಮನಕ್ಕೆ ಒಪ್ಪುವ ಹೆಣ್ಣು, ಅವರ ಪತ್ನಿಯಾಗಿರಲು ಹುಟ್ಟಿರುವ ಹೆಣ್ಣು ಇದೆಯೊ ಇಲ್ಲವೊ? ಒಂದು ವೇಳೆ ಈ ನಮ್ಮ ರಾಜಧಾನಿಯಲ್ಲೇ ಇರುವುದಾದರೆ ನಾಳೆಯೆ ಅವರ ಕಣ್ಣಿಗೆ ಕಾಣಿಸಿಕೊಳ್ಳಲೆಂದು ತಪಸ್ಸು ನಿಂತಿದ್ದೇನೆ, ದೈವವನ್ನು ಬೇಡಿಕೊಳ್ಳುತ್ತಿದ್ದೇನೆ. ದೇವರು ಸತಿಯನ್ನೇ, ಸಂತತಿಯನ್ನೇ ಅವರ ಹಣೆಯಲ್ಲಿ ಬರೆಯದಿದ್ದರೆ, ಅದಕ್ಕೆ ಯಾರು ತಾನೆ ಏನು ಮಾಡಬಲ್ಲರು? ಒಳ್ಳೆಯ ಹೆಣ್ಣುಮಕ್ಕಳು ನಮ್ಮ ಮಕ್ಕಳ ಕಣ್ಣಿಗೆ ಕಾಣಿಸಿಕೊಳ್ಳಲಿ ಎಂದೇ ಈ ಉಪನಯನ ಸಮಯದಲ್ಲಿ ಈ ಏರ್ಪಾಡನ್ನು ಮಾಡಿರುವೆವು. ನಮ್ಮ ರಾಜ್ಯದ ಪಂಚಪ್ರಾಣಗಳು ನೀವು, ಹೆಚ್ಚು ಕರ್ತವ್ಯ ಭಾರವನ್ನು ಹೊತ್ತಿರುವವರು ನೀವು. ನಾವು ಈಗ ಅಣ್ಣದಿರಿಗೆ ಹೇಳುವುದು ಇಷ್ಟೆ: ನಾಳೆ ಯಜ್ಞೋಪವೀತಧಾರಣೆಯಾದನಂತರ ವಟುವಿಗೆ ಆಶೀರ್ವಾದಗಳನ್ನು ಕೊಡಿಸುವ ನೆಪದಲ್ಲಿ ಪ್ರಭುಗಳನ್ನು ವಟುವಿನ ಜೊತೆಯಲ್ಲಿರುವಂತೆ ಮಾಡಿರಿ. ಅಧಿಕಾರಿಗಳ, ಅವರ ಕುಟುಂಬಗಳ ಪರಿಚಯವನ್ನು ಪ್ರಭುಗಳಿಗೆ ಮಾಡಿಸಿಕೊಡಿರಿ. ಆ ಸಂದರ್ಭದಲ್ಲಿ ಯಾವ ಒಂದು ಕನ್ಯೆಯಾದರೂ ಅವರ ಮನಸ್ಸಿಗೆ ಬಂದೀತೇನೋ ನೋಡೋಣ. ಆ ಸಮಯದಲ್ಲಿ ನಿಮ್ಮ ಕಣ್ಣು ಮನಸ್ಸುಗಳ ಸೂಕ್ಷ್ಮ ಪ್ರಭುಗಳ ಕಣ್ಮನಗಳ ಸೂಕ್ಷ್ಮವನ್ನು ಲಕ್ಷ್ಯದಲ್ಲಿಡಿರಿ. ನೀವೆಲ್ಲ ನಮ್ಮಲ್ಲಿ ವಿಶೇಷ ವಿಶ್ವಾಸವುಳ್ಳವರು. 'ಅಕ್ಕ'ನೆಂದು ಸಂಬೋಧಿಸುತ್ತೀರಿ. ನಿಮ್ಮ ವಿಶ್ವಾಸವೇ ನಮಗೆ ಹೆಚ್ಚಿನ ಗೌರವ. ಒಂದು ವಿಷಯವನ್ನು

ಹೇಳಬಯಸುತ್ತೇನೆ: ಜಗನ್ನಿಯಾಮಕನು ಯಾವ ಪುರುಷನಿಗೆ ಯಾವ ಸ್ತ್ರೀಯೆಂದು ವಿಧಾಯಕ ಮಾಡಿರುವನೋ, ಪ್ರಾಪ್ತಸಮಯದಲ್ಲಿ ಆ ಜಗನ್ನಿಯಾಮಕನೇ ಆ ಸ್ತ್ರೀಗೂ ಆ ಪುರುಷನಿಗೂ, ಒಬ್ಬರನ್ನೊಬ್ಬರು ಕಣ್ಮನಗಳಿಂದ ಆಕರ್ಷಿಸುವ, ಅಪೇಕ್ಷಿಸುವ, ತನ್ನ ಧರ್ಮಪತ್ನಿಯೆಂದು ಅರಿಯುವ ಶಕ್ತಿಯನ್ನೂ ಕರುಣಿಸುತ್ತಾನೆ. ಇದನ್ನು ನೀವುಗಳು ಸೂಕ್ಷ್ಮವಾಗಿ, ಹಾಗೂ ನಿರ್ಲಿಪ್ತರಂತೆ ಇದ್ದುಕೊಂಡು ಗಮನಿಸಬೇಕು. ದೇವರು ನಮ್ಮ ಹೃದಯದ ಅಭೀಷ್ಟವನ್ನು ನಡಸಿಕೊಡಲಿ" ಎಂದರು ರಾಜಮಾತೆ.

'ನಮ್ಮ ರಾಜ್ಯದ ಪಂಚಪ್ರಾಣಗಳು ನೀವು' ಎಂದು ರಾಜಮಾತೆಯವರಿಂದ ಹೊಗಳಿಸಿಕೊಂಡ, ವಾಸ್ತವವಾಗಿಯೂ ಹಾಗೆಯೇ ಇದ್ದ, ಆ ಪ್ರಧಾನರಿಗೆ ರಾಜಮಾತೆಯ ಮಾತುಗಳು ಹೃದಯದಲ್ಲಿ ಅನುಕಂಪ ಉಂಟುಮಾಡಿದುವು. ಗಂಗರಾಜರೂ ಇತರ ಪ್ರಧಾನರೂ ಹೊರಡುವಾಗ ರಾಜಮಾತೆಗೆ ನಮಸ್ಕರಿಸಿ, 'ಅಕ್ಕನವರ ಮನಸ್ಸು ಬಹಳ ನೊಂದಿದೆ. ಹೇಳಬೇಕಾದುದೆಲ್ಲವನ್ನೂ ಹೇಳಿರುವಿರಿ. ಇನ್ನು ತಾವು ವಿಶ್ರಮಿಸಿರಿ. ನಾಳಿನ ಕೆಲಸಗಳು ಬಹಳವಿರುವುವು. ತಾವು ಇಷ್ಟು ನೋವಿನಿಂದ ಹೇಳಬೇಕಾಯಿತಲ್ಲಾ ಎಂದು ನಮಗೆ ದುಃಖವಾಗಿದೆ. ನಮ್ಮ ಕರ್ತವ್ಯವೆಂದೇ ಇದನ್ನು ನಾವು ಮಾಡುವೆವು. ಇನ್ನು ನಮಗೆ ಅಪ್ಪಣೆ ದಯಪಾಲಿಸಿರಿ' ಎಂದು ಕೇಳಿದರು.

ರಾಜಮಾತೆ 'ಸಂತೋಷ. ಈಗ ನಮ್ಮ ಹೃದಯ ಹಗುರವಾಯ್ತು. ಇದೇ ಮೊದಲ ಶುಭಸೂಚನೆಯೆಂದು ನಾವು ನಂಬುಗೆಗೊಳ್ಳುತ್ತೇವೆ' ಎಂದು ಹೇಳಿ ಗಂಗರಾಜರನ್ನೂ ಪ್ರಧಾನರನ್ನೂ ಬೀಳ್ಕೊಟ್ಟರು.

೩

ಅನಂತರ ರಾಜಮಾತೆ ವಾಸಂತಿಕಾ ದೇವಿಯ ದರ್ಶನಕ್ಕೆ ಹೋದರು. ದೇವಿಯ ಆಲಯಕ್ಕೆ ಇಷ್ಟು ಹೊತ್ತಿಗೆ ಬರುವೆವೆಂದು ಮೊದಲೆ ಇಂದ್ರರಿಗೆ ಹೇಳಿಕಳಿಸಿದ್ದರು.

ವಾಸಂತಿಕಾ ದೇವಾಲಯದ ಇಂದ್ರರು ನಾಗಪಂಡಿತರು. ಎರೆಯಂಗರ ಕಾಲದಿಂದಲೂ ಅವರು ಅದೇ ಸ್ಥಾನದಲ್ಲೇ ಇದ್ದವರು. ವಾಸಂತಿಕಾದೇವಿ ಹೊಯಿಸಳ ರಾಜರ ಕುಲದೇವತೆ. ಹೊಯಿಸಳ ವಂಶದ ಮೂಲಪುರುಷ ಸಳ.

ಸಳ ಸುದತ್ತನೆಂಬ ಒಬ್ಬ ಜೈನಮುನಿಯ ಶಿಷ್ಯ. ಈ ಮುನಿ ವಾಸಂತಿಕಾ ದೇವಿಯ ಅನುಗ್ರಹವನ್ನು ವ್ರತ ನಿಯಮ ನಿಷ್ಠೆಗಳಿಂದ ಒಲಿಸಿಕೊಳ್ಳಬೇಕೆಂದು, ತನ್ನ ಊರಾದ ಶಶಕಪುರದಲ್ಲಿ ದೇವಿಯ ಆಲಯದ ಮುಂದೆ ಘೋರ ತಪಸ್ಸನ್ನಾಚರಿಸುತ್ತಿದ್ದ. ಆಗ ಆ ದೇವತೆ ಈ ಸಿದ್ಧಪುರುಷನ ಮನಃಸ್ಥೈರ್ಯವನ್ನು ಪರೀಕ್ಷಿಸಲು ಒಂದು ಹೆಬ್ಬುಲಿಯ ರೂಪವನ್ನು ತಾಳಿ, ಈ ಗುರು ಶಿಷ್ಯರ ಮೇಲೆ ಹಾರಲು ಹವಣಿಸಿತು. ಮುನಿಯೂ ಅದೇ ಸಮಯದಲ್ಲಿ ಶಿಷ್ಯನ ಧೈರ್ಯವನ್ನು ಪರೀಕ್ಷಿಸುವೆನೆಂದೆಣಿಸಿ, 'ಪೊಯ್ ಸಳ!' ಎಂದು ಹೇಳಿ, ಸಳನ ಕೈಗೆ ತಮ್ಮ ಬಳಿ ಇದ್ದ ಲೋಹದ ಚಾಮರದಂಡವನ್ನು ಕೊಟ್ಟನು. 'ಗುರುವಿನ ಆಜ್ಞೆ' ಎನ್ನುತ್ತ ಸಳ ಆ ಹೆಬ್ಬುಲಿಯನ್ನು ಧೈರ್ಯದಿಂದ ಎದುರಿಸಿ, ಆ ಲೋಹದಂಡದಿಂದಲೇ ಹುಲಿಯ ನೆತ್ತಿಯನ್ನು ಒಡೆದು ಕೊಂದ. ಗುರುವೂ ಶಿಷ್ಯನೂ ಶೌರ್ಯಪರೀಕ್ಷೆಯಲ್ಲಿ ಉತ್ತೀರ್ಣರಾದರು. ದೇವಿಯು ಇಬ್ಬರಿಗೂ ಒಲಿದಳು.

ಸಳನ ಧೈರ್ಯ ಶಕ್ತಿ ಸಾಹಸಗಳನ್ನು ಕಣ್ಣಾರೆ ಕಂಡ ಸುದತ್ತ ಮುನಿ 'ಇಂತಹ ಪುರುಷಗುಣಗಳು ರಾಜನಿಗೆ ತಕ್ಕುವು, ಇವನ ಕೈಯಲ್ಲಿ ಧರ್ಮ ರಾಜ್ಯಸ್ಥಾಪನೆಗೈಸುವೆ'ನೆಂದು ನಿರ್ಧರಿಸಿ, ಸಳನಿಗೆ 'ನೃಪಕಾಮ'ನೆಂಬ ಹೊಸ ಹೆಸರನ್ನು ಕೊಟ್ಟು, ಹೆಬ್ಬುಲಿಯನ್ನು ಹೊಡೆದು ಕೊಂದುದನ್ನೇ ಲಾಂಛನವನ್ನಾಗಿ ಮಾಡಿ, ಶಶಕಪುರವನ್ನೇ ರಾಜಧಾನಿಯನ್ನಾಗಿ ಮಾಡಿಕೊಟ್ಟನು. ಧನ ಕನಕ ವಸ್ತು ವಾಹನಗಳನ್ನು ದೇವಿಯ ಅನುಗ್ರಹದಿಂದ ಸಂಪಾದಿಸಿ, ಶೇಖರಿಸಿ, ಸುತ್ತುಮುತ್ತಲಿನ ಜನಗಳನ್ನು ಮುನಿಯು ಭಕ್ತಿಪ್ರಜೆಗಳನ್ನಾಗಿ ಮಾಡಿ, ಪಡೆಯನ್ನು ಕಟ್ಟಿ, ನೃಪಕಾಮನಿಗೆ 'ಮಲಪರೊಳ್‌ಗಂಡ'ನೆಂಬ ಬಿರುದನ್ನು ಕೊಟ್ಟು, ಹೊಯಿಸಳ ರಾಜ್ಯಸ್ಥಾಪನೆಯನ್ನು ಅವನ ಕೈಯಿಂದ ಮಾಡಿಸಿದನು.

ಹೀಗೆ ಕುಲಕ್ರಮಾಗತವಾಗಿ ಬಂದಿದ್ದ ವಾಸಂತಿಕಾ ದೇವಿಯ ಪೂಜೆಯನ್ನು ರಾಜಮಾತೆ ಭಕ್ತಿಶ್ರದ್ಧೆಗಳಿಂದ ಆಚರಿಸುತ್ತಿದ್ದರು. ಅವರ ಇಂದಿನ ಪೂಜೆ ಅರಿಕೆಯ ಪೂಜೆಯಾಗಿತ್ತು. ನಾಗಪಂಡಿತರು ದೇವಿಯ ಪೂಜೆಗೆ ಅಂದು ಅತಿಶಯ ದೀಪಾಲಂಕಾರಗಳನ್ನು ಮಾಡಿ ಪೂಜಾಸಾಮಗ್ರಿಗಳೆಲ್ಲವನ್ನೂ ಸಜ್ಜುಗೊಳಿಸಿದ್ದರು.

ರಾಜಮಾತೆಯವರ ಮೇನೆ ದೇವಿಯ ಆಲಯದ ಮುಂದೆ ಬಂದು ನಿಂತಿತು. ನಾಗಪಂಡಿತರು ರಾಜಮಾತೆಯವರನ್ನು ಭಕ್ತಿಮರ್ಯಾದೆಗಳಿಂದ ಗರ್ಭಗುಡಿಯೊಳಕ್ಕೆ ಕರೆದುಕೊಂಡು ಹೋಗಿ ಅಂದಿನ ವಿಶೇಷಪೂಜೆಯನ್ನು ಅವರ ಕೈಯಿಂದ ಮಾಡಿಸಿದರು. ಮಹಾಮಂಗಳಾರತಿಯಾಗುತ್ತಿರುವಾಗ ರಾಜಮಾತೆ ಕೈಜೋಡಿಸಿಕೊಂಡು, ಕಣ್ಮುಚ್ಚಿ ಮನಸ್ಸಿನಲ್ಲಿಯೆ "ತಾಯಿ, ರಾಜರಾಜೇಶ್ವರಿ, ನಿನ್ನ ಮಗು ವಿಷ್ಣುವರ್ಧನನನ್ನು ಕೈಹಿಡಿದು ನಡಸು, ವಂಶಾಭ್ಯುದಯವಾಗುವಂತೆ ಕರುಣಿಸು. ಈ ಕುಲದ ರಕ್ಷಣೆ ನಿನ್ನದು, ಈ ರಾಜ್ಯ ನಿನ್ನದು. ನಿನ್ನ ಸಂಕಲ್ಪದ ಸೂಚನೆಯೆ ಎಂಬಂತೆ ಹೋದ ಶುಕ್ರವಾರ ನಿನ್ನ ದರ್ಶನ ತೆಗೆದುಕೊಂಡು, ಅರಿಕೆ ಹೊತ್ತು, ಅದೇ ಯೋಚನೆಯಲ್ಲಿ ಮನೆಗೆ ಹೋಗುತ್ತಿದ್ದ ನನಗೆ 'ಇದೋ, ಇವಳೇ ನಿನ್ನ ಸೊಸೆ!' ಎನ್ನುವಂತೆ ಶಾಂತಲೆಯನ್ನು ನನ್ನ ಕಣ್ಣೆದುರಿಗೆ ತಂದು ತೋರಿಸಿದೆ. ಆ ಕನ್ನೆಯನ್ನೇ ನನ್ನ ಮನೆಗೆ ಕೊಡು, ತಾಯಿ. ಸಂತೋಷದಿಂದ ನನ್ನ ಹೃದಯವನ್ನು ತುಂಬಿಸಿ ಕೊಳ್ಳುತ್ತೇನೆ; ಬೆಂದಿರುವ ನನ್ನ ಒಡಲಿಗೆ ಇದಿಷ್ಟು ತಂಪನ್ನಾದರೂ ನೀಡು, ತಾಯಿ!" ಎಂದು ದೀನತೆಯಿಂದ ಪ್ರಾರ್ಥನೆ ಮಾಡುತ್ತಿರುವಾಗ ರಾಜ ಮಾತೆಯ ಕಣ್ಕೊನೆಗಳಲ್ಲಿ ನೀರಿಟ್ಟಿತು. ನಾಗಪಂಡಿತರಿಗೆ ಇದು ಗೋಚರ ವಾಗದೆ ಇರಲಿಲ್ಲ. ಮಂಗಳಾರತಿ ಆದನಂತರ ರಾಜಮಾತೆಯರಿಗೆ ಶೇಷೆಯನ್ನು ಅರ್ಪಿಸುತ್ತ ನಾಗಪಂಡಿತರು 'ಮಾತೆಯವರ ಮನೋಭೀಷ್ಟಗಳು ಪೂರ್ಣ ವಾಗುವುವು. ದೇವಿಯ ವರದಹಸ್ತದಲ್ಲಿದ್ದ ಈ ಪುಷ್ಪವು ತಾನಾಗಿ ಶೇಷೆಯ ತಟ್ಟೆಗೆ ಉರುಳಿತು. ದೇವಿಯ ವರವೆಂದೇ ಇದನ್ನು ಪರಿಗ್ರಹಿಸತಕ್ಕದು' ಎಂದರು.

ರಾಜಮಾತೆ ಅದನ್ನು ಎರಡು ಕೈಗಳಿಂದಲೂ ಸ್ವೀಕರಿಸಿ ಕಣ್ಣುಗಳಿಗೊತ್ತಿ ಕೊಂಡು, ಮನಸ್ಸಿನಲ್ಲಿಯೇ "ತಾಯಿ, ನಿನ್ನ ಕರುಣೆ ಅಪಾರ. ನೀನು ವರವಿತ್ತೆಯೆಂದೇ ಸಂತೋಷದಿಂದ ಮನೆಗೆ ಹೋಗುತ್ತೇನೆ" ಎನ್ನುತ್ತ ದೇವಿಗೆ ಪಂಚಾಂಗ ಪ್ರಣಾಮವನ್ನು ಸಲ್ಲಿಸಿ, ಸಂತೋಷಚಿತ್ತರಾಗಿ ಅರಮನೆಗೆ ಹಿಂದಿರುಗಿದರು.

ಮನೆಗೆ ಬಂದ ಒಡನೆಯೆ ತಮ್ಮ ಕುಮಾರರನ್ನು ಬರಮಾಡಿಕೊಂಡು "ಅಪ್ಪಾಜಿ, ಈಗತಾನೆ ವಾಸಂತಿಕಾದೇವಿಯ ಆಲಯದಿಂದ ಬಂದೆ. ಶೇಷೆ

ಯನ್ನು ತಂದಿದ್ದೇನೆ" ಎಂದು ದೇವಿಯು ವರದಹಸ್ತದಿಂದ ಕರುಣಿಸಿದ್ದ ಪುಷ್ಪ ಪ್ರಸಾದವನ್ನು ತನಯರಿಗೆ ಹೆಚ್ಚಿನ ಸಂತೋಷದಿಂದ ಕೊಟ್ಟರು. ಪ್ರಭುಗಳು ಸುಮ್ಮಾನದಿಂದ ಅವುಗಳನ್ನು ಸ್ವೀಕರಿಸಿ ಕಣ್ಣುಗಳಿಗೊತ್ತಿಕೊಂಡು "ಅವ್ವೆ, ಇಷ್ಟು ಕೆಲಸಗಳ ನಡುವೆಯೂ ಬಿಡುವುಮಾಡಿಕೊಂಡು ದೇವಿಯ ದರ್ಶನ ಮಾಡಿಕೊಂಡು ಬಂದಿರೇ! ಬಹು ಸಂತೋಷ. ನನಗೆ ಹೋಗಲಾಗಲಿಲ್ಲವೆ ಎಂದು ಮನಸ್ಸು ಕರೆಕರೆಪಡುತ್ತಿತ್ತು. ಹಿರಿಯರು ಹೋಗಿಬಂದುದು ನಾನೇ ಹೋಗಿಬರುವುದಕ್ಕಿಂತಲೂ ಹೆಚ್ಚೇ ಆಯಿತು. ನಾಳೆ ಉಪನಯನ ಮಹೋತ್ಸವಕ್ಕೆ ಮೊದಲು ದೇವಿಯ ಉತ್ಸವಮೂರ್ತಿಯನ್ನು ಪೂರ್ಣಕುಂಭ ಮಂಗಳ ದ್ರವ್ಯಗಳನ್ನು ಹೊತ್ತ ಮುತ್ತೈದೆಯರು, ಬ್ರಾಹ್ಮಣರ ವೃಂದದೊಂದಿಗೆ ಕಲ್ಯಾಣ ಮಂಟಪಕ್ಕೆ ಸಕಲ ಮರ್ಯಾದೆಗಳೊಡನೆ ಮಂಗಳವಾದ್ಯಗಳ ಸಮೇತ ಬಿಜಯ ಮಾಡಿಸಬೇಕೆಂದು ನಾಗಪಂಡಿತರಿಗೆ ಹೇಳಿಕಳಿಸಿ ಆಯಿತು. ಅವ್ವೆ, ಇಂದು ನಿಮ್ಮ ಮುಖದಲ್ಲಿ ಸಂತೋಷ ಕಾಣುತ್ತಿದೆ, ಅರಮನೆಯಲ್ಲಿ ಎಲ್ಲರೂ ಬಹು ಸಡಗರದಲ್ಲಿದ್ದಾರೆ. ನಮ್ಮ ಅರಮನೆಯಲ್ಲಿ ಮಂಗಳ ಉತ್ಸವಗಳು ನಡೆದೇ ಬಹುಕಾಲವಾಯಿತಲ್ಲವೆ? ಅಣ್ಣಂದಿರ ಮದುವೆಯ ದಿನಗಳ ಸಡಗರವನ್ನು ಇಂದು ನೆನಪು ಮಾಡುತ್ತದೆ. ಅಲ್ಲಿಂದ ಮುಂದಕ್ಕೆ ನಮ್ಮ ಭಾಗಕ್ಕೆ ದುಃಖಗಳೇ ಮೇಲಿಂದ ಮೇಲೆ ಬಂದುವಲ್ಲವೆ? ಅವ್ವೆ, ನಿಮ್ಮ ಮುಖದಲ್ಲಿ ಸಂತೋಷವನ್ನು ಕಂಡು ಎಷ್ಟೋ ವರ್ಷಗಳಾದವು. ನೀವು ತೃಪ್ತಿಹೊಂದಿದರೆ, ನೀವು ನಕ್ಕರೆ, ನಮ್ಮ ಬೊಕ್ಕಸ ಭಂಡಾರಗಳು ಉಕ್ಕಿಹರಿದಾವು. ಇನ್ನಾದರೂ ಬರುವ ದಿನಗಳು ನಮಗೆ ಶುಭವನ್ನು ತರಲಿ. ಅವ್ವೆ, ಮಧ್ಯರಾತ್ರಿ ಸಮೀಪಿಸುತ್ತಿದೆ. ಬೆಳಗಿನ ಕೆಲಸಗಳು ಒಂದು ಸಾವಿರ ಇವೆ. ಇನ್ನು ನೀವು ನಿದ್ರೆ ಮಾಡಿರಿ" ಎಂದರು.

ರಾಜಮಾತೆ ಹೇಳಿದರು: "ಇಂತಹ ಸುಖದ ದಿನಗಳಲ್ಲಿಯೂ ನನಗೆ ನಿದ್ರೆ ಬರುವುದಿಲ್ಲ. ದುಃಖದ ದಿನಗಳಲ್ಲಂತೂ ಮೊದಲೇ ಬರುವುದಿಲ್ಲ. ಕುವರ ವಿಷ್ಣುವನ್ನು ಬೆಳಸಿ ಮುಂದಕ್ಕೆ ತಂದುದನ್ನು ಕಂಡು, ನಮ್ಮ ರಾಜ್ಯದ ಪ್ರಜೆಗಳಷ್ಟೆ ಅಲ್ಲ, ಪರರಾಜ್ಯದವರೂ ಮೆಚ್ಚುವಂತಾಯ್ತು. ಮಗುವನ್ನು ಒಳ್ಳೆಯ ಗುರುಗಳಲ್ಲಿ ವ್ಯಾಸಂಗಕ್ಕೆ ಬಿಡಬೇಕು. ಕುವರ ವಿಷ್ಣುವು ವಿದ್ಯಾವಿನಯ ಸಂಪನ್ನನಾದರೆ, ಶೌರ್ಯವಂತನಾದರೆ ನಿನಗೆ ಇನ್ನೊಂದು ಭುಜವಾಗುವುದು,

ಅಪ್ಪಾಜಿ. ನಿನ್ನ ಪೂಜ್ಯ ಪಿತರ ಕಾಲದಲ್ಲಿ ಚೆನ್ನಮ ದಂಡಾಧೀಶರು ಈ ರಾಜ್ಯಕ್ಕೆ ಅಮೋಘ ಸೇವೆಯನ್ನು ಸಲ್ಲಿಸಿ ರಾಜ್ಯಶ್ರೀಯನ್ನು ದಶಮುಖ ಹೆಚ್ಚಿ ಸಿದರು. ಅಂಥವರ ಪುತ್ರನಿಗೆ ನಾವು ಏನು ಮಾಡಿದರೂ, ಎಷ್ಟು ಮಾಡಿದರೂ, ಸ್ವಲ್ಪವೇ. ಮಗುವನ್ನು ಯಾರು ಕಂಡು ಮಾತನಾಡಿಸಿದರೂ ಅವರಿಗೆ ಅವನ ಮೇಲೆ ಪ್ರೀತಿ ವಿಶ್ವಾಸಗಳು ತುಂಬಿಬರುತ್ತವೆ. ಅಪ್ಪಾಜಿ, ನಾಳೆಯ ದಿನ ನೀನೆ ವಟುವಿಗೆ ತಂದೆಯಂತೆ ಬ್ರಹ್ಮೋಪದೇಶ ಮಾಡಬೇಕಾಗುವುದು. ಗುರು ಗಳು ಹಾಗೆಂದೇ ಹೇಳಿದ್ದಾರೆ. ಇದನ್ನು ತಿಳಿಸುವುದಕ್ಕಾಗಿಯೆ ನಿನ್ನನ್ನು ಕರಸಿದೆ. ಅರಮನೆಯಲ್ಲಿ ಮಂಗಳ ಉತ್ಸವಗಳು ನಡೆದು ಬಹುಕಾಲವಾಯ್ತು. ಆದ್ದರಿಂದ ಪಟ್ಟಣದಲ್ಲಿರುವ ಎಲ್ಲ ನಾಗರಿಕರನ್ನೂ ಅಧಿಕಾರಿಗಳನ್ನೂ ಉತ್ಸವಕ್ಕೆ ಕರೆದಿದ್ದೇನೆ. ಎಲ್ಲರೂ ಬರುತ್ತಾರೆ. ಎಲ್ಲರಿಗೂ ಅವರವರ ಅಂತಸ್ತು ಗೌರವ ಗಳಿಗೆ ತಕ್ಕಂತೆ ಮರ್ಯಾದೆಗಳನ್ನು ನಡೆಸಬೇಕು. ಅಮಾತ್ಯರೆಲ್ಲರಿಗೆ ಆಗಲೆ ತಿಳಿಸಿದ್ದೇನೆ. ಈ ವಿಷಯದಲ್ಲಿ ನೀನೂ ಒಡನಿದ್ದು, ಲೋಪದೋಷಗಳು ಬಾರದಂತೆ ನೋಡಿಕೊಳ್ಳಬೇಕು. 'ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು' ಎಂಬುದು ನೆನಪಿನಲ್ಲಿದ್ದರೆ ಸಾಕು. ವಟುವಿಗೆ ಯಜ್ಞೋಪವೀತ ಧಾರಣೆಯಾದ ಮೇಲೆ ಎಲ್ಲ ಹಿರಿಯರ, ವಿಪ್ರರ, ಅಧಿಕಾರಿಗಳ ಬಳಿಗೆ ನೀನೇ ಕರೆದುಕೊಂಡು ಹೋಗಿ ನಮಸ್ಕಾರ ಮಾಡಿಸಿ, ಅವರ ಆಶೀರ್ವಾದಗಳನ್ನು ಕೊಡಿಸತಕ್ಕದ್ದು. ಅಪ್ಪಾಜಿ, ನಾಳಿನ ಸಂತೋಷಕ್ಕಿಂತ ಲಕ್ಷ ಪಾಲು ಹೆಚ್ಚಿನ ಸಂತೋಷವನ್ನು ಬೇಗನೆ ನನಗೆ ಉಂಟುಮಾಡಬೇಕು. ಪತಿಯನ್ನು ಕಳೆದು ಕೊಂಡು, ಒಬ್ಬರಾದ ಮೇಲೆ ಇನ್ನೊಬ್ಬರಂತೆ ಇಬ್ಬರು ಬೆಳೆದ ಮಕ್ಕಳನ್ನೂ ಕಳೆದುಕೊಂಡು, ಕಡೆಗೆ, ಒಡಹುಟ್ಟಿದವರನ್ನೂ ಕಳೆದುಕೊಂಡ ನನಗೆ, . . . ಅಪ್ಪಾಜಿ . . . ಒಂದೇ ಒಂದು ಸಂತೋಷವನ್ನಾದರೂ ಉಂಟುಮಾಡುವವ ನಾಗು. ಎಲ್ಲ ಹೆತ್ತ ಕರುಳುಗಳ ಆಶೆಯೂ ಇಷ್ಟೆ. ನಿನಗೆ ಮದುವೆಯಾಗಿ ಒಂದು ಗಂಡುಮಗುವಾಗಲಿ. ಇದಿಲ್ಲವಾದರೆ ನನ್ನ ಮನಸ್ಸಿಗೆ ನೆಮ್ಮದಿ ಯೆಲ್ಲಿಯದು ?"

"ಇಂತಹ ಸಂತೋಷಸಮಯದಲ್ಲಿ ದುಃಖಗಳನ್ನೇಕೆ ನೆನಪುಮಾಡಿ ಕೊಳ್ಳುತ್ತಿರುವಿರಿ, ಅವ್ವೆ ? ನಿಮ್ಮ ಸಂತೋಷಕ್ಕೆ ನಾನು ಪಟ್ಟಕಟ್ಟಿಕೊಂಡೆ, ಪ್ರಜೆಗಳ ನೆಮ್ಮದಿಸುಖಗಳಿಗಾಗಿ ಕಂಕಣ ತೊಟ್ಟೆ. ಅಣ್ಣದಿರು ಇದ್ದಿದ್ದರೆ

. . . ಅವ್ವೆ . . . ಅವರ ಒಂದೊಂದು ಮಕ್ಕಳನ್ನೂ ನೀವು ಮಡಿಲೊಳಿಟ್ಟು ಆನಂದಿಸಬಹುದಾಗಿತ್ತು. ನನಗಾದರೂ ನಿಮ್ಮ ಈ ನಿರ್ಬಂಧಗಳು ತಪ್ಪು ತ್ತಿದ್ದುವು. ಹಿಂದೆ ಹಲವು ಸಲ ಅಂದುದನ್ನೆ ಪುನಃ ಅನ್ನಲೆ? ನರಪತಿಗಳೆನಿಸಿ ಕೊಂಡಿರುವವರಿಗೆಲ್ಲ ಹೆಜ್ಜೆಹೆಜ್ಜೆಗೂ ಪ್ರಾಣಭಯವಿದ್ದೇ ಇರುತ್ತದೆ. ಯಾವ ಯುದ್ಧವೊ? ಯಾರ ಕತ್ತಿಯೊ? ಯಾರ ಬಾಣವೊ? ಯಾವ ವಿಷವೊ? ಯಾರ ದ್ರೋಹವೊ? . . . . . . . ನೀವು ಅತ್ತಿಗೆಯವರ ದುಃಖವನ್ನು ಕಾಣಿರೆ?"

"ಅಪ್ಪಾಜಿ, ಈ ಪುಕ್ಕಲುಮಾತುಗಳು ನಿನಗೆ ಸಲ್ಲವು. ವೀರರು ಸಾವು ಎನ್ನುವ ಪದವನ್ನು ಉಪಯೋಗಿಸರು, ಉಪಯೋಗಿಸಬಾರದು. ಮೇಲಿಂದ ಮೇಲೆ ಕವಿದ ಸಂಕಟಗಳನ್ನು ಅನುಭವಿಸಿ, ಅನುಭವಿಸಿ, ನನ್ನ ಹೃದಯ ಕಲ್ಲಾಯ್ತು. 'ಇಷ್ಟರ ಮೇಲೆ ಇನ್ನೇನಿದೆ?' ಅನ್ನುವಷ್ಟರಮಟ್ಟಿಗೆ ಮನಸ್ಸು ನೊಂದು ರೋಸಿತು. ಸುಖಕ್ಕೆ ಹಿಗ್ಗುವುದೂ ದುಃಖಕ್ಕೆ ಕುಗ್ಗುವುದೂ ಪ್ರಾಪಂಚಿಕ. ಸುಖವನ್ನೂ ದುಃಖವನ್ನೂ ಮನಸ್ಸಿನ ಸಮಭಾವದಿಂದಲೇ ಕಾಣುವ ಸ್ಥಿತಪ್ರಜ್ಞರ ಸ್ಥಿತಿ ನನಗೆ ಸಾಧ್ಯವಿಲ್ಲ. ಹಿರಿಯರು ಕಟ್ಟಿ ನಡಸಿದ ರಾಜ್ಯ ನಿನ್ನ ಅನಂತರ ದಕ್ಷರಾದ ನಿಮ್ಮ ರಕ್ತದವರಿಗೇ ಸೇರಬೇಕು. ಇತರರ ಕೈಸೇರುವುದರಿಂದ ಪ್ರಜಾಕ್ಷೋಭೆಯಾಗಬಹುದು, ಧರ್ಮಕ್ಷೋಭೆಯಾಗ ಬಹುದು. ಪ್ರಜೆಗಳನ್ನು ನ್ಯಾಯ, ಧರ್ಮಗಳ ಮಾರ್ಗದಲ್ಲಿ ನಡಸಿ ಲೋಕ ಕ್ಷೇಮಾರ್ಥವಾಗಿಯೇ ಚಕ್ರಾಧಿಪತ್ಯಗಳನ್ನು ಕಟ್ಟಿ ಆಳಿದ, ಶಿಬಿ, ಯಯಾತಿ, ಪುರು, ಮಾಂಧಾತ ಚಕ್ರವರ್ತಿಗಳು ಈಗ ಇಲ್ಲ. ಇರುವವು ಸೊಕ್ಕಿದ ಕೋಣ ಗಳು, ಅಥವಾ ಹೆಬ್ಬುಲಿಗಳು. ನಮ್ಮ ಮಕ್ಕಳಂತಿರುವ ಪ್ರಜೆಗಳು ಅವುಗಳ ಬಾಯಿಗೆ ಸಿಕ್ಕಬಾರದಲ್ಲ?"

"ಅವ್ವೆ, ನಿಮ್ಮ ಮನಸ್ಸು ಬಹು ನೊಂದಿದೆ. ತಡೆಯಲಾಗದಷ್ಟು ದುಃಖಪರಂಪರೆಗಳನ್ನು ಅನುಭವಿಸಿ, ಒಂದೇ ಒಂದು ಆಶೆಯಿಂದ ಇದುವರೆಗೆ ಜೀವವನ್ನು ಬಿಗಿಹಿಡಿದು ನಿಲ್ಲಿಸಿಕೊಂಡಿರುವಿರಿ. ನಾನು ಇದನ್ನು ಅರಿಯ ದವನೇನಲ್ಲ. ಎಲ್ಲ ಹೆತ್ತೊಡಲುಗಳಿಗೂ ತಮ್ಮ ಮಕ್ಕಳು ಸುಖಸಂತೋಷ ಗಳಿಂದ, ಯಶೋವಂತರಾಗಿ, ದೀರ್ಘಾಯುಗಳಾಗಿ ಬಾಳಬೇಕೆಂಬ ಹಂಬಲ ಇದ್ದೇ ಇರುವುದು. ಹೆತ್ತ ತಂದೆಗೆ, ತಾನು ಉತ್ತ ನೆಲ, ಕಟ್ಟದ ಮನೆ, ಬೆಳಸಿದ

ಹಯನು, ಮಾಡಿಟ್ಟ ಐಶ್ವರ್ಯ ಇವು ಪೋಲಾಗಬಾರದು, ವೃದ್ಧಿಯಾಗಬೇಕು, ಮಕ್ಕಳು ದಕ್ಷರಾಗಬೇಕು, ಮನೆಯ ಹೆಸರು ಉಳಿಯಬೇಕು ಎಂಬ ಆಶೆ ಇದ್ದೇ ಇರುತ್ತದೆ. ಪೂಜ್ಯರಾದ ನನ್ನ ತಂದೆಗಳು ಇಹವನ್ನು ತ್ಯಜಿಸಿ ಹೋದಾಗ ಸಹಗಮಿಸುವುದು ನಿಮ್ಮ ಧರ್ಮವೇ ಆಗಿದ್ದರೂ, ನಮ್ಮನ್ನೆಲ್ಲ ಬೆಳಸಿ ದೊಡ್ಡವ ರನ್ನಾಗಿ ಮಾಡುವುದು ಹೆಚ್ಚಿನ ಕರ್ತವ್ಯವೆಂದು ಜೀವನನ್ನು ನಮಗಾಗಿ ತಡೆ ದಿಟ್ಟರಿ. ಪಟ್ಟ ಕಟ್ಟಿಕೊಂಡ ಅಣ್ಣದಿರು ಪರಲೋಕಕ್ಕೆ ಹೋದಮೇಲೆ ಈ ರಾಜ್ಯದ ರಕ್ಷಣೆಗೆ ನಾವು ಪಟ್ಟಕಟ್ಟಿಕೊಳ್ಳಬೇಕಾಯಿತು. ದೈಹಿಕ ಸುಖಾದಿ ಗಳಿಗೆ ನಮ್ಮ ಮನಸ್ಸು ಎಡೆಕೊಡಲಿಲ್ಲ. ಇದನ್ನು ನೀವು ಬಲ್ಲಿರಿ. ಇಷ್ಟು ಅಗಾಧ ವಾದ ರಾಜ್ಯಸಂಸಾರವನ್ನು ನಾನು ಕಟ್ಟಿಕೊಂಡಿರುವುದು ಸಾಲದೆ? ಈ ರಾಜ್ಯದ ಉತ್ತರೋತ್ತರ ರಕ್ಷಣಾಭಿವೃದ್ಧಿಗಳಿಗೆ ದಕ್ಷರಾದವರು ಬೇಕಾಗುವ ರೆಂಬುದನ್ನು ನಾನರಿಯೆನೆ? ಅವ್ವೆ, ಕುವರ ವಿಷ್ಣು ನಮ್ಮ ಮಗುವಲ್ಲವೆ? ರೂಪು, ಗುಣ, ಧೈರ್ಯ, ಸಾಹಸ ಇವುಗಳಲ್ಲಿ ಅವನು ಕಡಮೆಯೇ? ಕುವರ ವಿಷ್ಣುವಿಗೇ ಯೌವರಾಜ್ಯಾಭಿಷೇಕವನ್ನು ಮಾಡಿದರಾಯಿತು."

"ಅಪ್ಪಾಜಿ, ನಿನ್ನ ಹೃದಯದ ಔದಾರ್ಯ ಮೇರೆಯಿಲ್ಲದ್ದು. ಕುವರ ವಿಷ್ಣು ನಮ್ಮ ಮಗುವೆ, ನಿಜ. ಆದರೆ ಆ ರೀತಿ ಪಟ್ಟಗಟ್ಟುವ ನೀತಿಯನ್ನು ರೂಢಿಗೆ ತರುವುದು ನಮ್ಮ ವಂಶಜಾತರೇ ಇಲ್ಲದೆ ಹೋದಾಗ ಮಾತ್ರ. ಅಂತಹ ಸಂದರ್ಭವೇನೂ ಈಗ ಸಂಭವಿಸಿಲ್ಲ. ಹೊಯಿಸಳ ರಕ್ತವೇ ಬತ್ತಿಹೋದಾಗ ಬೇರೆ ಮಾತು . . . . ಅಪ್ಪಾಜಿ, ಕಟುವಾಗಿ ಮಾತನಾಡಿ ಹೂವಿನಂತಹ ನಿನ್ನ ಮನಸ್ಸನ್ನು ನೋಯಿಸುತ್ತಿರುವೆನೆಂದು ಭಾವಿಸಬಾರದು. ನಿನಗೆ ಮದುವೆ ಮಾಡಿ ಸಂತತಿಯನ್ನುಳಿಸಿಕೊಳ್ಳುವುದು ತಾಯಿಯಾದ ನನ್ನ ಕರ್ತವ್ಯ. ಇಷ್ಟು ದಿನಗಳೂ ನೀನು ಹೇಳುತ್ತಿದ್ದ 'ಒಲ್ಲೆ'ನೆಂಬ ಮಾತು ಇನ್ನು ಬೇಡ. ನಿನಗೆ ಮದುವೆಯಾಗಿ, ಮನೆಗೆ ಸೊಸೆಯಾಗಿ, ಸಿಂಹಾಸನಕ್ಕೆ ತಾಯಾಗುವ ಸೌಭಾಗ್ಯೆ ಯಾರಾದರೂ ನಿನ್ನ ಮನ್ನಸ್ಸಿಗೆ ಬಂದಿದ್ದರೆ ತಾಯಿಯ ಬಳಿ ಸಂಕೋಚವಿಲ್ಲದೆ ತಿಳಿಸು. ಇತರ ದೇಶಗಳ ಹೆಣ್ಣನ್ನು ತಂದರೆ ಬಹು ತೊಂದರೆಗಳಿಗೆ ಒಳಪಡಬೇಕಾಗುತ್ತದೆ. ಅದಕ್ಕೆ ನಾನೆ ಸಾಕ್ಷಿ. ಗಂಗರಾಜರು ನನ್ನನ್ನು ಕರೆತಂದು ನಿಮ್ಮ ತಂದೆಯವರಿಗೆ ಲಗ್ನಮಾಡಿಸಿದ ಮೇಲೆ, ಆದರಿಂದುಂಟಾದ ತೊಡಕು ಕೋಟಲೆಗಳನ್ನು ಗಂಗರಾಜರೆ ಬಗೆಹರಿಸಬೇಕಾ

ಯಿತು. ಇನ್ನಾರ ಕೈಯಲ್ಲೂ ಅದು ಸಾಧ್ಯವಾಗುತ್ತಿರಲಿಲ್ಲ. ದೈವವಶಾತ್ ನನಗೆ ಹುಟ್ಟಿದ ಮನೆಗಿಂತ ಸೇರಿದ ಮನೆಯ ಮೇಲೆ ವಿಶ್ವಾಸ ಬೆಳೆಯಿತು. ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ನಾಡಿನ ಹೆಣ್ಣೆ ನಮಗೆ ಒಳ್ಳೆಯದು. ಅನುಭವಿಸಿದವರಿಗೆ ಇದು ವೇದ್ಯ . . . ಬಹಳ ಹೇಳಬೇಕಾದ್ದೇನು? ಇನ್ನು ಕಾಲ ತಳ್ಳುವ, ಸಮಾಧಾನಗಳನ್ನು ಹೇಳುವ ಮಾತು ಬೇಡ. ನಿನಗೂ ಮದುವೆಯ ವಯಸ್ಸು ಮೀರಬಾರದಲ್ಲ? 'ಹೆತ್ತ ತಾಯಿಯೆ ಇತ್ತ ಗಮನಿಸ ಲಿಲ್ಲ, ಮಕ್ಕಳಿಗೆ ತಿಳಿಯಹೇಳಲಿಲ್ಲ' ಎಂಬ ದೋಷಕ್ಕೆ ನನ್ನನ್ನು ಗುರಿಪಡಿಸ ಬೇಡ. ಗಂಗರಾಜರು ನಿನ್ನ ಮದುವೆಯ ವಿಷಯದಲ್ಲಿ ಅನೇಕ ವೇಳೆ ನನ್ನಲ್ಲಿ ಪ್ರಸ್ತಾಪ ಮಾಡಿದ್ದಾರೆ. ನಾನು ನಿನಗೆ ಹೇಳುತ್ತಿಲ್ಲವೆಂದೇ ಅವರ ಆರೋಪ. 'ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ತಾಯಿಯ ಮಾತನ್ನು ಕೇಳುವುದಿಲ್ಲವೆ? ಇಷ್ಟು ದೊಡ್ಡ ರಾಜ್ಯವನ್ನು ಯಾರ ಪಾಲು ಮಾಡಿ ಹೋಗುವುದು?' ಎಂದು ಗಂಗರಾಜರು ಅನ್ನುತ್ತಾರೆ. ನಮ್ಮ ಪ್ರಜೆಗಳನ್ನು ನಾವು ಕಾಪಾಡದಿದ್ದರೆ ಕಟುಕರ ಕೈಗೆ ಒಪ್ಪಿಸಿದಂತೆಯೇ. ಪುಂಡು ಪಾಳೆಯಗಾರರೂ, ದ್ರೋಹಿಗ ಸಾಮಂತರೂ ಹೆಚ್ಚುತ್ತ ಇದ್ದಾರೆ. ಈ ರಾಜ್ಯಶ್ರೀಯನ್ನು ದೋಚಲು ಸಮಯನಿರೀಕ್ಷಣೆಯನ್ನು ಮಾಡುತ್ತಲೂ ಇದ್ದಾರೆ. ಮಾರಸಿಂಗಮಯ್ಯನವರ ನೇತೃತ್ವದಲ್ಲಿ ನಮ್ಮ ಸುಸಜ್ಜಿತ ಸೈನ್ಯಗಳು ದಕ್ಷತೆಯಿಂದ ದೇಶರಕ್ಷಣೆಮಾಡು ತ್ತಿವೆ. ಎಲ್ಲ ದೇವರುಗಳೂ ನಮ್ಮನ್ನು ರಕ್ಷಿಸುತ್ತಿದ್ದಾರೆ. ಸಕಾಲಕ್ಕೆ ಮಳೆ ಬಂದು, ಬೆಳೆ ಬೆಳೆದು, ಪ್ರಜೆಗಳೂ ದೈವಭಕ್ತಿಯುಳ್ಳವರಾಗಿ, ಧರ್ಮಿಷ್ಠರಾಗಿ ಸಂತೋಷದಿಂದಿದ್ದಾರೆ. 'ಹೊಯಿಸಳ ರಾಜ್ಯ ರಾಮರಾಜ್ಯ'ವೆಂದು ಜನರು ಆಡಿಕೊಳ್ಳುವುದನ್ನು ನಾನೇ ಕಿವಿಯಾರ ಕೇಳಿದ್ದೇನೆ. ಅಪ್ಪಾಜಿ, ನಿನ್ನ ಯಶಸ್ಸು, ಧರ್ಮಗುಣ, ಉದಾರತೆ, ರಾಜನೀತಿ, ನ್ಯಾಯ ಅನ್ಯಾಯ ವಿಚಕ್ಷಣೆ, ಕಠಿಣ ಸನ್ನಿವೇಶಗಳಲ್ಲೂ ಸಮಯೋಚಿತವಾದ ಬುದ್ಧಿ ಇವುಗಳೆಲ್ಲ ನನಗೆ ಬಹು ಸಂತೋಷವನ್ನುಂಟುಮಾಡಿದೆ. ಆದರೂ ಇಷ್ಟು ದೊಡ್ಡ ಅರಮನೆಯಲ್ಲಿ ಒಂದೇ ಒಂದು ಮುತ್ತೈದೆಹೆಣ್ಣು ಇಲ್ಲದಿರುವುದು ಎಲ್ಲ ಸಂತೋಷಗಳನ್ನೂ ಮೆಟ್ಟಿನಿಂತಿದೆ. ಅಪ್ಪಾಜಿ, ನನಗಾಗಿ, ಈ ರಾಜ್ಯಕ್ಕಾಗಿ ನೀನು ಮದುವೆಗೆ ಒಪ್ಪಬೇಕು. . . ."

ಎಂದು ಹೇಳುತ್ತಿರುವಾಗ ರಾಜಮಾತೆಯ ಕಣ್ಣೀರು ಧಾರೆಧಾರೆ

ಯಾಯಿತು, ಧ್ವನಿ ಗದ್ಗದಿಸಿತು. ಅದನ್ನು ನೋಡುತ್ತಿದ್ದ ಪ್ರಭುವಿಗೆ ಹೃದಯ ನೀರಾಗಿ, ತಟ್ಟನೆ ತಮ್ಮ ಉತ್ತರೀಯದಿಂದ ತಾಯಿಯ ಕಣ್ಣೀರನ್ನು ಒರಸಿ, "ಅವ್ವೆ, ಆಗದು, ಆಗದು. ಕಣ್ಣೀರು ಆಗದು. ಮನಸ್ಸಿಗೆ ಸಮಾಧಾನ ತಂದುಕೊಳ್ಳಿರಿ. ನಿಮ್ಮ ಮನಸ್ಸಿಗೆ ಸುಖವಾಗಲೆಂದು ನಾನು ಮದುವೆಮಾಡಿ ಕೊಳ್ಳುತ್ತೇನೆ. ನೀವು ಇಷ್ಟು ದೂರ ಹೇಳಿದಮೇಲೆ ನಾನು ಒಲ್ಲೆ ಎನ್ನಲಾರೆ, ಅವ್ವೆ, ಸಂತೋಷದ ದಿನದಲ್ಲಿ ಕಣ್ಣೀರು ತಂದುಕೊಂಡಿರಲ್ಲಾ ಎಂದು ನನಗೆ ದುಃಖವಾಗುತ್ತಿದೆ. ನಿಮಗೆ ಮನ ಒಪ್ಪಿದ ಹೆಣ್ಣನ್ನು ಸೊಸೆಯಾಗಿ ಮನೆ ತುಂಬಿಸಿಕೊಳ್ಳಿರಿ. ನಿಮ್ಮ ಆಯ್ಕೆಯೇ ನನಗೆ ಪೂರ್ಣಸಮ್ಮತ. ಈ ಭಾರ ನನ್ನಮೇಲೆ ಹಾಕುವುದು ಬೇಡ. ಈ ವಿಷಯಗಳಲ್ಲಿ ಪುರುಷರಿಗಿಲ್ಲದ ಒಂದು ವಿಶೇಷ ವಿಮರ್ಶನಶಕ್ತಿ ಸ್ತ್ರೀಯರಿಗಿರುತ್ತದೆ. ಇನ್ನು ಸಮಾಧಾನ ತಂದು ಕೊಳ್ಳಿರಿ" ಎಂದರು.

ಪ್ರಭುಗಳ ಈ ಒಪ್ಪಿಗೆಯ ಮಾತುಗಳಿಂದ ರಾಜಮಾತೆಗೆ ಸುಖದ ಕಣ್ಣೀರು ದುಃಖದ ಕಣ್ಣೀರಿನೊಡನೆ ಬೆರೆತು ಕೋಡಿ ಹರಿಯಿತು. ಪ್ರಭುಗಳು 'ಪುನಃ ಇದೇನು ಸಂಕಟ ಬಂದಿತು!' ಎಂದೆಣಿಸಿ, 'ಅವ್ವೆ, ನಾನು ಕೇಳಿಕೊಳ್ಳು ತ್ತಿದ್ದೇನೆ. ಇನ್ನು ಕಣ್ಣೀರು ತರಬಾರದು. ಅದು ನನಗೆ ಅಶ್ರೇಯಸ್ಸು' ಎಂದರು. ರಾಜಮಾತೆ 'ಅಪ್ಪಾಜಿ, ಇದು ಕಣ್ಣೀರಲ್ಲ, ನೀನೆಂದ ಮಾತಿಗೆ ಹೃದಯ ಉಕ್ಕಿಬಂದುದರ ಸಂತೋಷ' ಎನ್ನುತ್ತ ಎರಡು ತೋಳ್ಗಳನ್ನು ನೀಡಿ ತನಯರನ್ನು ಎದೆಗೆ ಅಪ್ಪಿಕೊಂಡು ತಣಿದರು.

§

ವಿಜಯಸಿಂಹಾಸನದ ಓಲಗಶಾಲೆಯಲ್ಲಿ ಕೆಲಸಮಾಡುತ್ತಿದ್ದ ಅರಮನೆಯ ಊಳಿಗದವರಿಗೆ ನಡುರಾತ್ರಿಯಾದುದೂ ತಿಳಿಯಲಿಲ್ಲ. ಅಷ್ಟು ಉತ್ಸಾಹದಿಂದ ಬೆಳಗಿನಿಂದಲೂ ಕೆಲಸ ಮಾಡುತ್ತಲೆ ಇದ್ದರು.

ರೂವಾರಿಗಳಾದ ದೇವೋಜ, ನಾಗೋಜ, ಪದ್ಮೋಜ, ಕೇತೋಜ, ಬಮ್ಮೋಜ ಈ ಒಬ್ಬೊಬ್ಬರೂ ಸ್ವರ್ಗ, ಕೈಲಾಸ, ಅಮರಾವತಿ, ಅಲಕಾಪುರಿ ಗಳನ್ನು ಓಲಗಶಾಲೆಗೆ ಇಳಿಸಿದ್ದರು. ವಿಸ್ಮಯಗೊಳಿಸುವ ಕೆತ್ತನೆಯ ಕೆಲಸ ಗಳನ್ನು ಮಾಡಿ ಜೋಡಿಸಿದ್ದರು. ಭವ್ಯವಾದ ದೇವತಾವಿಗ್ರಹಗಳನ್ನೂ

ಗಂಧರ್ವರ, ವಿದ್ಯಾಧರರ, ಅಪ್ಸರೆಯರ, ಯಕ್ಷಪಕ್ಷಿಯರ ವಿಗ್ರಹಗಳನ್ನೂ ಮನ ಮೋಹಿಸುವಂತೆ ಮಾಡಿಟ್ಟಿದ್ದರು.

ಅರ್ಧರಾತ್ರಿ ಕಳೆದು ಮರುದಿನದ ಬೆಳಗಿನ ಜಾವದ ಸಮಯವಾದರೂ ಕೆಲಸಗಳು ಇನ್ನೂ ಮುಗಿದಿರಲಿಲ್ಲ. ಕೊನೆಯ ಅಲಂಕಾರಗಳಾದ ಹಸಿರು ತೋರಣಗಳು ನಡುನಡುವೆ ವರ್ಣಪುಷ್ಪಗಳ ರಚನೆ, ವಿಶಾಲವಾದ ಎಲೆಗಳಿಂದ, ಜೋಲುತ್ತಿರುವ ಗೊನೆಗಳಿಂದ ಕೂಡಿದ ಎತ್ತರವಾದ ಬಾಳೆಯ ಕಂಬಗಳನ್ನು ನೆಡುವ, ಕಟ್ಟುವ ಕೆಲಸ ನಡೆದಿದ್ದಿತು. ಅಲ್ಲಲ್ಲಿ ಚೆಂದೆಂಗು, ಮಾದಳ, ದಾಳಿಂಬ, ಚಕ್ಕೋತ, ಕಿತ್ತಳೆ, ನಿಂಬೆ, ಬಾಳೆ ಮುಂತಾದ ಹಣ್ಣುಗಳನ್ನು ಗೊಂಚಲು ಗೊಂಚಲಾಗಿ ರಮ್ಯವಾಗಿ ಕಟ್ಟಿದ್ದರು.

ಗಂಗರಾಜರೂ ಹೇಮಾದ್ರಿಗಳೂ ಅಲ್ಪನಿದ್ರೆಮಾಡಿ ಎದ್ದು, ಪ್ರಾತರ್ವಿಧಿ ಸ್ನಾನಾದಿಗಳನ್ನು ಮುಗಿಸಿ, ಉತ್ತಮ ವಸ್ತ್ರಭೂಷಣಾಲಂಕೃತರಾಗಿ ಓಲಗ ಶಾಲೆಗೆ ಬಂದರು. ಎಲ್ಲ ಅಲಂಕಾರ ವಿತರಣೆಗಳನ್ನು ನೋಡಿ ಮೆಚ್ಚಿ, "ದಿವ್ಯವಾಗಿದೆ, ಅಮೋಘವಾಗಿದೆ. ಈ ಹೊತ್ತು ಇಲ್ಲಿ ಕೆಲಸಮಾಡಿದವರಿಗೆಲ್ಲ ದ್ವಿಗುಣವೇತನ ಬಹುಮಾನವೆಂದು ಪ್ರಭುಗಳು ಆಜ್ಞೆಮಾಡಿದ್ದಾರೆ. ನೀವೆಲ್ಲ ರಾತ್ರಿ ಪೂರ ಕೆಲಸಮಾಡಿದ್ದೀರಿ, ಈಗಾಗಲೇ ಬೆಳಗಾಗುತ ಬಂದಿತು. ಇನ್ನು ನಿದ್ರೆಗೆ ಸರ್ವಥಾ ಅವಕಾಶವಿಲ್ಲ. ನಿಮ್ಮ ಮನೆಗಳಿಗೆ ಹೋಗಿ ಸ್ನಾನಾದಿ ಗಳನ್ನು ಮುಗಿಸಿಕೊಂಡು ನಿಮ್ಮ ಉಡುಗೆಗಳನ್ನು ಧರಿಸಿ, ಇನ್ನು ಎರಡೇ ಗಂಟೆ ಗಳಲ್ಲಿ ಸರ್ವರೂ ಅವರವರ ಸ್ಥಾನಗಳಲ್ಲಿ ಸಿದ್ಧರಾಗಿರಬೇಕು" ಎಂದಾಜ್ಞೆಮಾಡಿ ಆಳುಗಳನ್ನು ಕಳಿಸಿಕೊಟ್ಟರು.

ಗಂಗರಾಜರ ವಿಚಕ್ಷಣೆಯಲ್ಲಿ ಆಹ್ವಾನಿತರೆಲ್ಲರಿಗೂ ಸುಖಾಸನಗಳನ್ನು ಏರ್ಪಡಿಸಿದ್ದರು. ಮೊದಲು ರಾಜಸಂಬಂಧಿಕರ, ಬಳಿಕ ಅಮಾತ್ಯರ, ಸೇನಾಧಿ ಪತಿ ಡಣಾಯಕ ನಾಯಕರುಗಳ, ನ್ಯಾಯಾಧೀಶರ, ನಗರಪಾಲಕರ, ಉದ್ಯೋ ಗಸ್ಥರ, ವಣಿಕರ, ಮಹಾಜನರ, ಅವರವರ ಕುಟುಂಬಗಳ ಎಲ್ಲರಿಗೂ ಅವರವರ ಸ್ಥಾನಮಾನಗಳನ್ನರಿತು, ಲೋಪದೋಷಗಳಿಗೆ ಅವಕಾಶವಿಲ್ಲದಂತೆ ಏರ್ಪಡಿಸಿ ದ್ದರು. ಬ್ರಾಹ್ಮಣರಿಗೆ, ವೇದಾಧ್ಯಯನಸಂಪನ್ನರಿಗೆ, ಪಂಡಿತರಿಗೆ, ಗುರುಪೀಠ ದವರಿಗೆ, ಪುರೋಹಿತರಿಗೆ, ವೇದಿಕೆಯ ಮೇಲೆ ಸ್ಥಾನಗಳನ್ನೇರ್ಪಡಿಸಿದ್ದರು.

ಗಂಗರಾಜರು ಇದನ್ನೆಲ್ಲ ಪರಿಶೀಲಿಸುತ್ತಿರುವಾಗ ಅರುಣೋದಯವಾಯಿ

ತೆಂಬ ಸೂಚನೆಯನ್ನು ವಿಜಯಸಿಂಹಾಸನದ ಓಲಗಶಾಲೆಯ ಪ್ರಭಾತಮಂಗಳ ವಾದ್ಯಗಳು ಸೂಚಿಸಿದುವು. ತರುಣ ಅರುಣನಿಂದ ರಂಜಿತವಾದ ಆ ಓಲಗಶಾಲೆ ಆಗ ಪರಶಿವನ ಕನಕಸಭೆಯಂತೆ ಕಣ್ಗೊಳಿಸಿತು.

ಕುಕ್ಕುಟಸರ್ಪವಾಹನೆಯಾದ ವಾಸಂತಿಕಾದೇವಿಯ ಉತ್ಸವಮೂರ್ತಿ ಆಲಯದಿಂದ ಸಕಲ ಮಂಗಳಮರ್ಯಾದೆಗಳೊಡನೆ ಹೊರಟಿತೆಂಬ ಸೂಚನೆಯ ಮಹಾಭೇರಿಯ ಮೊಳಗು ಕೇಳಬಂದಿತು. ಕೆಲಸದವರೂ ಅವಸರದವರೂ ಗಣಾಚಾರದವರೂ ಬಿಚ್ಚುಗತ್ತಿಯವರೂ ಅಶ್ವಗಜಸೈನಿಕರೂ ಪದಾತಿಸೈನಿಕರೂ ಅವರವರ ಸ್ಥಾನಗಳಲ್ಲಿ ಬಂದು ನಿಂತರು.

ಹೊನ್ನ ಕಲಶಗಳಲ್ಲಿ ಶಾಂತ್ಯುದಕಗಳನ್ನು ತುಂಬಿಕೊಂಡು ಮಂಗಳದ್ರವ್ಯ ಗಳೊಡನೆ ಮಂಗಳವಾದ್ಯಗಳೊಡನೆ ಸುಮಂಗಲಿಯರು ಓಲಗಶಾಲೆಯನ್ನು ಪ್ರವೇಶಿಸಿ ಯಜ್ಞವೇದಿಕೆಯನ್ನೂ ವಿಜಯಸಿಂಹಾಸನವನ್ನೂ ಬಲವಂದರು. ಪುರೋಹಿತರೂ ವೇದಾಧ್ಯಯನಸಂಪನ್ನರೂ ಕುಲಗುರುಪೀಠದವರೂ ಸ್ವಸ್ತಿ ವಾಚನಗಳನ್ನು ಹೇಳುತ್ತ ಓಲಗಶಾಲೆಯನ್ನು ಪ್ರವೇಶಿಸಿದರು. ವಾಸಂತಿಕಾ ದೇವಿಯ ಉತ್ಸವಮೂರ್ತಿ ಸಿಂಹಾಸನದ ಬಲಪಾರ್ಶ್ವದಲ್ಲಿ ಸಜ್ಜುಗೊಳಿಸಿದ್ದ ಸ್ಥಾನದಲ್ಲಿ ಸ್ಥಾಪಿತವಾಗಿ, ದೇವಿಗೆ ಅಗ್ರಪೂಜಾದಿಗಳು ಸಂದುವು.

ಹೊಯಿಸಳೇಶ್ವರರು ಬಿಜಯಮಾಡುತ್ತಿರುವರೆಂಬ ಸೂಚನೆಗೆ ರಾಜ ಲಾಂಛನ ಹಿಡಿದಿದ್ದ ಭಟನೊಬ್ಬ ರಾಜದ್ವಾರದಿಂದ ಓಲಗಶಾಲೆಯನ್ನು ಪ್ರವೇಶಿಸಿದ. ಸಭೆಯೆಲ್ಲ ಮರ್ಯಾದೆಯಿಂದೆದ್ದು ನಿಶ್ಶಬ್ದದಿಂದ ರಾಜಾಗಮನ ವನ್ನು ಕಾದು ನಿಂತಿತು.

ಹೊಗಳುಭಟರು ಚಿನ್ನದ ದಂಡಗಳನ್ನು ಕೈಯಲ್ಲಿ ಹಿಡಿದು ಮೇಲೆತ್ತಿ "ರಾಜರಾಜಮಾರ್ತಾಂಡ, ನಿಶ್ಶಂಕಪ್ರತಾಪ, ಸಾಹಸಗಂಗ, ವಿಕ್ರಮತುಂಗ, ತ್ರಿಭುವನಮಲ್ಲ, ಶ್ರೀ ವಾಸಂತಿಕಾಪಾದಸರೋರುಹಭೃಂಗ, ಶ್ರೀ ಶ್ರೀ ಶ್ರೀ ವಿಷ್ಣುವರ್ಧನ ಹೋಯಿಸಳೇಶ್ವರದೇವ, ಉಘೇ! ಉಘೇ!" ಎಂದು ಘೋಷಿಸಿ ದರು. ಆನೆಗಳು ಘೀಳಿಟ್ಟವು, ಕುದುರೆಗಳು ಹೇಷಾರವಮಾಡಿದವು, ಪಂಚ ಮಹಾವಾದ್ಯಗಳು ಮೊಳಗಿದವು, ವಿಪ್ರೋತ್ತಮರು ಆಶೀರ್ವಾದ ಮಾಡುವುದಕ್ಕೆ ಎದ್ದುನಿಂತರು.

ಆಗ ಸ್ವರ್ಣಸಿಂಹಾಸನದ ಬಲಗಡೆ ಇದ್ದ ಬೆಳ್ಳಿಯ ಬಾಗಿಲು ತೆರೆಯಿತು.

ಮಂಗಳಸೂಚಕಗಳಾದ ಸುವರ್ಣಾಕ್ಷತೆಗಳನ್ನು ಎರಚುತ್ತ ರಾಜಪುರೋಹಿತರು ಮುಂದಾಗಿ ಬಂದರು. ಅವರ ಹಿಂದೆ ಕುವರ ವಿಷ್ಣುವನ್ನು ನಡಸಿಕೊಂಡು ಹೊಯಿಸಳೇಶ್ವರರು ಪ್ರವೇಶಿಸಿದರು.

ವಟುವು ಮಂಗಲಕರವಾದ ಹಳದಿಯ ವಸ್ತ್ರವನ್ನುಟ್ಟಿದ್ದ. ಮೈಕಾಂತಿ ಕೆಂಪು ಕೂಡಿದ ಗೌರ, ಕುತ್ತಿಗೆಯಲ್ಲಿ ರತ್ನಖಚಿತವಾದ ಚಿನ್ನದ ಸರ, ಮುಖದಲ್ಲಿ, ಮನದಲ್ಲಿ 'ತನಗಾಗಿಯೆ ಇಷ್ಟು ವಿಜೃಂಭಣೆಯೆಲ್ಲ!' ಎಂಬ ನಾಚಿಕೆ, ವಿಶಾಲವಾದ ಕಾಂತಿಯುಕ್ತವಾದ ಕಣ್ಗಳಿಗೆ ಕಂಡೂಕಾಣದಂತೆ ಕಾಡಿಗೆ, ತಲೆಗೂದಲು ಅಲೆಅಲೆಯಾಗಿ ಭುಜದಿಂದ ಕೆಳಗಿಳಿದಿದೆ. ವಯಸ್ಸು ಹನ್ನೆರಡು, ಬೆಳವಣಿಗೆ ಚೆನ್ನಾಗಿದೆ. ನಡೆಯಲ್ಲಿ, ನೋಟದಲ್ಲಿ ಗಾಂಭೀರ್ಯವಿದೆ. ನಡೆದು ಬರುತ್ತ ಕತ್ತನ್ನು ಮೇಲೆತ್ತಿ ಅಪ್ಪಾಜಿಯವರ ಮುಖವನ್ನು ನೋಡುವನು. ನೆರೆದಿರುವ ಮಹಾಸಭೆಯನ್ನು ನೋಡುವನು. ಪರಿಚಿತವಾದ ಮುಖಗಳನ್ನು ಕಂಡರೆ ನಸುನಗುವನು.

ಪ್ರಭುಗಳು ವಿಶೇಷ ಭೂಷಣಾಲಂಕಾರಗಳಿಲ್ಲದೆ, ಬರಿಗಾಲಿನಲ್ಲೆ ನಡೆದು ಬರುತ್ತಿದ್ದಾರೆ. ಎಳೆಯ ಹಳದಿಬಣ್ಣದ ಪಟ್ಟೆನ್ನುಟ್ಟು, ಮೇಲೆ ನೀಲಿಯ ಕಟಿವಸ್ತ್ರದಿಂದ ಅಲಂಕೃತರಾಗಿದ್ದಾರೆ. ಕೊರಳಲ್ಲಿ ಥಳಥಳಿಸುವ ವಜ್ರವೈಡೂರ್ಯಗಳ ಹಾರ, ಕಿವಿಯಲ್ಲಿ ಪ್ರಕಾಶಮಾನವಾದ ಕುಂಡಲಗಳು, ಎರಡು ತೋಳುಗಳಲ್ಲೂ ರತ್ನಖಚಿತವಾದ ಬಾಹುಬಂಧ, ಮಣಿಕಟ್ಟುಗಳಲ್ಲಿ ಮರಕತ ಚಕಿತ ಅಲಂಕಾರ, ಭುಜದವರೆಗೆ ಸುರುಳಿಬಿದ್ದ ತಲೆಗೂದಲು, ಮದ್ದಾನೆಯ ಸೊಂಡಿಲ ಸೌಷ್ಠವವನ್ನು ಗೆಲ್ಲುವ ಬಾಹುಯುಗ್ಮ, ವಿಶಾಲವಾದ ಉಬ್ಬಿದ ಎದೆ, ಮುಖಕ್ಕೆ ಗಂಡುಸೊಬಗನ್ನು ಕೊಡುವ ಎಳೆಮೀಸೆ, ವೀರಭಾವವನ್ನು ಸೂಚಿಸುವ ಮುಖ, ಹೂವಿನ ಮೃದುತ್ವವನ್ನು ಹೋಲುವ ನಯನಗಳು, ದೇಹದ ಪುಷ್ಟಿಯನ್ನು ಸೂಚಿಸುವ ತುಂಬುಕುತ್ತಿಗೆ, ದೇವತಾಪುರುಷನ ನಿಲವು, ಮಂದಸ್ಮಿತವಾದ ಕೋಮಲವಾದ ವರ್ಣದ ತುಟಿ, ಮನಃಸ್ಥೈರ್ಯವನ್ನು ರೂಪಿಸುತ್ತಿದ್ದ ಗಲ್ಲ; ಈ ಎಲ್ಲ ಸೌಭಾಗ್ಯಪುರುಷಲಕ್ಷಣಗಳನ್ನು ಹೊಂದಿದ್ದ ಹೊಯಿಸಳೇಶ್ವರ ವಿಷ್ಣುವರ್ಧನ ಪ್ರಭು ಪ್ರದ್ಯುಮ್ನನಂತೆ ಇದ್ದರು.

ರಾಜಪುರೋಹಿತರು ಪ್ರಭುಗಳನ್ನೂ ವಟುವನ್ನೂ ಅವರಿಗಾಗಿಯೆ ಏರ್ಪಡಿಸಿದ್ದ ಸುಖಾಸನಗಳಿಗೆ ಕರೆದುತಂದರು. ಸಭೆಯೆಲ್ಲ ವಿಶೇಷ ಉತ್ಸಾಹ

3

ದಿಂದ "ಉಘೇ! ಉಘೇ! ಹೊಯಿಸಳೇಶ್ವರ!" ಎಂದು ಏಕಕಂಠದಿಂದ ಹರ್ಷ ಧ್ವನಿಮಾಡಿತು, ಕರತಾಡನಮಾಡಿತು.

ಇಬ್ಬರು ಕಟ್ಟಳೆ ಮುತ್ತೈದೆಯರು ಮುಂದೆ ಬಂದು ಯಜ್ಞವೇದಿಯ ಸುತ್ತಲೂ ಪುಷ್ಪ ಹರಿದ್ರಾಕ್ಷತೆಗಳನ್ನಿಟ್ಟು, ವಟುವಿನ ಹಣೆಗೆ ಕುಂಕುಮಾಲಂಕಾರಮಾಡಿ, ಪ್ರಭುಗಳ ಹಣೆಗೆ ಕುಂಕುಮವನ್ನಿಡಲು ಹೋದಾಗ, ಪ್ರಭುಗಳು ಲಜ್ಜೆಯಿಂದ ತಲೆತಗ್ಗಿಸಿದುದನ್ನು ಕಂಡು, ಒಬ್ಬ ಅರುಂಧತಿ, ತಾಯಿ ಮಗನನ್ನು ವಿಶ್ವಾಸದಿಂದ ಸಂಬೋಧಿಸುವ ತೆರದಲ್ಲಿ 'ಅಪ್ಪಾಜಿಯವರು ತಲೆಯೆತ್ತಿ ಕುಂಕುಮವನ್ನು ಇಡಿಸಿಕೊಳ್ಳಬೇಕು' ಎಂದರು. ಮಂತ್ರಶಕ್ತಿಗೆ ಒಳಪಟ್ಟ ಜೀವಿಯಂತೆ ಪ್ರಭುಗಳು ತಲೆಯೆತ್ತಿದರು. ಆ ವೃದ್ಧಬ್ರಾಹ್ಮಣಿ ನಸುನಗುತ್ತ ಪ್ರಭುಗಳ ಭ್ರೂಮಧ್ಯವನ್ನು ಕುಂಕುಮದಿಂದ ಅಲಂಕರಿಸಿ, 'ಅಪ್ಪಾಜಿಯವರು ಸಿಟ್ಟುಮಾಡಬಾರದು. ಇದು ಮಂಗಳ ಚಿಹ್ನೆ. ನೀವು ಒಳ್ಳೆಯ ಮಕ್ಕಳು, ನಾವು ನಿಮ್ಮ ತಾಯಿಯಂತೆ' ಎಂದು ಹೇಳಿ ಹೋಗಿ ತಮ್ಮ ಸ್ಥಾನದಲ್ಲಿ ಕುಳಿತರು.

ಆ ಗುಂಪಿನ ಮುತ್ತೈದೆಯರೆಲ್ಲರೂ ಆಕೆಯ ಗಟ್ಟಿತನಕ್ಕೆ ಮೆಚ್ಚಿ, "ಗೌರವ್ವೆಯವರೆ, ನಮ್ಮವ್ವ! ನಿಮ್ಮ ಧೈರ್ಯ ಯಾರಿಗುಂಟು! ರಾಜರನ್ನೆ 'ತಲೆಯೆತ್ತಿ' ಎಂದು ಅಂದುಬಿಟ್ಟರಲ್ಲ!" ಅಂದರು. ಗೌರಮ್ಮನವರು ಮೃದುವಾಗಿ ನಕ್ಕು, "ಹಸುಮಗುವಿನಂತಹ ಹೃದಯ ಅವರದು. ಒಳ್ಳೆ ಪುಣ್ಯಾತ್ಮಗಿತ್ತಿಯ ಕೈಹಿಡಿದು ನೂರು ವರ್ಷ ರಾಜ್ಯನಡಸಿ ನಮ್ಮನ್ನೆಲ್ಲ ಕಾಪಾಡಲಿ" ಎಂದು ಹರಸಿದರು. ಅಂದಿನಿಂದ ಆ ಮಹಾತಾಯಿ ಗೌರವ್ವೆಯವರನ್ನು ಎಲ್ಲ ಪರಿಚಿತ ಮುತ್ತೈದೆಯರೂ "ಏನ್ರಿ, ನಿಮ್ಮ ಮಕ್ಕಳು ಸೌಖ್ಯವೆ?" ಎಂದು ಕುಶಾಲಿನಿಂದ ಮಾತನಾಡಿಸುತ್ತಿದ್ದರು.

ಆ ದಿನ ಗೌರವ್ವೆಯವರು ತಮ್ಮ ಮನೆಗೆ ಬಂದ ಮೇಲೆ, ಮಧ್ಯಾಹ್ನಾನಂತರ, ಅರಮನೆಯ ಅವಸರದವನೊಬ್ಬ, ಒಂದು ದೊಡ್ಡ ಬೆಳ್ಳಿಯ ಪರಾತದಲ್ಲಿ ಉತ್ತಮವಾದ ಚೀನಾಂಬರ, ವಕ್ಷವಸ್ತ್ರ, ಮುತ್ತೈದೆ ಸಾವಿತ್ರಿ ಅಲಂಕಾರಗಳು, ಬೆಳ್ಳಿಯ ಭರಣಿಗಳಲ್ಲಿ ಕುಂಕುಮ, ಅರಿಸಿನ, ಚಂದನದ್ರವ್ಯ, ತಾಂಬೂಲ ಎಲ್ಲವನ್ನೂ ತಂದು, 'ಒಪ್ಪಿಸಿ ಬಾ ಎಂದು ಪ್ರಭುಗಳ ಅಪ್ಪಣೆಯಾಯಿತು' ಎಂದು ಹೇಳಿ, ಒಪ್ಪಿಸಿ, ನಮಸ್ಕರಿಸಿ, ಅರಮನೆಗೆ ಹಿಂದಿರುಗಿದ.

ಅದೆಲ್ಲವನ್ನು ಕಂಡು ಗೌರವ್ವೆಗೆ ಉಸಿರುಕಟ್ಟಿದಂತಾಯ್ತು. ಆನಂದ ದಿಂದ ತಟ್ಟೆಯನ್ನು ಒಳಕ್ಕೆ ತೆಗೆದುಕೊಂಡು ಹೋಗಿ ನೋಡಿದರು. ರಾಜ ವಾಡೆಯವರು ಮಾತ್ರ ಉಡಲು ಯೋಗ್ಯವಾದ ಚೀನಾಂಬರವನ್ನು ನೋಡುತ್ತ ಮೇಲಕ್ಕೆತ್ತಿದಾಗ, ಕೆಳಗೆ ಓಲೆ ಒಂದು ಕಂಡಿತು. ಆದರಲ್ಲಿ ಹೀಗೆ ಒಕ್ಕಣಿ ಸಿತ್ತು: "ಮಾತೃಶ್ರೀಯವರಿಗೆ ಕುಮಾರನ ಧನ್ಯಪ್ರಣಾಮಗಳು . . . ವಿಷ್ಣು ವರ್ಧನ" ಎಂದು. ಅದನ್ನು ಓದಿನೋಡಿ, ಗೌರವ್ವೆಯವರಿಗೆ ಹೃದಯ ಕ್ರಿಯೆಯೆ ನಿಂತುಹೋದಹಾಗಾಯಿತು. "ಅಪ್ಪಾಜಿ, ತಲೆಯೆತ್ತಿ . . ." ಎಂದ ಆ ಮುತ್ತಿನಂತಹ ಮಾತುಗಳಿಗೆ ಮನ್ನಣೆಯಿದು.

§

ಕಲ್ಯಾಣಮಂಟಪದಲ್ಲಿ ಹವನಹೋಮಾದಿಗಳು ಸಾಂಗವಾಗಿ ನಡೆದವು. ವಟುವಿಗೆ ಮೌಂಜೀಬಂಧ, ಯಜ್ಞೋಪವೀತಧಾರಣ, ಬ್ರಹ್ಮೋಪದೇಶಗಳು ನಡೆದವು.

ಪುರೋಹಿತರು ಪ್ರಭುಗಳ ಕಿವಿಯಲ್ಲಿ ಉಸಿರಿದ ಗಾಯತ್ರೀ ಮಹಾ ಮಂತ್ರಗಳನ್ನು ಪ್ರಭುಗಳು ವಟುವಿನ ಕಿವಿಯಲ್ಲಿ ಉಪದೇಶಿಸಿದರು. ಕೇಳಿಸಿ ಕೊಂಡ ಆ ಮಹಾಮಂತ್ರಗಳನ್ನು ವಟು ಸ್ವರೋಚ್ಚಾರಪೂರ್ವಕ ಸಿದ್ಧಿಸಿ ಕೊಂಡನು. ಬಳಿಕ ಮಹಾಶೀರ್ವಾದ, ಶಾಂತಿಪ್ರವಚನ ಆದವು.

ತರುವಾಯ ವಟು ಅಗ್ನಿಗೆ ಬಲವಂದು ಎರಗಿ, ಗುರುಪುರೋಹಿತರುಗಳಿಗೆ, ಪಿತೃಸಮರಾದ ಪ್ರಭುಗಳಿಗೆ ಸಾಷ್ಟಾಂಗಪ್ರಣಾಮಗಳನ್ನು ಮಾಡಿ, ಅನಂತರ ಸಮೀಪದಲ್ಲೆ ಸುಖಾಸನದಲ್ಲಿ ಕುಳಿತು, ಎಲ್ಲವನ್ನೂ ಸಂತೋಷದಿಂದ ಅವಲೋಕಿಸುತ್ತಿದ್ದ ರಾಜಮಾತೆಯ ಬಳಿಗೆ ಬಂದು ಸಾಷ್ಟಾಂಗಪ್ರಣಾಮ ಮಾಡಿ, ಹಾಕಿಕೊಂಡಿದ್ದ ಜೋಳಿಗೆಯನ್ನೊಡ್ಡಿ "ಭಿಕ್ಷಾಂ ಭವತಿ ದೇಹಿ" ಎಂದ. ರಾಜಮಾತೆ ಸಂತೋಷದಿಂದ ನಗುತ್ತ ರಜತಪಾತ್ರೆಯಲ್ಲಿ ಅಕ್ಕಿಯನ್ನು ತುಂಬಿ ತುಂಬಿ ವಟುವಿನ ಜೋಳಿಗೆಗೆ ಸುರಿದರು. ಅನಂತರ ವಟುವನ್ನು ಎರಡು ಕೈಗಳಿಂದಲೂ ಬಳಿಗೆ ಎಳೆದುಕೊಂಡು, ಬಿಗಿದಪ್ಪಿ, ನೆತ್ತಿಯನ್ನು ಆಘ್ರಾಣಿಸಿ, ಹಾಲುಗಲ್ಲವನ್ನು ಮೃದುವಾಗಿ ಅಲುಗಿಸಿ, 'ಮಹಾವಿಷ್ಣುವಿನಂತೆ ನೀನಾಗು' ಎಂದು ಹರಸಿದರು. ಸಭೆಯವರೆಲ್ಲ ಆನಂದದಿಂದ ಹರ್ಷಧ್ವನಿಗೈದರು.

ಅನಂತರ ವಟುವು ಗಂಗರಾಜರಿಗೂ ಇತರ ಪ್ರಧಾನರಿಗೂ ರಾಜ ಸಂಬಂಧಿಕರಿಗೂ ನಮಸ್ಕಾರಮಾಡಿ ಅವರ ಆಶೀರ್ವಾದಗಳನ್ನು ಪಡೆದನು.

ಗಂಗರಾಜರು ತಮ್ಮ ಸ್ಥಾನದಿಂದ ಎದ್ದು ಯಜ್ಞವೇದಿಯ ಸಮೀಪಕ್ಕೆ ಬಂದು ಸಭೆಗೆ ವಂದಿಸಿ, ಸದಸ್ಸನ್ನುದ್ದೇಶಿಸಿ, "ಮಹಾಜನರು ಸಾವಧಾನದಿಂದ ನಾನು ಬಿನ್ನವಿಸಿಕೊಳ್ಳುವುದನ್ನು ಆಲಿಸಬೇಕು. ಈ ಉತ್ಸವ ಸಮಯದಲ್ಲಿ ಪ್ರಭುಗಳು, ವಟುವಿನ ಪೂಜ್ಯಪಿತರೂ ಪೂಜ್ಯಮಾತೆಯರೂ ಆದ ಶ್ರೀ ಚಿನ್ನಮ ದಂಡಾಧೀಶ, ಮಹಾಸತಿ ಚಂದಲವ್ವೆ ಇವರುಗಳನ್ನು ನೆನಸಿಕೊಂಡು, ಹಿಂದೆ ಅವರು ಪಡೆದಿದ್ದ 'ಇಮ್ಮಡಿ ದಂಡಾಧೀಶ' ನಾಯಕತ್ವವನ್ನು ಆದರೊಡನೆ ಸಲ್ಲುವ ಸಕಲ ಮರ್ಯಾದೆಗಳೊಡನೆ ವಟುವಿಗೆ ಅನುಗ್ರಹಿಸಿರುವರು. ವಟುವಿನ ಪೂಜ್ಯಪಿತರು ನಮ್ಮ ನಾಡಿಗೆ ಎಷ್ಟು ಉತ್ತಮ ಸೇವೆಯನ್ನು ಸಲ್ಲಿಸಿದರೋ, ಅದಕ್ಕೆ ಇಮ್ಮಡಿಯಷ್ಟು ಸೇವೆಯನ್ನು ಸಲ್ಲಿಸಲು ಕುವರ ವಿಷ್ಣುವಿಗೆ ಧೈರ್ಯ ಶಕ್ತಿ ಸಾಹಸ ಆಯುರಾರೋಗ್ಯಗಳನ್ನು ದೇವರು ಕರುಣಿಸಲಿ" ಎಂದು ಪ್ರಾರ್ಥನೆಮಾಡಿ "ನಮ್ಮ, ನಿಮ್ಮ, ಎಲ್ಲರ ಕುವರನಾದ ವಿಷ್ಣುವಿಗೆ ಪ್ರಭುಗಳು ಕರುಣಿಸಿರುವ ಈ ಸುವರ್ಣದಂಡವನ್ನು ಒಪ್ಪಿಸುತ್ತಿದ್ದೇನೆ. ಇದಕ್ಕೆ ಮಹಾಜನರ ಅನುಮತಿಯನ್ನು ಅಪೇಕ್ಷಿಸುತ್ತೇನೆ" ಎಂದರು. ಸಭೆಯವರೆಲ್ಲ ಮಹಾ ಸಂತೋಷದಿಂದ "ಉಘೇ! ಉಘೇ! ಉಘೇ ವಿಷ್ಣುವರ್ಧನಮಹೀಪಾಲ! ಉಘೇ ಕುವರವಿಷ್ಣು! ಉಘೇ!" ಎಂದು ಕೂಗಿದರು. ಗಂಗರಾಜರು ಎರಡು ಸಿಂಹದ ತಲೆಗಳುಳ್ಳ ಸುವರ್ಣದಂಡವನ್ನು ವಟುವಿಗೆ ಪ್ರಭುಗಳ ಪರವಾಗಿ, ಪ್ರಜೆಗಳ ಪರವಾಗಿ ಒಪ್ಪಿಸಿದರು. ವಟು ಅದನ್ನು ಆದರದಿಂದ ಸಂತೋಷದಿಂದ ತನ್ನ ಎರಡು ಕೈಗಳಿಂದಲೂ ಸ್ವಾಗತಿಸಿ, ಕಣ್ಣಿಗೊತ್ತಿಕೊಂಡು, ಅದನ್ನು ಸಿಂಹಾಸನದ ಬಳಿಗೆ ಕೊಂಡುಹೋಗಿ ಸಿಂಹಾಸನದ ಪ್ರಥಮಪಾದಪೀಠದಲ್ಲಿರಿಸಿ ದೀರ್ಘದಂಡಪ್ರಣಾಮವನ್ನು ಮಾಡಿದ. ಹಾಗೆ ಮಾಡಿದ್ದರಲ್ಲಿ, "ನನ್ನ ಜೀವ, ನನ್ನ ಸೇವೆ ಎಲ್ಲವೂ ರಾಜ್ಯಕ್ಕೆ, ರಾಜನಿಗೆ ಅರ್ಪಣೆ" ಎಂಬ ಅರ್ಥವಿತ್ತು.

ಈ ಗಂಭೀರವಾದ ಕುಲಸಂಪನ್ನತೆಯ ಉನ್ನತ ನಡವಳಿಯನ್ನು ಕಂಡು ಗಂಗರಾಜರಾದಿಯಾಗಿ, ಅಲ್ಲಿದ್ದ ಎಲ್ಲರಿಗೂ ಹೃದಯ ಆನಂದದಿಂದ ಉಬ್ಬಿತು. ವಟುವನ್ನು ಎಲ್ಲರೂ ಬಾಚಿ ತಬ್ಬಿಕೊಳ್ಳುವುದಕ್ಕೆ ಆಶೆಪಟ್ಟರು; ಮಹಾ ಸಂತೋಷದಿಂದ "ಕುವರ ವಿಷ್ಣು ಯೋಗ್ಯಪುತ್ರ, ಧೀಮಂತ, ಸತ್ತ್ವಶಾಲಿ"

ಎಂದು ಕೂಗಿದರು. ಪ್ರಭುಗಳ, ರಾಜಮಾತೆಯವರ, ಗಂಗರಾಜರ ಕಣ್ಣು ಗಳಿಂದ ಆನಂದಬಾಷ್ಪ ಉಕ್ಕಿ ಹರಿಯಿತು.

ವಟು ಕೈಗಳನ್ನು ಜೋಡಿಸಿ ವಿನಯದಿಂದ ಸದಸ್ಸಿಗೆ ಕೈಮುಗಿದ. ಸಭೆಯವರಿಗೆಲ್ಲ ವಟು ಕಂಡುಬರಲೆಂದು ಪ್ರಭುಗಳು ಅವನನ್ನು ತಮ್ಮ ಎರಡು ಕೈಗಳಿಂದಲೂ ಲಘುವಾಗಿ ಮೇಲಕ್ಕೆ ಎತ್ತಿಹಿಡಿದುಕೊಂಡರು. ವಟು ಲಜ್ಜೆಯಿಂದ ತಲೆ ಬಗ್ಗಿಸಿ ಸಭೆಗೆ ಮತ್ತೆ ನಮಸ್ಕಾರಮಾಡಿದ.

ಸಭೆಯಲ್ಲಿ ಫಲ ತಾಂಬೂಲಾದಿಗಳು ವಿನಿಯೋಗವಾಗುತ್ತಿರುವಾಗ ಗಂಗರಾಜರು ಮುಂದೆ, ಎರಡು ಹೆಜ್ಜೆ ಹಿಂದೆ ವಟುವನ್ನು ನಡಸಿಕೊಂಡು ಪ್ರಭುಗಳು, ಅವರ ಹಿಂದೆ ಹೇಮಾದ್ರಿಗಳೂ ಇತರ ಸಚಿವರೂ, ಸಭೆಯಲ್ಲಿದ್ದ ರಾಜ್ಯಾಧಿಕಾರಿಗಳಿಂದ, ಮಹಾಜನರಿಂದ ವಟುವಿಗೆ ಆಶೀರ್ವಾದಗಳನ್ನು ಕೊಡಿಸುತ್ತ ನಡೆದರು. "ಇವರು ದೇವಶಕ್ತಿಪಂಡಿತರು, ನಮ್ಮ ಗುರುವರ್ಗದವರು. ನಮಸ್ಕರಿಸು . . . ಇವರು ದೇವಶಕ್ತಿಪಂಡಿತರ ಹಿರಿಯ ಮಕ್ಕಳು ವಿದ್ಯಾಭರಣ ಪಂಡಿತರು . . . ಇವರು ಅವರ ಪತ್ನಿ ಪದ್ಮಲಾದೇವಿಯವರು. ನಮಸ್ಕಾರಮಾಡು . . . ಇವರು ತೇಜೋರಾಶಿ ಪಂಡಿತರು, ಅವರ ಪತ್ನಿ ಬಾಗಣಬ್ಬೆಯವರು. ಆಶೀರ್ವಾದ ಪಡೆ . . . ಈ ಹಿರಿಯರು ಧರ್ಮರಾಶಿ ಪಂಡಿತರು, ಇವರ ತಮ್ಮದಿರು ಕ್ರಿಯಾಶಕ್ತಿಪಂಡಿತರು. ನಮಸ್ಕಾರಮಾಡು . . . ಈ ವಿಪ್ರಶ್ರೇಷ್ಠರು ಜನಾರ್ದನಪಂಡಿತರು, ತ್ರಿಕಾಲಜ್ಞರು. ಪ್ರಣಾಮ ಮಾಡು . . . ಇವರು ಪಂಡಿತ ಪೆರುಮಲೆಯವರು. ಮಹಾಯೋಗಿಗಳು, ನಮ್ಮ ಗುರುಗಳು. ಇವರು ನಿನ್ನನ್ನು ಚೆನ್ನಾಗಿ ಆಶೀರ್ವದಿಸಲಿ . . . ಇವರು ನಾಗಭಟ್ಟ ವೈಯಾಕರಣಿಗಳು, ಇವರ ಪತ್ನಿ ಪದ್ಮಾಸನೀದೇವಿಯವರು, ಅನುಗ್ರಹ ಪಡೆ . . . ಇವರು ವೀರದೇವ ಸರ್ವಾಧಿಕಾರಿಗಳು, ಅವರ ಪತ್ನಿ ನಾಗಲೆದೇವಿಯವರು. ನಮಸ್ಕಾರಮಾಡು . . . ಇವರು ಅಚ್ಯುತಧರ್ಮಾಧೀಶರು, ಅವರ ಪತ್ನಿ ಶ್ರೀಮತಿಯವರು, ಪ್ರಣಾಮಮಾಡು . . . ಇವರು ಮಾಧವ ದಣಾಯಕರು, ವಿಪ್ರವರ್ಯರು. ಧನುರ್ವೇದ ಇವರು ದಾನಕೊಟ್ಟರೆ ಉಂಟು. ನಮಸ್ಕಾರ ಮಾಡು. ನಿನ್ನನ್ನು ಚೆನ್ನಾಗಿ ಅನುಗ್ರಹಿಸಲಿ . . ."

ಪ್ರಭುಗಳೂ ಗಂಗರಾಜರೂ ಹೀಗೆ ವಟುವಿಗೆ ತಮ್ಮ ರಾಜ್ಯಶ್ರೀಗಳನ್ನು ಪರಿಚಯಮಾಡಿಕೊಡುತ್ತ, ಅವರಿಂದ ವಟುವಿಗೆ ಆಶೀರ್ವಾದಗಳನ್ನು

ಕೊಡಿಸುತ್ತ, ಮುಂದೆ ಬರುತ್ತಿರುವಾಗ ಮಾರಸಿಂಗಮಯ್ಯನವರು ಇದ್ದಲ್ಲಿಗೆ ಬಂದರು.

೩

ಶಾಂತಲೆ ಅರಮನೆಗೆ ಹಿಂದೊಮ್ಮೆ ಬಂದಿದ್ದಳಾದರೂ, ವಿಶಾಲವಾದ, ವೈಭವಯುಕ್ತವಾದ, ವಸ್ತ್ರಾಭರಣಭೂಷಿತರಾದ ಮಹಾಜನರಿಂದ, ಅಧಿಕಾರ ವರ್ಗದವರಿಂದ ಕಿಕ್ಕಿರಿದ ಈ ಓಲಗಶಾಲೆಯನ್ನು ನೋಡಿರಲಿಲ್ಲ. ಪುರಾಣ ಗಳಲ್ಲಿ ಓದಿದ್ದ ಮಹೇಂದ್ರನ ಒಡ್ಡೋಲಗಶಾಲೆಯನ್ನು ಸರಿತೂಗಬಲ್ಲ ಆ ಹೊಯಿಸಳ ರಾಜೇಂದ್ರನ ಓಲಗಶಾಲೆಯನ್ನು ಕಂಡು ಆಶ್ಚರ್ಯಭರಿತಳಾದಳು. ಭಾವನಾಜೀವಿಯೂ ರಸಾತ್ಮಿಕೆಯೂ ಆದ ಆಕೆ ತಂದೆತಾಯಿಗಳೊಡಗೂಡಿ ಆ ಮಹಾವೈಭವದ ರಾಜಸಭೆಗೆ ಕಾಲಿಟ್ಟೊಡನೆಯೇ ಆನಂದಪುಳಕಿತಳಾದಳು. ಮುಂದಿನ ಮಂಗಳಸೂಚಕಗಳೆಂಬಂತೆ ಆಗ ಮಂಗಳವಾದ್ಯಗಳು ಮೊಳಗಿದವು. ಮುತ್ತೈದೆಯರು ಎದುರಿಗೆ ಬಂದರು.

ಈ ಮಂಗಳ ಉತ್ಸವಕ್ಕೆ ಶಾಂತಲೆ ತನ್ನ ಪ್ರಿಯಸಖಿ ಲಕ್ಷ್ಮಿಯನ್ನೂ ತನ್ನೊಡನೆ ಕರೆದುತಂದಿದ್ದಳು. ಲಕ್ಷ್ಮಿಯ ತಂದೆ ವೇದಿಯ ಮೇಲೆ ವಿದ್ವ ದ್ಗೋಷ್ಠಿಯಲ್ಲಿ ಕುಳಿತಿದ್ದರು.

ಅಂದಿನ ಉತ್ಸವಕ್ಕೆ ಒಸಗೆ ಬಂದಿದೆಯೆಂದು ಶಾಂತಲೆಗೆ ಹಿಂದಿನ ದಿನವೇ ತಿಳಿದಿದ್ದಿತು. ತಾಯಿ ಮಾಚಿಕಬ್ಬೆ ಹೇಳಿದ್ದರು: "ಮಗು, ನಾಳೆ ಬೆಳಗಾಗುವ ಮೊದಲೆ ಎದ್ದು ಮಜ್ಜನ ಮುಗಿಸಿ, ಶಾರದೆಯನ್ನು ಪೂಜೆ ಮಾಡಿ, ನಿನಗೆ ಮನವೊಪ್ಪುವ ವಸ್ತ್ರಭೂಷಣಗಳನ್ನು ತೊಟ್ಟು ಸಿದ್ಧಳಾಗು. ಮುಹೂರ್ತದ ಸಮಯಕ್ಕೆ ಮೊದಲೆ ಅರಮನೆಯಲ್ಲಿ ಇರಬೇಕು" ಎಂದು.

ಶಾಂತಲೆ ಆ ರಾತ್ರಿ ಬೇಗನೆ ಮಲಗಿದಳು, ನಿದ್ದೆ ಬರಲಿಲ್ಲ. ಗಂಟೆಗಳು ಕಳೆದುಹೋದರೂ ನಿದ್ದೆ ಬರಲೇ ಇಲ್ಲ. ಬೆಳಗಾಗುವುದಕ್ಕೆ ಇನ್ನು ಸ್ವಲ್ಪವೆ ಹೊತ್ತಿರುವಾಗ ಸಣ್ಣ ಜೊಂಪು ಹತ್ತಿತು. ಕಣ್ಣುಮುಚ್ಚಿದೊಡನೆಯೆ ಒಂದು ಸುಂದರ ಸ್ವಪ್ನವನ್ನು ಕಂಡಳು.

ನಿದ್ರೆಯಲ್ಲಿದ್ದಂತೆಯೇ ಗಗನದಿಂದ ಇಬ್ಬರು ದೇವತಾಸ್ತ್ರೀಯರು ಇಳಿದು ಬಂದು ಮಲಗಿದ್ದ ಇವಳನ್ನು ಮಂಚದ ಸಮೇತ ಸುಂದರವಾದ ಒಂದು ದಿವ್ಯ ಲೋಕಕ್ಕೆ ಎತ್ತಿಕೊಂಡು ಹೋದರು. ಅಲ್ಲಿ ಶಾಂತಲೆಗೆ ಎಚ್ಚರವಾಯಿತು.

ತಾನು ಅಲ್ಲಿಗೆ ಏಕೆ, ಹೇಗೆ ಬಂದೆನೆಂಬ ಆಶ್ಚರ್ಯವುಂಟಾಯಿತು! ಭಯವಾಗ ಲಿಲ್ಲ! ತಾನು ಅತಿ ರಮಣೀಯವಾದ ಒಂದು ಉದ್ಯಾನದಲ್ಲಿದ್ದೇನೆಂದು ಅರಿತಳು. ಪಕ್ಕದಲ್ಲೇ ಸುವರ್ಣಪುತ್ಥಳಿಗಳಂತೆ ಇಬ್ಬರು ಅಲೌಕಿಕ ಸುಂದರಿಯರು ಮಂದ ಹಾಸದಿಂದ ನಿಂತಿರುವುದನ್ನು ಕಂಡಳು.

ತಮ್ಮ ನಳಿತೋಳ್ಗಳಿಂದ ಅವರು ಶಾಂತಲೆಯನ್ನು ಎಬ್ಬಿಸಿದರು. ಅವರ ಮಂದಹಾಸ, ವಿನಯ, ಪ್ರೇಮಪೂರ್ಣನಯನಗಳು, ಸುತ್ತಲಿನ ಶಾಂತತೆ ಎಲ್ಲದರಿಂದ, ಶಾಂತಲೆಗೆ 'ಈ ಸುರಸುಂದರಿಯರು ನನ್ನ ಶ್ರೇಯಃಕಾಂಕ್ಷಿಗಳೇ' ಎಂಬ ಭರವಸೆ ಬಂದಿತು. ಸುತ್ತಲೂ ನೋಡಿದಳು. ಇರುವ ವನ ಇಂದ್ರನ ನಂದನದಂತಿದೆ. ಸಮಯ ವಸಂತಋತುವಿನಂತೆ ಇದೆ. ವೃಕ್ಷಲತೆಗಳೆಲ್ಲ ಹೊಸ ಚೆಂದಳಿರ ಉಡುಗೆಯಿಂದೊಪ್ಪಿವೆ. ಹಲವು ಹೂಗಿಡಗಳು ಪುಷ್ಪಗಳ ಭಾರದಿಂದ ಉಂಟಾದ ಆಯಾಸದಿಂದ ಸೌರಭದ ಮೇಲುಸಿರನ್ನು ಬಿಡುತ್ತಿವೆ. ಬಾಲಭಾಸ್ಕರನು ಪೂರ್ವಾಕಾಶದಲ್ಲಿ ಮಹಾಬಿಂಬವಾಗಿ ಉದಯಿಸುತ್ತಿದ್ದಾನೆ. ಇಂತಹ ಉದಯರವಿಚಂದ್ರಿಕೆಯನ್ನು ಶಾಂತಲೆ ಹಿಂದೆಂದೂ ಅನುಭವಿಸಿರಲಿಲ್ಲ. ಬಾಲಸೂರ್ಯನ ಶೀತಲಕಿರಣಗಳು ಆಗತಾನೆ ಅರಳುತ್ತಿದ್ದ ಬಿಳಿತಾವರೆಗಳಿಗೆ ಚಿನ್ನದ ಮೆರುಗನ್ನು ಇಟ್ಟವು. ಮೃದುವಾಗಿ ಬೀಸುತ್ತಿದ್ದ ತಂಗಾಳಿ, ರಾತ್ರಿಯೆಲ್ಲ ನಿದ್ದೆಯಿಲ್ಲದೆ ಉಷ್ಣವಡೆದಿದ್ದ ಶಾಂತಲೆಯ ಶೋಭನಾಂಗಗಳಿಗೆ ತಂಪನ್ನು ಕೊಟ್ಟಿತು. ಅದೇನು ಸ್ವರ್ಗವೊ! ಇಂದ್ರನ ಉದ್ಯಾನವೊ! ಎಂದು ಶಾಂತಲೆ ಭ್ರಮೆಗೊಂಡಳು.

ಆ ದೇವತಾಸ್ತ್ರೀಯರು ಶಾಂತಲೆಯನ್ನು ಎಬ್ಬಿಸಿ ಸುಂದರವಾದ ಮಜ್ಜನಗೃಹಕ್ಕೆ ಕರೆದೊಯ್ದರು. ಉಷ್ಣವೂ ಅಲ್ಲದ ಶೀತಲವೂ ಅಲ್ಲದ ದಿವ್ಯಪರಿಮಳಯುಕ್ತವಾದ ನಿರ್ಮಲೋದಕದಲ್ಲಿ ಶಾಂತಲೆಗೆ ಮಂಗಳಸ್ನಾನ ಮಾಡಿಸಿದರು. ಮಂಜಿನಂತೆ ಶುಭ್ರವಾದ ಲಘುವಾದ ನಯವಾದ ಉಡುಗೆ ಗಳನ್ನು ಉಡಿಸಿದರು. ನೀಳ ನೀಲಕುಂತಲವನ್ನು ಸುಂದರವಾಗಿ ಹೆಣೆದು, ಸೊಬಗಿನ ಮುಡಿ ಕಟ್ಟಿ, ಶುಭ್ರವಾದ ಸುರಗಿಪುಷ್ಪಗಳ ದಂಡೆಯಿಂದ ಕಬರಿ ಯನ್ನು ಅಲಂಕರಿಸಿದರು. ಸೊಗಯಿಸುವ ಕರ್ಣಾವತಂಸ, ಕಂಕಣವಲಯ ಗಳನ್ನು ತೊಡಿಸಿದರು. ಚತುಸ್ಸಮುದ್ರಸಾರಭೂತವಾದ ಮುಕ್ತಾಹಾರಗಳಿಂದ ಕಂಠವನ್ನೂ ತುಂಬಿದ ಎದೆಯನ್ನೂ ಸೊಬಗುಗೊಳಿಸಿದರು. ಮುತ್ತು, ಪಚ್ಚೆ,

ರತ್ನ, ವೈಡೂರ್ಯಗಳಿಂದ ಹೊಮ್ಮಿದ ಉಡ್ಯಾಣ, ಕಟಿಬಂಧ ಆಭರಣಗಳನ್ನು ತೊಡಿಸಿದರು. ಕಣ್ಣೋಗೆಗಳಿಗೆ ಕಪ್ಪಿಟ್ಟು, ಶುಕನನ್ನು ಜಯಿಸುವ ಸಾಮರ್ಥ್ಯ ವನ್ನು ಅವುಗಳಿಗೆ ಕೊಟ್ಟರು. ಕೊಳದೊಳಗಿದ್ದ ಕೆಂದಾವರೆ ತಾನಾಗಿಯೇ ಎದ್ದುಬಂದು ಶಾಂತಲೆಯ ಕಪೋಲ, ಚುಬುಕಗಳನ್ನು ಮೃದುವಾಗಿ ಒತ್ತಿ ತನ್ನ ವರ್ಣವನ್ನು ಅಲ್ಲಿ ಉಳಿಸಿಹೋಯಿತು. ಉತ್ತಮ ವರ್ಣದ ವಿದ್ರುಮಲತೆ ಸಮುದ್ರಮಧ್ಯದಿಂದ ಎದ್ದುಬಂದು, ಶಾಂತಲೆಯ ಪಲ್ಲವಾಧರಗಳಿಗೆ ತನ್ನ ವರ್ಣ ವನ್ನು ಕೊಟ್ಟುಹೋಯಿತು. ಫಣಿರಾಜನ ಮುಕಟರತ್ನ ಬಂದು ಮುಖಕ್ಕೆ ಮಂಗಳವಾಗಿ, ಆಕಾರಕ್ಕೆ ತಕ್ಕ ಚಿಕ್ಕೆಯಾಗಿ ಹಣೆಗೆ ಸೌಭಾಗ್ಯದ ಅಂಕಿತ ವಾಯಿತು. ನೆಲದಿಂದ ಸುವರ್ಣವೇ ಬಳ್ಳಿಬಳ್ಳಿಯಾಗಿ ಎದ್ದುಬಂದು ಮುದ್ದು ಮುದ್ದಾಗಿ ಹೆಣೆದುಕೊಂಡು ಕೈಕಾಲುಗಳಲ್ಲಿ ಮಿಂಚುವ ಅಲಂಕಾರಗಳಾಗಿ ನಿಂತು ಕೂತವು. ನಂದಿನೀಧೇನು ಬಂದು, ಒಂದು ಸುವರ್ಣಪಾತ್ರೆಯ ತುಂಬ ಕೆಚ್ಚಲ ನೊರೆಹಾಲನ್ನು ಸುರಿಸಿತು. ಹೊಸ ಮಕರಂದವನ್ನು ಹೊತ್ತುತಂದ ದುಂಬಿವಿಂಡು ಅದನ್ನು ಆ ಕ್ಷೀರದಲ್ಲಿ ಸುರಿಸಿಹೋಯಿತು. ದೇವತಾಸ್ತ್ರೀಯರು ಆ ಮಧುಮಿಶ್ರಿತಕ್ಷೀರವನ್ನು ಪ್ರೀತಿಯಿಂದ ಶಾಂತಲೆಗೆ ಕುಡಿಸಿದರು. ಶಾಂತಲೆಗೆ ಆಗ ಅಮೃತವನ್ನೇ ಸವಿದಂತಾಯಿತು. ಮೈಕಾಂತಿ ಚಿನ್ನದಂತೆ ಹೊಳೆಯಿತು. ದೇಹಾದ್ಯಂತ ಅಪೂರ್ವವಾದ ಉಲ್ಲಾಸವೇರ್ಪಟ್ಟಿತು.

ಆಗ ಆ ಸುಂದರವನದ ಮಧ್ಯಭಾಗದಲ್ಲಿ ಮಹಾಕಾಂತಿಯೊಂದು ಹುಟ್ಟಿತು. ಶಾಂತಲೆ ನೋಡುತ್ತಿದ್ದಂತೆಯೆ ಆ ತೇಜೋರಾಶಿ ಒಂದು ಭವ್ಯ ಪುರುಷಾಕೃತಿಯನ್ನು ತಾಳಿತು. ಆ ಮಹಾಪುರುಷನು ಶ್ರೀಮನ್ನಾರಾಯಣ ನಂತೆ ವೀರವರ್ಚಸ್ವಿಯಾಗಿ ಕಂಡುಬಂದನು. ವಿಶಾಲವಕ್ಷನೂ ಮಹಾ ಬಾಹುವೂ ವೀರಸ್ಕಂಧನೂ ಆದ ಆ ಪುರುಷನು ಪ್ರದ್ಯುಮ್ನನಂತೆ ಸುಂದರ ನಾಗಿಯೂ ಕಂಡುಬಂದನು. ಆ ಮಹಾಪುರುಷನು ವಿನಯವಂತನಾಗಿ ಮಂದಸ್ಮಿತನಾಗಿ ಶಾಂತಲೆಯನ್ನು ನೋಡಿದನು.

ಶಾಂತಲೆಯ ಈ ಸುಂದರ ಸ್ವಪ್ನ ಅಲ್ಲಿಗೇ ಕೊನೆಗೊಂಡಿತು. ಆಕೆಯ ಭೌತಶರೀರ ಆಗ ಎಚ್ಚರಗೊಂಡಿತು. ಶಾಂತಲೆ ಕಣ್ತೆರೆದು ನೋಡಿದಳು. ಕಂಡದ್ದು ಕನಸಾಗಿದ್ದರೂ, ಶಾಂತಲೆಯ ಮನಸ್ಸಿಗೆ, ದೇಹಕ್ಕೆ ಆಗಿದ್ದ ಸುಖಾನುಭವ ಮಾತ್ರ ಮಾಯವಾಗಲಿಲ್ಲ. ಅದು ಉಳಿಯಿತು. ರಾತ್ರಿಯೆಲ್ಲ

ನಿದ್ರೆಯಿಲ್ಲದಿದ್ದರೂ, ನಿರಾತಂಕವಾದ ಸುಖದ ನಿದ್ರೆಯಿಂದ ಸಂಪೂರ್ಣ ವಿಶ್ರಾಂತಿ ಪಡೆದು ಎದ್ದವರಂತೆ ಶಾಂತಲೆ ಎದ್ದಳು.

ಶಾಂತಲೆ ಬೇಗನೆ ಹಾಸಿಗೆಬಿಟ್ಟೆದ್ದು ಪ್ರಾರ್ಥವಿಧಿಗಳನ್ನು ಮುಗಿಸಿ, ಮಜ್ಜನಮಾಡಿ, ಉತ್ಕೃಷ್ಟದುಕೂಲಾಲಂಕೃತಳಾಗಿ, ದಿವ್ಯಾಭರಣಭೂಷಿತೆಯಾಗಿ, ಹಾಲ್ಜೇನನ್ನು ಸವಿದು, ಅಚ್ಚಮಲ್ಲಿಗೆಯ ಪುಷ್ಪಗುಚ್ಛವೊಂದನ್ನು ತೆಗೆದುಕೊಂಡು ಶಾರದೆಯ ಗುಡಿಗೆ ಓಡಿದಳು. ಗೆಳತಿ ಲಕ್ಷ್ಮಿ ವೈಭವದ ಉಡುಗೆತೊಡುಗೆಗಳಿಂದ ಅಲಂಕೃತಳಾಗಿ ಮುಂಚೆಯೆ ಬಂದು ಶಾಂತಲೆಗಾಗಿ ಶಾರದೆಯ ಗುಡಿಯಲ್ಲಿ ಕಾದಿದ್ದಳು.

ಶಾಂತಲೆಯ ಮುಖದಲ್ಲಿ ಅಂದು ಒದಗಿದ್ದ ಅಪೂರ್ವ ತೇಜಸ್ಸನ್ನು ಕಂಡು ಲಕ್ಷ್ಮಿ ಆನಂದಪಟ್ಟಳು. ತಂದಿದ್ದ ಪುಷ್ಪಗುಚ್ಛವನ್ನು ಶಾಂತಲೆ ಶಾರದೆಯ ಪಾದಗಳಲ್ಲಿಟ್ಟು, ಧೂಪದೀಪಗಳನ್ನು ಹಚ್ಚಿ, ಭಕ್ತಿಯಿಂದ ಶಾರದೆಗೆ ಮಣಿದಳು. ಲಕ್ಷ್ಮಿಯೂ ಮಣಿದಳು. ಬಳಿಕ ಶಾಂತಲೆ ಪುಷ್ಪಗುಚ್ಛವನ್ನು ತೆಗೆದುಕೊಂಡು ಇಬ್ಭಾಗಮಾಡಿ, ಒಂದನ್ನು ಲಕ್ಷ್ಮಿಯ ತಲೆಗೆ ಮುಡಿಸಿ, ಒಂದನ್ನು ತಾನು ಮುಡಿದಳು. ಗೆಳತಿಯ ಕೈಹಿಡಿದುಕೊಂಡು "ಲಕ್ಷ್ಮಿ, ಹೊತ್ತಾಯಿತಲ್ಲವೆ! ಬಾ, ಅವ್ವೆ ಕಾದಿರಬಹುದು" ಎನ್ನುತ್ತ ನಡೆದುಬಂದು, ಮನೆಯ ಮುಂದೆ ಕಾದು ನಿಂತಿದ್ದ ಮೇನೆಯಲ್ಲಿ ಇಬ್ಬರೂ ಕುಳಿತರು. ಇನ್ನೊಂದು ಮೇನೆಯಲ್ಲಿ ಶಾಂತಲೆಯ ತಂದೆತಾಯಿಗಳಿದ್ದರು. ದೃಢಾಂಗರಾದ ಬೋಯಿಗಳು ಮೇನೆಗಳನ್ನು ಹೊತ್ತು ಅರಮನೆಯ ಓಲಗಶಾಲೆಗೆ ನಡೆದರು.

ಅಷ್ಟುಹೊತ್ತಿಗೆ ಓಲಗಶಾಲೆಯಲ್ಲಿ ಜನ ಕಿಕ್ಕಿರಿದಿದ್ದರು. ಅವಸರದವನೊಬ್ಬ ಆಗ ಮೇನೆಗಳಲ್ಲಿ ಬಂದಿಳಿದವರು ಯಾರೆಂದು ಓಡಿಹೋಗಿ ಹೇಮಾದ್ರಿಗಳಿಗೆ ತಿಳಿಸಿದ. ಹೇಮಾದ್ರಿಗಳು ಆತುರದಿಂದ ಬಂದು, ಅತಿಥಿಗಳನ್ನು ಆದರದಿಂದ ಸ್ವಾಗತಿಸಿ, ಮಾಚಿಕಬ್ಬೆಯವರೊಡನೆ "ನೀವು ಇನ್ನೂ ಬರಲಿಲ್ಲವೆ? ಎಂದು ಗಂಗರಾಜರು ಇದೇ ಈಗ ಕೇಳಿದರು. ಮಗು ಶಾಂತಲೆ ಎಲ್ಲಿ?" ಎಂದು ಪ್ರಶ್ನಿಸಿದರು.

ಮಾಚಿಕಬ್ಬೆ: "ಹೇಮಾದ್ರಿಗಳಿಗೆ ಇಷ್ಟು ಬೇಗ ನೇತ್ರಪಾಟವ ಕಡಮೆಯಾಯಿತೆ! ಇದೋ ಶಾಂತಲೆ. ಇವಳು ಪಂಡಿತ ಪೆರುಮಲೆಯವರ ಮಗಳು ಲಕ್ಷ್ಮಿ, ಶಾಂತಲೆಯ ಗೆಳತಿ."

ಹೇಮಾದ್ರಿಗಳು (ಕಣ್ಣುಜ್ಜಿಕೊಂಡು ಆಶ್ಚರ್ಯದಿಂದ): "ನಿದ್ದೆಯಿಲ್ಲದ ಕಣ್ಣುಗಳು. ಆದರೂ ಶಾಂತಲೆಯನ್ನು ನೋಡಿ ವರ್ಷಗಳಾದವು." (ಶಾಂತಲೆಯನ್ನು ನೋಡಿ) "ವಯಸ್ಸಿನಲ್ಲಿ ಹೆಣ್ಣುಮಕ್ಕಳು ದಿನೇದಿನೇ ವರ್ಧಿಸುತ್ತಾರೆ!" (ಶಾಂತಲೆಯನ್ನು ಕುರಿತು) "ಗುರುತೂ ಮರೆಯಿತೆ ಶಾಂತಲೆ? ಈ ತೋಳುಗಳು ನಿನ್ನನ್ನು ಎಷ್ಟು ಬಾರಿ ಎತ್ತಿಕೊಂಡು ಆಡಿಸಿಲ್ಲ! ಬೆಳೆದು ಸೌಂದರ್ಯಲಹರಿಯಾದ ಮಾತ್ರಕ್ಕೆ ದೊಡ್ಡಯ್ಯನನ್ನು ಮರೆಯಬೇಕೇನು?" (ಶಾಂತಲೆ ನಕ್ಕದ್ದನ್ನು ಕಂಡು) "ಅಯ್ಯೋ! ಇದೆಂತಹ ನಾಚಿಕೆ, ಮಗಳೆ? ಮಾತನಾಡಿಸಲು ಸಹ ನೀನು ನಾಚಿಕೆಪಡುವಷ್ಟು ಹೊಸಬನಾದೆನೆ ನಾನು! ನೀನೂ ಲಕ್ಷ್ಮಿಯೂ ಶ್ರೀದೇವಿ ಭೂದೇವಿಯರಂತೆ ಇರುವಿರಿ. ನಡೆಯಿರಿ, ಈ ಕಡೆ ಜನಸಂದಣಿ ಹೆಚ್ಚು, ಆದ್ದರಿಂದ ಹೀಗೆ ಬನ್ನಿ" ಎನ್ನುತ್ತ ಹೇಮಾದ್ರಿಗಳು ಬೆಳ್ಳಿಯ ಕೋಲಿನವನೊಬ್ಬನನ್ನು ಕರೆದು, "ಡಣಾಯಕ ಮಾರಸಿಂಗಮಯ್ಯನವರನ್ನೂ ಅವರ ಕುಟುಂಬದವರನ್ನೂ ಅವರ ಪೀಠಗಳಿಗೆ ಕರೆದೊಯ್ಯಿ" ಎಂದು ಆಜ್ಞೆಮಾಡಿದರು.

ರಾಜಮಾತೆಯ ಆಯ್ಕೆಗೂ ಕಾರ್ಯಕುಶಲತೆಗೂ ಮನಸ್ಸಿನಲ್ಲಿಯೆ ಮೆಚ್ಚಿಕೊಂಡರು ಹೇಮಾದ್ರಿಗಳು.

ತಮಗಾಗಿ ಏರ್ಪಡಿಸಿಟ್ಟಿದ್ದ ಸುಖಾಸನಗಳ ಜೊತೆಗೆ, ಲಕ್ಷ್ಮಿಗೆ ಇನ್ನೊಂದು ಆಸನವನ್ನೂ ತರಿಸಿಕೊಂಡು, ಮಾರಸಿಂಗಮಯ್ಯ, ಮಾಚಿಕಬ್ಬೆ, ಶಾಂತಲೆ, ಲಕ್ಷ್ಮಿ ಎಲ್ಲರೂ ಕುಳಿತುಕೊಂಡರು.

§

ಕುವರ ವಿಷ್ಣು ಎಲ್ಲರಿಗೂ ನಮಸ್ಕಾರ ಮಾಡಿ ಮಾಡಿ ದಣಿದ. ಆದರೂ ಅಂದಿನ ವಿಶೇಷ ಅತಿಥಿಗಳು ಇನ್ನೂ ಬಹುಜನರಿದ್ದರು.

ಗಂಗರಾಜರೂ, ಅವರ ಹಿಂದೆ ಕುವರ ವಿಷ್ಣುವನ್ನು ನಡಸಿಕೊಂಡು ಪ್ರಭುಗಳೂ, ಅವರ ಹಿಂದೆಯೇ ಹೇಮಾದ್ರಿ, ಅಚ್ಯುತ, ಗೋವಿಂದ, ವೀರದೇವ ಅಮಾತ್ಯರುಗಳೂ ಡಣಾಯಕ ಮಾರಸಿಂಗಮಯ್ಯನವರು ಕುಳಿತಿದ್ದೆಡೆಗೆ ಬಂದರು. ಪ್ರಭುಗಳನ್ನು ಅಷ್ಟು ಹತ್ತಿರದಿಂದ ಶಾಂತಲೆ ಹಿಂದೆ ಎಂದೂ ನೋಡಿರಲಿಲ್ಲ.

ಮಾರಸಿಂಗಮಯ್ಯ, ಮಾಚಿಕಬ್ಬೆ, ಶಾಂತಲೆ, ಲಕ್ಷ್ಮಿ ಎಲ್ಲರೂ ಭಕ್ತಿ ಮರ್ಯಾದೆಗಳಿಂದ ಎದ್ದು ನಿಂತರು. ಶಾಂತಲೆ, ಲಕ್ಷ್ಮಿ ಇಬ್ಬರೂ ಪ್ರಭುಗಳನ್ನು ಚೆನ್ನಾಗಿ ನೋಡಿದರು.

ಶಾಂತಲೆಗೆ 'ನಾನು ಕನಸಿನಲ್ಲಿ ಕಂಡ ದಿವ್ಯಪುರುಷನು ಈತನೇ!' ಎನ್ನಿಸಿತು. ಅಷ್ಟು ಸಾಮ್ಯವಿತ್ತು ಭಾವ, ರೂಪ, ಆಕಾರಗಳಲ್ಲಿ. ಶಾಂತಲೆಗೆ ರೋಮಾಂಚವಾಯಿತು. ಹೃದಯದ ವೇಗ ಇಮ್ಮಡಿಸಿತು. ಲಕ್ಷ್ಮಿಯೂ ಪ್ರಭುಗಳನ್ನು ಚೆನ್ನಾಗಿ ನೋಡಿದಳು. ಪ್ರಭುವೂ ಸಭೆಯಲ್ಲಿದ್ದ ಇತರರನ್ನು ಕಂಡಂತೆಯೆ ಇವರನ್ನು ಕಂಡರಾದರೂ, ಅಗೋಚರವಾದ ದೈವೀಶಕ್ತಿಗಳು ಈ ಸಮಯ, ಸನ್ನಿವೇಶಗಳನ್ನು ಒಡ್ಡಿದ್ದವು.

'ಇವರು ಡಣಾಯಕ ಮಾರಸಿಂಗಮಯ್ಯನವರು. ನಮ್ಮ ಸೈನ್ಯದ ಬಲಗೈಯೇ ಇವರು . . . ಇವರ ಸತಿ ಮಾಚಿಕಬ್ಬೆಯವರು' ಎಂದು ಗಂಗ ರಾಜರೇ ಸ್ವತಃ ವಟು ವಿಷ್ಣುವಿಗೆ ಪರಿಚಯಮಾಡಿಸುತ್ತಿರುವಾಗ, ಪ್ರಭುಗಳು ಮಂದಸ್ಮಿತರಾಗಿ ವಿನಯದಿಂದ ಕೈಜೋಡಿಸಿದರು. ವಟು ಇಬ್ಬರಿಗೂ ನಮ ಸ್ಕಾರಮಾಡಿದ. ಮಾರಸಿಂಗಮಯ್ಯ ಮಾಚಿಕಬ್ಬೆಯವರು ಕುಸುಮಾಕ್ಷತೆಗಳನ್ನು ವಟುವಿನ ತಲೆಯಲ್ಲಿಟ್ಟು 'ಯಶೋವಂತನಾಗು, ಅಪ್ರತಿಮವೀರನಾಗು, ಮಹಾತ್ಯಾಗಿಯಾಗು' ಎಂದು ಹರಸಿದರು.

ಶಾಂತಲೆ ಲಕ್ಷ್ಮಿಯರು ಪ್ರಭುಗಳ ದೃಷ್ಟಿಯನ್ನು ಕ್ಷಣಕಾಲ ಇದಿರು ಗೊಂಡರು. ಅನಂತರ ಸೌಶೀಲ್ಯದ ಲಜ್ಜೆಯಿಂದ ತಲೆ ಬಗ್ಗಿಸಿದರು. ಪೂರ್ವ ಕರ್ಮಾನುಬಂಧವೊ, ದೈವನಿಯಾಮಕವೊ, ಯಾವುದೋ ಅದೃಷ್ಟವಾದ ಶಕ್ತಿ ಆವರವರಿಗೇ ತಿಳಿಯದಂತೆ, ಆವರ ಹೃದಂಪುಗಳಲ್ಲಿ ಅನುರಾಗವನ್ನು ಅಂಕುರ ಮಾಡಿತು.

ಗಂಗರಾಜರೂ ಹೇಮಾದ್ರಿಗಳೂ ರಾಜಮಾತೆಯವರ ಉದ್ದೇಶ ಸಾಧನೆ ಗಾಗಿಯೇ ಈ ಸನ್ನಿವೇಶಕ್ಕೆ ಕಾದಿದ್ದರು. ಪ್ರಭುಗಳ ಮನಸ್ಸನ್ನು ಇವರು ಅರಿತರೋ ಎಂಬಂತೆ ಗಂಗರಾಜರು ಶಾಂತಲೆ ಲಕ್ಷ್ಮಿಯರ ಕಡೆ ತೋರಿಸಿ ಪ್ರಭುಗಳಿಗೆ ಸೂಚಿಸುತ್ತ 'ಈ ಲಾವಣ್ಯವತಿ ಕನ್ಯೆ ಇವರ ಏಕಮಾತ್ರ ಪುತ್ರಿ ಶಾಂತಲೆ; ಈ ಸೌಂದರ್ಯಸಿಧಿ ಕನ್ಯೆ ಶಾಂತಲೆಯ ಗೆಳತಿ ಲಕ್ಷ್ಮಿ, ಪಂಡಿತ ಪೆರುಮಲೆಯವರ ಏಕಮಾತ್ರ ಪುತ್ರಿ' ಎಂದರು.

ಶಾಂತಲೆ ಲಕ್ಷ್ಮಿಯರು ಮತ್ತೊಮ್ಮೆ ಕತ್ತೆತ್ತಿ ಪ್ರಭುಗಳಿಗೆ ಭಕ್ತಿವಿನಯ ಗಳಿಂದ ಕೈಜೋಡಿಸಿ ನಮಿಸಿದರು. ಪ್ರಭುಗಳೂ ಮಂದಸ್ಮಿತರಾಗಿ ಕೈಜೋಡಿ ಸಿದರು. ಕುವರ ವಿಷ್ಣುವೂ ಬಳಿಯೇ ಕೈಜೋಡಿಸಿ ನಿಂತಿದ್ದ. ಶಾಂತಲೆ ವಿಶ್ವಾಸ ದಿಂದ, ತಾಯಿ ಮಗುವನ್ನು ಸೋಂಕಿದಂತೆ, ವಟುವಿನ ತಲೆಯನ್ನೊಮ್ಮೆ ಮೃದುವಾಗಿ ತಡವಿ ತೃಪ್ತಿಪಟ್ಟಳು. ಆ ಸೋಂಕಿನಿಂದ ವಟು ಆಕರ್ಷಿಸಲ್ಪಟ್ಟು ತಲೆಯೆತ್ತಿ ಶಾಂತಲೆಯನ್ನು ನೋಡಿದ. ಶಾಂತಲೆ ಮೃದುವಾಗಿ ನಕ್ಕಳು. ಕುವರ ವಿಷ್ಣುವೂ ಅಷ್ಟೇ ಮೃದುವಾಗಿ ನಕ್ಕನು.

ತಂತ್ರಪಾಲ ಹೇಮಾದ್ರಿಗಳು ಗಂಗರಾಜರನ್ನು ಸಂಬೋಧಿಸಿ 'ಅಣ್ಣಾದಿರು ಸ್ವಲ್ಪ ಗಮನಿಸಬೇಕು. ಮಧ್ಯಾಹ್ನ ಸಮಿಾಪಿಸಿತು. ವಟುವಿಗೂ ಹೆಚ್ಚು ಆಯಾಸವಾಗಿರಬೇಕು. ಮಂಗಳಕಾರ್ಯಗಳು ಇನ್ನೂ ಒಂದೊ, ಎರಡೊ ಉಳಿದಿರಬೇಕು. ಆದಷ್ಟು ಜಾಗ್ರತೆ ಮಾಡಿರಿ' ಎಂದರು. 'ನಾನೂ ಅದನ್ನೇ ಯೋಚಿಸಿದ್ದೆ' ಎಂದು ಉತ್ತರವಿತ್ತರು ಗಂಗರಾಜರು.

ವಟುವಿಗೆ ಆಯಾಸವೇನೋ ಆಗಿತ್ತು. ಉತ್ಸಾಹದಲ್ಲಿ ಅದು ಅವನಿಗೆ ತೋರಲಿಲ್ಲ. ಪುರಸ್ಕರಿಸಬೇಕಾದ ಪಟ್ಟಣಿಗರು, ಶ್ರೇಷ್ಠಿಗಳು, ವ್ಯಾಪಾರದ ನಂಬಿಯಾರುಗಳು, ಜೈನ ಹರದರು, ಇತರರು, ಬಹುಜನರಿದ್ದರು. ಗಂಗ ರಾಜರು ತಮ್ಮ ಕೈಯನ್ನು ಮೇಲೆತ್ತಿ ಸುತ್ತ ಸಭೆಯನ್ನು ನೋಡಿದರು. ಮಹಾ ಮಾತ್ಯರು ಮಾತನಾಡಲು ಇಚ್ಛಿಸುತ್ತಿರುವರೆಂದು ತಿಳಿದು ಸಭೆ ನಿಶ್ಶಬ್ದವಾಯಿತು. ಗಂಗರಾಜರು ಪ್ರಸನ್ನವದನರಾಗಿ ಹತ್ತಿರವೇ ಇದ್ದ ಆಸನವೊಂದನ್ನು ಏರಿ ನಿಂತು ಹೀಗೆಂದರು: 'ನಮ್ಮ ಪ್ರೀತಿಯ ಪ್ರಜೆಗಳು ನನ್ನ ಅರಿಕೆಯನ್ನು ದಯವಿಟ್ಟು ಗಮನಿಸಬೇಕು. ನಿರ್ವಾಹವಿಲ್ಲದೆ ಹೇಳಬೇಕಾಗಿದೆ . . . ವಟು ವಿಷ್ಣುವಿಗೆ ಇಷ್ಟಕ್ಕೇ ಹೆಚ್ಚು ದೇಹಶ್ರಮವಾಗಿದೆ. ಬಾಲಕನಾದುದರಿಂದ ತಮ್ಮ ಆಶೀರ್ವಾದಗಳನ್ನು ಪ್ರತ್ಯೇಕ ಪ್ರತ್ಯೇಕ ಪಡೆಯಲು ಅಸಮರ್ಥನಾಗಿದ್ದಾನೆ. ಮಧ್ಯಾಹ್ನವೂ ಸಮಿಾಪಿಸಿತು. ಆದ್ದರಿಂದ ವಟು ತಮ್ಮೆಲ್ಲರಿಗೂ ಒಟ್ಟಿಗೆ ನಮ ಸ್ಕಾರಮಾಡುತ್ತಾನೆ. ತಾವೆಲ್ಲರೂ ವಟುವಿಗೂ ಪ್ರಭುಗಳಿಗೂ ಕಲ್ಯಾಣವನ್ನು ಕೋರಿ, ತಮ್ಮ ಆಶೀರ್ವಾದಗಳನ್ನೂ ಗೌರವಗಳನ್ನೂ ಅರ್ಪಿಸಬೇಕೆಂದು ಅರಿಕೆ ಮಾಡಿಕೊಳ್ಳುತ್ತಿದ್ದೇನೆ' ಎಂದು ಹೇಳಿ ನಮಸ್ಕರಿಸಿ ಕೆಳಗಿಳಿದರು.

ಪ್ರಭುಗಳೂ ವಟುವೂ ಆಗ ವೇದಿಕೆಯ ಮೇಲೇರಿಬಂದು ಎಲ್ಲರಿಗೂ

ಕಾಣಿಸಿಕೊಂಡರು. ವಟು ಸದಸ್ಸಿಗೆ ತಲೆಬಾಗಿದ. ಪ್ರಭುಗಳು ಹಸನ್ಮುಖರಾಗಿ ಸದಸ್ಸಿಗೆ ತಲೆ ಬಾಗಿದರು. 'ಉಘೇ! ಹೊಯಿಸಳೇಶ್ವರ! ಉಘೇ! ಕುವರ ವಿಷ್ಣು! ಉಘೇ! ಉಘೇ!' ಎಂದು ಆನಂದದಿಂದ ಪ್ರಜೆಗಳೆಲ್ಲ ಕೂಗಿದರು. ಪ್ರಜೆಗಳ ಉತ್ಸಾಹ ಪ್ರಭುಗಳ ಸಂತೋಷವಾಯಿತು.

ವೇದಿಕೆಯಿಂದಿಳಿದು ರಾಜರೂ ವಟುವೂ ಹೋಮಕುಂಡದ ಕಡೆಗೆ ನಡೆದರು. ಹೋಮಾಗ್ನಿ ಮತ್ತೊಮ್ಮೆ ಆಜ್ಯಾಹುತಿಯಿಂದ ಪ್ರಜ್ವಲಿಸಿತು, ನವಗ್ರಹಹೋಮ, ಶೇಷಹೋಮಗಳಾದುವು. ನೂರಾರು ಬ್ರಾಹ್ಮಣರು ಏಕ ಕಂಠದಿಂದ ಶಾಂತಿ ಸ್ವಸ್ತಿವಾಚನಗಳನ್ನು ಸುಶ್ರಾವ್ಯವಾಗಿ ಘೋಷಿಸಿದರು.

ಅನಂತರ ಗಂಗರಾಜರು ಮಹಾವೀರಜಿನನ ವಂಶಸಂಬಂಧಿಕರೂ ಷಟ್ ಕರ್ಮ್ಮಷಣ್ಮುಖ, ವಾದೀಭಸಿಂಹ, ತಾರ್ಕಿಕಚಕ್ರವರ್ತಿ ಎಂಬ ಅನೇಕ ಬಿರುದು ಗಳನ್ನು ಹೊತ್ತವರೂ ಆದ ಶ್ರೀಪಾಲತ್ರೈವಿದ್ಯದೇವರನ್ನು ಮರ್‍ಯಾದೆಯಿಂದ ಕರೆದುತಂದು, ಹೋಮಕುಂಡದ ಬಳಿ ಒಂದು ರಜತಾಸನದಲ್ಲಿ ಕುಳ್ಳಿರಿಸಿದರು. ಇವರಲ್ಲಿಯೆ ಕುವರ ವಿಷ್ಣು ಶ್ರೇಷ್ಠ ವಿದ್ಯೆಗಳನ್ನು ಕಲಿಯಬೇಕೆಂದು ರಾಜಮಾತೆ ಅಪೇಕ್ಷಿಸಿದ್ದರು. ಬೆಳ್ಳಿಯ ಹರಿವಾಣದಲ್ಲಿ ಗುರುಗಳ ಪಾದಗಳನ್ನು ವಟು ತೊಳೆದ; ಸುವರ್ಣಪುಷ್ಪಗಳಿಂದ ಅರ್ಚಿಸಿ ನಮಸ್ಕರಿಸಿದ. ಪ್ರಭುಗಳು ವಟು ವನ್ನು ಗುರುಗಳ ಬಳಿ ವಿದ್ಯಾಭ್ಯಾಸಕ್ಕೆ ಒಪ್ಪಿಸಿಕೊಟ್ಟರು.

§

ಆದಿನ ಅರಮನೆಯಲ್ಲಿ ಪುರಜನರಿಗೆಲ್ಲಾ ಔತಣವಿದ್ದಿತು. ನಾಲ್ಕಾರು ಪ್ರತ್ಯೇಕ ಪ್ರತ್ಯೇಕ ಪಾಕಗೃಹಗಳೂ ಭೋಜನಶಾಲೆಗಳೂ ಇದ್ದವು. ಜಿನಧರ್ಮ, ಶಿವಧರ್ಮ, ವೈಷ್ಣವಧರ್ಮ ಈ ಮೂರು ಧರ್ಮಗಳಲ್ಲಿಯೂ ಸಮಾನ ಶ್ರದ್ಧೆ ಯಿದ್ದ ಹೊಯಿಸಳ ವಿಷ್ಣುವರ್ಧನ ಪ್ರಭುವಿನ ರಾಷ್ಟ್ರದಲ್ಲಿ ಎಲ್ಲರಿಗೂ ಶಾಕಾ ಹಾರ ಭೋಜನ ಸಮರ್ಪಕವಾಗಿ ಏರ್ಪಟ್ಟಿತ್ತು.

ಓಲಗಶಾಲೆಯಲ್ಲಿ ಮಂಗಳಕಾರ್‍ಯಗಳು ಮುಗಿದೊಡನೆಯೆ, ಗಂಗ ರಾಜರೂ ಹೇಮಾದ್ರಿಗಳೂ ರಾಜಮಾತೆಯವರಿದ್ದೆಡೆಗೆ ಹೋದರು. ರಾಜ ಮಾತೆಯೂ ಇವರಿಗಾಗಿ ಕಾದಿದ್ದರು. ಗಂಗರಾಜರೆ ಮಾತಿಗೆ ಮೊದಲಿಟ್ಟು 'ಅಕ್ಕನವರ ಆಯ್ಕೆ ಬಹು ಚೆನ್ನಾಗಿದೆ. ಪ್ರಭುಗಳು ಶಾಂತಲೆಯನ್ನು ನೋಡಿ

ದರು. ಸರ್ವಪ್ರಕಾರದಿಂದಲೂ ಆ ಕನ್ಯೆ ರಾಜರ ಕೈಹಿಡಿಯಲು ತಕ್ಕವಳು. ಆರಿಸಿ ತೆಗೆದಂತಿದೆ ತಮ್ಮ ಆಯ್ಕೆ. ವಿದ್ಯೆ, ವಿನಯ, ರೂಪು ಎಲ್ಲವೂ ಇವೆ. ಹಾಗೆ ಇರುವುದು ವಿರಳ. ಪ್ರಭುಗಳಲ್ಲಿ ಒಮ್ಮೆ ಪ್ರಸ್ತಾಪಿಸಿ ನಿಶ್ಚಯಿಸಿಬಿಡಿ. ಮಾರಸಿಂಗಮಯ್ಯ ಮಾಚಿಕಬ್ಬೆ ಆನಂದದಿಂದ ಒಪ್ಪುವರು. ಆದರೆ ಅವರು ಇನ್ನಾರಿಗಾದರೂ . . . ?' ಎಂದರು.

ರಾಜಮಾತೆ: ನಾವು ಅದನ್ನು ವಿಚಾರಿಸಿ ತಿಳಿದುಕೊಂಡಿದ್ದೇವೆ. ಹಾಗಿದ್ದಿದ್ದರೆ, ನಮ್ಮ ಮನಸ್ಸು ಈ ವಿಚಾರಕ್ಕೆ ಪ್ರವರ್ತಿಸುತ್ತಿರಲಿಲ್ಲ.'

ಗಂಗರಾಜರು: 'ಅಕ್ಕನವರು ಈ ಸೂಕ್ಷ್ಮವನ್ನು ಹೇಗೆ ಅರಿತರೊ!'

ರಾಜಮಾತೆ: 'ಮಾಚಿಕಬ್ಬೆಯವರನ್ನು ಒಮ್ಮೆ ಇಲ್ಲಿಗೆ ಬರಮಾಡಿ ಕೊಂಡಿದ್ದೆವು.'

ಗಂಗರಾಜರು: 'ಒಳ್ಳೆಯದೆ ಆಯಿತು. ಆದರೆ ಮಾಚಿಕಬ್ಬೆಯವರಿಗೆ ಈ ನಿಮ್ಮ ಉದ್ದೇಶದ ಸೂಕ್ಷ್ಮ . . . ?'

ರಾಜಮಾತೆ: 'ತೋರಿರಬಹುದು. ಅದರಿಂದ ಭಾಧಕವೇನು? ಮಾಚಿ ಕಬ್ಬೆ ನಮಗೆ ಬಹುದಿನದ ಪರಿಚಯ. ಶಾಂತಲೆಯ ಗುಣ, ರೂಪ, ಶೀಲ, ವಿದ್ಯೆ, ವಿನಯ ಎಲ್ಲವೂ ನಮಗೆ ಪೂರ್ಣ ಒಪ್ಪಿಗೆಯಾಯ್ತು.'

ಗಂಗರಾಜರು: ಮಾಚಿಕಬ್ಬೆಯವರೂ ಹೀಗೆಯೇ ಆಶೆಯನ್ನು ಕಲ್ಪಿಸಿ ಕೊಂಡಿರಬಹುದು.'

ರಾಜಮಾತೆ: ಆಗುವುದೂ ಹೋಗುವುದೂ ನಮ್ಮ ಕೈಯಲ್ಲಿದೆಯೆ?'

ನಡುವೆ ಹೇಮಾದ್ರಿಗಳು ಮಾತನಾಡಿದರು: 'ಅಕ್ಕನವರು ಗಮನಿಸಿರ ಬೇಕು. ಶಾಂತಲೆಯೊಡನಿದ್ದ ಆ ಇನ್ನೊಬ್ಬ ಕನ್ಯೆ: ರೂಪ, ಗುಣ, ಗಾಂಭೀರ್ಯ ಗಳಲ್ಲಿ ಶಾಂತಲೆಗೆ ಸಮಜೋಡಿಯಾಗಿದ್ದಾಳೆ. ಏಕಜೀವನ್ಯಾಯವಾಗಿ ಬೆಳೆ ಯುತ್ತಿದ್ದಾರೆ ಇಬ್ಬರೂ, ಎಂದರು ಮಾಚಿಕಬ್ಬೆ.'

ರಾಜಮಾತೆ: 'ಹೇಮಾದ್ರಿಗಳ ಮನಸ್ಸಿನಲ್ಲಿರುವುದೇನೊ?'

ಹೇಮಾದ್ರಿಗಳು: 'ಕಿರಿಯ ರಾಣಿಗಾಗಿ ನಾವು ಇನ್ನು ಹುಡುಕ ಬೇಕಾಗಿಲ್ಲ. ಇಷ್ಟು ಕೆಳೆತನದಲ್ಲಿ ಬೆಳೆದವರು ಸೌಹಾರ್ದದಿಂದ ಸಪತ್ನಿಯರಾಗಿ ಇರಬಲ್ಲರು. ಇನ್ನೆಲ್ಲಿಂದಲಾದರೂ ತರುವುದಕ್ಕೆ ಬದಲು ಈ ಕನ್ಯೆಯೇ ಆಗಬಹುದಲ್ಲ?'

ರಾಜಮಾತೆ: 'ನಮ್ಮ ಮಕ್ಕಳನ್ನು ಒಂದು ಮದುವೆಗೆ ಒಪ್ಪಿಸುವುದೇ ಇಷ್ಟು ಕಷ್ಟವಾಗಿರುವಾಗ, ಭಾರ್ಯಾದ್ವಯ ಸಂಕಟಕ್ಕೆ ಹೇಗೆ ಒಪ್ಪುವರು, ಹೇಮಾದ್ರಿಗಳೆ?'

ಹೇಮಾದ್ರಿಗಳು: 'ಅದು ನನಗೆ ತಿಳಿಯದ ವಿಷಯ. ಬಹುಭಾರ್ಯಾ ಸಂಕಟಕ್ಕಿಂತ ಭಾರ್ಯಾದ್ವಯವು ಸಾಕೆಂದೂ ಮೇಲೆಂದೂ ನನ್ನ ಅಭಿಪ್ರಾಯ.'

ರಾಜಮಾತೆ: 'ಯೋಗ್ಯವಾದ ಮಾತು, ಹೌದು. ಒಪ್ಪಿದೆವು. ಈ ವಿಷಯದಲ್ಲಿ ಅಣ್ಣದಿರ ಅಭಿಪ್ರಾಯ?'

ಗಂಗರಾಜರು: 'ಹೇಮಾದ್ರಿಗಳ ಸೂಚನೆ ಯೋಚಿಸಲು ತಕ್ಕದ್ದಾಗಿದೆ. ಆ ಕನ್ಯೆಯರಿಬ್ಬರೂ ಪ್ರೇಮಜೀವಿಗಳು. ಸಪತ್ನಿಯರೇ ಆಗುವವರಾದರೂ ಅಕ್ಕತಂಗಿಯರಂತೆ ಇರಬಲ್ಲವರು.'

ರಾಜಮಾತೆ: 'ಭವಿಷ್ಯವೂ ನಮ್ಮ ಕೋರಿಕೆಯಂತೆ ನಡೆಯುವುದಾದರೆ! ನೀವು ಹೇಳುತ್ತಿರುವ ಮಾತು ಪ್ರಪಂಚಕ್ಕೇ ಸೋಜಿಗವಾಗಿದೆ. ಗೆಳತಿಯರಾದ ಮಾತ್ರಕ್ಕೆ ಸಪತ್ನಿಯರೂ ಆಗಬೇಕೆ? ಸವತಿಮತ್ಸರ ಎಂತಹ ಕೆಳೆತನವನ್ನಾದರೂ ಮುರಿದೀತು. ಗೆಳತಿಯರೇಕೆ, ಅಕ್ಕತಂಗಿಯರೇ ಒಬ್ಬಾತನ ಕೈಹಿಡಿದು ಸೌಹಾರ್ದದಿಂದ ಬಾಳುವುದು ಅಪೂರ್ವ. ಕಾಣಿರೇನು, ನಮ್ಮ ಹಿರಿಯ ಮಕ್ಕಳು ಬಲ್ಲಾಳರ ಕೈಹಿಡಿದ ಮೂರು ಜನ ಅಕ್ಕತಂಗಿಯರನ್ನ? . . . ಡಣಾಯಕ ದೊಡ್ಡ ಮರಿಯಾನೆಯವರ ಮಕ್ಕಳು . . . ಪದ್ಮಲೆ, ಚಾವಲೆ, ಬಮ್ಮಲೆ ಈ ಮೂವರು ಅಕ್ಕತಂಗಿಯರ ಮುಖಗಳು ಇಂದಿಗೂ . . . ವಿಧವೆಯರಾದಮೇಲೆಯೂ, ಮುಮ್ಮೂಲೆಯೇ! . . . ಇರಲಿ, ಯಾರಿದು ಈ ಕನ್ಯೆ? ನಾವೂ ಆ ಕನ್ಯೆಯನ್ನು ದೂರದಿಂದ ಮಾತ್ರ ನೋಡಿದೆವು.'

ಗಂಗರಾಜರು: 'ಆ ಕನ್ಯೆ ಪಂಡಿತ ಪೆರುಮಲೆಯವರ ಒಬ್ಬಳೇ ಮಗಳು; ಹೆಸರು ಲಕ್ಷ್ಮಿ. ಚಿಕ್ಕಂದಿನಲ್ಲಿಯೇ ತಾಯಿಲ್ಲದಾದ ಇವಳನ್ನು ಮಾಚಿಕಬ್ಬೆಯವರು ತಮ್ಮ ಮಗಳೆಂದೇ ಶಾಂತಲೆಯ ಜೊತೆಯಲ್ಲಿ ಸಮಾನಪ್ರೀತಿವಿಶ್ವಾಸಗಳಿಂದ ಬೆಳಸಿರುವರು. ಇಬ್ಬರೂ ಒಂದೇ ಮನೆಗೆ ಸೇರಿದರೆ, ಆ ತಾಯಿಯ ಹೃದಯವೂ ಆನಂದಪಟ್ಟೀತು.'

ರಾಜಮಾತೆ: 'ನೀವೂ ಹೇಮಾದ್ರಿಗಳೂ ಈ ಕಾರ್ಯವನ್ನು ಬಹು ತೊಡಕಿಗೆ ತಂದಿಡುತ್ತಿರುವಿರಿ. ಶ್ರೀವೈಷ್ಣವ ಬ್ರಾಹ್ಮಣ ಕನ್ಯೆ ಲಕ್ಷ್ಮಿ;

ಈ ಸಂಬಂಧ ನಾವು ಆಶೆಪಟ್ಟರೂ ಸಾಧ್ಯವೆ? ಪಂಡಿತ ಪೆರುಮಲೆಯವರು ಒಪ್ಪಿಯಾರೆ?'

ಹೇಮಾದ್ರಿಗಳು: 'ಹೌದು. ಇದರ ತೀರ್ಪು ಕನ್ಯೆಯ ತಂದೆಗೆ ಸೇರಿದುದು. ಅಕ್ಕದಿರು ಕ್ಷಮಿಸಬೇಕು. ಈ ಮಾತು ನನ್ನ ಸ್ವಾಧೀನವಿಲ್ಲದೆಯೆ ನಾಲಿಗೆಯಿಂದ ಹೊರಟಿತು. ಏಕೆ ಹೇಳಿದೆನೊ ಈಗ ನನಗೇ ತಿಳಿಯದಾಗಿದೆ.'

ರಾಜಮಾತೆ: 'ಹೇಮಾದ್ರಿಗಳು ನೊಂದುಕೊಳ್ಳಬಾರದು. ದೊಡ್ಡವರ ಬಾಯಿಂದ, ಆಕಸ್ಮಿಕವಾಗಿಯೆ ಆಗಲಿ, ಕಾರಣವಿಲ್ಲದೆ ಮಾತೊಂದು ಹೊರಡುವುದಿಲ್ಲ. ಅದೃಷ್ಟವಾದ ದೈವವೆ ಈ ಮಾತನ್ನು ನಿಮ್ಮಿಂದ ಆಡಿಸಿರಬೇಕೆಂದು ಭಾವಿಸುತ್ತೇವೆ. ದೈವ ತಾನು ಮಾಡಬೇಕಾದುದನ್ನು, ಹೇಳಬೇಕಾದುದನ್ನು, ಧರ್ಮಿಯ, ಸತ್ಯವಂತನ, ಭಕ್ತನ ನಾಲಿಗೆಯಿಂದ ನುಡಿಸುತ್ತದೆ. ಪರಮಾತ್ಮನ ಇಚ್ಛೆಯೇನೋ ಎಂತೋ ಅದು ನಡೆದೇ ನಡೆಯುವುದು. ನಮ್ಮಿಂದಲೊ! ನಿಮ್ಮಿಂದಲೊ! ಯಾರಿಂದಲೊ! ನಾವು ಕರ್ತರೂ ಅಲ್ಲ, ಭೋಕ್ತರೂ ಅಲ್ಲ. ಮಾಡುವುದೂ ಮಾಡಿಸುವುದೂ ಎರಡೂ ಅವನ ಕರ್ತವ್ಯವೇ.'

ಗಂಗರಾಜರು: 'ಪ್ರಭುಗಳನ್ನು ಒಪ್ಪಿಸಿರಿ. ಅಕ್ಕದಿರು ಮರೆತಿರಬಹುದು. ಅಕ್ಕದಿರ ಕೈಹಿಡಿದ ಪ್ರಭುಗಳೂ ಮೊದಲುಮೊದಲು ಮದುವೆ ಬೇಡವೇ ಬೇಡ ಎನ್ನುತ್ತಿದ್ದರು. ಆಮೇಲೆ ಅಕ್ಕದಿರಿಗೆ ಸಪತ್ನಿಯರ ಸಾಲುಸಾಲೇ ಆಯಿತಲ್ಲವೆ?'

ರಾಜಮಾತೆ: 'ಅಣ್ಣದಿರು ತಮ್ಮ ಕೃತ್ಯಗಳಿಗೆ ತಾವೇ ನೊಂದುಕೊಳ್ಳುವ ಕಾಲವೂ ಬಂದಿತಲ್ಲವೆ!'

ಗಂಗರಾಜರು (ನಸುನಕ್ಕು): 'ರಾಜಾನೋ ಬಹುವಲ್ಲಭಾಃ! ಇದು ದೋಷವಲ್ಲ. ಇತರ ರಾಜರ, ಸಾಮಂತರ, ಪ್ರಬಲರ ಹೆಣ್ಣುಮಕ್ಕಳನ್ನು ರಾಜರು ಮದುವೆಯಾಗುವುದು ರಾಜ್ಯಕ್ಕೆ ಕ್ಷೇಮವಲ್ಲವೆ? ಆ ಸಾಮಂತರಿಗೂ ಒಂದು ವಿಧವಾದ ಮರ್ಯಾದೆ ಅದು.'

ರಾಜಮಾತೆ: 'ಭೀಷ್ಮರ ರಾಜ್ಯತಂತ್ರಚತುರತೆಗಳನ್ನು ನಾವು ಕಂಡವರಿದ್ದೇವೆ, ಮೆಚ್ಚಿದ್ದೇವೆ. ನಾವು ಇಲ್ಲಿಗೆ ಬಂದ ಹೊಸದರಲ್ಲಿ ನಿಮ್ಮನ್ನು ಶಪಿಸುವಷ್ಟು ಆಗ್ರಹ ನಮಗಿತ್ತು.'

ಗಂಗರಾಜರು: 'ಅನುಗ್ರಹ. ನಮ್ಮ ರಾಜ್ಯಕ್ಕೂ ನಿಮ್ಮ ತೌರುಮನೆ

ಯವರಿಗೂ ಆಗ ಸೌಹಾರ್ದವೇರ್ಪಡದಿದ್ದಲ್ಲಿ, ಎರಡು ನಾಡುಗಳಿಗೂ ವಿಪತ್ತು ವೈಷಮ್ಯಗಳು ತಪ್ಪುತ್ತಿರಲಿಲ್ಲ. ಅನ್ಯದೇಶೀಯರು ಹೊಯಿಸಳ ರಾಜ್ಯಶ್ರೀಯನ್ನು ಬಹು ಅಸೂಯೆಯಿಂದ ನೋಡುತ್ತಿದ್ದಾರೆ. ಇಲ್ಲಿಗೆ ಬಂದು ಹೋಗುವ ವ್ಯಾಪಾರಿಗಳೂ ಗೂಢಚಾರರೂ ಹೊಯಿಸಳ ರಾಜರು ಚಿನ್ನದ ಅರಮನೆ, ಚಿನ್ನದ ದೇವಾಲಯಗಳನ್ನು ಕಟ್ಟಿಕೊಂಡಿದ್ದಾರೆಂಬ ಸುಳ್ಳುಸುದ್ದಿಗಳನ್ನು ಹರಡುತ್ತಿರುವರು. ದಕ್ಷಿಣದಲ್ಲಿ ಇಷ್ಟು ಸಂಪತ್ತಿರುವುದೆಂಬ ಸುದ್ದಿ ಕೇಳಿ ಉತ್ತರದ ರಾಜವ್ಯಕಗಳಿಗೆ ಬಾಯಲ್ಲಿ ನೀರೂರುತ್ತಿದೆ. ಅವರಿಗೆ ಬೇಕಾದುದು ಕೊಳ್ಳೆ, ರಕ್ತಪಾತ, ಇಷ್ಟೇ. ಅವರೊಡನೆ ಸೇರಿಕೊಂಡು ಕೊಳ್ಳೆಯಲ್ಲಿ ಪಾಲುಗೊಳ್ಳಲು ನಮ್ಮ ದೇಶದ ಕೆಲವು ಕತ್ತೆಕಿರುಬಗಳೂ ರಣಹದ್ದುಗಳೂ ಕಾದಿವೆ. ಹಿಂದಿನಿಂದಲೂ ನಮ್ಮ ದೇಶದ ಚರಿತ್ರೆಯೇ ಹೀಗೆ. ಇನ್ಯಾವ ಭೂಮಿಯೂ ತನ್ನ ಮಕ್ಕಳ ರಕ್ತವನ್ನೇ ತಾನು ಇಷ್ಟು ಕುಡಿದಿಲ್ಲ. ಈ ಭೂಗುಣವೇ ಇಂತಹದು. ದೇಶರಕ್ಷಣೆಯನ್ನು ಬಲಪಡಿಸಿಕೊಳ್ಳಲು ನಮ್ಮ ಪ್ರಭುಗಳು ತುಳುವ, ಕೊಂಗ, ತೆಲುಗ, ಪಾಂಡ್ಯ ಈ ರಾಜರುಗಳ ಸ್ನೇಹ ನಂಟುಗಳನ್ನು ಕಲ್ಪಿಸಿಕೊಳ್ಳುವುದು ಮೇಲು. ಇದು ಅಕ್ಕನವರಿಗೆ ತಿಳಿಯದ ವಿಷಯವೇನೂ ಅಲ್ಲವಲ್ಲ.'

ರಾಜಮಾತೆ: 'ಗಂಗರಾಜರು ಹೇಳಬೇಕಾಗಿಯೇ ಇಲ್ಲ. ನಮ್ಮ ಪೂಜ್ಯ ಪತಿಗಳು ಇಹವನ್ನು ತೊರೆದುಹೋದಾಗ, ಈ ಮಹಾರಾಜ್ಯವನ್ನು ನಿಮ್ಮೆಲ್ಲರ ಪೋಷಣೆಯಲ್ಲಿ ಬಿಟ್ಟುಹೋದರು. ಆ ಧೈರ್ಯವೇ ಇದುವರೆಗೆ ಈ ರಾಜ್ಯವನ್ನು ಸುರಕ್ಷಿತವಾಗಿಟ್ಟುಕೊಂಡು ಬಂದಿದೆ. ನಮ್ಮ ಕುಮಾರರಿಗೆ ನೀವು ಅರಿಕೆ ಮಾಡಬೇಕು, ಶ್ರೇಯಃಕಾಂಕ್ಷಿಗಳ ಮಾತು ಉಪೇಕ್ಷಿಸತಕ್ಕದ್ದಲ್ಲವೆಂದು . . . ಇಷ್ಟು ಸಮಯ ನಿಮ್ಮಿಬ್ಬರನ್ನೂ ಮಾತಿನಲ್ಲಿ ನಿಲ್ಲಿಸಿಕೊಂಡೆವು. ನಿಮ್ಮ ಕಾರ್ಯಗಳನ್ನು ಇನ್ನು ಗಮನಿಸಿರಿ, ನಮ್ಮ ಮಕ್ಕಳನ್ನು ನಾವು ಸಾವಕಾಶವಾಗಿ ಕಂಡು ಅಭಿಪ್ರಾಯವನ್ನು ಅರಿಯಲು ಯತ್ನಿಸುವೆವು. ಯಾವುದೊ ಮಹತ್ ಶಕ್ತಿಯೆ ನಮ್ಮೆಲ್ಲರನ್ನೂ ಈ ಕಾರ್ಯಕ್ಕೆ ಒಯ್ಯುತ್ತಿದೆ. ದೈವಸಂಕಲ್ಪವೇನಿರುವುದೊ!'

ಗಂಗರಾಜರೂ ಹೇಮಾದ್ರಿಗಳೂ ರಾಜಮಾತೆಗೆ ವಂದಿಸಿ ತಮ್ಮ ಕಾರ್ಯಗಳನ್ನು ಗಮನಿಸಲು ಹೋದರು.

ರಾಜಮಾತೆ ಕೆಲವು ನಿಮಿಷಗಳ ಕಾಲ ಅಲ್ಲಿಯೆ ಕುಳಿತು, ಆಡಿದ

ಕೇಳಿದ ಮಾತುಗಳೆಲ್ಲವನ್ನೂ ಜ್ಞಾಪಿಸಿಕೊಂಡರು. ಏನೋ ಮರೆತಿದ್ದವರಂತೆ ತಟ್ಟನೆ ಎದ್ದು, ರಾಜವಾಡದ ಉನ್ನತ ಅಧಿಕಾರ ವರ್ಗದವರ, ಪುರಶ್ರೇಷ್ಠರ ಹೆಂಡಿರು ಮಕ್ಕಳು ಊಟಮಾಡುತ್ತಿದ್ದ ಭೋಜನಶಾಲೆಯ ಕಡೆ ನಡೆದರು.

§

ಅರಮನೆಯಲ್ಲಿ ಇಂತಹ ಮಂಗಳ ಉತ್ಸವಗಳು, ಮುತ್ತೈದೆಯರ ಭೋಜನಾದಿಗಳು ನಡೆದಾಗ ಮಹಾರಾಣಿಯವರೆ ಬಂದು ಮುತ್ತೈದೆಯರಿಗೆ ಫಲ, ವೀಳೆಯ, ಅರಿಸಿನ, ಕುಂಕುಮ, ಸುಗಂಧಗಳನ್ನಿತ್ತು, ಕುಶಲವನ್ನು ಕೇಳಿ ಬೀಳ್ಕೊಡುವುದು ವಾಡಿಕೆಯಾಗಿತ್ತು. ರಾಜಮಾತೆ ಬಂದು ಹೊರ ಬಾಗಿಲಿನ ಒಳಗಡೆ ಸಿದ್ಧಪಡಿಸಿಟ್ಟಿದ್ದ ರಜತಾಸನದಲ್ಲಿ ಮಂಡಿಸಿದರು. ಫಲ ವೀಳೆಯಗಳೆಲ್ಲವನ್ನೂ ಊಳಿಗದವರು ಆ ವೇಳೆಗೆ ಸಿದ್ಧಪಡಿಸಿಟ್ಟಿದ್ದರು.

ಗೌರವ್ವೆಯವರೂ ಇನ್ನೊಬ್ಬ ಕಟ್ಟಳೆ ಮುತ್ತೈದೆಯೂ ಅರಿಸಿನ, ಕುಂಕುಮ, ಹೂ, ಗಂಧದ ಬಟ್ಟಲುಗಳನ್ನು ಹಿಡಿದು ನಿಂತರು. ಊಟ ಮುಗಿಸಿಕೊಂಡು ಸುಮಂಗಲಿಯರೂ ಕನ್ಯೆಯರೂ ಒಳಬಾಗಿಲಿನಿಂದ ಒಬ್ಬೊಬ್ಬ ರಾಗಿ ಬಂದು, ಹೂ ವೀಳೆಯಗಳನ್ನು ಸ್ವೀಕರಿಸಿ, ರಾಜಮಾತೆಯವರಿಗೆ ವಂದಿಸಿ ತಮ್ಮ ತಮ್ಮ ಮನೆಗಳಿಗೆ ಹೊರಟರು.

ರಾಜಮಾತೆ ಎಲ್ಲ ಪರಿಚಿತರನ್ನೂ 'ಕುಶಲವೆ? ಮಕ್ಕಳು ಕುಶಲವೆ? ಯಜಮಾನರು ಕುಶಲವೆ? ಮಕ್ಕಳಿಗೆ ಮದುವೆಯಾಯಿತೆ? ನಿಮ್ಮ ತಂದೆ ತಾಯಿಗಳು ಸೌಖ್ಯವಾಗಿದ್ದಾರೆಯೆ? ನಾವು ಕೇಳಿದೆವೆಂದು ತಿಳಿಸಿರಿ. ಯಾರ್‍ಯಾರು ಎಲ್ಲೆಲ್ಲಿದ್ದಾರೆ? ನಮ್ಮಿಂದ ಏನಾದರೂ ಆಗಬೇಕಾಗಿದ್ದರೆ, ಆಗ ಬಹುದಾಗಿದ್ದರೆ, ಸಂಕೋಚಪಟ್ಟುಕೊಳ್ಳದೆ ಹೇಳಿ' ಎಂದು ಆತ್ಮೀಯತೆ ಯಿಂದ ಕೇಳಿ, ಹೇಳಿ, ಬೀಳ್ಕೊಡುತ್ತಿದ್ದರು.

ರಾಜಮಾತೆಗೆ ಅಪರಿಚಿತರಾದವರನ್ನು ಗೌರವ್ವೆಯವರು 'ಇವರು ಇಂತಹ ಮನೆಯವರು' ಎಂದು ಪರಿಚಯಮಾಡಿಕೊಡುತ್ತಿದ್ದರು. ಹಾಗೆ ಒಬ್ಬೊಬ್ಬರನ್ನೂ ಸೌಮನಸ್ಯದಿಂದ ಕುಶಲ ಕೇಳಿ, ಕಷ್ಟಸುಖಗಳನ್ನು ವಿಚಾರಿಸಿ ಕಳಿಸಿಕೊಡುತ್ತಿದ್ದಾಗ, ಮಾಚಿಕಬ್ಬೆ, ಶಾಂತಲೆ, ಲಕ್ಷ್ಮಿ ಇವರು ಊಟ ಮುಗಿಸಿ, ವೀಳೆಯ ತೆಗೆದುಕೊಳ್ಳಲು ಬಂದರು.

ರಾಜಮಾತೆ ಮಾಚಿಕಬ್ಬೆಯನ್ನು ಕಂಡು 'ಊಟವಾಯಿತೆ ಮಾಚಿ? ನಿನ್ನ ಯಜಮಾನರು ನಿನ್ನೆಯೇ ಊರಿಗೆ ಲಗ್ನದ ವೇಳೆಗೆ ಬಂದುದು ಬಹು ಸಂತೋಷ. ಆ ಪಾಪಣ ಕೈಗೆ ಸಿಕ್ಕದೆ ಹೇಡಿಯಂತೆ ಓಡಿಹೋದನಂತೆ. ಆ ಪುಂಡುಕೋರನನ್ನು ನಿರ್ನಾಮಮಾಡುವವರೆಗೂ ನಮ್ಮ ಗಡಿನಾಡಿನಲ್ಲಿ ಕ್ಷೇಮವಿಲ್ಲ. ಇನ್ನೊಂದು ವೇಳೆ ಅವನನ್ನು ಸುತ್ತುಕಟ್ಟಿಯೆ ಹಿಡಿಯಬೇಕು, ಆಗ ಎಲ್ಲಿ ತಾನೆ ಅವಿತುಕೊಂಡಾನು? . . . ಶಾಂತಲೆ, ಎಷ್ಟು ನಾಚಿಕೆಯಪ್ಪ ನಿನಗೆ! ತಲೆಯೆತ್ತಿ ಮಾತಾಡು, ನಾವೂ ನಿನ್ನ ತಾಯಿಯಂತೆ . . . ಇದು ಯಾರು ಮಾಚಿ, ಈ ಹುಡುಗಿ?'

ಮಾಚಿಕಬ್ಬೆ: 'ಇವಳು ಲಕ್ಷ್ಮಿ. ಶಾಂತಲೆಯೂ ಇವಳೂ ಗೆಳತಿಯರು. ತನುವೆರಡು, ಜೀವ ಒಂದೆ. ಪಂಡಿತ ಪೆರುಮಲೆಯವರ ಒಬ್ಬಳೇ ಮಗಳು. ಪಾಪ, ಎರಡು ವರ್ಷಕ್ಕೇ ತಾಯಿಲ್ಲದವಳಾದಳು. ಪಂಡಿತರು ತಮ್ಮೆದೆಗೆ ಕಟ್ಟಿಕೊಂಡು ಸಾಕಿದರು. ತಮಗಿರುವ ವಿದ್ಯೆಯನ್ನೂ ಬುದ್ಧಿಯನ್ನೂ ಚೆನ್ನಾಗಿ ಹೇಳಿಕೊಟ್ಟಿರು ವರು. ಶಾಂತಲೆಯೂ ಪಂಡಿತರಲ್ಲಿಯೆ ಸಂಸ್ಕೃತ ವ್ಯಾಸಂಗಮಾಡಿದಳು. ಶಾಂತಲೆ ಗಿಂತ ಸ್ವಲ್ಪ ಕಿರಿಯಳು. ನನಗೆ ಶಾಂತಲೆ ಬೇರೆಯಲ್ಲ, ಇವಳು ಬೇರೆಯಲ್ಲ.'

ರಾಜಮಾತೆ: 'ಲಕ್ಷ್ಮೀಸರಸ್ವತಿಯರು ಹೆಸರಿಗಾದರೂ ಒಂದೆಡೆ ಸೇರಿರು ವುದೆ ಅಪರೂಪ. ಪಂಡಿತರ ಅಳಿಯಂದಿರು ಯಾರೊ?'

ಮಾಚಿಕಬ್ಬೆ: 'ಯಾರಾಗುವರೊ! ಈ ಇಬ್ಬರು ಮಕ್ಕಳ ಅದೊಂದು ವಿಚಾರ ನನಗೆ ತಲೆನೋವು. ಶಾಂತಲೆಯ ತಂದೆಯವರೂ ಅಷ್ಟೆ, ಪಂಡಿತರೂ ಅಷ್ಟೆ, ಈ ವಿಷಯವನ್ನು ಸ್ವಲ್ಪವೂ ತಲೆಗೆ ಹಚ್ಚಿಕೊಳ್ಳುವುದಿಲ್ಲ. ಆಗುವ ಕಾಲಕ್ಕೆ ಎಲ್ಲವೂ ತಾನಾಗಿಯೆ ಒದಗಿಬರುವುದು ಎನ್ನುತ್ತಾರೆ. ಹೆತ್ತಕರುಳು ಹಾಗೆಂದುಕೊಂಡು ಸುಮ್ಮನಿರಲಾದೀತೆ?'

ರಾಜಮಾತೆ: 'ಮಾಚಿ, ನಮ್ಮ ಮಕ್ಕಳೂ ಅದೇ ಹಟ. ಆದರೆ ಹೆಣ್ಣು ಮಕ್ಕಳು ಹಾಗಿರಲಾದೀತೆ? ಅದೂ ನಿಜವೆ. ಎಲ್ಲಕ್ಕೂ ಕಾಲಲಬ್ಧಿ ಬರಬೇಕು. ಮಾಚಿ, ಶಾಂತಲೆ, ಲಕ್ಷ್ಮಿ, ಹೋಗಿಬರುತ್ತೀರಾ?'

ಮೂವರೂ ಫಲ, ವೀಳೆಯ, ಅರಿಸಿನ, ಕುಂಕುಮ ಇವುಗಳನ್ನು ತೆಗೆದುಕೊಂಡು ರಾಜಮಾತೆಯವರಿಗೆ ವಂದಿಸಿ ಮನೆಗೆ ಹೊರಟರು. ಶಾಂತಲೆ ಲಕ್ಷ್ಮಿ ಒಂದು ಮೇನೆಯಲ್ಲಿ ಕುಳಿತರು. ಮಾಚಿಕಬ್ಬೆ ಇನ್ನೊಂದರಲ್ಲಿ

ಕುಳಿತರು. ಮಾಚಿಕಬ್ಬೆ ಕುಳಿತ ಮೇನೆ ಮಾರಸಿಂಗಮಯ್ಯನವರನ್ನು ಕರೆ ತರಲು ಹೋಯಿತು.

§

ಶಾಂತಲೆಲಕ್ಷ್ಮಿಯರು ಕುಳಿತಿದ್ದ ಮೇನೆಗೆ ದಾಸಿಯೊಬ್ಬಳು ದೊಡ್ಡ ತಟ್ಟೆಯೊಂದರಲ್ಲಿ, ಎರಡು ಎಳೆಹಳದಿಬಣ್ಣದ ಚೀನಾಂಬರ, ಹಳದಿ ಬಣ್ಣದ ವಕ್ಷವಸ್ತ್ರಗಳು, ಹೂ, ಹಣ್ಣು ಮುಂತಾದುವನ್ನು ತಂದು ಒಪ್ಪಿಸಿ, 'ರಾಜಮಾತೆಯವರು ಕಳಿಸಿದರು' ಎಂದು ಹೇಳಿ ಹೋದಳು. ಅಮೂಲ್ಯವೂ ಸುಂದರವೂ ಆದ ಆ ವಸ್ತ್ರಭೂಷಣಗಳನ್ನು ಕಂಡು ಕನ್ಯೆಯರಿಬ್ಬರೂ ಆಶ್ಚರ್ಯಪಟ್ಟರು, ಆನಂದಪಟ್ಟರು. ರಾಜಮಾತೆಯವರ ಆದರ ವಿಶ್ವಾಸಗಳಿಗೆ ಮನಸೋತರು.

ಮಾಚಿಕಬ್ಬೆಯವರ ಮೇನೆಯಲ್ಲಿಯೂ ರಾಜಮಾತೆಯವರು ಮಾಚಿಕಬ್ಬೆಗಾಗಿ ದಿವ್ಯವಾದ, ರಾಜಪತ್ನಿಯರು ಉಡಲು ಯೋಗ್ಯವಾದ ವಸ್ತ್ರಭೂಷಣಗಳನ್ನು ಇಡಿಸಿದ್ದರು. ಮಾಚಿಕಬ್ಬೆ ಅವುಗಳನ್ನು ನೋಡಿ ಆಶ್ಚರ್ಯಪಟ್ಟು, ಪತಿಯೊಡನೆ 'ಈ ವಯಸ್ಸಿನಲ್ಲಿ ಇದನ್ನೆಲ್ಲಾ ನಾನು ಉಟ್ಟು ತೊಟ್ಟರೆ ಜನ ನಕ್ಕಾರು. ಅಕ್ಕನವರೇ ಇಂದು ಒಂದು ಸಾಧಾರಣ ವಸ್ತ್ರವನ್ನು ಧರಿಸಿದ್ದರು, ಆದರೂ ಅವರ ಗೌರವಕ್ಕೇನು ಕಡಮೆ? ಆ ಗಂಭೀರ, ಘನತೆ, ನಡೆ, ನುಡಿ, ಹೃದಯವೈಶಾಲ್ಯ ಯಾರಿಗೆ ಇದ್ದೀತು?' ಎಂದರು.

ಮಾರಸಿಂಗಮಯ್ಯ: 'ಉಡುಗೆತೊಡುಗೆಗಳಲ್ಲಿ ಹೆಚ್ಚು ತೋರ್ಪಡಿಕೆ ಅಕ್ಕನವರಿಗೆ ಹಿಂದಿನಿಂದಲೂ ಇಲ್ಲ. ಅರಮನೆಯಲ್ಲಿ ಒಡವೆ ವಸ್ತ್ರಗಳಿಗೇನು ಕಡಮೆ? ಅಕ್ಕನವರು ತೌರುಮನೆಯಿಂದ ತಂದ ಒಡವೆವಸ್ತ್ರಗಳೇ ಒಂದು ಬೊಕ್ಕಸ ತುಂಬಿವೆ. ಅವುಗಳನ್ನು ಉಡುವವರು ತೊಡುವವರು ಮಾತ್ರ ಯಾರೂ ಇಲ್ಲ.'

ಮಾಚಿಕಬ್ಬೆ: 'ಅಕ್ಕನವರಿಗೆ ಶಾಂತಲೆಯನ್ನು ತಂದುಕೊಳ್ಳುವ ಅಭಿಪ್ರಾಯವಿದೆ, ಅದು ಇಂದು ಚೆನ್ನಾಗಿ ವ್ಯಕ್ತಪಟ್ಟಿತು.'

ಮಾರಸಿಂಗಮಯ್ಯ (ಸಂತೋಷದಿಂದ): 'ಅದು ನಮ್ಮ ಮಗುವಿನ ಸೌಭಾಗ್ಯ. ಪ್ರಭುಗಳು ನಮ್ಮ ಅಳಿಯಂದಿರಾದರೆ ನಾವು ಮಹಾಪುಣ್ಯಶಾಲಿಗಳು. ನಾನು ಊರಿಗೆ ಬಂದಾಗಿನಿಂದಲೂ ಶುಭಸೂಚನೆಗಳನ್ನು ಕಾಣುತ್ತಿದ್ದೇನೆ, ಕೇಳುತ್ತಿದ್ದೇನೆ. ನಾನು ಇಷ್ಟು ಅವಸರವಾಗಿ ಊರಿಗೆ ಬರುವುದಕ್ಕೂ ಅಕ್ಕನವರದೆ ಏರ್ಪಾಡು. ಕುವರ ವಿಷ್ಣುವಿನ ಉಪನಯನದ ಸಮಯ ಈ

ಸಾಧನಕ್ಕೆ ನೆರವಾಯಿತು. ಗಂಗರಾಜರೂ ಹೇಮಾದ್ರಿಗಳೂ ಈ ವಿಷಯದಲ್ಲಿ ಶ್ರದ್ಧೆ ವಹಿಸಿದ್ದಾರೆ. ವಟುವಿಗೆ ಆಶೀರ್ವಾದ ಕೊಡಿಸುವ ನೆಪದಲ್ಲಿ ಪ್ರಭುಗಳು ಶಾಂತಲೆಯನ್ನು ನೋಡುವಂತೆ ಏರ್ಪಡಿಸಿದವರೂ ಅಕ್ಕನವರೇ. ತಮ್ಮ ಉದ್ದೇಶ ಸಾಧಿಸಬೇಕಾದರೆ . . . ಅಬ್ಬ! . . . ಸ್ತ್ರೀಜಾಣ್ಮೆಗೆ ಇನ್ನೊಂದು ಸಾಟಿಯಿಲ್ಲ!'

ಮಾಚಿಕಬ್ಬೆ: 'ಇದು ಹೊಗಳೊ? ತೆಗಳೊ?'

ಮಾರಸಿಂಗಮಯ್ಯ: 'ಛೆ! ಛೆ! ಸರ್ವಥಾ ತೆಗಳಲ್ಲ. ಮಾಚಿ, ಅನೇಕ ವೇಳೆ ನನಗೆ ಹೀಗೆನ್ನಿಸಿದೆ: ಈ ಬ್ರಹ್ಮಾಂಡವನ್ನು ಸೃಷ್ಟಿಸಿದ ಮಹಾಶಕ್ತಿ ಸ್ತ್ರೀಯಿಂದಲೆ ತನ್ನ ಕಾರ್ಯಗಳೆಲ್ಲವನ್ನು ಮುಂದುವರಿಸುತ್ತಿದೆ. ಸ್ತ್ರೀಯೆಂಬ ರಸವಂತಿ ಇಲ್ಲದಿದ್ದರೆ, ಪುರುಷನು ಕರಡಾಗಿಯೆ ಇದ್ದು ಹೋಗುತ್ತಿದ್ದನೇನೊ!'

ಮಾಚಿಕಬ್ಬೆ: 'ಗಂಡಸರ ವಿಷಯದಲ್ಲಿಯೂ ನಮಗೆ ಹಾಗೆಯೆ ಅನ್ನಿಸುತ್ತದೆ. ಒಂದು ತೊಟ್ಟು ರಕ್ತವನ್ನು ಕಂಡರೆ ಮೂರ್ಛೆಹೋಗುವವರು ನಾವು. ಸಾವಿರಾರು ಜನರನ್ನು—ಅವರು ಕೆಟ್ಟವರೆ ಇರಲಿ—ಅವರನ್ನು ಕೊಲೆಮಾಡಿ ರಕ್ತದ ಕಾಲುವೆಗಳನ್ನು ಹರಿಸಿ, ಪಟ್ಟಣಗಳನ್ನು ಸುಟ್ಟು ಬೂದಿಮಾಡುವುದಾಗಲಿ, ದೇಶಗಳನ್ನು ಕಟ್ಟಿ ಕಾಪಾಡಿ ಉದ್ಧಾರಮಾಡುವುದಾಗಲಿ, ದಯೆಯಿಂದ, ಧರ್ಮದಿಂದ ಕಾಪಾಡಿ ರಾಜ್ಯವಾಳುವುದಾಗಲಿ, ಗಂಡಸರೆ ಅಲ್ಲವೆ?'

ಮಾರಸಿಂಗಮಯ್ಯ: 'ಮಾತು ಎಲ್ಲಿಂದ ಎಲ್ಲಿಗೋ ಹೋಯಿತು. ಅಕ್ಕನವರನ್ನು ಕಂಡಿದ್ದಿರೇನು?'

ಮಾಚಿಕಬ್ಬೆ: 'ಹೂವೀಳೆಯ ತೆಗೆದುಕೊಂಡು ಬರುವಾಗ ಕಂಡು ನಮಸ್ಕರಿಸಿ ಬಂದೆವು. ಮಾಸಣನನ್ನು ಇನ್ನೊಂದು ಬಾರಿ ಸುತ್ತುಕಟ್ಟಿ ಹಿಡಿಯಲೇ ಬೇಕೆಂದು ಹೇಳಿದರು.'

ಮಾರಸಿಂಗಮಯ್ಯ: 'ಅಧುವರೆಗೆ ನಮಗೂ ಸುಖದ ನಿದ್ರೆ ಬಾರದು. ಈ ಹೊಯಿಸಳ ರಾಜ್ಯಕ್ಕೆ ತಲೆನೋವಿನಂತೆ ಇದ್ದಾನೆ ಆ ಮಾಸಣ. ಮಾಳವದ ಅರಸನೂ ಅವನ ಬೆನ್ನು ತಟ್ಟುತ್ತಿದ್ದಾನೆ. ಎರೆಯಂಗರು ಅವರ ಧಾರಾನಗರವನ್ನು ಒಮ್ಮೆ ಪುಡಿಮಾಡಿದರೂ ಅವರ ಕೆಚ್ಚು ಇನ್ನೂ ಇಳಿಯಲಿಲ್ಲ. ಆ ಮಾಸಣ ರಣಹೇಡಿ; ಬೆಟ್ಟಗುಡ್ಡಗಳಲ್ಲಿ ಅಡಗಿಕೊಂಡು, ಪಾಪ! ಆ ಹಳ್ಳಿಗರನ್ನು ಬೆದರಿಸಿ ದೋಚುತ್ತಾನೆ. ಅವರ ದನಕರುಗಳನ್ನು ಕದಿಯುತ್ತಾನೆ,

ಪೈರುಪಚ್ಚೆಗಳನ್ನು ಸುಡುತ್ತಾನೆ. ಆ ಕಳ್ಳನೊಂದಿಗೆ ದ್ರೋಹಿಗರು ಹಲವರು ಸೇರಿಕೊಂಡಿದ್ದಾರೆ. ಈಸಾರಿ ಅವನನ್ನು ಹೆಡೆಕಟ್ಟಿ, ಮುಡಿಕಟ್ಟಿ ತಂದು ಪ್ರಭುಗಳ ಪಾದಗಳ ಮೇಲೆ ಕೆಡಹುತ್ತೇನೆ. ದೇವರು ಇದನ್ನು ನಡಸಿ ಕೊಡಲಿ.'

ಮಾಚಿಕಬ್ಬೆ: 'ನಿಮ್ಮ ಧೀರತನಕ್ಕೆ ಯೋಗ್ಯವಾದ ಮಾತನಾಡಿದಿರಿ. ಅಕ್ಕನವರು ಇದನ್ನು ಕೇಳಿ ಸಂತೋಷಪಟ್ಟಾರು.'

ಮಾರಸಿಂಗಮಯ್ಯ: 'ಮಾಚಿ, ಹೇಳಿ ಮಾಡುವುದು ಹೊಲ್ಲ, ಅದು ಆತ್ಮಪ್ರಶಂಸೆ. ಧೀಮಂತನು, ಕಾರ್ಯಪಟುವು, ಹೊಗಳಿಕೆಗೆ, ಹೆಮ್ಮೆಗೆ, ಏನನ್ನೂ ಮಾಡನು. ಗಂಗರಾಜರಿಂದ ಇದನ್ನು ಕಲಿಯಬೇಕು. ಇಂತಹ ನಾಲ್ಕು ರಾಜ್ಯಗಳನ್ನು ಕಟ್ಟಿ ನಡಸಬಲ್ಲ ಸಾತ್ತ್ವಿಕ ತೇಜಸ್ಸು ಅವರಿಗಿದೆ. ಅವರೇ ಈ ಬಾರಿ ಕತ್ತಿಹಿಡಿದು ಗಡಿನಾಡಿಗೆ ಬರುವರಂತೆ. ಬಂದರೆ ಶತ್ರುಗಳ ಪಾಲಿಗೆ ಪಿಡುಗು ಬಿದ್ದಂತೆಯೆ. ಸತ್ಯಪರಾಕ್ರಮಿಯಾದ ಗಂಗರಾಜರೂ, ಧರ್ಮದೇವತೆ ಗಳಂತೆ ಇತರ ಮಂತ್ರಿಗಳೂ ನಮ್ಮ ಪ್ರಭುಗಳಿಗಿರುವಾಗ ಹೊಯಿಸಳ ರಾಜ್ಯ ಗಗನಚುಂಬಿಯಾಗುವುದರಲ್ಲಿ ಸಂದೇಹವೇ ಇಲ್ಲ. ಇಂತಹ ಮಹಾಭಾಗರ ಕಾಲುತೊಳೆದು ಕನ್ಯೆಯನ್ನು ಧಾರೆಯೆರೆಯುವ ಪುಣ್ಯ ನಮ್ಮದಾಗಲಿ! ಮಾಚಿ, ನಮ್ಮದಾಗಲಿ!'

ಮಾಚಿಕಬ್ಬೆ: 'ಆಗಲಿ, ನಮ್ಮದಾಗಲಿ. ಗಮನಿಸಿದರೆ ನೀವು? ಪ್ರಭು ಗಳು ಶಾಂತಲೆಯನ್ನು ಒಂದು ಸಲ ನೋಡಿಯೂ ಇನ್ನೊಮ್ಮೆ ನೋಡಿದರು.'

ಮಾರಸಿಂಗಮಯ್ಯ: 'ಈ ವಿಷಯಗಳಲ್ಲಿ ನಮ್ಮ ಕಣ್ಣಿಗೆ ಅಗೋಚರ ವಾದವು ನಿಮ್ಮ ಕಣ್ಣುಗಳಿಗೆ ಗೋಚರವಾಗುತ್ತವೆ. ಆ ಧರ್ಮಿ ಅಷ್ಟು ಸುಲಭ ವಾಗಿ ಕಾಮಿಯಾಗನು.'

ಮಾಚಿಕಬ್ಬೆ: 'ಕಾಮನೆಯಲ್ಲದಿದ್ದರೆ, ಬರಿಯ ಉತ್ಸುಕತೆಯೆ ಇರ ಬಹುದೆ!'

ಮಾರಸಿಂಗಮಯ್ಯ: 'ಧರ್ಮೇಶನು ರಾಜರ ಹೃದಯವನ್ನು ಶಾಂತಲೆಗೆ ಒಲಿಸಲಿ. ಮಾಚಿ ನಿನ್ನ ಮೈ, ಮನ ಎಲ್ಲ ಸಂತೋಷದಿಂದ ತುಂಬಿಹೋಗಲಿ.'

ಮಾಚಿಕಬ್ಬೆ: 'ನೂರು ಸಲ ಹಾಗೆನ್ನಿರಿ. ತಥಾಸ್ತು, ತಥಾಸ್ತು. ನಿಮ್ಮ ಬಾಯಲ್ಲಿ ಹಾಲ್ಜೇನು ಸುರಿಯಲಿ.'

ಮಾರಸಿಂಗಮಯ್ಯ : 'ಮಾಚಿ, ಆತ್ಮಾನುಬಂಧವಿದ್ದಲ್ಲಿ ಮದುವೆ ನಡೆದೇ ನಡೆಯುವುದು. ಅದಿಲ್ಲದಿದ್ದರೆ, ಸರ್ವ ಪ್ರಯತ್ನಗಳೂ ನಿಷ್ಫಲವಾಗುವುವು.'

ಇಷ್ಟು ಹೊತ್ತಿಗೆ ಮಾರಸಿಂಗಮಯ್ಯ, ಮಾಚಿಕಬ್ಬೆಯವರು ಕುಳಿತಿದ್ದ ಮೇನೆ ಮನೆಯನ್ನು ಸೇರಿ ನಿಂತಿತು.

§

ಉಪನಯನ ಮುಗಿದು ಆರೇಳು ದಿನಗಳಾದವು. ಸಂಭ್ರಮದ ಉತ್ಸಾಹ ದಲ್ಲಿ ಬಹು ದಣಿದಿದ್ದ ಸೇವಾಜನ ವಿಶ್ರಾಂತಿ ಪಡೆದು ಲಘುವಾದರು. ಒಂದು ಶುಕ್ರವಾರ ಸಂಜೆ ರಾಜಮಾತೆಯವರು ಅರಮನೆಯಲ್ಲಿ ಹೂವೀಳೆಯವನ್ನು ಏರ್ಪಡಿಸಿ ಪುರಪ್ರಮುಖರ ಗೃಹಿಣಿಯರನ್ನೂ ಅಧಿಕಾರವರ್ಗದವರ ಪತ್ನಿಯ ರನ್ನೂ ಆಹ್ವಾನಿಸಿದರು.

ಶಾಂತಲೆ ವೀಣೆ ನುಡಿಸಿ ಹಾಡುವುದನ್ನು ಎಲ್ಲರೂ ಕೇಳಿ ಸಂತೋಷ ಪಡಲೆಂದೇ ರಾಜಮಾತೆ ಆ ಮುತ್ತೈದೆಕೂಟವನ್ನು ಏರ್ಪಡಿಸಿದ್ದರು.

'ನಾನೊಬ್ಬಳೆ ನುಡಿಸಿ ಹಾಡಲು ನಾಚಿಕೆಯಾಗುತ್ತದೆ, ಲಕ್ಷ್ಮಿಯೂ ಜೊತೆಯಲ್ಲಿ ನುಡಿಸಿ ಹಾಡಬಹುದಾದರೆ . . .' ಎಂದು ತನ್ನಬ್ಬೆಯ ಮೂಲಕ ರಾಜಮಾತೆಯವರಿಗೆ ಅರಿಕೆ ಮಾಡಿಕೊಂಡಳು ಶಾಂತಲೆ. 'ಅದಕ್ಕೇನು! ಇನ್ನೂ ಚೆನ್ನವೆ ಆಯಿತು, ಲಕ್ಷ್ಮಿಯೂ ಜೊತೆಯಲ್ಲಿ ನುಡಿಸಿ ಹಾಡಲಿ' ಎಂದರು ರಾಜಮಾತೆ.

ನಿಯಮಿತವಾದ ದಿನ, ನಿಯಮಿತವಾದ ವೇಳೆಗೆ ಅರಮನೆಗೆ ಹೊರಡುವ ಮುನ್ನ ಶಾಂತಲೆ ಲಕ್ಷ್ಮಿಯರು ಸ್ನಾನಮಾಡಿ, ಮಡಿಯುಟ್ಟು ಶಾರದೆಯನ್ನು ಶ್ರದ್ಧಾಭಕ್ತಿಗಳಿಂದ ಪೂಜಿಸಿ, ವೀಣೆಗಳನ್ನು ಶಾರದೆಯ ಪದಕಮಲಗಳ ಬಳಿ ಇಟ್ಟು, ಧೈರ್ಯವನ್ನೂ ಅನುಗ್ರಹವನ್ನೂ ಬೇಡಿ, ಅನಂತರ ಆ ವೀಣೆಗಳನ್ನು ಕೈಗೆ ತೆಗೆದುಕೊಂಡು, ಸಮಶ್ರುತಿ ಮಾಡಿ ಒಟ್ಟಿಗೆ ಹಾಡಿ ದೇವಿಯನ್ನು ಸ್ತುತಿಸಿ ದರು. ತಮ್ಮ ಹಿಡಿತಕ್ಕೆ, ವೀಣೆಯ ನುಡಿತಕ್ಕೆ ಚೆನ್ನಾಗಿ ಒಗ್ಗಿಬಂದಂತಹ ಸ್ತವ, ಪದಿ, ಕೀರ್ತನೆಗಳನ್ನು ಇಂಥ ಇಂಥವನ್ನೇ ನುಡಿಸಿ ಹಾಡುವುದೆಂದು ನಿರ್ಧರಿಸಿಕೊಂಡರು.

ಯಾಲಕ್ಕಿ, ಬಾಲಮೆಣಸು, ಜೇನುತುಪ್ಪ ಕೂಡಿಸಿ ಕಾಸಿಟ್ಟಿದ್ದ ಬಿಸಿ

ಹಾಲನ್ನು ಮಾಚಿಕಬ್ಬೆ ತಂದು ಮಕ್ಕಳಿಗೆ ಕೊಟ್ಟರು. ಶಾಂತಲೆ ಲಕ್ಷ್ಮಿ ಯರು ಅದನ್ನು ಕುಡಿದರು. ರಾಜಮಾತೆಯವರು ಅರಮನೆಯಲ್ಲಿ ನಡೆದ ಔತಣದ ದಿನ ತಮಗಿಬ್ಬರಿಗೂ ಉಡುಗೊರೆ ಕೊಟ್ಟಿದ್ದ, ಎಳೆಹಳದಿಬಣ್ಣದ ಚೀನಾಂಬರಗಳನ್ನು ಉಟ್ಟರು, ಹಳದಿ ವರ್ಣದ ವಕ್ಷವಸ್ತ್ರವನ್ನು ಧರಿಸಿದರು. ಆ ನವ್ಯ ದುಕೂಲಗಳೂ ಆ ವರ್ಣವೂ ಅವರ ಲಾವಣ್ಯವನ್ನು ಇಮ್ಮಡಿಸಿತು; ಗಂಭೀರವಾದ ಆಭರಣಗಳನ್ನು ಇಬ್ಬರೂ ತೊಟ್ಟರಾದರೂ, ಶಾಂತಲೆ, ತಾನೇ ಲಕ್ಷ್ಮಿಗೆ ಹೆಚ್ಚು ಹೆಚ್ಚು ಸೊಬಗಿನ ಒಡವೆಗಳನ್ನಿಟ್ಟಳು. ಇಬ್ಬರೂ ತಲೆತುಂಬ ಹೂ ಮುಡಿದು, ದೇವಿಯನ್ನು ಅರ್ಚಿಸಿದ ಕುಂಕುಮವನ್ನೇ ಹಣೆಗಿಟ್ಟುಕೊಂಡು ಇನ್ನೊಮ್ಮೆ ಶಾರದೆಗೆ ಸಾಷ್ಟಾಂಗವೆರಗಿದರು. ತಮ್ಮ ವೀಣೆಗಳನ್ನು ತಾವೇ ಜೋಪಾನವಾಗಿ ಹೊತ್ತು ಮೇನೆಯೊಳಗಿಟ್ಟು, ಮಾಚಿಕಬ್ಬೆಗೆ ನಮಸ್ಕರಿಸಿ ಆಶೀರ್ವಾದ ಪಡೆದು ಅನಂತರ ಮೇನೆಯಲ್ಲಿ ಕುಳಿತರು. ಬೋಯಿಗಳು ಮೇನೆ ಯನ್ನು ಹೊತ್ತು ಅರಮನೆಗೆ ಹೊರಟರು. ಮಾಚಿಕಬ್ಬೆ ಬೇರೊಂದು ಮೇನೆ ಯಲ್ಲಿ ಅರಮನೆಗೆ ಬಂದರು.

ಅರಮನೆಯ ಲಕ್ಷ್ಮೀವಿಹಾರ ಸಭಾಂಗಣ ಅಂದು ವಿತರಣೆಯಿಂದ ಅಲಂಕರಿಸಲ್ಪಟ್ಟಿತ್ತು. ಮಹಾರಾಜ ಎರೆಯಂಗರ ಕಾಲದಲ್ಲಿ ಮಹಾದೇವಿ ಅಕ್ಕನವರಿಗಾಗಿಯೆ ಕಟ್ಟಿಸಿದ ಭವ್ಯ ವಿಹಾರವದು. ಹೊಸದಾಗಿ ಮನೆಗೆ ಬಂದ ಮಡದಿಯನ್ನು ಸಂತೋಷಪಡಿಸಲು, ತಮ್ಮ ಹೃದಯಾನುರಾಗವನ್ನು ವ್ಯಕ್ತ ಪಡಿಸಲು, ಅಪಾರ ದ್ರವ್ಯವನ್ನು ವೆಚ್ಚಮಾಡಿ ಕಟ್ಟಿಸಿದ್ದರು ಎರೆಯಂಗರು; "ನವವಧು, ದೂರದೇಶದವಳು, ತೌರನ್ನು ನೆನೆನೆನೆದು ಹಂಬಲಿಸಿಹೋದಾಳು" ಎಂದು ಕುಬೇರನ ವೈಭವಸ್ಥಾನವಿದ್ದಂತೆ ಇರಬೇಕೆಂದು, ಎರೆಯಂಗರು ದೇಶದ ಉತ್ತಮ ಶಿಲ್ಪಿಗಳನ್ನೂ ಕಲಾವಿದರನ್ನೂ ಕರೆಸಿ ಈ ವಿಹಾರವನ್ನು ನಿರ್ಮಾಣಮಾಡಿದ್ದರು.

ಇಂದು ಆ ಸಭಾಂಗಣ ನೂರಾರು ಸಾವಿರಾರು ಸುಗಂಧ ತೈಲದೀಪ ಗಳಿಂದ ಜಾಜ್ವಲ್ಯಮಾನವಾಗಿ, ಹಾಸಿದ್ದ ರತ್ನಕಂಬಳಿಗಳಿಂದ, ಕಟ್ಟಿದ್ದ ಬಣ್ಣಬಣ್ಣದ, ಬಗೆಬಗೆಯ ಹೂತೋರಣಗಳಿಂದ, ಕಾರಣೆ ಸಾರಣೆಗಳಿಂದ ಬಹು ಶೋಭಾಯಮಾನವಾಗಿದ್ದಿತು.

ಆಹ್ವಾನಿತೆಯರೆಲ್ಲ ಆಗಲೆ ಬಂದು ತಮಗಾಗಿ ಏರ್ಪಡಿಸಿದ್ದ ಸ್ಥಾನಗಳಲ್ಲಿ

ಕುಳಿತಿದ್ದರು. ಸಭೆಯ ನಡುವೆ ಎತ್ತರವಾಗಿ ನಿರ್ಮಿಸಿದ್ದ ವೇದಿಕೆಯ ಮೇಲೆ, ವೈಣಿಕೆಯರಿಬ್ಬರಿಗೆ ಸ್ಥಳವೇರ್ಪಡಿಸಲಾಗಿತ್ತು.

ಹಾಡಿ ನುಡಿಸುವ ಪುಣ್ಯವತಿಯರಾರೆಂದು ಸಭೆಯೆಲ್ಲ ಕಾದುನೋಡು ತ್ತಿರುವಾಗಲೆ, ಅಕ್ಕತಂಗಿಯರಂತಿದ್ದ ಗಂಧರ್ವಕನ್ಯೆಯರಿಬ್ಬರು, ಚೇಟಿಯರು ಮುಂದೆ ದಾರಿ ತೋರಿಸುತ್ತಿರಲಾಗಿ, ಮೃದುಹಾಸದಿಂದ, ಮೃದು ನಡಿಗೆಯಿಂದ ಬಂದು ವೇದಿಕೆಯನ್ನೇರಿ ಸುತ್ತ ನೋಡಿ, ಶ್ರೇಷ್ಠಾಸನದಲ್ಲಿ ಕುಳಿತಿದ್ದ ರಾಜ ಮಾತೆಯವರಿಗೂ ಹತ್ತಿರವೆ ಕುಳಿತಿದ್ದ ಮಾಚಿಕಬ್ಬೆಯವರಿಗೂ ವಂದಿಸಿ, ಸಭೆ ಗೆಲ್ಲ ನಮಸ್ಕರಿಸಿ ಕುಳಿತುಕೊಂಡರು. ಅನಂತರ ಚೇಟಿಯರು ತಂದಿಟ್ಟ ವೀಣೆ ಗಳನ್ನು ಮುಟ್ಟಿ ಕೈಗಳನ್ನು ಕಣ್ಣಿಗೊತ್ತಿಕೊಂಡು, ನಮಸ್ಕರಿಸಿ ವೀಣೆಗಳನ್ನು ಕೈಗೆ ತೆಗೆದುಕೊಂಡರು.

ಸಭೆಯಲ್ಲಿದ್ದವರಿಗೆಲ್ಲಾ 'ಈ ಸೊಬಗಿನ ವೈಣಿಕೆಯರು ಯಾವ ದೇಶದ ವರೊ! ಬಹುಶಃ ಮಹಾದೇವಿ ಅಕ್ಕನವರ ದೇಶದವರೇನೊ?' ಎಂಬ ಸಂದೇಹ ಹಬ್ಬಿತು. 'ಮಂಗಳಕರವಾದ, ಸರ್ವಾಂಗಸುಂದರವಾದ, ಮನೋಹರವಾದ ಈ ರೂಪ, ಈ ಬೆಳವಣಿಗೆ, ನಮ್ಮ ದೇಶದಲ್ಲೇ ವಿರಳ' ಎಂದುಕೊಂಡರು. ತಾಯಿ ಶಾರದೆ ಶಾಂತಲೆ ಲಕ್ಷ್ಮಿಯರಿಗೆ ಅಂದು ಅಷ್ಟು ವರ್ಚಸ್ಸನ್ನು ದಯ ಪಾಲಿಸಿದ್ದಳು. ರಾಜಮಾತೆಯವರಿಗೂ ಈ ಕನ್ನೆಯರ ಅಂದಿನ ವರ್ಚಸ್ಸು ಕಣ್ಕಟ್ಟಿತು.

ಬಹಳ ಹೊತ್ತಿನ ಮೇಲೆ ಒಬ್ಬಿಬ್ಬ ಸಂಗಾತಿಯರು ಅವರ ಗುರುತನ್ನು ಹಿಡಿದರು. 'ಶಾಂತಲೆ ಲಕ್ಷ್ಮಿ'ಯರೆಂಬ ಸುದ್ದಿ ಪಿಸು ಪಿಸು ಮಾತಿನಲ್ಲಿ ಸಭೆ ಯೆಲ್ಲ ಹರಡಿ ಎಲ್ಲರಿಗೂ ಸಂತೋಷ ಆಶ್ಚರ್ಯಗಳುಂಟಾದವು.

ಶಾಂತಲೆ ಲಕ್ಷ್ಮಿಯರು ಮನಸ್ಸಿನಲ್ಲಿಯೆ ಶ್ರೀ ಶಾರದೆಯನ್ನು ಪ್ರಾರ್ಥಿಸಿ, ವೀಣೆಯ ತಂತಿಗಳನ್ನು ಮೀಟುತ್ತಲೆ, ಶ್ರುತಿ ಕುಂದದಿದ್ದ ಆ ಜೋಡಿ ವೀಣೆಗಳ ಝೇಂಕಾರ ಅಲೆಅಲೆಯಾಗಿ ಸಭೆಯೆಲ್ಲವನ್ನೂ ತುಂಬಿತು.

'ಅಕ್ಕನವರು ಶಾಂತಲೆ ವೀಣೆ ನುಡಿಸಿ ಹಾಡಿರುವುದನ್ನು ಕೇಳಿರುವ ರಲ್ಲಾ! ಮತ್ತೇಕೆ ಈ ದೊಡ್ಡ ಸಂಭ್ರಮವನ್ನು ಏರ್ಪಡಿಸಿದರೊ? ಇನ್ನಾವ ಪರೀಕ್ಷೆಗಾಗಿಯೊ? ರಾಜಮಾತೆಯವರ ಮನಸ್ಸಿನಲ್ಲಿ ಏನಿದೆಯೊ? ಜಿನೇಶ, ಈ ಇಬ್ಬರೂ ನಿನ್ನ ಮಕ್ಕಳು. ತಾಯಿ ಶಾರದೆ, ಈ ಮಕ್ಕಳಿಗೆ ಇಂದು ಧೈರ್ಯ

ವನ್ನೂ ಕಂಠಶ್ರೀಯನ್ನೂ ಕೊಟ್ಟು ಕಾಪಾಡು' ಎಂದು ಮಾಚಿಕಬ್ಬೆ ಪ್ರಾರ್ಥನೆ ಮಾಡುತ್ತ ಕುಳಿತ್ತಿದ್ದರು.

ಶಾಂತಲೆ ಲಕ್ಷ್ಮಿಯರು ಕುಳಿತಿದ್ದ ವೇದಿಕೆಯ ಮುಂಭಾಗದ ಉಪ್ಪರಿಗೆಯಲ್ಲಿ ಬಣ್ಣದ ಪಟ್ಟುಪರದೆಯ ಹಿಂದೆ ಇಡಲ್ಪಟ್ಟಿದ್ದ ಮೂರು ಉತ್ತಮಾಸನಗಳಲ್ಲಿ ಪ್ರಭುಗಳೂ ಗಂಗರಾಜರೂ ಹೇಮಾದ್ರಿಗಳೂ ಕುಳಿತಿದ್ದರು. ಪರದೆಯಲ್ಲಿ ಒಂದು ಕೃತ್ರಿಮವಾದ ಸೀಳು ಮಾಡಲ್ಪಟ್ಟಿತ್ತು. ಆ ಸೀಳಿನ ಮೂಲಕ ಪ್ರಭುಗಳು ಸಭೆಯನ್ನೂ ವೈಣಿಕೆಯರನ್ನೂ ಚೆನ್ನಾಗಿ ನೋಡಬಹುದಾಗಿತ್ತು; ನೋಡಿದರು.

ವಿಘ್ನೇಶ್ವರ ಸ್ತವ, ಶಾರದಾಸ್ತವಗಳಿಂದ ಮೊದಲಿಟ್ಟು ಶಿವಸ್ತುತಿ, ವಿಷ್ಣು ಸ್ತುತಿಗಳನ್ನೂ ವೈಣಿಕೆಯರು ನುಡಿಸಿದರು, ಹಾಡಿದರು. ಶ್ಲೋಕ, ವೃತ್ತ, ಗೀತೆ, ನೃತ್ಯಸಾಹಿತ್ಯಗಳನ್ನು ಮನೋಹರವಾಗಿ ಹಾಡಿ ನುಡಿಸಿದರು. ಸಮವಯಸ್ಸಿನ, ಅತುಳ ರೂಪಸಂಪತ್ತಿಯುಳ್ಳ ಗಂಧರ್ವಕನ್ನಿಕೆಯರಂತಿದ್ದ ಆ ಹೆಣ್ಣುಮಕ್ಕಳು, ಅನೇಕ ವರ್ಷಗಳು ಸಹಪಾಠಿಗಳಾಗಿ ಶ್ರಮಸಾಧ್ಯವಾದ ವಿದ್ಯೆಯನ್ನು ಅಭ್ಯಸಿಸಿ, ದೇವದತ್ತವಾದ ಕೋಮಲ ಕಂಠಶ್ರೀಗಳನ್ನು ವೀಣಾಝೇಂಕೃತಿಯೊಂದಿಗೆ ಮೇಳಿಸಿ ಹಾಡಿದಾಗ ಅಂಬರದಲ್ಲಿ ದೇವತೆಗಳೂ ನಿಂತು ಕೇಳಿಯಾರು. ಇನ್ನು ಮಾನವರು ನಾದಪರವಶರಾಗದಿರಲು ಸಾಧ್ಯವೆ! ಹಾಗೆ ಆ ಸಭೆಯಲ್ಲಿದ್ದವರನ್ನೆಲ್ಲ ಮೋಹಗೊಳಿಸಿತು ಶಾಂತಲೆ ಲಕ್ಷ್ಮಿಯರ ಆ ಗಾಂಧರ್ವ ವಿದ್ಯೆ. ಮಕ್ಕಳಿಬ್ಬರ ಅನೇಕ ವರ್ಷಗಳ ಸಾಧನ ತಪಸ್ಸು ಒಂದು ರೂಪದಲ್ಲಿ ಅಂದು ಸಿದ್ಧಿಸಿತು.

ಪ್ರಭುಗಳೂ ಕೇಳಿದರು, ನೋಡಿದರು, ಹರ್ಷಿತರಾದರು. ಗಂಗರಾಜರೂ ಹೇಮಾದ್ರಿಗಳೂ ಪ್ರಭುಗಳ ಸಂತುಷ್ಟಿಯನ್ನು ಅರಿತರು.

ಗಾಯನ ಮುಗಿದೊಡನೆ ಅರಮನೆಯ ಕಟ್ಟಳೆ ಮುತ್ತೈದೆಯರಿಬ್ಬರು ವೇದಿಕೆಯ ಮೇಲಕ್ಕೆ ಬಂದು ಅಲ್ಲಿಟ್ಟಿದ್ದ ಶಾರದಾ ವಿಗ್ರಹಕ್ಕೆ ಆರತಿ ಬೆಳಗಿ, ಹೆಣ್ಣುಮಕ್ಕಳಿಗೆ ಯಾರೊಬ್ಬರ ಕೆಟ್ಟಕಣ್ಣು ತಾಗದಿರಲೆಂದು ರಕ್ಷೆಯಿಟ್ಟರು. ಅನಂತರ ಕನ್ಯೆಯರಿಬ್ಬರೂ ವೇದಿಕೆಯಿಂದಿಳಿದು ಬಂದು ರಾಜಮಾತೆಯವರಿಗೂ ತಾಯಿ ಮಾಚಿಕಬ್ಬೆಯವರಿಗೂ ವಿನಯ, ಭಕ್ತಿ, ವಿಶ್ವಾಸಗಳಿಂದ ನಮಸ್ಕರಿಸಿದರು.

ಸುಹೃದಯೆಯೂ ಸಹೃದಯೆಯೂ ರಸವಂತಿಯೂ ಆದ ರಾಜಮಾತೆ ಆನಂದಾತಿಶಯದಲ್ಲಿ ಶಾಂತಲೆಲಕ್ಷ್ಮಿಯರನ್ನು ಸಮವಾಗಿ ಆಲಿಂಗಿಸಿ ಆನಂದ ಪಡೆದರು. ಮಾಚಿಕಬ್ಬೆ ಮಕ್ಕಳ ತಲೆಯ ಮೇಲೆ ಕೈಯಿಟ್ಟು 'ನೀವಿಬ್ಬರೂ ಶಾರದೆಯ ಮಕ್ಕಳು, ಆ ತಾಯಿ ಇಂದು ತನ್ನ ಮಕ್ಕಳನ್ನು ಚೆನ್ನಾಗಿ ಕಾಪಾಡಿ ಕೊಂಡಳು' ಎಂದು ಹರಸಿದರು. ಅನಂತರ ಸಭೆಯವರಿಗೆ ಹೂ, ಗಂಧ, ವೀಳೆಯ ಹಂಚಿಯಾಗಲು, ಅವರೆಲ್ಲ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ದಾರಿಯುದ್ದಕ್ಕೂ ಶಾಂತಲೆಲಕ್ಷ್ಮಿಯರು ಹಾಡಿ ನುಡಿಸಿದ್ದರ ಪ್ರಶಂಸೆಯೆ. ಅವರ ರೂಪುಲಾವಣ್ಯಗಳ ಪ್ರಶಂಸೆಯೆ. ತಮ್ಮ ಹೆಣ್ಣು ಮಕ್ಕಳೂ ಹೀಗೆ ವೀಣೆ ನುಡಿಸಿ ಹಾಡಲು ಕಲಿಯಬೇಕು ಎಂದು ಎಷ್ಟೋ ಮಾತೆಯರು ಆ ಕ್ಷಣವೆ ನಿರ್ಧರಿಸಿಬಿಟ್ಟರು. ಗಾಂಧರ್ವವಿದ್ಯೆ ಶ್ರಮಸಾಧ್ಯಮಾತ್ರವಲ್ಲದೆ, ಪೂರ್ವಪುಣ್ಯ ವಿದ್ದವರಿಗೆ ಮಾತ್ರ ಸಿದ್ಧಿಸುವುದೆಂದು ಆ ಮುಗ್ಧೆಯರೇನು ಬಲ್ಲರು!

ಅತ್ತ ಗಂಗರಾಜರೂ ಹೇಮಾದ್ರಿಗಳೂ ಪ್ರಭುಗಳಿಗೆ ವಂದಿಸಿ ತಮ್ಮ ಮನೆಗಳಿಗೆ ತೆರಳುವುದರಲ್ಲಿದ್ದರು. ಪ್ರಭುಗಳು ತಮ್ಮ ಮುಖದಲ್ಲಿ ಯಾವ ಭಾವವನ್ನೂ ವ್ಯಕ್ತಪಡಿಸದೆ ಗಂಭೀರವಾಣಿಯಿಂದ 'ವಾದ್ಯ, ಗಾಯನ, ತಮ್ಮ ಮನಸ್ಸಿಗೆ ಬಂದಿತೆ?' ಎಂದು ಕೇಳಿದರು. ಅರ್ಥಗ್ರಾಹಿಯಾದ ಭೀಷ್ಮರು 'ಅದನ್ನು ಪ್ರಭುಗಳೆ ಅಪ್ಪಣೆ ಕೊಡಿಸಬೇಕು' ಎಂದರು. ಪ್ರಭುಗಳು ನಸುನಕ್ಕು 'ಚೆನ್ನಾಗಿತ್ತಲ್ಲವೆ! ಇಬ್ಬರೂ ಎಲ್ಲ ವಿಷಯಗಳಲ್ಲೂ ಸಮಸಮನಾಗಿಯೆ ಇದ್ದಾರೆಯಲ್ಲವೆ!' ಎಂದು ಹೇಳಿ ಮುಂದೆ ನಡೆದುಹೋದರು. ಭೀಷ್ಮರು ಮೂಗಿನ ಮೇಲೆ ಬೆರಳಿಟ್ಟುಕೊಂಡರು.

ಎಲ್ಲರೂ ಅವರವರ ಮನೆಗಳಿಗೆ ಹೋಗಲಾಗಿ, ಲಕ್ಷ್ಮೀವಿಹಾರದಲ್ಲಿ ಇನ್ನುಳಿದವರು ಇಬ್ಬರೆ: ರಜತಾಸನದಲ್ಲಿ ಮಂಡಿಸಿದ್ದ ರಾಜಮಾತೆ, ಬಳಿಯೆ ನಿಂತಿದ್ದ ಮಾಚಿಕಬ್ಬೆ. ಶಾಂತಲೆ ಲಕ್ಷ್ಮಿಯರು ವೀಣೆ ನುಡಿಸಿ ಹಾಡಿದ ವೈಖರಿ ಯನ್ನು ರಾಜಮಾತೆ ಬಾಯಿತುಂಬ ಹೊಗಳಿದರು. 'ಅಂದು ನಮ್ಮ ಮುಂದೆ ಹಾಡಿ ನುಡಿಸಿದುದಕ್ಕಿಂತ ಇಂದು ನೂರುಪಾಲು ಚೆನ್ನಾಗಿದ್ದಿತು, ಮಾಚಿ. ಸಮವಯಸ್ಕರಾಗಿ, ರೂಪ, ಗುಣ, ವಿದ್ಯೆ, ಶೀಲಗಳಲ್ಲಿ ಸಮಸಮರಾಗಿ, ಒಬ್ಬರ ಹೃದಯವನ್ನೊಬ್ಬರು ಚೆನ್ನಾಗಿ ಅರಿತುಕೊಂಡಿರುವ ಈ ಮಕ್ಕಳು ಒಡ ನೋದಿಗಳು ಒಡನಾಡಿಗಳು ಮಾತ್ರವೆ ಅಲ್ಲ, ಹೊಂದಿಕೊಂಡಿರುವ ಅವರ

ಮನೋಧರ್ಮಗಳು ಅವರ ಆತ್ಮಸಾಮೀಪ್ಯವನ್ನು ಸೂಚಿಸುತ್ತವೆ' ಎನ್ನುತ್ತ ರಾಜಮಾತೆ ಪೀಠದಿಂದೆದ್ದು, 'ಮಾಚಿ, ನಿನ್ನ ಇಷ್ಟು ಚೆಂದದ ಒಡವೆಯನ್ನು ನಾವು ಕಿತ್ತುಕೊಳ್ಳುವುದೇನು?' ಎಂದರು. ಅದಕ್ಕೆ ಮಾಚಿಕಬ್ಬೆ 'ಅದನ್ನು ನಾನೇ ಸಂತೋಷದಿಂದ ತಮಗೆ ಅರ್ಪಿಸುತ್ತಿದ್ದೇನೆ, ಅಕ್ಕನವರ ಬಳಿ ಇರಬೇಕಾದ ಒಡವೆ ಅದು, ಅಲ್ಲಿ ಅದು ಇನ್ನೂ ಹೆಚ್ಚು ಶೋಭಿಸುವುದು!' ಎಂದರು.

§

ಶಾಂತಲೆ ಲಕ್ಷ್ಮಿಯರು ಕುಳಿತಿದ್ದ ಮೇನೆ ಮನೆಯ ಕಡೆ ಸಾಗಿತ್ತು. ಸ್ವಲ್ಪಕಾಲ ಇಬ್ಬರೂ ಮೌನವಾಗಿ ಕುಳಿತಿದ್ದರು. ಶಾಂತಲೆ ತಾನು ಅಂದು ನುಡಿಸಿ ಹಾಡಿದ ಎಲ್ಲ ಬಗೆಗಳೂ ಹೂವೆತ್ತಿದಂತೆ ಹಗುರವಾಗಿ, ಸರಾಗವಾಗಿ, ತನ್ನನ್ನೇ ಭ್ರಮೆಗೊಳಿಸುವಂತೆ ಕೈಗೂಡಿಬಂದದ್ದಕ್ಕೆ ಇದು ತಾಯಿ ಶಾರದೆಯ ಕರುಣೆಯಿಂದೇ ಮನಸ್ಸಿನಲ್ಲಿ ಆಶ್ಚರ್ಯಪಡುತ್ತಿದ್ದಳು. 'ನನ್ನ ನುಡಿತಕ್ಕೆ ನಡೆ ಕೊಟ್ಟು, ಹಾಡಿಗೆ ಧ್ವನಿಕೊಟ್ಟು, ಮನಸ್ಸಿಗೆ ಉತ್ಸಾಹ ಉಲ್ಲಾಸಗಳನ್ನು ಕೊಟ್ಟು ನಡಸಿದಳು ಲಕ್ಷ್ಮಿ. ಶ್ರೀ ಶಾರದೆಯೆ ಲಕ್ಷ್ಮಿಯಾಗಿ ಇಂದು ನನ್ನೊಡ ನಿದ್ದಳು, ಕರುಣಿಸಿದಳು, ಕಾಪಾಡಿದಳು ನನ್ನ ತಾಯಿ' ಎಂದುಕೊಂಡಳು ಶಾಂತಲೆ. ಒಂದು ಸಲ ಕತ್ತೆತ್ತಿ 'ಲಕ್ಷ್ಮಿ ಏನು ಮಾಡುತ್ತಿದ್ದಾಳೆ?' ಎಂದು ನೋಡಿದಳು. ಲಕ್ಷ್ಮಿ ತಲೆ ಬಗ್ಗಿಸಿಕೊಂಡು ಯಾವುದೊ ಮಹಾ ಯೋಚನೆ ಯಲ್ಲಿ ಮಗ್ನಳಾಗಿರುವಂತೆ ಕಂಡುಬಂದಳು. 'ಏಕೆ ಲಕ್ಷ್ಮೀ! ಏನು ಯೋಚನೆ ಮಾಡುತ್ತಿದ್ದೀಯೆ? ಸಂತೋಷಪಡಬೇಕಾದ ಸಮಯವಲ್ಲವೆ ಇದು! ನನ್ನವ್ವ, ನೀನು ಇಂದು ನನ್ನನ್ನು ಕಾಪಾಡಿದೆ. ಎಷ್ಟು ಬೆಂಬಲಕೊಟ್ಟೆ? ಎಷ್ಟು ಧೈರ್ಯ ಕೊಟ್ಟೆ? ಲಕ್ಷ್ಮಿ, ಇಂದು ಹಾಡಿ ನುಡಿಸಿದವಳು ನೀನು. ನಾನು ನಿನ್ನನ್ನು ಹಿಂಬಾಲಿಸಿದೆ, ಅಷ್ಟೆ. ನೀನು ಮಾತ್ರ ಇಂದು ಮುಂದಡಿ ಇಡದೆ ಹೋಗಿದ್ದರೆ ನನ್ನ ಕೈಬಾಯ್ಗಳು ಕಟ್ಟಿಹೋಗುತ್ತಿದ್ದುವು' ಎಂದು ಹೃದಯ ಬಿಚ್ಚಿ ಮಾತ ನಾಡಿದಳು ಶಾಂತಲೆ. ಲಕ್ಷ್ಮಿಯೂ ಶಾಂತಲೆಯ ವಿಷಯದಲ್ಲಿ ಅದೇ ಭಾವನೆ ಯಿಂದ ಇದ್ದಳು. ಆದರೆ ಲಕ್ಷ್ಮಿ ಮಾತಾಡಲಿಲ್ಲ; ಮಾತಾಡಲು ಆಗಲಿಲ್ಲ. ತನ್ನ ಮನಸ್ಸೆ ಕಲ್ಪಿಸಿದ ಭೀತಿಯೊಂದು ಪೆಭೂತದಂತೆ ಅವಳ ಮನಸ್ಸನ್ನೆಲ್ಲ ಕತ್ತಲೆ ಮಾಡಿದ್ದಿತು. 'ಲಕ್ಷ್ಮಿಯೇಕೆ ಮಾತನಾಡಳು' ಎಂದು ಶಾಂತಲೆಗೆ

ಭಯವಾಯಿತು. ಲಕ್ಷ್ಮಿಯ ಗಲ್ಲವನ್ನು ಹಿಡಿದೆತ್ತಿ, 'ಲಕ್ಷ್ಮೀ' ಎಂದಳು. ಆಗ ಲಕ್ಷ್ಮಿಯ ಕಣ್ಣುಗಳಿಂದ ಬಿಸಿಹನಿಗಳೆರಡು ಶಾಂತಲೆಯ ಕೈಮೇಲೆ ಉದುರಿದುವು. ಶಾಂತಲೆಗೆ ಹೆಚ್ಚು ಭಯವಾಯಿತು. 'ಲಕ್ಷ್ಮೀ, ಮಾತನಾಡೆ, ಏನಿದು? ಏನಾಗುತ್ತಿದೆ ನಿನಗೆ? ಯಾರೇನೆಂದರೆ ಹೇಳು, ಲಕ್ಷ್ಮೀ?' ಎಂದು ಅಕ್ಕರೆಯಿಂದ, ಆಧೈರ್ಯದಿಂದ ಕೇಳಿದಳು ಶಾಂತಲೆ. ತೊಟ್ಟಿಡುತ್ತಿದ್ದ ಲಕ್ಷ್ಮಿಯ ಕಣ್ಣುಗಳಿಂದ ಈಗ ಅಶ್ರುಪ್ರವಾಹವೆ ಹೊರಟಿತು. ದುಃಖ ಬಿಗಿಯುತ್ತಿದ್ದ ಕಂಠಸ್ವರದಲ್ಲಿ ಲಕ್ಷ್ಮಿ 'ಅಕ್ಕ!' ಎಂದಳು. ಶಾಂತಲೆ ಲಕ್ಷ್ಮಿಯನ್ನು ತನ್ನೆದೆಗೆ ಅವಚಿಕೊಂಡು 'ಹೇಳೆ, ನನ್ನವ್ವ, ಹೇಳು, ನಿನಗೆ ಏನಾಗುತ್ತಿದೆ! ಏನು ಬಾಧೆ?' ಎಂದು, ತಾಯಿ ಮಗುವಿನ ದುಃಖವನ್ನು ಅಕ್ಕರೆಯಿಂದ ಕೇಳುವಂತೆ ಕೇಳಿದಳು.

ಲಕ್ಷ್ಮಿಯ ತಲೆಯಲ್ಲಿ ಏನೇನು ಯೋಚನೆಗಳು ಹೊಕ್ಕಿದ್ದುವೊ? ಏನೇನನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದಳೊ? ಅವಳು ತಲೆಯೆತ್ತಿ 'ಅಕ್ಕ, ನೀನು ರಾಜರನ್ನು ಮದುವೆಯಾಗುತ್ತೀಯೆ, ಅರಮನೆಗೆ ಹೊರಟುಹೋಗುತ್ತೀಯೆ. ಇನ್ನು ಅಕ್ಕನ ಸಂಗ ನನಗೆ ದೂರವಾಗುತ್ತದೆಯಲ್ಲವೆ! ಎಂದು ದುಃಖವಾಗುತ್ತಿದೆ' ಎಂದಳು.

'ಅಯ್ಯೋ ಹುಚ್ಚಿ! ಹೀಗೆಂದು ನಿನಗೆ ಹೇಳಿದವರಾರೆ? ಇಲ್ಲದುದನ್ನೆಲ್ಲ ಕಲ್ಪಿಸಿಕೊಂಡು ಬರಿದೆ ದುಃಖಪಡುತ್ತಿರುವೆ.'

'ಅಕ್ಕ, ಇದು ಸುಳ್ಳಾಗಲಾರದು. ಸುಳ್ಳಾಗಬಾರದು.'

'ಲಕ್ಷ್ಮೀ, ಇದು ನನಗೆ ಸಂಬಂಧಿಸಿದ ವಿಚಾರವಲ್ಲವೆ? ನಿರ್ಧರಿಸುವವಳು ನಾನಲ್ಲವೆ!'

'ಪ್ರಭುಗಳೇ ಕೈನೀಡಿ ಬಂದರೆ, ಒಲ್ಲೆ ಎನ್ನುವೆಯಾ?'

'ಇನ್ನೇನು ಹೇಳಲೆ?'

'ಅಂತಹ ಮಹಾನುಭಾವರ ಕೈಹಿಡಿಯಲು ಜನ್ಮಾಂತರಗಳ ತಪಸ್ಸು ಸಾಲದು, ಅಕ್ಕಾ. ಗುಣದಲ್ಲಿ, ರೂಪದಲ್ಲಿ, ಐಶ್ವರ್ಯದಲ್ಲಿ, ಧೈರ್ಯ, ವೀರ, ಉದಾರತೆಗಳಲ್ಲಿ, ದೈವಭಕ್ತಿ, ಧರ್ಮಶ್ರದ್ಧೆಗಳಲ್ಲಿ ಇವರಿಗೆ ಸಮನುಂಟೆ! ಅಕ್ಕ, ನೀನು ಈ ಮಹಾನುಭಾವರ ಕೈಹಿಡಿದು ಮಹೋನ್ನತಳಾಗು, ಈ ಮಹಾಭಾಗ್ಯ ನನ್ನ ಅಕ್ಕನದಾಗಲಿ.'

'ನಿನ್ನ ಈ ಕಣ್ಣೀರು ಏಕೆ, ಲಕ್ಷ್ಮಿ?'

'ಸ್ವಾರ್ಥ, ಶುದ್ಧ ಸ್ವಾರ್ಥ. ನೀನಿನ್ನು ನನಗೆ ದೂರಗತೆಯಾಗುವೆಯಲ್ಲಾ ಎಂದು.'

'ಹುಚ್ಚಿ! ಹುಚ್ಚಿ! ಇಲ್ಲದ ಸಂಗತಿಗಳನ್ನು ಕಲ್ಪನೆಮಾಡಿಕೊಂಡು ಮನಸ್ಸಿಗೆ ವೃಥಾ ನೋವು ತಂದುಕೊಳ್ಳುತ್ತಿದ್ದೀಯೆ.'

'ಅಕ್ಕಾ, ಮಗಳನ್ನು ಧಾರೆಯೆರೆದು ಕೊಟ್ಟ ಕೂಡಲೆ ತಾಯಿಹೃದಯ ಕಣ್ಣೀರು ಮಿಡಿಯುತ್ತಲ್ಲವೆ? ಅಂತೆಯೆ ಈ ನನ್ನ ಕಣ್ಣೀರು.'

'ಲಕ್ಷ್ಮೀ, ನಿನ್ನ ಅಂತಃಕರಣ ಅಪಾರ. ಕಣ್ಣೀರನ್ನು ಒರಸಿಕೊ, ನನ್ನ ತಾಯಿ. ಶ್ರೀ ಶಾರದೆ ನಮ್ಮಿಬ್ಬರನ್ನೂ ಅಗಲಿಸದಿರಲಿ.'

'ಹಾಗೆನ್ನಬೇಡ, ಅಕ್ಕ. ನೀನು ಮಹಾರಾಣಿಯಾಗುವುದಕ್ಕೆ ನನ್ನ ಸ್ನೇಹ ಅಡ್ಡಬರಬಾರದು. ಅಕ್ಕನಿಗೆ ಕಲ್ಯಾಣವಾದರೆ ನನಗೆ ಸಂತೋಷವಲ್ಲವೆ? ಹತ್ತಾರು ವರ್ಷ ಒಟ್ಟಾಗಿದ್ದುದರ ಮಾಲ್ಮೆ ಈ ಕಣ್ಣೀರು. ಇಂದಿಲ್ಲದಿದ್ದರೆ, ನಾಳೆ, ನಾಡಿದ್ದು, ಎಂದಾದರೊಂದು ದಿನ ನೀನು ಮದುವೆಯಾಗಲೇಬೇಕಲ್ಲವೆ? ಒಬ್ಬರನ್ನೊಬ್ಬರು, ಅಗಲಲೆಬೇಕಲ್ಲವೆ? ಅಕ್ಕ, ನೀನೆಲ್ಲೇ ಇರು, ಶಾರದೆಗೆ ನಿನ್ನ ನಿತ್ಯದ ಪೂಜೆಯನ್ನು ನಾನು ಸಲ್ಲಿಸುತ್ತೇನೆ. ಅದೇ ದೇಗುಲದಲ್ಲಿ ನಾನೊಬ್ಬಳೇ ಕುಳಿತು ತಪಸ್ಸುಮಾಡುತ್ತೇನೆ.'

'ಲಕ್ಷ್ಮೀ, ಏನು ಮಾತನಾಡುತ್ತಿರುವೆ! ನೀನೂ ಮದುವೆಯಾಗ ಬೇಕಲ್ಲವೆ?'

'ಅಕ್ಕಾ, ಇದೇನು ಪ್ರಶ್ನೆ ನಿನ್ನದು? ನಾನು ಮದುವೆಯಾಗೆ. ಈ ಊರಿನಿಂದ, ನಿನ್ನ ಸಾಮೀಪ್ಯದಿಂದ, ತಾಯಿ ಶಾರದೆಯ ಸಾನ್ನಿಧ್ಯದಿಂದ ನಾನು ದೂರವಾಗಿರಲಾರೆ. ಖಂಡಿತ ದೂರವಾಗಿರಲಾರೆ.'

ಹೀಗೆನ್ನುತ್ತಿರುವಾಗ ಲಕ್ಷ್ಮಿಯ ಕಣ್ಣೀರು ಮತ್ತೆ ಕೋಡಿಯಾಯಿತು. ಶಾಂತಲೆಯ ಕಣ್ಣೀರ ಕಟ್ಟೆಯೂ ಒಡೆಯಿತು.

ಮೇನೆ ಮನೆಯ ಮುಂದೆ ಬಂದು ನಿಂತಿತು. ದುಃಖಿತೆಯರಿಬ್ಬರೂ ಮೇನೆಯಿಂದಿಳಿದು ಮನೆಯೊಳಕ್ಕೆ ಹೋದರು. ಪೆದ್ದ ದೇಚ ಮೇನೆಯೊಳ ಗಿದ್ದ ವೀಣೆಗಳನ್ನೂ ಫಲಪುಷ್ಪಗಳನ್ನೂ ತೆಗೆದುಕೊಂಡು ಹೋಗಿ ಶಾರದೆಯ ಗುಡಿಯಲ್ಲಿಟ್ಟ.

ಲಕ್ಷ್ಮಿಯ ಮನಸ್ಸನ್ನು ಕೊರೆಯುತ್ತಿದ್ದ ಕಲ್ಪನೆಗಿಂತ ಶತಾಧಿಕವಾದ ಕಠಿಣ ಯೋಚನೆ ಈಗ ಶಾಂತಲೆಯ ತಲೆಯನ್ನು ಕೊರೆಯಲಾರಂಭಿಸಿತ್ತು. 'ಒಂದು ವೇಳೆ ಲಕ್ಷ್ಮಿ ಊಹಿಸಿದಂತೆಯೆ ಪ್ರಭುಗಳು ತನ್ನ ಕೈಹಿಡಿಯಲು ಬಂದರೆ ಆಗ ತನ್ನ ಕರ್ತವ್ಯವೇನು? ಲಕ್ಷ್ಮಿಯ ಕರ್ತವ್ಯವೇನು? ಲಕ್ಷ್ಮಿಯ ವಿಷಯದಲ್ಲಿ ಆಗ ತಾನು ಹೇಗೆ ನಡೆದುಕೊಳ್ಳಬೇಕು? ಲಕ್ಷ್ಮಿಯು ಅವಿವಾಹಿತೆ ಯಾಗಿಯೆ ನಿಂತರೆ, ಆ ದೋಷ ಯಾರದು? ಅದು ತನ್ನ ತಪ್ಪಾಗುವುದೆ? ಅಥವಾ ಲಕ್ಷ್ಮಿಯದೇ ಆಗುವುದೆ?' ಎಂಬ ಕಠಿಣ ಪ್ರಸಂಗದಲ್ಲಿ ಶಾಂತಲೆಯ ಮನಸ್ಸು ತಳಮಳಗೊಂಡಿತು.

ಸ್ವಲ್ಪ ಹೊತ್ತಿಗೆ ಮುಂಚೆ ಗಾಯನಮಾಧುರ್ಯದ ಆನಂದಾತಿರೇಕದಲ್ಲಿ ನಲಿಯುತ್ತಿದ್ದ ಆತ್ಮಗಳೆರಡೂ ಈಗ ಮಹಾಯೋಚನೆಗೂ ಭಯಕ್ಕೂ ಈಡಾದುವು. ಈಗ ಅವರೆದುರಿಗಿದ್ದುದು ಬಹು ಕಠಿಣ ಪ್ರಶ್ನೆ. ಮನುಷ್ಯಪ್ರಯತ್ನಕ್ಕೆ ಮೀರಿದ ಪ್ರಶ್ನೆ. ಈ ಸಂಕಟಸ್ಥಿತಿಯಲ್ಲಿ ಲಕ್ಷ್ಮಿಯನ್ನು ಅವಳ ಮನೆಗೆ ಕಳುಹಿಸಿ ಕೊಡಲು ಶಾಂತಲೆಗೆ ಮನಸ್ಸು ಒಪ್ಪಲಿಲ್ಲ. ದೇಚನನ್ನು ಕರೆದು 'ಪಂಡಿತರ ಮನೆಗೆ ಹೋಗಿ, ಅವರನ್ನು ಕಂಡು, ಲಕ್ಷ್ಮಿ ಇಲ್ಲಿಯೇ ಇರುತ್ತಾಳೆ ಎಂದು ಹೇಳಿ ಬಾ' ಎಂದು ಹೇಳಿಕಳುಹಿಸಿದಳು.

ಹಸಿವಿಲ್ಲವೆಂದು ಹೇಳಿ ಹಾಲನ್ನು ಮಾತ್ರ ಇಬ್ಬರಿಗೂ ತರಿಸಿಕೊಂಡು, ಶಾಂತಲೆ ಲಕ್ಷ್ಮಿಯ ಕೈಹಿಡಿದು ಅವಳನ್ನು ತನ್ನ ಶಯ್ಯಾಗೃಹಕ್ಕೆ ಕರೆದುಕೊಂಡು ಹೋದಳು.

'ಲಕ್ಷ್ಮೀ, ಅಯ್ಯನವರಿಗೆ ಹೇಳಿ ಕಳಿಸಿದೆ: ನೀನು ಈ ರಾತ್ರಿ ನನ್ನೊಡನೆಯೆ ಇರುವೆಯೆಂದು. ಒಂದಿಷ್ಟು ಹಾಲನ್ನಾದರೂ ಕುಡಿ' ಎಂದಳು.

'ನೀನು ಕುಡಿಯಕ್ಕ. ನನಗೆ ಸ್ವಲ್ಪವೂ ಹಸಿವಿಲ್ಲ.'

'ನೀನು ಒಲ್ಲೆ ಎಂದರೆ ನನಗೂ ಬೇಡ. ನನಗೆ ಮಾತ್ರ ಹಸಿವೆಲ್ಲಿಯದು?'

ಲಕ್ಷ್ಮಿ ನೆಪಮಾತ್ರಕ್ಕೆ ಸ್ವಲ್ಪ ಹಾಲನ್ನು ಕುಡಿವ ಪಾತ್ರೆಗೆ ಬಗ್ಗಿಸಿಕೊಂಡು, ಗುಟುಕರಿಸಿ ಇಟ್ಟಳು. ಆಗ ಅವಳಿಗೆ ಅಮೃತವೂ ಬೇಡವಾಗಿತ್ತು. ಶಾಂತಲೆಯೂ ಹಾಲನ್ನು ಮುಟ್ಟಲಿಲ್ಲ. ಲಕ್ಷ್ಮಿ ಆಭರಣಗಳನ್ನು ಬಿಚ್ಚಿಟ್ಟು ಅಕ್ಕನ ಹಾಸಿಗೆಯ ಮೇಲೆ ಮುಖ ಅಡಿಯಾಗಿ ಬಿದ್ದುಕೊಂಡಳು. ಅವಳಿದ್ದ ರೀತಿಯಲ್ಲಿ ಲಕ್ಷ್ಮಿ ಇನ್ನೂ ದುಃಖಪಡುತ್ತಿರುವಳೆಂದು ಶಾಂತಲೆಗೆ ತಿಳಿಯಿತು.

ಶಾಂತಲೆ ಎದ್ದು ತನ್ನ ಒಡವೆಗಳನ್ನು ಬಿಚ್ಚಿಟ್ಟು, ಸೋದರನ್ನು ಇಳಿಸಿ, ತಾನೂ ಮಂಚದ ಮೇಲೆ ಹೋಗಿ ಮಲಗಿ, ಕಣ್ಣೀರಿಂದ ಒದ್ದೆಯಾಗಿದ್ದ ಗೆಳತಿಯ ಮುಖವನ್ನು ತನ್ನೆದೆಯ ಮೇಲಕ್ಕೆ ತೆಗೆದುಕೊಂಡು, 'ಲಕ್ಷ್ಮೀ, ಪುನಃ ಮೊದಲಿಟ್ಟೆಯಾ ?' ಎಂದಳು.

"ಇಲ್ಲ, ಅಕ್ಕ. ಅಳಬಾರದು, ಅಳಕೂಡದು ಎಂದುಕೊಳ್ಳುತ್ತೇನೆ, ಮತ್ತೆ ಅಳು ತನ್ನಷ್ಟಕ್ಕೆ ತಾನೆ ಬರುತ್ತದೆ. ನನ್ನ ಹೃದಯಕ್ಕೆ ನಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದೇನೆ. 'ಅಕ್ಕ ಎಲ್ಲಿಗೆ ಹೋದಾಳು! ಇದೇ ಊರಿನಲ್ಲಿ, ಅರಮನೆಯಲ್ಲಿ ತಾನೆ ಇರುವಳು. ಬೇಕಾದಾಗ ನಾನೇ ಅಲ್ಲಿಗೆ ಹೋಗಿ ಕಂಡು ಬರಬಹುದಲ್ಲವೆ? ಬೇಕಾದಾಗ ಅಕ್ಕನೂ ಕರಸಿಕೊಳ್ಳಬಹುದಲ್ಲವೆ?' ಎಂದು . . . ಅಯ್ಯೋ! ಇದೇನು ಹುಚ್ಚೆ ನನಗೆ! ಮಹಾ ಸೌಭಾಗ್ಯವತಿಯಾಗಲಿರುವ, ಮಹಾರಾಣಿಯಾಗಲಿರುವ ನಿನ್ನನ್ನು ನಾನು ತಡೆಯಲೆ? ತಡೆಯಬಹುದೆ? ಹುಚ್ಚುಹೃದಯ ಸುಮ್ಮನೆ ಅಳುವುದೇತಕ್ಕೊ?"

ಆದರೆ ಈಗ ಹೆಚ್ಚು ದುಃಖಿಸುತ್ತಿದ್ದುದು ಶಾಂತಲೆಯ ಹೃದಯ. ಈ ಇಬ್ಬರ ಸಹೃದಯ ಅನುಕಂಪ ಇಷ್ಟು ನೋವಾಗಿ ಪರಿಣಮಿಸಿತ್ತು. ಮಧುರ, ಭಾವಮಯಿಯಾದ ಶಾಂತಲೆ ಲಕ್ಷ್ಮಿಯ ಅವಸ್ಥೆಯನ್ನು ಕಂಡು ಭಯಪಟ್ಟಳು. ಕಾಣಬಾರದುದನ್ನು ಕಂಡಳು. ನೆನೆಯಬಾರದುದನ್ನು ನೆನೆದಳು. ಬಹಳ ಹೊತ್ತಿನವರೆಗೂ ಶಾಂತಲೆ ಹಾಗೆಯೇ ಯೋಚನಾಮುದ್ರಿತಳಾಗಿದ್ದಳು. ಲಕ್ಷ್ಮಿ ಅಕ್ಕನ ಎದೆಯ ಮೇಲೆ ಮುಖವಿಟ್ಟು ಅವಳ ಎದೆಯನ್ನು ತೋಯಿಸುತ್ತಲೆ ಇದ್ದಳು. ಇಬ್ಬರ ಅಂತಃಕರಣವೂ ಕರಗಿ ಸೋನೆಯಾಗಿತ್ತು.

ಎದೆ ತಣ್ಣಗಾಗಲು ಶಾಂತಲೆ ಲಕ್ಷ್ಮಿಯ ಮುಖವನ್ನು ತನ್ನ ಎರಡು ಕೈಗಳಿಂದಲೂ ಎತ್ತಿ 'ಎಷ್ಟು ಹೊತ್ತು ಅಳುವುದೇ, ಲಕ್ಷ್ಮಿ? ಸಮಾಧಾನ ಮಾಡಿಕೊಳ್ಳೆ. ನಿನ್ನನ್ನು ಉಳಿದು ಸ್ವರ್ಗಕ್ಕೇ ಆದರೂ ನಾನು ಹೋಗೆ!' ಎಂದಳು.

ಆ ಮಾತು ಲಕ್ಷ್ಮಿಗೆ ಭರವಸೆಕೊಡುವ ಮಾತಾದರೂ ಲಕ್ಷ್ಮಿ ಅದನ್ನು ಕೇಳಿ ಸಿಡಿಲು ಬಡಿದಂತಾದಳು. 'ತನ್ನ ಪ್ರೀತಿವಿಶ್ವಾಸಾಶ್ರುಗಳು ಅಕ್ಕನ ಬಾಯಿಂದ ಇಂತಹ ಘೋರಪ್ರತಿಜ್ಞೆಯನ್ನು ಮಾಡಿಸಿದವಲ್ಲಾ' ಎಂದು ಲಕ್ಷ್ಮಿ ಆಗ ಭಯದಿಂದ ನಡುಗಿಹೋದಳು. ಅವಳ ಎದೆ ಬೆಂದು 'ಅಯ್ಯೋ ಅಕ್ಕ! ಎಂತಹ

ಮಾತನಾಡಿದೆ?' ಎಂದು ಲಕ್ಷ್ಮಿ ತನ್ನ ಬಲಗೈಯಿಂದ ಶಾಂತಲೆಯ ಬಾಯನ್ನು ಭದ್ರವಾಗಿ ಮುಚ್ಚಿಹಿಡಿದು, 'ನನ್ನ ಮೇಲಾಣೆ . . . ಆ ಮಾತನ್ನು ಹಿಂದಕ್ಕೆ ತೆಗೆದುಕೊ, ಅಕ್ಕಾ . . . ಹಿಂದಕ್ಕೆ ತೆಗೆದುಕೊ. ನಾನು ನಿನಗಿಂತ ಚಿಕ್ಕವಳು. ಹುಡುಗಿಯೂ ಅಲ್ಲ, ಪ್ರೌಢೆ ಮೊದಲೆ ಅಲ್ಲ. ನಿನಗಿರುವ ತಾಳ್ಮೆ, ವಿವೇಚನೆ ನನಗೆಲ್ಲಿ ಬರಬೇಕು? ಏಕೆ ಅತ್ತೆನೋ ನನಗೇ ತಿಳಿಯದು. ಅಳದೆ ಇರಲೂ ಆಗಲಿಲ್ಲ. ಶಾಂತಂ ಪಾಪಂ, ಶಾಂತಂ ಪಾಪಂ. ಅಕ್ಕನಿಗೆ ಅಭ್ಯುದಯವಾಗಲಿ. ಸುಖಸಂತೋಷಸಾಮ್ರಾಜ್ಯ ಸಿಗಲಿ. ನನಗೆ ಅದಕ್ಕಿಂತ ಹಿತವಾದುದು ಬೇರೊಂದಿಲ್ಲ. ಬೇರೆ ಯಾವ ಸಂತೋಷವೂ ನನಗೆ ಬೇಡ. ಇದು ದುಃಖ ವಲ್ಲ ಅಕ್ಕ, ಇದೊಂದು ವಿಚಿತ್ರವಾದ ಸಂತೋಷ. ನಾನು ದುಃಖಪಡುತ್ತಿರುವೆ ನೆಂದು ನೀನು ಭಾವಿಸಿ ಎಂತಹ ಭೀಕರವಾದ ಮಾತನ್ನಾಡಿದೆ! ನನ್ನನ್ನು ಕ್ಷಮಿಸು, ನನ್ನನ್ನು ಕ್ಷಮಿಸು. ನಿನ್ನ ಮಾತು ಬಿಟ್ಟಿತು, ಬಿಟ್ಟಿತು. ಶಾರದೆ, ನಮ್ಮಿಬ್ಬರನ್ನೂ ಕಾಪಾಡು ತಾಯಿ' ಎನ್ನುತ್ತ ಲಕ್ಷ್ಮಿ ಮತ್ತೆ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಅಳುವ ಕೂಸನ್ನು ತಾಯಿ ಸಂತೈಸುವಂತೆ, ಶಾಂತಲೆ ಲಕ್ಷ್ಮಿಯ ತಲೆಯನ್ನು ತಟ್ಟಿ, 'ಇನ್ನು ಅಳಬೇಡ, ಲಕ್ಷ್ಮಿ, ಸಾಕುಮಾಡೆ; ಅವ್ವೆ ಕೇಳಿ ಇದೇನಾಯಿತು ಎಂದು ಭಯಪಟ್ಟು ಬಂದಾರು. ಸದ್ಯ ನುಂಗಿಕೊ' ಎಂದು ಸಂತೈಸಿದಳು.

§

ಅರಮನೆಯಿಂದ ಮನೆಗೆ ಬಂದ ಮಾಚಿಕಬ್ಬೆ ನೆಟ್ಟಗೆ ಪತಿಯಿದ್ದೆಡೆಗೆ ಹೋದರು. ಮಾರಸಿಂಗಮಯ್ಯ ಆಗತಾನೆ ಊಟ ಮುಗಿಸಿ ಉಪ್ಪರಿಗೆಯ ಚಂದ್ರಶಾಲೆಯಲ್ಲಿ ಚಂದ್ರಿಕೆಯ ಆಮೋದವನ್ನು ಸವಿಯುತ್ತ ಕುಳಿತಿದ್ದರು.

ಆಳೊಬ್ಬ ಸುಖಾಸನವನ್ನು ಮಾಚಿಕಬ್ಬೆಯವರಿಗಾಗಿ ತಂದಿಟ್ಟ. ಮಾಚಿ ಕಬ್ಬೆ ಅದರಲ್ಲಿ ಕುಳಿತು 'ಊಟವಾಯಿತೆ?' ಎಂಬ ಪ್ರಶ್ನೆಯೊಡನೆ ಮಾತಿಗೆ ಮೊದಲಿಟ್ಟರು.

'ನಿಮ್ಮೆಲ್ಲರಿಗಾಗಿ ಕಾದು ಕಾದು ಸಾಕಾಗಿ ಈಗತಾನೆ ಊಟ ಮುಗಿಸಿ ಇಲ್ಲಿ ಬಂದು ಕುಳಿತೆ, ನೀನೂ ಬಂದೆ. ಮಕ್ಕಳು ಚೆನ್ನಾಗಿ ಹಾಡಿದರೆ?'

'ಅದನ್ನೇ ಹೇಳುವುದಕ್ಕೆ ಬಂದೆ.'

5

'ಚೆನ್ನಾಗಿ ನುಡಿಸಿದರೆ? ಹಾಡಿದರೆ? ಸಭೆಯಲ್ಲಿ ಧೈರ್ಯಗೆಡಲಿಲ್ಲವಷ್ಟೆ? ರಾಜಮಾತೆಗೂ ಇತರರಿಗೂ ಮೆಚ್ಚಿಗೆಯಾಯ್ತೆ? ಇಷ್ಟು ಹೊತ್ತು ಏಕಾಯಿತು?'

'ಸಭೆ ಮುಗಿದು ಬಹಳ ಹೊತ್ತಾಯಿತು. ನಾನು ನಿಧಾನವಾಗಿ ಬಂದೆ. ಅಕ್ಕನವರು ನಿಲ್ಲಿಸಿಕೊಂಡಿದ್ದರು.'

'ಹುಂ . . .'

'ಈ ಹೊತ್ತು ಮಕ್ಕಳ ಹೃದಯಗಳಲ್ಲಿ ತಾಯಿ ಶಾರದೆಯೆ ನೆಲಸಿದ್ದಳು. ಮಕ್ಕಳು ಅಷ್ಟು ಚೆನ್ನಾಗಿ ನುಡಿಸಿ ಹಾಡಿದುದನ್ನು ನಾವ್ಯಾ ಕೇಳಿಲ್ಲ.'

'ಹೂಂ!'

'ನಾವೆಲ್ಲ ಬೆರಗಾಗಿಹೋದೆವು. ಅಕ್ಕನವರಿಗಂತೂ ಹೇಳತೀರದಷ್ಟು ಆನಂದವಾಯಿತು. ನಮ್ಮ ಮಗುವಿನ ಪುಣ್ಯ; ಅಕ್ಕನವರು ಚಿನ್ನದಂತಹ ಮಾತನಾಡಿದರು.'

'ಹೂಂ!'

'ಮಾಚಿ, ನಿನ್ನ ಇಷ್ಟು ಚೆಂದದ ಒಡವೆಯನ್ನು ನಾವು ಕಿತ್ತುಕೊಳ್ಳುವದೆ? ಎಂದರು.'

'ಹೂಂ!'

'ನಾನೇ ಮನಸಾರೆ ಆ ಒಡವೆಯನ್ನು ತಮಗೊಪ್ಪಿಸುತ್ತಿದ್ದೇನೆ. ಅಕ್ಕನವರ ಬಳಿ ಅದು ಇನ್ನೂ ಹೆಚ್ಚಾಗಿ ಶೋಭಿಸೀತು ಎಂದೆ.'

'ಹೂಂ!'

'ಹೇಮಾದ್ರಿಗಳೆ ನನ್ನ ಕಿವಿಯಲ್ಲಿ ಎಂದರು: ಪ್ರಭುಗಳು ಉಪ್ಪರಿಗೆಯಲ್ಲಿ ತೆರೆಯ ಹಿಂದೆ ಕುಳಿತು ಕೇಳಿದರಂತೆ!'

'ಹೂಂ!'

'ಇದೇನು! ನಾನು ನಿಮಗೆ ಕಾಗಕ್ಕ ಗುಬ್ಬಕ್ಕನ ಕತೆ ಹೇಳುತ್ತಿದ್ದೇನೆಯೆ? ನೀವು ಬರಿ ಹೂಂಗುಟ್ಟುವುದಕ್ಕೆ? ನಿಮಗೆ ಉತ್ಸಾಹವಿಲ್ಲವೆ?'

'ಇಲ್ಲದೆ ಉಂಟೆ! ನಾವು ಯೋಧರು ನೋವನ್ನೂ ಸಹಿಸಬಲ್ಲೆವು, ಹಿಗ್ಗನ್ನೂ ಸಹಿಸಬಲ್ಲೆವು. ಈ ಎರಡೂ ನಿಮಗೆ ಸಾಧ್ಯವಿಲ್ಲ.'

'ಇದೊಂದು ಬಿಂಕ, ಬಿಗುಮಾನ. ಸದ್ಯ ನಾಳೆ ಒಂದು ವೇಳೆ ಅಕ್ಕ

ನವರೇ ನಿಮ್ಮನ್ನು ಕರಸಿದಾಗ, ಅಥವಾ ಗಂಗರಾಜರೇ ಕೇಳಿದಾಗ ನೀವು ಹೀಗೇ ಮುಸುಡಿ ಉದ್ದಮಾಡಿಕೊಂಡು ಹೂಂಗುಟ್ಟಬೇಡಿ. ನಿಮಗೆ ಮನಸ್ಸಿಲ್ಲ ವೇನೋ ಎಂದು ಶಂಕೆಪಟ್ಟಾರು. ಸದ್ಯ ಮಗಳ ಪುಣ್ಯ; ಧರ್ಮೇಶ್ವರನ ಕೃಪೆ; ತಾಯಿ ಶಾರದೆಯ ಕೃಪೆ. ಈಗ ನೀವು ಅನ್ನುತ್ತಿರುವ 'ಹುಂ' ಪ್ರಭುಗಳ ಬಾಯಿಂದಲೂ ಹೊರಟುಬಿಟ್ಟರೆ ನಾವು ಧನ್ಯರು, ಶಾಂತಲೆ ಧನ್ಯಳು.'

'ಹೂಂ!'

'ಇಷ್ಟೆಲ್ಲ ದೈವಯತ್ನವೆ ಹೊರತು ಬೇರೆಯಲ್ಲ. ಶಾರದೆಯೆ ನಾಳೆ ಪ್ರಭು ಗಳ ಬಾಯಲ್ಲಿ ಕುಳಿತು ಹುಂ ಅನ್ನಿಸುತ್ತಾಳೆ ನನ್ನ ತಾಯಿ.'

'ತಥಾಸ್ತು, ತಥಾಸ್ತು. ಮಾಚಿ, ನಿನ್ನ ಬಾಯಲ್ಲಿ ಹಾಲ್ಜೇನು ಸುರಿ ಯಲಿ. ಹೋಗಿ ಊಟಮಾಡು. ಎಷ್ಟು ಹೊತ್ತಾಯಿತು!'

ಆಗ ದೇಚ 'ಅವ್ವ, ಆರೋಗಣೆಗೆ' ಎನ್ನುತ್ತ ಬಂದ. ಮಾಚಿಕಬ್ಬೆ ಅವನನ್ನು ಕುರಿತು, 'ಶಾಂತಲವ್ವ ಊಟಮಾಡಿದಳೆ?' ಎಂದು ಕೇಳಿದರು. 'ಇಲ್ಲವ್ವ, ಊಟ ಮಾಡ್ಲಿಲ್ಲ—ಶಾಂತಲವ್ವ ಏಳಿದರು ನಂಗೆ ಅಸಿವಿಲ್ಲ ಆಲೇ ಸಾಕು ಅಂದ್ರವ್ವಾ. ಲಕ್ಷ್ಮವ್ವಾನೂ ಇಲ್ಲೇ ಮನಿಕ್ಕೊಂಡ್ರು. ನಾನೇ ಪಂಡಿತರ ಮನೆಗೋಗಿ ಯೋಳ್ಬಂದೆ' ಎಂದ ದೇಚ.

'ಮಕ್ಕಳೇಕೆ ಹೀಗೆ ಉಪವಾಸ ಮಲಗಿದರೊ! ಅಷ್ಟು ಹೊತ್ತು ಹಾಡಿ, ನುಡಿಸಿ ಹಸಿದಿರಬೇಕಲ್ಲವೆ? ಹೆಚ್ಚು ದಣಿದಿದ್ದುದರಿಂದ ಒಂದು ವೇಳೆ ಹಾಗೆಯೇ ಮಲಗಿಬಿಟ್ಟರೊ ಏನೊ! ನಿದ್ದೆ ಬಂದೀತೆ? ಎಂದು ಆ ತಾಯಿಯ ಕರುಳು ಬಾಧಿಸಿತು. ಮಾಚಿಕಬ್ಬೆ ಕೆಳಗಿಳಿದು ಹೋಗಿ ಶಾಂತಲೆಯ ಕೋಣೆಯ ಬಾಗಿಲನ್ನು ಮೆಲ್ಲಗೆ ತಟ್ಟಿ 'ಲಕ್ಷ್ಮೀ! ಶಾಂತಲೆ!' ಎಂದು ಮೃದುವಾಗಿ ಕರೆದರು.

ಲಕ್ಷ್ಮಿಗೆ ನಿದ್ದೆಬಂದಿತ್ತು. ಯೋಚನೆ ಹಿಡಿದಿದ್ದ ಶಾಂತಲೆ ಇನ್ನೂ ನಿದ್ದೆಮಾಡಿರಲಿಲ್ಲ. ಕರೆದವರು ತನ್ನ ತಾಯಿ ಎಂದು ತಿಳಿದು, ಲಕ್ಷ್ಮಿಗೆ ನಿದ್ರಾಭಂಗವಾಗದಂತೆ ಮೆಲ್ಲಗೆ ಇಳಿದುಬಂದು, ಬಾಗಿಲನ್ನು ಸದ್ದಿಲ್ಲದೆ ತೆರೆದು, ಹೊರಗೆ ಬಂದು ಪುನಃ ಬಾಗಿಲನ್ನು ಎಳೆದುಕೊಂಡು ಮುಚ್ಚಿ, ತಗ್ಗಿನ ಧ್ವನಿ ಯಲ್ಲಿ 'ಅವ್ವೆ, ಲಕ್ಷ್ಮಿ ಈಗತಾನೆ ನಿದ್ದೆಮಾಡಿದಳು' ಎಂದಳು.

'ಏಕೆ ಮಗೂ, ಇಬ್ಬರೂ ಉಪವಾಸ ಮಲಗಿದಿರೇಕೆ? ಅಕ್ಕನವರು

ಈ ದಿನ ಬಹು ಮೆಚ್ಚಿಕೊಂಡರು. ಅಷ್ಟು ಜನರೂ ಸಂತೋಷಪಟ್ಟರು. ನಿನ್ನ ಶಾರದೆಯ ಅನುಗ್ರಹ, ಇಂದು ನಿಮ್ಮಿಬ್ಬರ ನಾಲಗೆಯಲ್ಲಿ ನೆಲಸಿ ನುಡಿದುದು ಆ ಮಹಾತಾಯಿಯೆ. ಅಯ್ಯೋ! ಲಕ್ಷ್ಮಿ ಉಪವಾಸ ಮಲಗಿದಳೆ? ಕಡೆಗೆ ಇಬ್ಬರೂ ಹಾಲನ್ನಾದರೂ ಕುಡಿದಿರೊ? ಅದೂ ಇಲ್ಲವೊ?'

'ಹಸಿವಿದ್ದಿತವ್ವಾ, ಉಣಲಾಗಲಿಲ್ಲ.'

'ಹಾಗೆಂದರೇನೆ!'

'ಹೇಳುತ್ತೇನವ್ವ. ಅವ್ವ, ನಾವು ಹೊರಟುಬಂದ ಮೇಲೆ ಅಕ್ಕನವರು ಏನೆಂದರು?'

'ಪ್ರಶ್ನೆಗೆ ಪ್ರಶ್ನೆ ಕೇಳುತ್ತಿದ್ದೀಯೆ. ನನ್ನ ಪ್ರಶ್ನೆಗೆ ಉತ್ತರ ಹೇಳು.'

ಶಾಂತಲೆ (ಸಣ್ಣ ಧ್ವನಿಯಲ್ಲಿ): 'ಹೇಳುತ್ತೇನವ್ವ. ನಾವು ಗಟ್ಟಿಯಾಗಿ ಮಾತನಾಡಿದರೆ, ಲಕ್ಷ್ಮಿಗೆ ನಿದ್ರಾಭಂಗವಾಗಬಹುದು. ಈಗ ಅವಳಿರುವ ಸ್ಥಿತಿಯಲ್ಲಿ ನಿದ್ರೆ ಅವಳಿಗೆ ಅವಶ್ಯಕ. ಕಷ್ಟಪಟ್ಟು ನಿದ್ರೆಮಾಡಿಸಿ ಬಂದಿದ್ದೇನೆ. ಏನು ಹೇಳಿದರು ಅವ್ವೆ, ಅಕ್ಕನವರು?'

'ಏನಾಯಿತು? ಲಕ್ಷ್ಮಿಗೆ ಏನಾಗಿದೆ?'

'ಏನೂ ಇಲ್ಲ. ದಣಿದಿದ್ದಾಳೆ. ಚೆನ್ನಾಗಿ ನಿದ್ರೆಮಾಡಲಿ.'

'ಅಕ್ಕನವರು ನಿನ್ನನ್ನು ತೆಗೆದುಕೊಳ್ಳಲು ಆಶೆಪಟ್ಟಿದ್ದಾರೆ. ಪ್ರಭುಗಳೂ ದೇವರ ದಯೆಯಿಂದ ಒಪ್ಪಿದರೆ . . . ನೀವಿಬ್ಬರೂ ನುಡಿಸಿ ಹಾಡಿದುದನ್ನು ಪ್ರಭುಗಳು ಉಪ್ಪರಿಗೆಯಲ್ಲಿ ತೆರೆಯ ಹಿಂದೆ ಕುಳಿತು ಕೇಳಿದರಂತೆ . . . ನೋಡಿದರಂತೆ . . .'

'ಹಾಂ!'

ಶಾಂತಲೆಗೆ ಮಾತುಕಟ್ಟಿ, ಬಾಯಿಬಿಟ್ಟು ನಿಂತಳು.

'ಅಕ್ಕನವರೆ ಈ ಏರ್ಪಾಡನ್ನು ಮಾಡಿದ್ದರು. ಪ್ರಭುಗಳು ನೋಡ ಲೆಂದು, ಕೇಳಲೆಂದು.'

'ಅಯ್ಯೋ ಅವ್ವಾ! ನಾವೇನೇನು ವಕ್ರಮುಖಭಂಗಿಗಳನ್ನು ಮಾಡಿ ದೆವೋ? ನುಡಿಸುವ ಉತ್ಸಾಹದಲ್ಲಿ ನಮಗೆ ಇಹದ ಸ್ಮರಣೆಯೆ ತಪ್ಪಿತು. ಲಕ್ಷ್ಮಿ ನನ್ನೊಡನೆ ಸ್ಪರ್ಧಿಸಿ ಒಂದೆರಡು ಬಾರಿ ನಕ್ಕಳು, ನಾನೂ ನಕ್ಕೆ. ಸ್ಪರ್ಧಿಸುವಾಗ ಹಾಗೆ ಆಗುತ್ತೆ.'

'ಇದು ತಪ್ಪೆಂದು ಯಾರೂ ಭಾವಿಸರು. ಪ್ರಭುಗಳೂ ಮೆಚ್ಚಿದರೆಂದೇ ನನ್ನ ನಂಬಿಕೆ. ಮಗು, ನಿನ್ನ ತಪಸ್ಸೂ ನಮ್ಮ ಬಯಕೆಯೂ ಎರಡೂ ನಿನ್ನ ಕಲ್ಯಾಣದಲ್ಲಿ ಕೈಗೂಡಲಿ.'

ಶಾಂತಲೆ (ಸ್ಥಿರವಾಣಿಯಿಂದ): 'ಅವ್ವೆ, ನಾನು ಮದುವೆಯಾಗೆ. ಇದಕ್ಕೆ ಬಲಾತ್ಕಾರ ಬೇಡ.'

ಮಾಚಿಕಬ್ಬೆಗೆ ಸಿಡಿಲುಬಡಿದಂತಾಯ್ತು. 'ನಾನು ಮದುವೆಯಾಗೆ' ಎಂಬ ಮಾತು ಆಕೆಯ ಸರ್ವೇಂದ್ರಿಯಗಳನ್ನು ತಟ್ಟನೆ ಸ್ತಂಭಿಸಿತು. ಚೇತನ ಉಡುಗಿ ಕಣ್ಣುಗಳು ತೇಲಿಬಂದುವು. ನೆಲಕ್ಕೆ ಬೀಳುತ್ತಿದ್ದ ತಾಯಿಯನ್ನು ಶಾಂತಲೆ ತತ್‌ಕ್ಷಣ ಹಿಡಿದುಕೊಂಡು ಗೋಡೆಗೆ ಒರಗಿಸಿ ಕೂಡಿಸಿ, ಸೆರಗಿನಿಂದ ಗಾಳಿ ಹಾಕುತ್ತ 'ಅವ್ವಾ, ಅವ್ವಾ, ನಾನಾಡಿದ ಮಾತು ಇಷ್ಟು ಅಪರಾಧ ವಾಯಿತೆ? ನೋಡವ್ವಾ, ಮಾತನಾಡವ್ವ. ಕ್ಷಮಿಸವ್ವಾ, ನನ್ನನ್ನು ಕ್ಷಮಿಸು. ನಾನು ಹೇಳಬೇಕೆಂದಿದ್ದುದನ್ನು ನೀನು ಪೂರ್ಣ ಕೇಳಲಿಲ್ಲ!' ಎನ್ನುತ್ತ ಕಾತರಕಂಠೆಯಾದಳು ಶಾಂತಲೆ. ತಾಯಿಗೆ ಗಾಳಿ ಹಾಕಿದಳು, ಕೈಗಳ ಮೇಲೆ ತಟ್ಟಿದಳು, ನೆತ್ತಿಯನ್ನು ಸವರಿದಳು.

ಮಾಚಿಕಬ್ಬೆ ಸ್ವಲ್ಪ ಚೇತರಿಸಿಕೊಂಡು ಕಣ್ತೆರೆದು ಮಗಳನ್ನು ನೋಡಿದರು. ಶಾಂತಲೆಯ ಮುಖ ಆಗ ವರ್ಣಹೀನವಾಗಿತ್ತು. ಅದನ್ನು ಕಂಡು ತಾಯಿಗೆ ಕಣ್ಣೀರು ತುಂಬಿತು. ಮಾಚಿಕಬ್ಬೆ ಉಸಿರನ್ನು ಸ್ವಾಧೀನಪಡಿಸಿಕೊಂಡು, 'ಅಯ್ಯೋ ಮಗು, ಈ ಮಹಾಕಲ್ಯಾಣವನ್ನು ಒಲ್ಲೆ ಎನ್ನುವ ಜುಗುಪ್ಸೆಯೇಕೆ? ಕಾರಣವೇನವ್ವ? . . . ಒಳ್ಳೆಯ ಮನೆ, ಒಳ್ಳೆಯ ಪತಿ, ಒಳ್ಳೆಯ ಅತ್ತೆಮಾವಂದಿರು ಸಿಗಲಾರರು ಎಂಬ ಭಯದ ಮೇಲೆ ಹೆಣ್ಣು ಮಕ್ಕಳು ಮದುವೆಗೆ ಹೆದರುತ್ತಾರೆ. ಮಗೂ, ನಿನ್ನ ಕೈಹಿಡಿಯುವವರು ಚಕ್ರಾಧಿಪತಿ, ಮಹಾವಿಷ್ಣುವಿನಂತಹ ಪುರುಷ, ಅಕ್ಕನವರು ನನಗಿಂತ ನೂರು ಪಾಲು ನಿನಗೆ ತಾಯಾಗಿರಬಲ್ಲರು. ನೀನು ಮಹಾ ದಾನಧರ್ಮಗಳನ್ನು ನಡಸಬಹುದು. ನಿನ್ನ ಕಾರಣವೇನು? ಇದು, ಈ ಮಂಗಳ, ನಿನ್ನ, ನಮ್ಮ, ಪೂಜಾಫಲವೆ ತಾಯಿ!' ಎಂದರು.

'ಅವ್ವೆ, ನೀವು ಬಹು ಭಯಪಟ್ಟಿರಿ. ನನ್ನನ್ನು ಕ್ಷಮಿಸಿ,' ಎನ್ನುತ್ತ ತಾಯಿಯ ಕಾಲ್ಗಳಿಗೆ ಶಿರವಿಕ್ಕಿದಳು ಶಾಂತಲೆ.

ಮಾಚಿಕಬ್ಬೆ ಮಗಳ ತಲೆಯನ್ನು ನೇವರಿಸುತ್ತ, ಗದ್ಗದಕಂಠೆಯಾದರು. 'ಹೇಳವ್ವಾ, ಹೇಳು. ಅಕ್ಕನವರು ನಿನ್ನನ್ನು ಮನೆ ತುಂಬಿಸಿಕೊಳ್ಳುತ್ತೇವೆಂದು ಕೇಳಿದರೆ ನಾನು ಕೊಡುವುದಿಲ್ಲವೆಂದು ಹೇಳಲೆ? ಅರಮನೆಗೆ ನೀನೇ ಒಪ್ಪಿ ಬಂದೆ; ಒಂದಲ್ಲ, ಎರಡಲ್ಲ, ಮೂರು ಸಲ ಬಂದೆ. ಏಕೆ ಬಂದೆಯವ್ವಾ ನಿನ್ನ ಮನಸ್ಸಿನಲ್ಲಿ ಈ ನಿರ್ಧಾರವಿರುವಾಗ? ಪ್ರಭುಗಳು ನಿನ್ನ ಕೈಹಿಡಿಯಲು ಸಮ್ಮತಿಸಿದರೆ, ನಾವೇನೆಂದು ಉತ್ತರ ಹೇಳುವುದು? ಇನ್ನು ನಮ್ಮ ಬಾಳೇನು? ಬದುಕೇನು? ನಾವು ಬದುಕಿರುವುದು ನಿನಗಾಗಿ, ನಿನ್ನ ಮುಂದಿನ ಭಾಗ್ಯದ, ಧರ್ಮದ, ದಿನಗಳನ್ನು ನೋಡುವುದಕ್ಕಾಗಿ. ಈ ಮಾತನ್ನು ಕೇಳಿ ನಿನ್ನಯ್ಯನ ಎದೆ ಒಡೆದುಹೋದೀತು. ನೀನು ಹುಟ್ಟಿದ ಮೇಲೆ ಇಂದೇ ನನಗೆ ಕಣ್ಣೀರು ಬರಿಸಿದೆಯವ್ವಾ. ಸುಖದ ಸುದ್ದಿಯನ್ನು ಹೇಳಬಂದ ನನಗೆ ಈ ಘೋರ ಸಂಕಟವನ್ನು ಏಕೆ ಕೊಟ್ಟೆ ಮಗಳೆ? . . . ಧರ್ಮೇಶ, ನಾವು ಏನು ಅಪರಾಧ ಮಾಡಿದೆವು ತಂದೆ? ತಾಯಿ ಶಾರದೆ, ನಮ್ಮ ಲೋಪದೋಷಗಳೇನು?' ಎಂದು ಮಾಚಿಕಬ್ಬೆ ದುಃಖಿಸಿದರು.

ತಾಯಿಯ ದುಃಖವನ್ನೂ ಆಕೆಯ ಸಂಕಟದ ಮಾತುಗಳನ್ನೂ ಕೇಳಿ ಕೋಮಲಹೃದಯೆಯಾದ ಶಾಂತಲೆಗೆ ಪ್ರಜ್ಞೆ ತಪ್ಪಿತು. ತಲೆ ತಿರುಗಿ ಕುಳಿತಿದ್ದಂತೆಯೇ ಬುಡ ಕಡಿದ ವೃಕ್ಷದಂತೆ ನೆಲದ ಮೇಲೆ ಉರುಳಿದಳು. ಮಗಳು ಆ ರೀತಿ ತಲೆ ಒಡೆದು ನುಚ್ಚಾಗುವಂತೆ ನೆಲಕ್ಕುರುಳಿದುದನ್ನು ಕಂಡು ತಾನಾಡಿದ ಕಠಿಣ ವಾಕ್ಕುಗಳನ್ನು ತಡೆಯಲಾರದೆ ಶಾಂತಲೆಯ ಜೀವವೇ ಹಾರಿಹೋಯಿತೆಂದು ಮಾಚಿಕಬ್ಬೆ ಚಿಟ್ಟನೆ ಚೀರಿದರು. ಮನೆಕೆಲಸದಾಕೆ ಓಡಿ ಬಂದಳು. ದೇಚ ಓಡಿ ಬಂದ. ಕೋಣೆಯಲ್ಲಿ ನಿದ್ರಿಸುತ್ತಿದ್ದ ಲಕ್ಷ್ಮಿ ಆ ಶಬ್ದಕ್ಕೆ ಬೆಚ್ಚಿ ಎದ್ದು, ಶಾಂತಲೆ ಪಕ್ಕದಲ್ಲಿ ಇಲ್ಲದ್ದನ್ನು ಕಂಡು 'ಅಕ್ಕಾ! ಅಕ್ಕಾ!' ಎಂದು ಮನೆ ಬಿರಿಯುವಂತೆ ಚೀರುತ್ತ ಈಚೆಗೆ ಬಂದು, ಬಾಗಿಲ ಬಳಿಯೆ ಶಾಂತಲೆ ನಿಶ್ಚೇಷ್ಟಿತಳಾಗಿ ಬಿದ್ದಿರುವುದನ್ನೂ ಹತ್ತಿರವೆ ಮಾಚಿಕಬ್ಬೆ ಕಣ್ಣೀರು ಸುರಿಸುತ್ತ, ನಡುಗುತ್ತ, ಮಾತನಾಡುವುದಕ್ಕಾಗದಿದ್ದ ಸ್ಥಿತಿಯನ್ನೂ ಕಂಡು, ಕೂಗಿಲ್ಲದೆ, ಸದ್ದಿಲ್ಲದೆ, ಸುರುಳಿ ಕುಪ್ಪೆಯಾಗಿ ನೆಲಕ್ಕೆ ಬಿದ್ದಳು. ಮಾಚಿಕಬ್ಬೆ, ಲಕ್ಷ್ಮಿಯೂ ಹೋದಳೆಂದು ಮತ್ತೊಮ್ಮೆ ಚೀರಿದರು, ಕೆಲಸದವಳು ಚೀರಿದಳು. ದೇಚ 'ಅಯ್ಯೋ! ಅಯ್ಯೋ!' ಎನ್ನುತ್ತ ಯಜಮಾನರನ್ನು ಕರೆಯಲು ಓಡಿದ.

ಉಪ್ಪರಿಗೆಯ ಕೋಣೆಯಲ್ಲಿ ಆಗತಾನೆ ಮಲಗಿದ್ದ ಮಾರಸಿಂಗಮಯ್ಯನವರಿಗೆ ನೂರು ಚೇಳುಗಳು ಒಮ್ಮೆಗೆ ಕುಟಕಿದಂತಾಗಿ ಹಾಸಿಗೆಯಿಂದ ನೆಗೆದು ಎದ್ದರು. ಈ ಚೀತ್ಕಾರಗಳಿಂದ ಆ ಮಹಾಧೀರನ ಎದೆಯೂ ಜರ್ಜರಿಸಿತು. ಬಿಚ್ಚಿದ ಕೈಗತ್ತಿಯನ್ನೂ ಕೈಬೆಳಕನ್ನೂ ಹಿಡಿದು ಧಡಧಡನೆ ಉಪ್ಪರಿಗೆ ಯಿಂದಿಳಿದುಬಂದರು.

ರಣರಂಗದಲ್ಲಿ ಶತ್ರುಗಳ ರಕ್ತ ತನ್ನ ಮೈಯನ್ನು ತೋಯಿಸುತ್ತಿದ್ದಾಗ, ಜೀವಹೋಗುತ್ತಿರುವವರ, ಮರಣಗಾಯವಡೆದವರ ಕೊನೆಯ ಕೂಗುಗಳೂ, ಸತ್ತು ಉರುಳುತ್ತಿರುವ ಕುದುರೆಗಳ, ಎತ್ತುಗಳ, ಗಜಗಳ ಭಯಂಕರ ಘೀಳು ಗಳೂ, ರಣಕಹಳೆ, ತಮ್ಮಟೆ, ಕೊಂಬುಗಳ ಕಿವುಡಾಗಿಸುವ ಶಬ್ದಗಳೂ, ಯೋಧರ ಕೇಕೆಗಳೂ, ಸಿಂಹನಾದಗಳೂ, ಮಾರಸಿಂಗಮಯ್ಯನವರನ್ನು ಬೆಚ್ಚಿ ಸಿರಲಿಲ್ಲ. ತಲ್ಲಣಗೊಳಿಸಿರಲಿಲ್ಲ; ಆದರೆ, ಈ ಗೃಹದೃಶ್ಯ ಅವರ ಕತ್ತಿಯನ್ನು ಕೈಯಿಂದ ಜಾರಿಸಿತು. ಧೀರರ ಗಂಟಲಿಂದ ಎಂದೂ ಹೊರಡಬಾರದ 'ಅಯ್ಯೋ' ಎಂಬ ಶಬ್ದ ಆಗ ಅವರ ಬಾಯಿಂದ ತಾನಾಗಿಯೆ ಹೊರಟಿತು. 'ಮಾಚಿ! ಏನಿದು ? ಏನಾಯಿತು ?' ಎಂದು ಅವರೂ ಕೂಗಿಕೊಂಡರು.

ಮಾಚಿಕಬ್ಬೆಗೆ ಮಾತು ಹೊರಡಲಿಲ್ಲ. ದೇಚ ಮಂಕುಬಡಿದವನಂತೆ ಕಣ್ಣೀರು ಸುರಿಸುತ್ತ ನಿಂತಿದ್ದ. ಕೆಲಸದಾಕೆ ಮಾಚಿಕಬ್ಬೆಯವರನ್ನು ಮೆಲ್ಲಗೆ ಹಿಡಿದು ಗೋಡೆಗೆ ಒರಗಿಸಿ ಕೂಡಿಸುತ್ತ, ದಣಿಯರನ್ನು ನೋಡಿ 'ಮಕ್ಕಳು . . . ಮೂರ್ಛೆ . . .' ಎಂದಳು.

ಮಾರಸಿಂಗಮಯ್ಯ ಕೂಗಿ ಕೇಳಿದರು: 'ಲೋ ದೇಚ! ಏನಾಯಿತೊ! ಹೇಳೊ, ಸರ್ಪವೇನೊ? ಕಚ್ಚಿತೇನೊ? ಯಾರನ್ನೊ? ಎಲ್ಲೊ?' ಎಂದು. ದೇಚ ಧ್ವನಿ ನುಂಗಿಕೊಂಡು, 'ಇಲ್ಲ, ಒಡೆಯರೆ, ಶಾಂತಲವ್ವ, ಲಕ್ಷ್ಮವ್ವ ಇಬ್ರೂ ಮೂರ್ಛೆ' ಎಂದ. ಮಾರಸಿಂಗಮಯ್ಯ ಕೆಲಸದಾಕೆಯನ್ನು ಕುರಿತು 'ತಣ್ಣೀರು ನೆತ್ತಿಗೆ ತಟ್ಟು . . . ಲೋ ದೇಚ, ಅಳಬೇಡವೊ, ಗಾಳಿಹಾಕೊ' ಎಂದು ಹೇಳಿ, ತಮ್ಮ ಕೋಣೆಗೆ ಓಡಿ, ಭರಣಿಯೊಂದರಲ್ಲಿದ್ದ ನವಸಾರಪುಡಿ ಯನ್ನೂ ಸುಣ್ಣದ ಭರಣಿಯೊಂದನ್ನೂ ತೆಗೆದುಕೊಂಡು, ಎರಡನ್ನೂ ಎರಡೆರಡು ಚಿಟಿಕೆ ಅಂಗೈಯಲ್ಲಿ ಹಾಕಿಕೊಂಡು ಚೆನ್ನಾಗಿ ತಿಕ್ಕಿ, ಅದರಿಂದ ಹೊರಟ ಬಿಸಿ ಘಾಟನ್ನು ಮಕ್ಕಳ ಮೂಗಿನ ಬಳಿಯೂ, ಬಳಿಕ ಮಾಚಿಕಬ್ಬೆಯ ಮೂಗಿನ

ಬಳಿಯೂ ಹಿಡಿದರು. ಆ ಘಾಟು ಮಕ್ಕಳನ್ನು ಚೇತನಗೊಳಿಸಿತು; ಮಾಚಿ ಕಬ್ಬೆ ಎಚ್ಚತ್ತರು. ಶಾಂತಲೆ ಎಚ್ಚತ್ತು ಕಣ್ಣುಬಿಟ್ಟು 'ಅವ್ವೆ! ಅಯ್ಯ!' ಎಂದು ಕೂಗಿ, ಹೋಗಿ ತಾಯಿಯ ಕಾಲ್ಗಳನ್ನು ಬಿಗಿಯಾಗಿ ಕಟ್ಟಿಕೊಂಡಳು. ಲಕ್ಷ್ಮಿಯೂ ಎಚ್ಚತ್ತು ಕುಳಿತು ಸುತ್ತಲೂ ನೋಡಿ, ತಣ್ಣೀರಿನಿಂದ ಮಾಚಿ ಕಬ್ಬೆಯ ನೆತ್ತಿಯನ್ನು ನೆನಸಿ, 'ಅವ್ವೆ, . . . ಅವ್ವೆ' ಎಂದು ಮಾತನಾಡಿಸಿ ದಳು. ಮಾರಸಿಂಗಮಯ್ಯ ದಿಗ್ಭ್ರಮೆಪಟ್ಟು ಕುಳಿತ್ತಿದ್ದರು. ಸಂಗತಿ ತಾನಾ ಗಿಯೆ ಹೊರಬೀಳುವುದೆಂದು ಅವರು ಕಾದಿದ್ದರು.

ಶಾಂತಲೆ ಕಣ್ಣೀರು ಸುರಿಸುತ್ತ ತಂದೆಯನ್ನು ನೋಡಿದಳು. ಆಮೇಲೆ ತಾಯಿಯ ಕಡೆ ನೋಡಿ, 'ಅವ್ವೆ, ನಾನೆಂದ ಒಂದೇ ಮಾತಿನಿಂದ ಎಂತಹ ಅನಾಹುತವಾಯ್ತು! ಕೆಟ್ಟ ಗಳಿಗೆಯಲ್ಲಿ ಮಾತನಾಡಿದೆ, ಸಂಯಮ ತಪ್ಪಿದೆ, ಈಗ ಎಲ್ಲರ ಕ್ಷಮೆಯನ್ನು ಬೇಡುತ್ತಿದ್ದೇನೆ . . . ಅವ್ವೆ, ನೀವು ನನ್ನನ್ನು ಪೂರ್ತಿಯಾಗಿ ಮಾತನಾಡಬಿಡಲಿಲ್ಲ . . . ನನ್ನ ಮೊದಲ ಮಾತೇ ನಿಮ್ಮ ಮನಸ್ಸಿಗೆ ಇಷ್ಟು ಸಂಕಟ ಉಂಟುಮಾಡಿತು. ಹೇಳಬೇಕಾದ, ಮಾತನಾಡ ಬೇಕಾದ ರೀತಿ, ಔಚಿತ್ಯಗಳನ್ನು ಮರೆತ್ತಿದ್ದೆ. ಅದರಿಂದಲೇ ಇಷ್ಟೆಲ್ಲ ಆಯಿತು. ಧರ್ಮೇಶನೇ ಎಲ್ಲರನ್ನೂ ಈ ವಿಷಘಳಿಗೆಯಲ್ಲಿ ಕಾಪಾಡಿದ. ಶಾರದೆ ಕಾಪಾಡಿ ದಳು.' ಎಂದಳು.

ಮಾಚಿಕಬ್ಬೆ: 'ಏನೋ ಕೆಟ್ಟ ಘಳಿಗೆ, ಮಗು . . . ನನಗೆ ದುಃಖ ತಡೆಯಲಾಗಲಿಲ್ಲ. ನಾಳೆ ನಿಧಾನವಾಗಿ ಮಾತನಾಡೋಣ. ಈಗ ಹೋಗಿ ಮಲಗಿಕೊಳ್ಳಿ.'

ಶಾಂತಲೆ: 'ಅವ್ವಾ, ನಿಮ್ಮ ಮನಸ್ಸು ಬಹಳ ನೊಂದಿದೆ. ನೆಮ್ಮದಿ ಯಾಗುವ ತನಕ ತಪಿಸುತ್ತಿರುತ್ತದೆ. ಆಗ ಹೇಳಬೇಕಾದುದನ್ನು ಈಗಲಾದರೂ ಹೇಳಿದರೆ ನಿಮ್ಮ ಮನಸ್ಸಿಗೆ ಸಮಾಧಾನವಾದೀತೇನೊ ?'

ಮಾಚಿಕಬ್ಬೆ: 'ಹೇಳಬಹುದಾದ ವಿಷಯವಾಗಿದ್ದರೆ ಹೇಳಿಬಿಡು ಮಗು. ನಿನ್ನ ಅಯ್ಯಂದಿರೂ ಇಲ್ಲಿಯೇ ಇದ್ದಾರೆ. ಮಗು ಶಾಂತಲೆ, ಸಿಟ್ಟಿನ ಭರದಲ್ಲಿ, ದುಃಖದ ಭರದಲ್ಲಿ, ನಾನೇನಾದರೂ ಅಂದಿದ್ದರೆ ಅದನ್ನು ಮನಸ್ಸಿನಲ್ಲಿ ಇಡ ಬೇಡ, ನನ್ನನ್ನು ಕ್ಷಮಿಸಿಬಿಡು.'

ಶಾಂತಲೆ (ಕಿವಿಗಳನ್ನು ಮುಚ್ಚಿಕೊಂಡು): 'ಶಾಂತಂ ಪಾಪಂ, ಶಾಂತಂ

ಪಾಪಂ! ಅವ್ವೆ, ಏನಂದಿರಿ! ಆ ಮಾತು ಹೇಳಬೇಕಾದವಳು ನಾನು. ಕ್ಷಮೆ ಬೇಡಬೇಕಾದವಳು ನಾನು.'

ಲಕ್ಷ್ಮಿ ಭೀತಿಯಿಂದ ಮಾಚಿಕಬ್ಬೆ ಶಾಂತಲೆಯರನ್ನು ನೋಡುತ್ತ ನಿಂತಿದ್ದಳು. ಮಾರಸಿಂಗಮಯ್ಯನವರು ದಿಗ್ಭ್ರಮೆಗೊಂಡು ಮೆಟ್ಟಲಮೇಲೆ ಕುಳಿತು, ನಡೆಯುತ್ತಿದ್ದುದನ್ನೆಲ್ಲಾ ನೋಡುತ್ತಿದ್ದರು, ಕೇಳುತ್ತಿದ್ದರು.

ಶಾಂತಲೆ ಲಕ್ಷ್ಮಿಯನ್ನು ನೋಡಿ 'ಲಕ್ಷ್ಮಿ, ಉಪ್ಪರಿಗೆಯ ಚಂದ್ರಶಾಲೆಯಲ್ಲಿ ನಾಲ್ಕು ಆಸನಗಳನ್ನು ಹಾಕಿಸು. ಬೆಳುದಿಂಗಳಲ್ಲಿ ನಾವೆಲ್ಲರೂ ಸ್ವಲ್ಪ ವಿಶ್ರಮಿಸಿಕೊಳ್ಳೋಣ.' ಎಂದಳು.

ಜಾಣೆಯಾದ ಲಕ್ಷ್ಮಿ ಅಕ್ಕನು ತಾಯಿಯೊಡನೆ ಹೇಳಬೇಕಾದ ಏನೋ ಗೋಪ್ಯವಾದ ವಿಷಯವಿರಬೇಕು, ಅವು ನನಗೆ ತಿಳಿಯಬಾರದೆಂದೆ ಅಕ್ಕ ಹೀಗೆ ಹೇಳಿದಳೆಂದು ಊಹಿಸಿ, ದೇಚನನ್ನು ಕರೆದುಕೊಂಡು, ಉಪ್ಪರಿಗೆಗೆ ಹೋದಳು. ತಾನೂ ಅಲ್ಲಿ ಇರಬಾರದೇನೊ ಎಂದು ಮಾರಸಿಂಗಮಯ್ಯ ಹೋಗುವುದಕ್ಕೆ ಎದ್ದರು. ಶಾಂತಲೆ ಅದನ್ನು ಕಂಡು 'ಅಯ್ಯ, ನೀವು ಇರಬೇಕು, ಕುಳಿತುಕೊಳ್ಳಿ' ಎಂದು ತಂದೆಯನ್ನು ಅಲ್ಲಿಯೆ ನಿಲ್ಲಿಸಿಕೊಂಡು, 'ನಾನರಿಯೆನೆ, ನನ್ನ ಮುಂದಿನ ಬದುಕು ಸುಖಸಂತೋಷಗಳು ನಿಮ್ಮ ಒಂದೇ ಆಶೆಯೆಂದು, ನಿಮ್ಮಿಬ್ಬರ ಸುಖಸಂತೋಷವೆ ನಾನೆಂದು? ಸಾಕಿ, ಬೆಳಸಿ, ದೊಡ್ಡವಳನ್ನಾಗಿ ಮಾಡಿ, ಉತ್ತಮ ವಿದ್ಯೆಗಳನ್ನು ಹೇಳಿಸಿ ಕಲಿಸಿರುವಿರಿ. ನಿಮ್ಮ ಸಂತೋಷ ನೂರ್ಮಡಿಸುವಂತೆ ನಾನು ರಾಜರ ಕೈಹಿಡಿಯುವೆನೋ, ಏನೋ! ಅದು ಮಹಾಭಾಗ್ಯವೆ ಸರಿ. ಆ ಮಹಾನುಭಾವರ ಕೈಹಿಡಿಯಲು ನೂರು ಜನ್ಮಗಳ ತಪಸ್ಸು ಸಾಲದು. ಸಂಜೆ ನಾವು ವೀಣೆ ನುಡಿಸುತ್ತಿದ್ದಾಗ, ಪ್ರಭುಗಳು ಎಲ್ಲಿಯೋ ಕಣ್ಣಿಗೆ ಮರೆಯಾಗಿ ಕುಳಿತು ಕೇಳುತ್ತಿರುವರೆಂದೇ ನನ್ನ ಹೃದಯ ಹೇಳಿತು' ಎಂದು ತಂದೆಯನ್ನು ನೋಡಿ 'ಅಯ್ಯಾ, ಇದೇನು ಮಗಳು ಇಷ್ಟು ಲಜ್ಜೆಗೆಟ್ಟು ಮಾತನಾಡುತ್ತಿರುವಳು! ಎಂದುಕೊಳ್ಳಬೇಡಿ. ಹೆಣ್ಣುಮಕ್ಕಳಿಗೆ ಲಜ್ಜೆ, ಶೀಲ ಇವು ಕುಲದ ಉತ್ತಮ ಲಕ್ಷಣಗಳು. ಎಲ್ಲ ಕುಲಸ್ತ್ರೀಯರೂ ಕಾಪಾಡಿಕೊಳ್ಳಬೇಕಾದ ಸೌಭಾಗ್ಯಗಳವು. ಈ ಸಂದರ್ಭದಲ್ಲಿ, ನಾನು ಧೈರ್ಯವಾಗಿ ಮಾತನಾಡದೆ ವಿಧಿಯಿಲ್ಲ. ಬಹಳ ದೀರ್ಘ ಯೋಚನೆ ಮಾಡಿ ಈ ನಿರ್ಧಾರಕ್ಕೆ ಬಂದಿದ್ದೇನೆ. ಲಕ್ಷ್ಮಿಯೂ ನನ್ನಂತೆಯೆ

ನಿಮಗೆ ಪ್ರೀತಿಯ ಮಗಳು. ಮೂರು ವರ್ಷದ ಮಗುವಿನಿಂದ ಅವಳು ಇಲ್ಲಿಯೇ ಬೆಳೆದುಬಂದವಳು. ನನಗೆ ಹಾಲೂಡಿದ ಕೈಯೇ ಅವಳಿಗೂ ಹಾಲೂಡಿತು. ನನ್ನನ್ನು ಸಾಕಿ ಸಲಹಿದ ಕೈಯೇ ಅವಳನ್ನೂ ಸಾಕಿ ಸಲಹಿತು. ಇದನ್ನು ನೀವು ಮರೆಯಬಾರದು. ಪ್ರಭುಗಳು ಒಂದು ವೇಳೆ ನನ್ನ ಕೈಹಿಡಿಯಲು ಒಪ್ಪಿದರೆ, ನನ್ನೊಬ್ಬಳನ್ನೇ ಧಾರೆಯೆರೆದು ಕೊಡಬೇಡಿ. ನಮ್ಮಿಬ್ಬರ ದೇಹ ಬೇರೆ ಕಂಡರೂ ಆತ್ಮ ಒಂದೆ. ಅವಳಿಗೆ ನೋವಾದರೆ ನನಗೂ ನೋವಾಗುತ್ತದೆ. ನಾನು ನೊಂದರೆ ಅವಳೂ ನೋಯುತ್ತಾಳೆ. ನನ್ನನ್ನು ಬಿಟ್ಟು ಲಕ್ಷ್ಮಿ ಇರಲಾರಳು. ನಾನೂ ಅವಳನ್ನು ಬಿಟ್ಟು ಇರಲಾರೆ. ಜನ್ಮಾಂತರಗಳಲ್ಲೂ ನಾವು ಹೀಗೇ ಇದ್ದವರು' ಎಂದು ಹೇಳುತ್ತ, ಕಣ್ಣೀರು ಧಾರೆಧಾರೆಯಾಗೆ, ಶಾಂತಲೆ ಗದ್ಗದಕಂಠೆಯಾಗಿ ಸೆರಗಿನಿಂದ ಮುಖ ಮುಚ್ಚಿಕೊಂಡು, ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡಳು.

ಮಾರಸಿಂಗಮಯ್ಯ ನಿಜಸ್ಥಿತಿಯನ್ನು ಈಗ ಅರಿತರು, ಮಗಳ ಸೌಹಾರ್ದಕ್ಕೆ ಕರಗಿಹೋದರು. ಮಾಚಿಕಬ್ಬೆ ಮೂಕರಂತೆ ಪತಿಯನ್ನು ನೋಡುತ್ತಿದ್ದರು.

ಮಾರಸಿಂಗಮಯ್ಯ ಎದ್ದು ಮಾಚಿಕಬ್ಬೆಯ ಬಳಿಗೆ ಬಂದು, ಕೈಹಿಡಿದು ಎಬ್ಬಿಸಿ, ಅಲ್ಲಿ ಏನೂ ಮಾತನಾಡಬಾರದೆಂದು ಸಂಜ್ಞೆಮಾಡಿ, ತಮ್ಮೊಡನೆ ಉಪ್ಪರಿಗೆಯ ಚಂದ್ರಶಾಲೆಗೆ ಮೆಲ್ಲನೆ ನಡಸಿಕೊಂಡು ಹೋದರು.

ಭಯಪಟ್ಟು ಕುಳಿತ್ತಿದ್ದ ಲಕ್ಷ್ಮಿಯ ಬಳಿಗೆ ಮಾಚಿಕಬ್ಬೆ ಬಂದು, ಮುಖ ತಡವಿ, ತಲೆ ತಡವಿ, 'ನನ್ನವ್ವ, ನಿಮ್ಮ ನಿಮ್ಮ ದೈವೀಸ್ನೇಹವೇ ನಿಮ್ಮ ಮುಂದಿನ ದಿನಗಳನ್ನೂ ರೂಪಗೊಳಿಸಲಿ. ನಿನ್ನ ಅಕ್ಕನನ್ನು ಧರ್ಮೇಶ್ವರನು ನಮಗೆ ಕರುಣಿಸಿಕೊಟ್ಟ. ತಾಯಿ ಶಾರದೆ ನಿನ್ನನ್ನು ನಮಗೆ ಕರುಣಿಸಿದಳು. ಒಳಿತಾಗುವುದು ಹೋಗು ಮಗು, ನಿನ್ನ ಅಕ್ಕನನ್ನು ಸಮಾಧಾನಪಡಿಸು' ಎಂದು ಹೇಳಿ ಲಕ್ಷ್ಮಿಯನ್ನು ಶಾಂತಲೆಯ ಬಳಿಗೆ ಕಳುಹಿಸಿ, ತಾನು ಪತಿಯೊಡನೆ ತಮ್ಮ ಮುಂದಿನ ಕರ್ತವ್ಯವೇನೆಂದು ನಿಶ್ಚಯಿಸಲು ಚಂದ್ರಶಾಲೆಯಲ್ಲೆ ಕುಳಿತರು.

§

ರಾಜಮಾತೆ ಆ ರಾತ್ರಿ ಸಂತೋಷಚಿತ್ತದಿಂದ ಆರೋಗಣೆ ಮುಗಿಸಿ

ಬೆಳುದಿಂಗಳ ತಂಪನ್ನು ಅನುಭವಿಸುತ್ತ, ಸೊಸೆಯೊಡನೆ ಮೊಮ್ಮಕ್ಕಳೊಡನೆ ತುಂಬಿದ ಹೊಂಗನಸುಗಳನ್ನು ಕಾಣುತ್ತ, 'ಈ ಕತ್ತಲ ಜೀವನ ಕಳೆದು ಬೆಳಗಾದರೆ ಸಾಕು' ಎಂದುಕೊಳ್ಳುತ್ತ, ಹತ್ತಿರಿದ್ದ ಚೇಟಿಯೊಬ್ಬಳನ್ನು ಕರೆದು, 'ಅಪ್ಪಾಜಿಯವರು ಆರೋಗಣೆ ಮುಗಿಸಿದ್ದರೆ, ಬಂದು ನಮ್ಮನ್ನು ಕಾಣಬೇಕೆಂದು ಹೇಳಿದೆವೆಂದು ಹೋಗಿ ತಿಳಿಸು' ಎಂದು ಹೇಳಿದರು.

ಪ್ರಭುಗಳೂ ಆಗತಾನೆ ಆರೋಗಣೆ ಮುಗಿಸಿ ತಮ್ಮ ಶಯ್ಯಾಗೃಹದ ಮುಂದಿನ ಕೈಸಾಲೆಯಲ್ಲಿ ಕುವರವಿಷ್ಣುವಿನೊಡನೆ ಮಾತನಾಡುತ್ತ ಕುಳಿತಿದ್ದರು. ಕುವರನನ್ನು ಆ ಸಂಜೆ ಗುರುಕುಲವಾಸದಿಂದ ಪ್ರಭುಗಳೇ ಕರಸಿಕೊಂಡಿದ್ದರು. ಶಾಂತಲೆ ಲಕ್ಷ್ಮಿಯರು ಸಭೆಯಲ್ಲಿ ಹಾಡಿ ನುಡಿಸುತ್ತಿದ್ದಾಗ ವಿಷ್ಣುವೂ ಪ್ರಭುಗಳ ಬಳಿ ಕುಳಿತು ಕೇಳುತ್ತಿದ್ದ.

ಶ್ರೀಪಾಲತ್ರೈವಿದ್ಯದೇವರು ಕುವರ ವಿಷ್ಣುವನ್ನು ಶಿಷ್ಯನನ್ನಾಗಿ ಸ್ವೀಕರಿಸಿದ ಮೇಲೆ ಅವನನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ಅವರ ಬಹುಮಂದಿ ಶಿಷ್ಯರಲ್ಲಿ ವಿಷ್ಣುವೂ ಒಬ್ಬನಾದ. ಎಲ್ಲರಂತೆ ಬ್ರಾಹ್ಮೀಮೂಹೂರ್ತಕ್ಕೆ ಎದ್ದು ಪ್ರಾತರ್ವಿಧಿಗಳು, ತಣ್ಣೀರುಸ್ನಾನ, ದೇವಪೂಜೆ, ಯಜ್ಞಕರ್ಮಗಳು ಮುಗಿದನಂತರ ಹಾಲುಪೊಂಗಲ ಉಪಾಹಾರ. ಅನಂತರ ಗುರುಗಳ ಸಮ್ಮುಖದಲ್ಲಿ ಪಾಠಕ್ರಮಗಳು—ಧರ್ಮ, ನೀತಿಕರ್ಮಗಳ ನಿರೂಪಣೆ, ಶಾಸ್ತ್ರ, ತರ್ಕ, ಜಿಜ್ಞಾಸ ಕ್ರಮಗಳು. ಮಧ್ಯಾಹ್ನ ಭೋಜನ. ಸ್ವಲ್ಪ ವಿಶ್ರಾಂತಿ. ಮಧ್ಯಾಹ್ನಾತ್ಪರ ಕುವರ ವಿಷ್ಣುವಿಗೆ ಬೇರೆಯಾಗಿ ಇತರ ಆಚಾರ್ಯರಿಂದ ಕ್ಷತ್ರಿಯ ಯೋಧನ ಸಾಹಸಾಭ್ಯಾಸಕ್ರಮಗಳು, ಆನೆ ಕುದುರೆ ಸವಾರಿ, ಅವುಗಳನ್ನು ಅಂಕೆಯಲ್ಲಿಟ್ಟು ನಡಸುವುದು, ಧನುರ್ವಿದ್ಯೆ, ಯುದ್ಧದ ರೀತಿನೀತಿಗಳು, ಶಸ್ತ್ರಯುದ್ಧ, ವ್ಯೂಹಬಂಧ, ವ್ಯೂಹಚ್ಛೇದ ಮೊದಲಾದ ಅಭ್ಯಾಸಕ್ರಮಗಳು ಜರುಗುತ್ತಿದ್ದವು.

ಪ್ರಭುಗಳು ಕುವರನನ್ನು ಕೂಡಿಸಿಕೊಂಡು, ಇವುಗಳಲ್ಲಿ ಅವನ ಆಸಕ್ತಿ ಶ್ರದ್ಧೆಗಳನ್ನು ತಿಳಿದುಕೊಳ್ಳಲೋಸ್ಕರ ಸೂಕ್ಷ್ಮವಾದ ಪ್ರಶ್ನೆಗಳನ್ನು ಮಾಡುತ್ತಿದ್ದರು. ಕುವರನು ಕಠಿಣ ಅಭ್ಯಾಸಕ್ರಮಗಳಿಂದ ಸ್ವಲ್ಪ ಕಂದಿದ್ದರೂ ಕ್ರಮೇಣ ಎಲ್ಲವೂ ಸರಿಹೋಗುವುದು ಎಂದುಕೊಂಡರು ಪ್ರಭುಗಳು. ಕುವರನ ಶ್ರದ್ಧೆ ಆಸಕ್ತಿಗಳಿಗೆ ತೃಪ್ತಿಪಟ್ಟುಕೊಂಡರು.

ರಾಜಮಾತೆ ಕಳುಹಿದ ಚೇಟಿ ಪ್ರಭುಗಳಿದ್ದಲ್ಲಿಗೆ ಬಂದು ದೂರದಿಂದಲೆ

ನಮಸ್ಕರಿಸಿ, 'ಆರೋಗಣೆ ಮುಗಿದಿದ್ದರೆ, ಬಂದು ಕಾಣಬೇಕೆಂದು ಅಮ್ಮಾಜಿ ಯವರು ಅಪ್ಪಣೆ ಕೊಡಿಸಿದ್ದಾರೆ. ಚಂದ್ರಶಾಲೆಯಲ್ಲಿ ಇದ್ದಾರೆ' ಎಂದು ಬಿನ್ನ ವಿಸಿ ನಮಸ್ಕರಿಸಿ ಹೋದಳು. ಪ್ರಭುಗಳು ಕುವರನನ್ನು ನಿದ್ರಿಸಲು ಕಳಿಸಿ ತಾವು ತಾಯನ್ನು ಕಾಣಲು ಬಂದರು.

ರಾಜಮಾತೆ ಪ್ರಭುಗಳನ್ನು ತಾವೇ ಮೊದಲು ಮಾತನಾಡಿಸಿದರು. 'ಊಟವಾಯಿತೆ? ಇಂದು ಸ್ವಲ್ಪ ತಡವಾಯಿತಲ್ಲವೆ? ಮಗು ಬಂದಿರುವನೆಂಬ ಸುದ್ದಿ ಬಂದಿತು. ಆಶ್ರಮಜೀವನವೂ ಅಭ್ಯಾಸಕ್ರಮಗಳೂ ಮಗುವಿಗೆ ಹೆಚ್ಚು ಆಯಾಸವಾಗುತ್ತಿರುವುದೆ? ಬೆಳಗಿನಿಂದ ಸಂಜೆಯವರೆಗೆ, ಮನಸ್ಸಿಗೂ ದೇಹಕ್ಕೂ ಶ್ರಮಸಾಧ್ಯಗಳಾದ ಅಭ್ಯಾಸಗಳಿರುವುವಂತೆ. ಮಗುವಿಗೆ ಶ್ರಮ ವಾಗುವಂತೆ ಇದ್ದರೆ, ಈಗ ಸ್ವಲ್ಪ ಕಡಮೆಮಾಡಿ, ಕ್ರಮೇಣ ಹೆಚ್ಚಿಸಬಹು ದಲ್ಲವೆ?' ಎಂದು ಪ್ರಶ್ನೆಮಾಡಿದರು. ಅದಕ್ಕೆ ಪ್ರಭುಗಳು 'ಅವ್ವೆ, ಅಂತಹ ಕಷ್ಟವೇನೂ ತನಗೆ ತೋರಲಿಲ್ಲವೆಂದು ಅವನೇ ಹೇಳುತ್ತಾನೆ. ಎರಡು ವಿಧದ ಅಭ್ಯಾಸಕ್ರಮಗಳೂ ಸ್ವಲ್ಪ ಹೆಚ್ಚೆಂದು ನನ್ನ ಮನಸ್ಸಿಗೂ ತೋರುತ್ತಿದೆ. ಒಂದು ದಿನ ಶಾಸ್ತ್ರಾಧ್ಯಯನಕ್ಕೂ ಒಂದು ದಿನ ಶಸ್ತ್ರಾಭ್ಯಾಸಗಳಿಗೂ ವೇಳೆ ಮಾಡಿ ಕೊಡಿರೆಂದು ಅರಿಕೆ ಕಳುಹಿಸುತ್ತೇನೆ' ಎಂದರು.

ರಾಜಮಾತೆ: 'ಅಪ್ಪಾಜಿ, ಇಂದಿನ ಸಂಗೀತ ಚೆನ್ನಾಗಿದ್ದಿತೆ? ಶಾಂತಲೆ ವಿದ್ಯಾವಿನಯಸಂಪನ್ನೆ, ರೂಪವತಿ, ಒಳ್ಳೆಯ ಮನೆತನ. ಮಾಚಿಕಬ್ಬೆ ನಮಗೆ ದೂರದವರೇನಲ್ಲ. ಮಾರಸಿಂಗಮಯ್ಯ ನಿನ್ನ ಅಯ್ಯನವರ ಬಲಭುಜ ಇದ್ದಂತೆ ಇದ್ದರು. ಈಗಲೂ ನಿನಗೆ ಹಾಗೆಯೆ ಇದ್ದಾರೆ. ಈ ಸಂಬಂಧದಿಂದ ನಾವು ಅವರಿಗೆ ಸಲ್ಲಬೇಕಾದ ಗೌರವವನ್ನು ಸಲ್ಲಿಸಿದಂತೆ ಆಗುವುದು. ಇದು ದೇಶ ಹಿತಕ್ಕೂ ಒಳ್ಳೆಯದು. ಸರ್ವವಿಧದಿಂದಲೂ ಈ ಕನ್ಯೆ ನಮ್ಮ ಮನಸ್ಸಿಗೆ ಬಂದಿದ್ದಾಳೆ. ಅಪ್ಪಾಜಿ, ಇನ್ನು ನೀನು ದೊಡ್ಡ ಮನಸ್ಸು ಮಾಡಬೇಕು. ಮನೆಗೆ ಸೊಸೆಯೊಬ್ಬಳು ಮಂಗಳೆಯಾಗಿ ಬರಲಿ.'

'ಅವ್ವೆ, ಮದುವೆಗೆ ಮನಸ್ಸಿಲ್ಲದ ನನ್ನನ್ನು "ಕುಲಾಭಿವೃದ್ಧಿಗಾಗಿ, ಪಿತೃಗಳ ಪುಣ್ಯಲೋಕಪ್ರಾಪ್ತಿಗಾಗಿ" ಎಂದು ಮೇಲಿಂದ ಮೇಲೆ ಬಲಾತ್ಕರಿಸು ತ್ತಲೆ ಇರುವಿರಿ. ಇನ್ನು ನಿಮ್ಮ ಸಂತೋಷಕ್ಕೆ ಅಡ್ಡಿ ಬರಬಾರದೆಂದು ನಾನು ಮನಸ್ಸುಮಾಡಿದ್ದೇನೆ.'

ರಾಜಮಾತೆ (ಸಂತೋಷದಿಂದ): 'ಈಗ ಅಮೃತವನ್ನುಂಡಂತಾಯಿತು. ಅಪ್ಪಾಜಿ, ನಿನ್ನ ಮನ ಶಾಂತಲೆಯನ್ನು ಒಪ್ಪಿತೊ?'

'ಅರಿತೆನು, ಅವ್ವೆ. ಆ ದುಂಡುಮುಖದ ಕನ್ಯೆ ತಾನೆ?'

ರಾಜಮಾತೆಗೆ ಎದೆಯಲ್ಲಿ ಧಗ್! ಎಂದಿತು. ಹೃದಯವೇ ಸ್ತಂಭಿಸುವಂತೆ ಆಯ್ತು. ಅರ್ಧ ನಿಮಿಷ ಅವರಿಗೆ ಮಾತನಾಡಲು ಆಗಲಿಲ್ಲ. ಆದರೂ ತಮಗಾದ ಸ್ಥಿತಿಯನ್ನು ಹೊರಪಡಿಸಿಕೊಳ್ಳದೆ, ನಗುಭಾವವನ್ನು ತಳೆದು 'ಅಯ್ಯೋ, ಅವಳಲ್ಲ; ಅವಳು ಲಕ್ಷ್ಮಿ. ಸೋಗೆಮೊಗದ ಸೋಗೆಕಣ್ಣಿನ ಚೆಲುವೆ ಶಾಂತಲೆ.'

'ಅವ್ವೆ, ಲಕ್ಷ್ಮಿ ಯಾರು?'

ರಾಜಮಾತೆಗೆ ಈಗ ಅಂಗಾಂಗ ಬೆವರಿತು, ಹೃದಯದ ವೇಗ ಇಮ್ಮಡಿಸಿತು. ಅರೆಕಂಪಿತ ಧ್ವನಿಯಲ್ಲಿ 'ಲಕ್ಷ್ಮಿ ಪಂಡಿತ ಪೆರುಮಲೆಯವರ ಕನ್ಯೆ. ಅವರ ಒಬ್ಬಳೆ ಮಗಳು' ಎಂದರು.

ಪ್ರಭುಗಳು ತಾಯಿಯ ಕಡೆ ನೋಡಿ 'ಏನು! ಲಕ್ಷ್ಮಿ ಪಂಡಿತ ಪೆರುಮಲೆಯವರ ಮಗಳೆ! ಪಂಡಿತರಿಗೆ ಇಷ್ಟು ಚೆಲುವೆಯಾದ ಕನ್ಯೆಯೊಬ್ಬಳು ಇರುವಳೆಂದು ನಾನರಿಯೆ! ವೀಣೆ ನುಡಿಸಿದುದರಲ್ಲಿ ಹಾಡಿದುದರಲ್ಲಿ ಇಬ್ಬರೂ ಸಮಸಮನಾಗಿದ್ದರು. ಇದು ಬಹು ವಿರಳ. ಬಹು ವರ್ಷಗಳ ಸ್ನೇಹ ಸೌಹಾರ್ದಗಳಿರಬೇಕು ಇವರದು?'

ರಾಜಮಾತೆ: 'ಇಬ್ಬರ ಮನೆಗಳೂ ಒಂದೇ ಬೀದಿಯಲ್ಲಿ. ಇಬ್ಬರೂ ಒಟ್ಟಿಗೆ ಆಡಿ, ಪಾಡಿ ಬೆಳೆದವರು. ಎರಡು ವರ್ಷಕ್ಕೇ ತಾಯಿ ಇಲ್ಲವಾದ ಲಕ್ಷ್ಮಿಯನ್ನು ಮಾಚಿಕಬ್ಬೆ ಸಾಕಿ ಸಲಹಿ ಶಾಂತಲೆಯ ಜೊತೆಯಲ್ಲಿ ಬೆಳೆಸಿರುವರು. ಹೀಗೆ ಅವರ ತನುಮನಗಳೂ ಒಂದಾಗಿ ಬೆಳೆದುದರಲ್ಲೇನಾಶ್ಚರ್ಯ?'

'ಅವ್ವೆ, ಅಂತಾದರೆ ನಾನು ಒಬ್ಬಳನ್ನು ಮದುವೆಯಾದರೆ, ಇನ್ನೊಬ್ಬಳ ಮನಸ್ಸಿಗೆ ಅದು ಸುಖವಾದೀತೆ! ಮದುವೆಯಾದವಳ ಮನಸ್ಸಿಗಾದರೂ ಸುಖವಿದ್ದೀತೆ?'

'ಅಷ್ಟು ಗಾಢಸ್ನೇಹವಿದ್ದಲ್ಲಿ ಸ್ವಲ್ಪ ಕಾಲ ಹಾಗಿರುವುದು: ಇನ್ನೊಬ್ಬರಿಗೂ ಮುಂದೆ ಒದಗುವ ಬದುಕಿನ ವಾತಾವರಣದಲ್ಲಿ ಅದು ಕ್ರಮೇಣ ಆರುವುದು, ಅಪ್ಪಾಜಿ. ಶಾಂತಲೆಗೆ ಮದುವೆಯಾದ ಮೇಲೆ, ಪಂಡಿತರೂ ಮಗಳಿಗೆ ತಕ್ಕ ವರನನ್ನು ಹುಡುಕಿ ಮದುವೆಮಾಡದೆ ಇರುತ್ತಾರೆಯೆ?'

'ಅವ್ವೆ, ನಿಷ್ಪಟ ಸ್ನೇಹ ಹಾಗೆಂದಿಗೂ ಇರದು. ಸ್ನೇಹ ಪ್ರೇಮಗಳು ರಕ್ತಮಾಂಸಕ್ಕೆ ಮಾತ್ರವೆ ಅಂಟಿಕೊಂಡಿಲ್ಲ. ಅಂಥದು ಸ್ನೇಹವೂ ಅಲ್ಲ, ಪ್ರೇಮವೂ ಅಲ್ಲ. ಸ್ನೇಹಕ್ಕೆ, ಪ್ರೇಮಕ್ಕೆ, ಜನ್ಮಾಂತರಗಳ ಸೋಂಕು ಇರುವು ದೆಂದೇ ನನ್ನ ನಂಬಿಕೆ. ಅವ್ವೆ, ನೀವು ನಿಮ್ಮ ಕೈಹಿಡಿದವರನ್ನು ಮರೆತಿರಾ? ಮರೆಯಲು ಸಾಧ್ಯವೆ! ವರ್ಷಗಳು ಕಳೆದವಲ್ಲ!'

ಮಗನೆಂದ ಮಾತು ತಾಯಿಗೆ ಕಿರುಗತ್ತಿಯಿಂದ ಚುಚ್ಚಿ ನೋಯಿಸಿ ದಂತಾಯ್ತು. ತಾಯಿಗೆ ನೋವಾಯಿತೆಂದು ಪ್ರಭುಗಳು ಅರಿತರು. ಆದರೂ ತಮ್ಮ ಮಾತನ್ನು ಮುಂದುವರಿಸಿದರು. 'ಅವ್ವೆ, ನಿಮ್ಮ ಮನಸ್ಸನ್ನು ನೋಯಿಸ ಬೇಕೆಂಬ ಉದ್ದೇಶ ನನಗಿಲ್ಲ. ನೊಂದೀತೆಂದು ನನ್ನ ಮನಸ್ಸಿಗೆ ಹೊಳೆಯಲಿಲ್ಲ. ಕ್ಷಮಿಸಬೇಕು.'

ತಾಯಿಯೊಡನೆ ಪ್ರಭುಗಳು ಇಷ್ಟು ಬಿಚ್ಚಿದ ಮಾತುಗಳನ್ನು ಎಂದೂ ಆಡಿದವರಲ್ಲ. ಈಗ ಯಾವುದೊ ಅಮಾನುಷ ಶಕ್ತಿಯೇ ಪ್ರಭುಗಳ ಬಾಯಿಂದ ಈ ಮಾತುಗಳನ್ನು ನುಡಿಸುತ್ತಿದೆಯೆಂದು ರಾಜಮಾತೆ ಅಂಜಿದರು. ಮುಂದಕ್ಕೆ ಮಾತನಾಡಲು ಹಿಂತೆಗೆದರು. ಪ್ರಭುಗಳು ತಾವು ಆಡಿದ ಮಾತುಗಳನ್ನು ತಮ್ಮ ತಾಯಿ ಒಪ್ಪಿದರೆಂದೇ ಬಗೆದು, 'ಅವ್ವೆ, ಹತ್ತಾರು ವರ್ಷಗಳ ಇವರ ಸ್ನೇಹ ಎಷ್ಟು ಗಾಢವಾಗಿರಬೇಡ! ಒಬ್ಬಳನ್ನು ನಾನು ಮದುವೆಯಾದರೆ ಇನ್ನೊಬ್ಬಳಿಗೆ ದುಃಖವಾಗುವುದು ಖಂಡಿತ. ತನ್ನ ಬಹುದಿನದ ಗೆಳತಿಯಿಂದ ತಾನು ದೂರಗತೆಯಾದೆನೆಲ್ಲಾ ಎಂದು ಮದುವೆಯಾದವಳೂ ಅಂತೆಯೇ ಕೊರಗಿ ಯಾಳು. ಆದುದರಿಂದ, ಅವ್ವೆ, ಈ ಸಂಬಂಧ ಬೇಡವೇಬೇಡ.'

ರಾಜಮಾತೆ: 'ಅಪ್ಪಾಜಿ! ಅಪ್ಪಾಜಿ!!'

'ಅವ್ವೆ, ಕಾತರರಾಗಬಾರದು. ಸಮಾಧಾನ ತಂದುಕೊಳ್ಳಿ. ನಾನು ಚೆನ್ನಾಗಿ ಯೋಚಿಸಿಯೆ ಮಾತನಾಡುತ್ತಿದ್ದೇನೆ. ಆ ಕನ್ಯೆಯರನ್ನು ಅಗಲಿಸು ವುದು ದೋಷವೆಂದೇ ಎಣಿಸುತ್ತೇನೆ. ಆದ್ದರಿಂದ ಇನ್ನೊಮ್ಮೆ ಹೇಳಬಯಸು ತ್ತೇನೆ: ಒಂದು—ಈ ಸಂಬಂಧ ಬೇಡವೇಬೇಡ; ಎರಡು—ನಾನು ಮದುವೆಯಾಗಲೇಬೇಕೆಂಬುದು ನಿಮ್ಮ ಆಶೆಯಾದರೆ, ಆ ಕನ್ಯೆಯರೂ ಒಪ್ಪಿದರೆ, ಇಬ್ಬರನ್ನೂ ಮದುವೆಯಾಗುತ್ತೇನೆ. ಆಗ ಇಬ್ಬರೂ ಸಂತೋಷ ದಿಂದಿರುತ್ತಾರೆ.'

ರಾಜಮಾತೆಗೆ ಆಗ ತಟ್ಟನೆ ಜ್ಞಾಪಕಕ್ಕೆ ಬಂತು, ಶಾಂತಲೆ ತನ್ನ ತಾಯಿಯೊಡನೆ ಹೇಳಿಕಳುಹಿಸಿದ ಮಾತು: 'ನಾನೊಬ್ಬಳೆ ವೀಣೆ ನುಡಿಸಿ ಹಾಡಲು ಸಿಗ್ಗಾಗುತ್ತದೆ, ಜೊತೆಯಲ್ಲಿ ಲಕ್ಷ್ಮಿಯೂ ಹಾಡಿ ನುಡಿಸಬಹುದಾದರೆ' ಎಂದು. ರಾಜಮಾತೆ 'ವಿಧಿ ಎಲ್ಲಿಂದ ಎಲ್ಲಿಗೆ ನಡಿಸಿಕೊಂಡು ಬಂದಿತು!' ಎಂದುಕೊಂಡು, 'ಅಪ್ಪಾಜಿ, ಬಹು ಕಷ್ಟಕ್ಕೆ ತಂದಿಟ್ಟೆಯಲ್ಲಾ!' ಎಂದರು.

'ಅವ್ವೆ, ನೀವು ನನಗೆ ತಾಯಿಯಲ್ಲವೆ? ನಿಮ್ಮೆದುರಿಗೆ ನಾನು ಮನ ಮುಚ್ಚಿ ಮಾತನಾಡುವುದೆ?'

'ಪಂಡಿತ ಪೆರುಮಲೆಯವರು ಇದಕ್ಕೆ ಒಪ್ಪುವರೆ?'

* * * *

'ಪಂಡಿತ ಪೆರುಮಲೆಯವರು ಇದಕ್ಕೆ ಒಪ್ಪುವರೆ?' ಎಂದು ಅದೇ ಹೊತ್ತಿನಲ್ಲಿಯೆ ಮಾಚಿಕಬ್ಬೆ ಪತಿಯನ್ನು ಕೇಳಿದರು.

ಮಾರಸಿಂಗಮಯ್ಯ: 'ಪಂಡಿತರು ವಿಶಾಲಹೃದಯರು, ಸಮದರ್ಶಿಗಳು, ದೈವದಲ್ಲಿ ಭೇದಭಾವವಿಲ್ಲದವರು. ಜಾತಿಮತಗಳ ಇಕ್ಕಟ್ಟು ಅಂಥವರಿಗಿಲ್ಲ, ಮಾಚಿ. ಗುಣನಡತೆಗಳನ್ನು ಮಾತ್ರವೆ ಗಮನಿಸತಕ್ಕವರವರು. ಇರುವ ಸಂಗತಿಯನ್ನು ಗಂಗರಾಜರಿಗೂ ಪಂಡಿತರಿಗೂ ಅರಿಕೆಮಾಡುವುದು, ಅವರು ಹೇಳಿದಂತೆ ನಡೆಯುವುದು.'

* * * *

ಇತ್ತ ಪ್ರಭುಗಳೂ ತಾಯಿಯೊಡನೆ ಅಂದರು: 'ಪಂಡಿತರು ವಿಶಾಲ ಹೃದಯರು. ದೇವರಲ್ಲಿ, ಜಾತಿಮತಗಳಲ್ಲಿ ಭೇದಭಾವವಿಲ್ಲದವರು. ಶುಚಿ, ರುಚಿ, ಗುಣ, ಶೀಲ, ಸತ್ಯ ಇವುಗಳನ್ನು ಮಾತ್ರವೆ ಗಮನಿಸುವವರು.'

ರಾಜಮಾತೆ: 'ಒಳ್ಳೆಯದು, ಅಪ್ಪಾಜಿ. ವಿಷಯವನ್ನು ಗಂಗರಾಜರಿಗೂ ಪಂಡಿತರಿಗೂ ಅರುಹಿ, ಅವರ ಉತ್ತರವೇನೆಂದು ತಿಳಿಯೋಣ. ಮಹಾಲಕ್ಷ್ಮಿಯಂತಿರುವ ಲಕ್ಷ್ಮಿಯನ್ನು ಪಂಡಿತರು ಕೊಟ್ಟರೆ ನಾವು ಮಿಗಿಲು ಸಂತೋಷದಿಂದ ಮನೆ ತುಂಬಿಸಿಕೊಳ್ಳುವೆವು.'

ಪ್ರಭುಗಳು: 'ಅವ್ವೆ, ನಿಮ್ಮ ಸಂತೋಷವೆ ನಮ್ಮ ಸಂತೋಷ' ಎನ್ನುತ್ತ ತಾಯಿಗೆ ವಂದಿಸಿ ತಮ್ಮ ಶಯ್ಯಾಗೃಹಕ್ಕೆ ಹೋದರು.

§

'ಅಕ್ಕಾ, ಬಾಗಿಲು ತೆಗೆ' ಎನ್ನುತ್ತ ಲಕ್ಷ್ಮಿ ಶಾಂತಲೆಯ ಕೋಣೆಯ ಬಾಗಿಲನ್ನು ಮೃದುವಾಗಿ ತಟ್ಟಿದಳು. ಶಾಂತಲೆ ಲಕ್ಷ್ಮಿಯ ಧ್ವನಿಯನ್ನು ಕೇಳಿ ತನ್ನ ಕಣ್ಣೀರು ಲಕ್ಷ್ಮಿಗೆ ಕಾಣಬಾರದೆಂದು ಒರಸಿಕೊಂಡು ಶಾಂತ ಮುದ್ರೆಯ ಮುಖದಿಂದ ಬಾಗಿಲನ್ನು ತೆರೆದು, 'ಬಾ ಲಕ್ಷ್ಮಿ, ಅವ್ವೆ ಈಗ ಹೇಗಿದ್ದಾರೆ? ಏನೆಂದರು?' ಎಂದು ಕೇಳಿದಳು. ಲಕ್ಷ್ಮಿ ಅಕ್ಕನ ಮುಖವನ್ನು ನೋಡಿದಳು. ಕಲ್ಪಿತ ನಗುವನ್ನು ಅರ್ಥಮಾಡಿಕೊಂಡು, 'ಅಕ್ಕ, ನೀನು ಅಳುತ್ತಿದ್ದೀಯೆ. ಇದನ್ನು ಮೊದಲಿಟ್ಟವಳು ನಾನು. ಈಗ ಇದು ಘೋರ ವ್ಯಾಧಿಯಂತೆ ಮನೆಯೆಲ್ಲ ಹರಡಿಕೊಂಡಿದೆ. ಅವ್ವೆಯೊಂದಿಗೂ ಅಯ್ಯ ನೊಂದಿಗೂ ನೀನು ಏನೆಂದೆ? ಅವರೇಕೆ ಇಷ್ಟು ಭೀತಿಗೊಂಡಿರುವರು? ಅವ್ವೆಯೂ ನೀನೂ ಮೂರ್ಛೆಬೀಳುವಷ್ಟು ಘೋರಪ್ರಸಂಗ ನಿಮ್ಮನಿಮ್ಮಲ್ಲಿ ಏನು ನಡೆಯಿತು? ಇದು ಸರಿಯೆ? ನಾನು ಏಕೆ ಅತ್ತೆನೆಂದು ನಿನ್ನೊಡನೆ ಹೇಳಿದೆನಲ್ಲವೆ? ಅಕ್ಕ, ನಾನು ಚಿಕ್ಕವಳು, ನೀನು ನನಗೆ ಹೇಳಬೇಕು; ಇದು ಧರ್ಮ, ಇದು ರೀತಿ. ಏನನ್ನೊ ಭ್ರಮಿಸಿ ನನ್ನ ಹೃದಯ ತಲ್ಲಣಿಸಿತು. ನನ್ನ ಹೃದಯ ನಿನ್ನೆದೆಯನ್ನು ತಾಗಿದಾಗ ಅದು ಸಮಾಧಾನಗೊಂಡಿತು. ನೀನು ತಂಗಿಯನ್ನು ಮರೆಯುವುದಿಲ್ಲವೆಂದೂ ನನಗೆ ಭರವಸೆಯಾಯಿತು. ಚಿತ್ತ ಭ್ರಮೆಯ ವಿಕಾರದಲ್ಲಿ ನಾನೇನಾದರೂ ಬಾಯಿತಪ್ಪಿ ನುಡಿದಿದ್ದರೆ ದೊಡ್ಡವಳು ನೀನು ನನ್ನನ್ನು ಕ್ಷಮಿಸಬೇಕು. ನೀನು ಮದುವೆಯಾಗುವುದೆ ನ್ಯಾಯ. ಅವ್ವೆಯನ್ನೂ ಅಯ್ಯನನ್ನೂ ದುಃಖಕ್ಕೆ ಈಡುಮಾಡಬೇಡ. ಹೊತ್ತು, ಹೆತ್ತು, ಸಾಕಿ, ವಿದ್ಯಾಬುದ್ಧಿಗಳನ್ನು ಕೊಟ್ಟು ಬೆಳಸಿದ ಇವರಿಗಿಂತ ಇಹದಲ್ಲಿ ಬೇರೆ ದೈವವಿಲ್ಲ. ಇದನ್ನು ನಾನು ನಿನಗೆ ಹೇಳಬೇಕಾದುದಿಲ್ಲ. ನನ್ನ ಅಯ್ಯನಿಗಿಂತ ನನಗೆ ಇಹದೈವವಿಲ್ಲ. ಹುಟ್ಟಿದ ಎರಡನೆಯ ವರ್ಷಕ್ಕೇ ನನಗೆ ತಾಯಿ ಇಲ್ಲ ವಾದಳು. ಅಯ್ಯ ನನ್ನನ್ನು ಎಂತು ಸಾಕಿದರೊ? ಎಷ್ಟು ಕಷ್ಟಪಟ್ಟರೊ? ನನ್ನ ಜಲಮಲಗಳನ್ನು ತೊಳೆದು, ಮಜ್ಜನಮಾಡಿಸಿ, ಹಾಲೂಡಿ, ಎದೆಯ ಶಾಖವನ್ನು ಕೊಟ್ಟು, ತಾಯಿಗಿಂತಲೂ ಹೆಚ್ಚಾಗಿ ಶ್ರಮಿಸಿರುವರು. ಮಗು ವಾಗಿದ್ದವಳನ್ನು ದೊಡ್ಡವಳನ್ನಾಗಿ ಮಾಡಿದರು. ಉತ್ತಮ ವಿದ್ಯಾಬುದ್ಧಿಗಳನ್ನು ಅರುಹಿದರು. ನನ್ನ ಕಣ್ಣು ದೊಡ್ಡದಾಯಿತು. ಹೃದಯ ವಿಶಾಲವಾಯಿತು.

ಆದ್ದರಿಂದ ನಾನು ನಿರ್ಧರಿಸಿದ್ದೇನೆ! ಇನ್ನು ನನ್ನ ಎಲ್ಲ ಸುಖಶಾಂತಿಗಳೂ ಅವರು ಕೊಟ್ಟಂತೆ, ಇಟ್ಟಂತೆ. ನನ್ನನ್ನು ಮದುವೆ ಮಾಡಿಕೊಡಲು ಅವರಿಗೇ ಹಕ್ಕುಂಟು. ಇನ್ನು ನನ್ನ ಮದುವೆಯ ವಿಷಯದಲ್ಲಿ ನೀನು ಯೋಚಿಸ ಬಾರದು. ಇದು ಸರ್ವಥಾ ನ್ಯಾಯವಲ್ಲ. ಕೈಹಿಡಿಯಲು ಬರುವ ಪ್ರಭುಗಳನ್ನು ಖಂಡಿತ ನಿರಾಕರಿಸಬೇಡ. ಅಂತಹ ಮಹಾಭಾಗರ ಕೈಹಿಡಿಯುವುದೆಂದರೆ ಎಷ್ಟು ನೋಂಪಿಗಳ ಫಲವೊ! ಈ ಮಹಾಮಂಗಳವನ್ನು ನೀನು ನಿರಾ ಕರಿಸಿದೆಯಾದರೆ, ನಾನು ದುಃಖಿಯಾದೇನು, ಆಜನ್ಮದುಃಖಿಯಾದೇನು. ಇದು ಹೀಗೆ ನನ್ನಿಂದಲೇ ಆಯಿತೆಂದು ಜನ್ಮವಿರುವತನಕ ನನ್ನ ಹೃದಯವನ್ನು ನಾನೇ ತಿಂದುಕೊಳ್ಳುತ್ತಿರುತ್ತೇನೆ. ಅಕ್ಕ, ನೀನು ಮಹಾರಾಜ್ಞಿಯಾದರೇನು? ನಾನು ನಿನ್ನ ಪ್ರಜೆಯ ಪತ್ನಿಯಾದರೇನು? ನಿನ್ನ ವಿಶ್ವಾಸವೆಂದಿಗೂ ಕುಂದದು, ಅದನ್ನು ನಾನು ಬಲ್ಲೆ. ನಾನು ಯಾವಾಗಲೂ ನಿನ್ನ ಹೃದಯದಲ್ಲೆ ಇರು ವವಳು' ಎಂದು ಲಕ್ಷ್ಮಿ ಅಕ್ಕನಿಗೆ ಸಮಾಧಾನ ಮಾಡಲು ಯತ್ನಿಸಿ ತನ್ನ ಕಣ್ಣುಗಳಲ್ಲೇ ನೀರು ತಂದುಕೊಂಡಳು.

ಶಾಂತಲೆ ಮೆಲ್ಲನೆ ಲಕ್ಷ್ಮಿಯ ಗಲ್ಲವನ್ನು ಹಿಡಿದು ಮುಖವನ್ನು ಮೇಲ ಕ್ಕೆತ್ತಿ, ಅವಳ ದೃಷ್ಟಿಯಲ್ಲಿ ತನ್ನ ದೃಷ್ಟಿಯನ್ನು ನಟ್ಟು, 'ಚಿನ್ನ, ಎಷ್ಟು ಚೆಂದದ, ಎಷ್ಟು ಬುದ್ಧಿವಂತಿಕೆಯ ಮಾತುಗಳನ್ನಾಡುತ್ತಿದ್ದೀಯೆ?' ಎನ್ನುತ್ತ ಲಕ್ಷ್ಮಿಯನ್ನು ಮೃದುವಾಗಿ ಆಲಿಂಗಿಸಿ, 'ಆದರೂ ತಿಳಿದುಕೊ: ಅಕ್ಕನಾದವಳಿಗೆ ತಂಗಿಯ ಯೋಗಕ್ಷೇಮವೇ ಮೊದಲು, ಎಲ್ಲಕ್ಕಿಂತ ಮೊದಲು' ಎನ್ನುತ್ತ ಲಕ್ಷ್ಮಿಯನ್ನು ಒಳಕ್ಕೆ ಕರೆದುಕೊಂಡು ಹೋದಳು.

§

ಗಂಗರಾಜರು ಮಾರನೆಯ ದಿನ ಪ್ರಾತಃಕಾಲ ಹಾಸಿಗೆಯಿಂದ ಏಳುತ್ತಿದ್ದ ಸಮಯಕ್ಕೆ ಸರಿಯಾಗಿ ಅವರ ಮಗ ಬೊಪ್ಪಣ್ಣ ಬಂದು ತಂದೆಗೆ ನಮಸ್ಕರಿಸಿ, 'ಅಯ್ಯ, ಅರಮನೆಯಿಂದ ಮಹಾದೇವಿ ಅಕ್ಕನವರ ಚೇಟಿಯೊಬ್ಬಳು ಬಂದು, ಸಾಧ್ಯವಾದರೆ ತಾವು ಈಗಲೆ ಅರಮನೆಗೆ ಬಂದು ರಾಜಮಾತೆಯರನ್ನು ಕಾಣ ಬೇಕೆಂದೂ, ಬರುವಾಗ ತಮ್ಮೊಡನೆ ಪಂಡಿತ ಪೆರುಮಲೆಯವರನ್ನು ಕರೆತರ ಬೇಕೆಂದೂ ಅಪ್ಪಣೆ ಕೊಡಿಸಿರುವರು, ಎಂದು ಹೇಳಿಹೋದಳು' ಎಂದ.

ಹಿಂದಿನ ರಾತ್ರಿ ಗಂಗರಾಜರು ಮಲಗುವುದಕ್ಕೆ ಮುನ್ನ ಪ್ರಭುಗಳ ಮದುವೆಯ ವಿಷಯವನ್ನೆ ಆಲೋಚಿಸುತ್ತ ಆದಿನಾಥಸ್ವಾಮಿಯನ್ನು ಸ್ಮರಿಸಿ ನಿದ್ರೆಹೋದರು. ಆ ರಾತ್ರಿ ಅವರು ದಿವ್ಯವಾದ ಕನಸೊಂದನ್ನು ಕಂಡರು. ಸೌಧರ್ಮ ಸ್ವರ್ಗದಿಂದ ದೇವೇಂದ್ರನು ತನ್ನ ಐರಾವತವನ್ನೇರಿ ದ್ವಾರವತಿಗೆ ವಿಷ್ಣುವರ್ಧನ ಪ್ರಭುವಿನ ಒಡ್ಡೋಲಗಕ್ಕೆ ಬಂದನು. ಪ್ರಭುಗಳು ತುಂಬಿದ ಓಲಗದಲ್ಲಿ ರತ್ನಸಿಂಹಾಸನದಲ್ಲಿ ಕುಳಿತಿದ್ದರು. ಎಡಬಲ ಪಾರ್ಶ್ವಗಳಲ್ಲಿ ದಿವ್ಯಾಭರಣಭೂಷಿತೆಯರಾಗಿ ಶಾಂತಲೆ ಲಕ್ಷ್ಮಿಯರು ಕುಳಿತಿದ್ದರು. ದೇವೇಂದ್ರನು ಐರಾವತದಿಂದಿಳಿದು ಕೈಯಲ್ಲಿ ಕನಕಕಲಶವನ್ನು ಹಿಡಿದು ಓಲಗಶಾಲೆಯನ್ನು ಪ್ರವೇಶಿಸಿ, ಕಲಶದಲ್ಲಿದ್ದ ಅಮೃತೋದಕದಿಂದ ಪ್ರಭುಗಳಿಗೂ ಇಬ್ಬರು ಮಹಿಷಿಯರಿಗೂ ಅಭಿಷೇಕ ಮಾಡಿದನು. ದೇವತೆಗಳೂ ಯಕ್ಷರೂ ಹೂಮಳೆಗರೆದರು. ಆ ಬಳಿಕ ದೇವೇಂದ್ರನು ನಮಸ್ಕರಿಸಿದ ಪ್ರಭುಗಳನ್ನೂ ರಾಣಿಯರನ್ನೂ ಆಶೀರ್ವದಿಸಿ ಐರಾವತವನ್ನೇರಿ ಸೌಧರ್ಮಸ್ವರ್ಗಕ್ಕೆ ಹಿಂದಿರುಗಿದನು . . .

ರಾಜಮಾತೆಯ ಮನದಿಚ್ಛೆಯನ್ನು ಗಂಗರಾಜರು ಚೆನ್ನಾಗಿಯೇ ಅರಿತಿದ್ದರು. ಈಗ ಹೇಳಿಕಳುಹಿಸಿರುವ ಕಾರಣವಾದರೂ ಇದೇ ಇರಬೇಕೆಂದು ಅವರಿಗೆ ಸ್ಪಷ್ಟವಾಯಿತು. ತತ್‌ಕ್ಷಣ ಎದ್ದು, ಸ್ನಾನಾದಿಗಳನ್ನು ಮುಗಿಸಿ, ಆದಿನಾಥನನ್ನು ಪೂಜಿಸಿ, ಉಪಾಹಾರಗೈದು ಮೇನೆಯಲ್ಲಿ ಕುಳಿತು ಪಂಡಿತರ ಮನೆಗೆ ಹೋದರು.

ಗಂಗರಾಜರು ಪಂಡಿತರೊಡಗೂಡಿ ಅರಮನೆಯನ್ನು ಸೇರುವುದಕ್ಕೂ ಅದೇ ಸಮಯಕ್ಕೆ ಮಾಚಿಕಬ್ಬೆ ಮಾರಸಿಂಗಮಯ್ಯನವರು ಅಲ್ಲಿಗೆ ಬರುವುದಕ್ಕೂ ಸರಿಹೋಯಿತು! ರಾಜಮಾತೆಯೆ ಇವರೆಲ್ಲರನ್ನೂ ಕರಸಿಕೊಂಡಿದ್ದರು. ಎಲ್ಲರೂ ರಾಜಮಾತೆಯರ ಪುಷ್ಪವಾಟಿಯ ಮುಂದಣ ವಿಶ್ರಾಂತಿಗೃಹದಲ್ಲಿ ಕುಳಿತರು. ಚೇಟಿಯೊಬ್ಬಳು ಇವರುಗಳು ಬಂದಿರುವ ಸಮಾಚಾರವನ್ನು ರಾಜಮಾತೆಗೆ ತಿಳಿಸಲು ಹೋದಳು.

ಗಂಗರಾಜರು ಮಾಚಿಕಬ್ಬೆ ಮಾರಸಿಂಗಮಯ್ಯನವರನ್ನು ನೋಡಿ ನಸುನಕ್ಕು, ಮೆಲುದನಿಯಲ್ಲಿ 'ಅಕ್ಕನವರು ನಿಮ್ಮನ್ನೂ ಕರಸಿಕೊಂಡಿದ್ದಾರೆ. ಕಾರಣವು ಅದೇ ಇರಬೇಕಲ್ಲವೆ?' ಎಂದು ಪಂಡಿತರ ಕಡೆ ನೋಡಿ, 'ಪಂಡಿತರು ತ್ರಿಕಾಲಜ್ಞರು, ಅವರಿಗೆ ವಿಷಯವೇನೆಂದೂ ತಿಳಿದೇ ಇರಬೇಕು' ಎಂದರು.

ಪಂಡಿತರು : ‘ ಭೀಷ್ಮರು ತಮ್ಮ ದಿವ್ಯದೃಷ್ಟಿಯಲ್ಲಿರುವುದನ್ನು ನಮಗೆ ಅರುಹಬಹುದಲ್ಲ? ಅಕ್ಕನವರ ಮನಸ್ಸನ್ನು ಅರಿಯಬಲ್ಲವರು ನೀವೊಬ್ಬರೆ. ಮಾಚಿಕಬ್ಬೆ ಮಾರಸಿಂಗಮಯ್ಯನವರನ್ನೂ ಕರಸಿಕೊಂಡಿರುವುದೇಕೊ ? ’

ಮಾಚಿಕಬ್ಬೆ (ಪಂಡಿತರನ್ನು ಸಂಬೋಧಿಸಿ) : ‘ ತಂದೆಗಳ ಬಳಿ ಹೇಳಿಕೊಳ್ಳ ಲೋಸುಗವೆ ಇಂದು ಬೆಳಗ್ಗೆ ತಮ್ಮ ಮನೆಗೆ ಬಂದೆವು. ತಾವು ಮನೆಯಲ್ಲಿಲ್ಲ ದುದನ್ನು ಕಂಡು ಬಹು ಆಧೈರ್ಯಪಟ್ಟೆವು. ತಮ್ಮ ಶಿಷ್ಯರೊಬ್ಬರು ‘ ಇದೆ ಈಗ ಗಂಗರಾಜರು ಬಂದಿದ್ದರು ; ಗುರುಗಳನ್ನು ಕರೆದುಕೊಂಡು, ಮೇನೆಯನ್ನು ಇಲ್ಲಿಯೆ ಬಿಟ್ಟು ಅರಮನೆಗೆ ನಡೆದೆ ಹೋದರು ’ ಎಂದು ತಿಳಿಸಿದರು. ತಂದೆ ಗಳನ್ನು ಕಾಣಲಾಗಲಿಲ್ಲವೆ ಎಂದು ಮನನೊಂದು ನಾವು ಮನೆಗೆ ಹಿಂದಿರುಗಿ ದೆವು. ತಮ್ಮನ್ನು ಕಂಡು ಮಾತನಾಡಬೇಕಾದ ಅವಸರದ ವಿಷಯವೊಂದಿತ್ತು. ಅಷ್ಟು ಹೊತ್ತಿಗೆ ಅರಮನೆಯಿಂದ ನಮಗೂ ಕರೆ ಬಂದು ಕಾದಿತ್ತು. ಮನೆ ಯೊಳಕ್ಕೆ ಕೂಡ ಹೋಗದೆ, ಇಲ್ಲಿಗೆ ಹೊರಟುಬಂದೆವು. ಇಲ್ಲಿಯಾದರೂ ತಮ್ಮನ್ನು ಕಾಣಬಹುದೆಂಬ ಆಶೆಯಿಂದಲೇ ಬಂದೆವು ’ (ಎಂದು ಗಂಗರಾಜ ರನ್ನು ನೋಡಿ) ‘ ಅಣ್ಣದಿರೂ ನಮಗೆ ಇಲ್ಲಿಯೆ ದೊರೆತುದು ಇನ್ನೂ ಹೆಚ್ಚಿನ ತೃಪ್ತಿ. ಇಂದು ನಾವು ಅವರನ್ನೂ ಕಾಣಲೆಬೇಕಾಗಿತ್ತು. ದೈವವೇ ನಮ್ಮನ್ನೂ ನಿಮ್ಮನ್ನೂ ಎಲ್ಲರನ್ನೂ ಇಲ್ಲಿಗೆ ಕರೆತಂದಿದೆ. ಕಠಿಣಸಮಸ್ಯೆಯೊಂದು ನಮ್ಮನ್ನು ಬಹು ಆಧೈರ್ಯಪಡಿಸಿದೆ, ದಿಕ್ಕೇ ತೋಚದಾಗಿದೆ. ಆದ್ದರಿಂದಲೆ ನಿಮ್ಮ ಆಶ್ರಯಕ್ಕೆ ಬಂದೆವು. ನಾವು ಇನ್ನೆಲ್ಲಿಗೆ ಹೋದೆವು ? ಇನ್ನಾರನ್ನು ಕೇಳಿಯೇವು ? ’

ಪಂಡಿತರು : ‘ ತಂಗಿ, ಅಕ್ಕನವರು ನಮ್ಮೆಲ್ಲರನ್ನು ಬರಮಾಡಿಕೊಂಡಿ ರುವ ಕಾರಣವನ್ನು, ಗಂಗರಾಜರು ಅಂದ ಸೂಕ್ಷ್ಮದ ಮೇಲೆ ಊಹಿಸಬಲ್ಲೆ ನಾದರೂ ಅದು ನಿಜವಾಗಬಹುದು, ಅಥವಾ ಸುಳ್ಳಾಗಬಹುದು. ನೀವಿಬ್ಬರೂ ಹೇಗೆ ಒಂದು ಮಗುವಿನ ಹಿತಚಿಂತನೆಗಾಗಿ ಶ್ರಮಿಸುತ್ತಿರುವಿರೊ ನಾನೂ ಅಂತೆಯೆ ಒಂದು ಮಗುವಿನ ಹಿತಚಿಂತನೆಗಾಗಿಯೆ ಬದುಕಿದ್ದೇನೆ . . .’

ಪಂಡಿತರು ಇನ್ನೂ ಮಾತನಾಡುವುದರಲ್ಲಿದ್ದರು. ಅಷ್ಟರಲ್ಲಿ ಚೇಟಿ ಬಂದು ‘ ರಾಜಮಾತೆಯರು ಬಿಜಯಮಾಡುತ್ತಿದ್ದಾರೆ ’ ಎಂದು ತಿಳಿಸಿಹೋದಳು. ಅರ್ಧನಿಮಿಷದಲ್ಲಿ ರಾಜಮಾತೆ ಮಂದಸ್ಮಿತವದನರಾಗಿ ಕಾಣಿಸಿಕೊಂಡರು.

ಎಲ್ಲರೂ ಗೌರವದಿಂದ ಎದ್ದುನಿಂತರು. ರಾಜಮಾತೆ ತಾವೇ ಮುಂದಾಗಿ ಕೈಜೋಡಿಸಿ 'ಎಲ್ಲರೂ ಕುಳಿತುಕೊಳ್ಳಬೇಕು. ಈ ಪ್ರಾತಃಕಾಲ ನಿಮ್ಮ ಕೆಲಸ ಕಾರ್ಯಗಳಿಗೆಲ್ಲ ಅಡ್ಡಿತಂದು, ನಮ್ಮ ಕಾರ್ಯವೆ ಹೆಚ್ಚಿನದೆಂದು ನಿಮ್ಮನ್ನೆಲ್ಲ ಇಲ್ಲಿಗೆ ಬರಮಾಡಿಕೊಂಡ ನಮ್ಮ ಸ್ವಾರ್ಥವನ್ನು ಮನ್ನಿಸಬೇಕು. ವಿಷಯ ನಮ್ಮೆಲ್ಲರಿಗೂ ಸಂಬಂಧಿಸಿದ್ದೆ. ಯಾವ ಒಂದು ವಿಷಯ ನಮ್ಮ ಮನಸ್ಸನ್ನು ಕೆಳ ಮೇಲುಮಾಡಿ ದಿಕ್ಕು ತೋಚದಂತೆ ಮಾಡಿರುವುದೋ, ಆ ವಿಷಯ ನಮ್ಮೆಲ್ಲರಿಗೂ ಸಂಬಂಧಿಸಿದ್ದೆ. ಅಣ್ಣದಿರು, ಪಂಡಿತರು, ಬಗೆಹರಿಸಿಯಾರು ಎಂದೇ ನಮ್ಮ ನಂಬುಗೆ' ಎಂದು ಹೇಳಿ ಅನಂತರ ಮಾರಸಿಂಗಮಯ್ಯ ಮಾಚಿಕಬ್ಬೆಯವರನ್ನು ಕುರಿತು 'ನೀವೂ ಮಕ್ಕಳ ತಾಯಿತಂದೆಯವರು, ನಾವೂ ಮಕ್ಕಳ ತಾಯಂದಿರು. ಈ ಸಮಾನಬಂಧದ ಮೇಲೆ ನಾವೀಗ ನಿಮ್ಮೊಡನೆ ಮಾತನಾಡ ಬಂದಿರುವೆವು. ನಮ್ಮ ಸ್ಥಾನಗೌರವವನ್ನು ಈ ಒಂದು ವಿಷಯದಲ್ಲಿ ನೀವೆಲ್ಲರೂ ಖಂಡಿತ ದೂರವಿಡತಕ್ಕದ್ದು. ಅದನ್ನು ಈ ವಿಷಯಕ್ಕೆ ಅನ್ವಯಿಸಬಾರದು. ಗಂಗರಾಜರೂ ಪಂಡಿತರೂ ನಮಗೆ ಪೂಜ್ಯರು. ನೀವೆಲ್ಲರೂ ಈ ರಾಜ್ಯದ ಪರಮ ಹಿತೈಷಿಗಳು. ನೀವು ಆಲೋಚನೆ ಕೊಟ್ಟಂತೆ ನಡೆಯುವುದೆ ನಮಗೆ ಶ್ರೇಯಸ್ಸು. ನಮ್ಮ ಕುಮಾರರು ಶಾಂತಲೆ ಲಕ್ಷ್ಮಿ ಇಬ್ಬರನ್ನೂ ಮದುವೆಯಾಗಲು ಒಪ್ಪಿದ್ದಾರೆ. ಕನ್ಯೆಯರಿಬ್ಬರ ಅನ್ಯೋನ್ಯವನ್ನು ಕಂಡೇ, ಪ್ರಭುಗಳು ಅವರಲ್ಲಿ ಒಬ್ಬಳ ಕೈಹಿಡಿಯಲು ಮನಒಪ್ಪದವರಾದರು. 'ಶಾಂತಲೆಯನ್ನು ಕೊಡಿ' ಎಂದು ಕೇಳುವ ಈ ಬಾಂಧವ್ಯ ಸಲಿಗೆ ನಮಗುಂಟು. 'ಲಕ್ಷ್ಮಿಯನ್ನು ಕೊಡಿ' ಎಂದು ಕೇಳುವ ಶಕ್ತಿ ನಮಗೆ ಇಲ್ಲ. ಆಸಕ್ತಿಯುಂಟು. ಈ ಬಾಧ್ಯತೆಯನ್ನು ನಮಗೆ ಪಂಡಿತರು ಅನುಗ್ರಹಿಸಬೇಕು. ನಮ್ಮ ಮಕ್ಕಳು ಇದುವರೆಗೆ ಮದುವೆಯೇ ಬೇಡವೆಂದು ಹೇಳುತ್ತಿದ್ದರು. ವಂಶಾಭಿವೃದ್ಧಿಗೆ, ರಾಜ್ಯರಕ್ಷಣೆಗೆ, ಸಂತತಿ ಅಗತ್ಯವೆಂದು ಮೇಲಿಂದ ಮೇಲೆ ಒತ್ತಾಯ ಮಾಡಿ ಸಮ್ಮತಿಪಡಿಸಬೇಕಾಯಿತು. ಇದೋ, ಈ ನಮ್ಮ ಜೀವಿತದ ಸರ್ವಸ್ವ ಈಗ ನಿಮ್ಮೆಲ್ಲರ ಮಡಿಲಲ್ಲಿ ಇದೆ. ಇನ್ನು ಮೇಲೆ ನಮಗೆ ಸುಖಸಂತೋಷಗಳನ್ನೂ ಮೊಮ್ಮಕ್ಕಳನ್ನು ಪಡೆಯುವ ಪುಣ್ಯವೂ ನೀವು ಕೊಟ್ಟರೆ ಉಂಟು. ಇದರ ಮೇಲೆ ನಿಮ್ಮ ಆಲೋಚನೆ ವಿವೇಚನೆಗಳನ್ನು ಅನುಸರಿಸಲು ನಾವೂ ನಮ್ಮ ಮಕ್ಕಳೂ ಸಿದ್ಧರಾಗಿರುವೆವು. ಪ್ರಭುಗಳು ಸಭಾರ್ಯರಾಗಬೇಕೆಂದೂ ಪುತ್ರವಂತರಾಗ

ಬೇಕೆಂದೂ ನಮ್ಮ ಹಂಬಲ. ಇದಕ್ಕಾಗಿಯೆ ನಾವು ಇನ್ನೂ ಜೀವಂತರಾಗಿದ್ದೇವೆ' ಎಂದು ದೀನವಾಣಿಯಿಂದ ನುಡಿದು ರಾಜಮಾತೆ ಸುಮ್ಮನಾದರು.

ಗಂಗರಾಜರು, ಮಾಚಿಕಬ್ಬೆ, ಮಾರಸಿಂಗಮಯ್ಯ, ಎಲ್ಲರೂ ಕಾತರದಿಂದ, ಅಧೈರ್ಯದಿಂದ ಪಂಡಿತರ ಮುಖ ನೋಡುತ್ತ ಕುಳಿತರು. ಪಂಡಿತರೂ ಒಮ್ಮೆ ಎಲ್ಲರ ಮುಖಗಳನ್ನೂ ನೋಡಿದರು. ಒಬ್ಬರ ಮುಖದಲ್ಲೂ ಗೆಲವು ಇರಲಿಲ್ಲ, ಭಯ ತುಂಬಿತ್ತು. ಆ ಕ್ಷಣವೆ ಪಂಡಿತರು ತಮ್ಮ ಕರ್ತವ್ಯವೇನೆಂದು ನಿರ್ಧರಿಸಿಬಿಟ್ಟರು.

ಪಂಡಿತರು ಗಂಭೀರವಾಣಿಯಿಂದ ಮಾತನಾಡಿದರು: 'ಅಕ್ಕನವರೆ, ನಾನು ಹೇಳಬೇಕಾದುದನ್ನು ಒಂದು ರೀತಿ ತಾವೇ ಹೇಳಿಬಿಟ್ಟಿರಿ. ಪ್ರಭುಗಳು ಶಾಂತಲೆ, ಲಕ್ಷ್ಮಿ ಇಬ್ಬರನ್ನೂ ಸ್ವೀಕರಿಸಲು ಸಮ್ಮತಿಪಟ್ಟುದು ನಮಗೆ ಮಹಾ ಆನಂದದ ಸಂಗತಿ. ಲಕ್ಷ್ಮಿಯನ್ನು ತಮ್ಮ ಮಗಳನ್ನಾಗಿ, ಸೊಸೆಯನ್ನಾಗಿ ಸಂತೋಷದಿಂದ ಒಪ್ಪಿಸುತ್ತಿದ್ದೇನೆ. ಅಕ್ಕನವರು ಇಷ್ಟು ಹೇಳುವುದಕ್ಕೆ ಮುನ್ನವೆ ನಾನು ಹೇಳಲಾಗಲಿಲ್ಲವಲ್ಲಾ ಎಂದು ನನ್ನ ಮನಸ್ಸು ನೋಯುತ್ತಿದೆ. ಶಾಂತಲೆ ನನ್ನ ಹಿರಿಯ ಮಗು, ಲಕ್ಷ್ಮಿಯೇ ಕಿರಿಯಳು. ಅಕ್ಕತಂಗಿಯರಿಬ್ಬರೂ ಈಗಿರುವಂತೆಯೇ ಸರ್ವಕಾಲವೂ ಅನ್ಯೋನ್ಯರಾಗಿ ಇರುವಷ್ಟು ಬುದ್ಧಿ, ಜ್ಞಾನ, ಸತ್ಕುಲತೆ, ಶಿಕ್ಷಣ, ಸೌಶೀಲ್ಯಗಳು ಅವರಿಗಿವೆ. ಇಬ್ಬರೂ ಪ್ರಭುಗಳ ಕೈಹಿಡಿದು ಮಹತ್ಸುಖಿಗಳಾಗಲಿ. ಪ್ರಭುಗಳು ಇಬ್ಬರನ್ನೂ ಸಮನಾಗಿ ನಡಸಿಕೊಳ್ಳಲಿ. ಇನ್ನು ಅಕ್ಕನವರ ಮನಸ್ಸು ಸಮಾಧಾನಗೊಳ್ಳಲಿ, ಆಮೋದಿಸಲಿ. ಇನ್ನು ಇವರು ನಿಮ್ಮ ಮಕ್ಕಳು. ಶ್ರೀ ಕೇಶವನೇ ಕೊಟ್ಟಿದ್ದಾನೆ, ಮನೆ ತುಂಬಿಸಿಕೊಳ್ಳಿರಿ. ಮನ ತುಂಬಿಸಿಕೊಳ್ಳಿರಿ . . .'

ಪಂಡಿತರು ಇನ್ನೂ ಮಾತು ಮುಗಿಸುವುದರೊಳಗೆ ರಾಜಮಾತೆ ಅವರ ಅಮೃತವಾಣಿಗೆ ಆನಂದಪರವಶರಾಗಿ, ತಟ್ಟನೆ ಆಸನದಿಂದೆದ್ದು ಬಂದು ಪಂಡಿತರ ಪಾದಗಳಿಗೆ ಪಂಚಾಂಗ ಪ್ರಣಾಮ ಮಾಡಿ 'ಧನ್ಯಳಾಳೆ, ಕೃತಾರ್ಥಳಾದೆ' ಎಂದರು. ಪಂಡಿತರು ತಮ್ಮೆರಡು ಕೈಗಳನ್ನು ಮೇಲಕ್ಕೆತ್ತಿ ಜೋಡಿಸಿ ಅಂತರಿಕ್ಷವನ್ನು ನೋಡಿ, 'ಕೇಶವಾ ತವಾರ್ಪಣಂ, ತವಾರ್ಪಣಂ' ಎಂದು ಹೇಳಿ, ತಮಗೆ ಸಂದ ನಮಸ್ಕಾರವನ್ನು ಶ್ರೀ ಕೇಶವನಿಗೆ ಅರ್ಪಿಸಿದರು. ಒಡನೆ ಗಂಗರಾಜರೂ, ಮಾಚಿಕಬ್ಬೆ, ಮಾರಸಿಂಗಮಯ್ಯನವರೂ ಪಂಡಿತರ ಪಾದಗಳಿಗೆ ಆನಂದಾತಿಶಯ ಭಕ್ತಿ ವಿಶ್ವಾಸಗಳಿಂದ ನಮಸ್ಕಾರಮಾಡಿದರು. ಪಂಡಿತರು

ಅವರ ನಮಸ್ಕಾರಗಳನ್ನೂ ಶ್ರೀ ಕೇಶವನಿಗೆ ಅರ್ಪಿಸಿದರು. ಪಂಡಿತರು ಇನ್ನೊಮ್ಮೆ ರಾಜಮಾತೆಯವರನ್ನು ಸಂಬೋಧಿಸಿ ತಾವು ಹೇಳಬೇಕೆಂದಿದ್ದ ಮಾತನ್ನು ಮುಂದುವರಿಸಿದರು : ' ಅಕ್ಕನವರು ಇನ್ನು ಆಸನವನ್ನು ಅಲಂಕರಿಸಲಿ. ಶ್ರೀ ಕೇಶವನು ಸುಪ್ರೀತನಾದನು. ನಾನು ಇಲ್ಲಿಗೆ ಬರುವುದಕ್ಕೆ ಮುಂಚೆ ' ಶ್ರೀ ವೈಷ್ಣವ ಬ್ರಾಹ್ಮಣನು ರಾಜರಿಗೆ ತನ್ನ ಮಗಳನ್ನು ಮದುವೆಮಾಡಿಕೊಡುವನೆ ? ' ಎಂಬ ಸಂದೇಹವು ನಿಮ್ಮನ್ನು ಬಾಧಿಸುತ್ತಿದ್ದಿರಬಹುದು. ಪ್ರಭುಗಳು ನಿಸ್ಸಂದೇಹವಾಗಿ ದೇವಾಂಶಸಂಭೂತರು, ವೇಲಾಪುರದ ವಿಜಯನಾರಾಯಣನ ಅಂತರಂಗದ ಭಕ್ತರು. ಇಲ್ಲದಿದ್ದರೆ ಈ ಲೋಕಕ್ಕೇ ಅಸದೃಶವಾದ ಅತಿಶಯ ಶಿಲ್ಪ ಸೌಂದರ್ಯದಿಂದೊಪ್ಪುವ ಅಂತಹ ದೇವಾಲಯವನ್ನು ಕಟ್ಟಿಸಲಾಗುತ್ತಿತ್ತೆ ! ಈ ಪೃಥ್ವೀನಾರಾಯಣರಿಗೆ ನನ್ನ ಆತ್ಮಜೆ ಲಕ್ಷ್ಮಿಯನ್ನು ಕೊಟ್ಟು, ಈ ಲಕ್ಷ್ಮೀ ನಾರಾಯಣರನ್ನು ನೋಡಿ ಆನಂದಪಡುವ ಭಾಗ್ಯವನ್ನು ನಾನು ಕಳೆದು ಕೊಳ್ಳಲೆ ? ಅನ್ನಪಾನಾದಿಗಳಲ್ಲಿ, ಶುಚಿ ರುಚಿಗಳಲ್ಲಿ, ದೈವಭಕ್ತಿಯಲ್ಲಿ, ಕರ್ಮ ಶ್ರದ್ಧೆಯಲ್ಲಿ, ಶಮದಮಾದಿ ಗುಣಗಳಲ್ಲಿ, ಜ್ಞಾನಮಾರ್ಗದಲ್ಲಿ ಈ ಪ್ರಭುವಿಗೆ ಸಾಟಿಯಾರು ? ಇಂತಹ ರಾಜರ್ಷಿಗೆ ವರ್ಣೋತ್ತಮರಿಗೆ ಮಗಳನ್ನು ಧಾರೆಯೆರೆಯುವುದೂ ನನ್ನ ಮಹತ್ಪುಣ್ಯವೆಂದು ಭಾವಿಸುತ್ತೇನೆ. ಅಕ್ಕನವರೆ, ಈ ವಿವಾಹವು ದೈವಪ್ರೇರಿತವಾದುದೆಂದೇ ನನ್ನ ದೃಢವಾದ ನಂಬಿಕೆ. ಈ ಮಂಗಳ ವನ್ನು ಮಹಸ್ಸಂತೋಷದಿಂದ ನಡಸಿರಿ ' ಎಂದರು ಪಂಡಿತರು.

ರಾಜಮಾತೆ, ಮಾಚಿಕಬ್ಬೆ, ಮಾರಸಿಂಗಮಯ್ಯ ಇವರು ಪಂಡಿತರ ಅಮೃತವಾಣಿಯನ್ನು ಕೇಳಿ ಆನಂದಪರವಶರಾದರು. ಗಂಗರಾಜರು ಅತ್ಯಾನಂದದಿಂದ ' ಘನವಂತರ ಬಾಯಿಂದ ಘನವಾದ ಮಾತುಗಳೆ ಹೊರಟಾವು. ಪಂಡಿತರು ಈಗ ಹೊಯಿಸಳ ರಾಜ್ಯಕ್ಕೇ ಒಂದು ಅಮೃತ ವೃಷ್ಟಿಯನ್ನು ಕರೆದರು ' ಎಂದರು. ಪಂಡಿತರು ನಸುನಕ್ಕು ' ಗಂಗರಾಜರು ಈ ರಾಜ್ಯಕ್ಕೆ ಹೊನ್ನಿನ ಶಿಖರದಂತೆ. ತಾವು ಅಂತಿದ್ದರೂ, ಇನ್ನೊಬ್ಬರನ್ನು ಪ್ರಶಂಸಿಸುವುದು ಮಹೋನ್ನತರ ಲಕ್ಷಣ ' ಎಂದರು.

ರಾಜಮಾತೆಯವರ ಸಂತೋಷವಂತೂ ಹೇಳತೀರದಷ್ಟಾಗಿತ್ತು. ಆಕೆ ಎಲ್ಲರಿಗೂ ಹಾಲ್ಜೇನು ತರಿಸಿ ಕೊಟ್ಟರು. ' ಇನ್ನುಳಿದ ಕಾರ್ಯವೆಲ್ಲ ಅಣ್ಣದಿರು, ಪಂಡಿತರು, ಭೀಷ್ಮರು ಮಾಡಬೇಕಾದುದು. ಶುಭಸ್ಯ ಶೀಘ್ರಂ. ಮಹೇಂದ್ರನೆ

ನೋಡಲು ಆಶಿಸಡುವಂತಹ ಮದುವೆಯನ್ನು ಮಾಡಿರಿ. ನಮಗೆ ಆಗಿರುವಷ್ಟೆ ಆನಂದ ನಮ್ಮ ಪ್ರಜೆಗಳೆಲ್ಲರಿಗೂ ಆಗಲಿ. ಭರತಖಂಡದ ಎಲ್ಲ ರಾಜರುಗಳನ್ನು ಕರೆಸಿ, ಅವರವರ ಅಂತಸ್ತು ಗೌರವಗಳಿಗೆ ಮೀರಿದ ಉಪಚಾರಗಳಿಂದ, ಸನ್ಮಾನ ಗಳಿಂದ ತೃಪ್ತಿಗೊಳಿಸಿರಿ. ಅವರೆಲ್ಲರ ಸೌಹಾರ್ದಗಳು ನಮ್ಮ ದೇಶಕ್ಕೆ ದೊರೆ ಯಲಿ. ನಡೆಯಬೇಕಾದ ಸಮಸ್ತ ಕೆಲಸಕಾರ್ಯಗಳಿಗೆ ತಕ್ಕ ಕಾಲಾವಕಾಶ ವನ್ನು ಕಲ್ಪಿಸಿಕೊಂಡು, ಶುಭದಿನ ಶುಭಮುಹೂರ್ತವನ್ನು ಪಂಡಿತರೆ ನಿರ್ಧರಿಸಲಿ. ಆ ದಿನ ಆದಷ್ಟು ಬೇಗನೆ ಬರಲಿ' ಎಂದರು ರಾಜಮಾತೆ.

'ನಿಶ್ಚಿತಾರ್ಥದ ಕುರುಹಿದು' ಎಂಬಂತೆ ರಾಜಮಾತೆಯವರು ತಾಂಬೂಲ ಫಲಾದಿಗಳನ್ನು ತರಿಸಿದರು. ಅದು ಅವರವರಲ್ಲೇ ವಿನಿಯೋಗವಾಯಿತು. ರಾಜಮಾತೆ ಸುಮ್ಮಾನದಿಂದ ಎಲ್ಲರನ್ನೂ ಬೀಳ್ಕೊಟ್ಟು, ತಾವು ತಮ್ಮ ತನು ಜಾತರಿಗೆ ಈ ಸಂತೋಷದ ಸುದ್ದಿಯನ್ನರುಹಲು ಹೋದರು.

§

ಹೊರಲಾಗದಷ್ಟು ಭಯ ಸಂಕಟಗಳನ್ನು ಹೊತ್ತುಬಂದ ಮಾಚಿಕಬ್ಬೆ, ಮಾರಸಿಂಗಮಯ್ಯ ಅರಮನೆಯಿಂದ ಮನೆಗೆ ಹಿಂದಿರುಗಿದಾಗ ಹೊರಲಾಗದಷ್ಟೆ ಸಂತೋಷವನ್ನು ಹೊತ್ತು ಹೊರಟರು. ನೆನ್ನೆಯ ರಾತ್ರಿ ಈ ಪತಿಪತ್ನಿಯರಿ ಗಿದ್ದ ಮಾನಸಿಕ ಸ್ಥಿತಿಗೂ, ಈಗಿನ ಮಾನಸಿಕ ಸ್ಥಿತಿಗೂ ಭೂಮ್ಯಂತರಿಕ್ಷಗಳಷ್ಟು ಅಂತರವಿದ್ದಿತು. 'ಅತ್ಯಲ್ಪಕಾಲದಲ್ಲಿ ಇಕ್ಕಟ್ಟಿನ ಪ್ರಸಂಗವೊಂದು ವಿಧಿವಿಲಾಸ ದಿಂದ ಅತ್ಯಾನಂದಕಾರಿಯಾದುದು ದೈವಕೃಪೆಯಲ್ಲದೆ ಮತ್ತೇನು?' ಎಂದು ಮಾಚಿಕಬ್ಬೆ ಪತಿಯೊಡನೆ ಹೇಳಿದರು.

'ನಿನ್ನೆ ರಾತ್ರಿ ನಿದ್ದೆ ಬಾರದೆ ಈ ವಿಷಯವನ್ನೆ ಮೇಲಿಂದ ಮೇಲೆ ಯೋಚಿಸುತ್ತಿದ್ದೆ, ಯೋಚಿಸಿದಷ್ಟೂ ಪರಿಸ್ಥಿತಿ ಅಸಾಧ್ಯವಾಗಿಯೆ ತೋರಿ ಬಂದಿತು. ಮಾಚಿ, ನಾನು ರಾತ್ರಿಯೇ ನಿರ್ಧರಿಸಿಬಿಟ್ಟಿದ್ದೆ . . . ಪ್ರಭುಗಳಿಗೆ ಕತ್ತಿಯನ್ನೊಪ್ಪಿಸಿಕೊಟ್ಟು, ರಾಜಧಾನಿಯನ್ನು ಬಿಟ್ಟು ಮುಖಮರೆಸಿಕೊಂಡು ಯಾವುದಾದರೂ ಬೇರೆ ದೇಶಕ್ಕೆ ಹೊರಟುಹೋಗುವುದೆಂದು. ಇಷ್ಟು ದಿನ ಬಾಳಿಯೂ ಕೊನೆಗೆ ನಮಗೆ ಈ ರಾಜ್ಯದ ಉಪ್ಪು ಇಲ್ಲವಾಯಿತಲ್ಲಾ ಎಂದು ಬಹು ಸಂಕಟಪಟ್ಟೆ. ಈಗ 'ಇದೊಂದು ಕೆಟ್ಟ ಕನಸು' ಎನ್ನುವಷ್ಟರಮಟ್ಟಿಗೆ

ನನ್ನನ್ನು ಭ್ರಮೆಗೊಳಿಸಿದೆ, ಅರಮನೆಯಲ್ಲಿ ಈಗ ನಡೆದ ಈ ನಿಶ್ಚಿತಾರ್ಥಗಳು. ಅಷ್ಟು ಭಯವನ್ನೂ ಅದರ ನೂರ್ಮಡಿ ಆನಂದವನ್ನಾಗಿ ಮಾಡಿದ್ದು ದೈವ ಲೀಲೆಯಲ್ಲದೆ ಮತ್ತೇನು, ಮಾಚಿ?' ಎಂದರು ಮಾರಸಿಂಗಮಯ್ಯ.

ಮಾಚಿಕಬ್ಬೆ ಮಾರಸಿಂಗಮಯ್ಯನವರು ಮನೆ ಸೇರುವ ಹೊತ್ತಿಗೆ, ಶಾಂತಲೆ ಲಕ್ಷ್ಮಿಯರು ಪಂಡಿತರ ಮನೆಗೆ ಬಂದರು. ಶಾಂತಲೆಯ ತಂದೆತಾಯಿ ಇಬ್ಬರೂ, ಆ ದಿನ ಮಕ್ಕಳು ಏಳುವ ಮುನ್ನವೆ ಮನೆಬಿಟ್ಟು, ಪಂಡಿತರನ್ನು ಹುಡುಕಿಕೊಂಡು ಹೋಗಿದ್ದರು. ಆಗ ಅವರಿದ್ದ ಪರಿಸ್ಥಿತಿ ಕಠಿಣವೂ ಸಂಕಟ ಕರವೂ ಆಗಿದ್ದಿತು. ಆದ್ದರಿಂದ ಯಾರೊಬ್ಬರಿಗೂ ತಿಳಿಸದೆ ದಂಪತಿಗಳು ಮನೆಬಿಟ್ಟದ್ದರು.

ಶಾಂತಲೆ ಲಕ್ಷ್ಮಿಯರೂ ಆ ರಾತ್ರಿಯೆಲ್ಲ ನಿದ್ರೆಯಿಲ್ಲದೆ ಯೋಚನೆಯಲ್ಲಿ ಇದ್ದರು. ಪ್ರಾತಃಕಾಲ ಅಷ್ಟು ಬೇಗನೆ ಯಾರಿಗೂ ತಿಳಿಸದೆ ತನ್ನ ತಂದೆ ತಾಯಿಗಳು ಇಬ್ಬರೂ ಎಲ್ಲಿಗೆ ಹೋದರೆಂದು ಶಾಂತಲೆಗೆ ಭಯವೂ ಆಶ್ಚರ್ಯವೂ ಉಂಟಾಯಿತು. ಲಕ್ಷ್ಮಿಯೂ ಭಯಪಟ್ಟುಹೋದಳು. ಇಬ್ಬರೂ ಬಹಳ ಹೊತ್ತು ಕಾದು ನೋಡಿದರು. ಕಡೆಗೆ ಸಾಕಾಗಿ ಇಬ್ಬರೂ ಪಂಡಿತರ ಮನೆಗೆ ಬಂದರು.

ಶಾಂತಲೆ ಏಳುವ ಮುನ್ನವೆ ಮಾಚಿಕಬ್ಬೆ ಮನೆಯಿಂದ ಹೊರಟು ಹೋಗಿದ್ದರಾದ್ದರಿಂದ 'ಎಲ್ಲಿಗೆ ಹೋದರೋ ಏನೊ' ಎಂದು ಮಕ್ಕಳು ಭಯ ಪಡಬಹುದೆಂದೆಣಿಸಿ, ಮನೆಗೆ ಹಿಂದಿರುಗುವವರೆಗೂ ಆಕೆಗೆ ಜೀವದಲ್ಲಿ ಜೀವ ವಿರಲಿಲ್ಲ. ಈಗ ಮಕ್ಕಳಿಬ್ಬರೂ ಮನೆಯಲ್ಲಿಲ್ಲದುದನ್ನು ಕಂಡು, ತಾಯಿಜೀವ ತಳಮಳಿಸಿಹೋಯಿತು. ದೇಚನನ್ನು ಕರೆದು ಕೇಳಲಾಗಿ, ಅವನು ಇಬ್ಬರೂ ಪಂಡಿತರ ಮನೆಗೆ ಹೋದರೆಂದು ಹೇಳಿದ. ತಾಯಿತಂದೆಯರಿಗೆ ಹೋದ ಜೀವ ಬಂದಂತಾಯ್ತು. ಮಾಚಿಕಬ್ಬೆ ದೇಚನನ್ನು ಕುರಿತು 'ಅಯ್ಯ ಅವ್ವೆ ಇಬ್ಬರೂ ಅರಮನೆಗೆ ಹೋಗಿದ್ದರು, ವಿಷಯವನ್ನು ರಾಜಮಾತೆ ಒಪ್ಪಿದರು ಎಂದು ಶಾಂತಲವ್ವ ಲಕ್ಷ್ಮವ್ವ ಇವರಿಗೆ ಮೊದಲು ತಿಳಿಸಿ ಬಾ' ಎಂದು ದೇಚ ನನ್ನು ಕಳಿಸಿದ ಮೇಲೆ ಮಾಚಿಕಬ್ಬೆಗೆ ಮನಸ್ಸು ನೆಮ್ಮದಿಯಾಯ್ತು. ಮೇಲಾಗಿ ಪಂಡಿತರೂ ಈ ಸಂತೋಷದ ಸುದ್ದಿಯನ್ನು ಮಕ್ಕಳಿಗೆ ತಿಳಿಸುವರು ಎಂಬ ಭರವಸೆ ಇತ್ತು ಆ ತಾಯಿಗೆ.

ಲಕ್ಷ್ಮಿ ತಂದೆಯನ್ನು ನೋಡಿ ಒಂದು ದಿನವೆ ಆಗಿತ್ತು. ಆ ಒಂದು ದಿನ ಅವಳಿಗೆ ದುಃಖದ ಪ್ರಳಯವೇ ಆಗಿತ್ತು. ಈಗ ತಂದೆಯನ್ನು ಕಂಡೊಡನೆ ಲಕ್ಷ್ಮಿಗೆ ದುಃಖ ಉಕ್ಕಿಬಂತು. ಓಡಿಬಂದು ತಂದೆಯ ಕಾಲ್ಗಳನ್ನು ಬಿಮ್ಮನೆ ಕಟ್ಟಿಕೊಂಡಳು. ಸಹಕಾತರೆಯಾದ ಶಾಂತಲೆಯೂ ಪಂಡಿತರ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿದಳು. ಜ್ಞಾನವೃದ್ಧರು ಮಕ್ಕಳ ಮನಸ್ಸಿನ ಭಯ ವನ್ನು ಅರಿತರು. 'ಶುಭವಾಗಲಿ, ಸುಖವಾಗಲಿ' ಎಂದು ಹರಸಿ, ಪಂಡಿತರು ಮಕ್ಕಳಿಬ್ಬರನ್ನೂ ಹತ್ತಿರ ಕೂಡಿಸಿಕೊಂಡು, ಇಬ್ಬರ ಮುಖಗಳನ್ನೂ ನೋಡಿ, ಗೆಲವು ಇಲ್ಲದುದನ್ನು ಕಂಡು ನಸುನಕ್ಕು, 'ಮಕ್ಕಳಿರಾ, ನೀವು ದೈವವನ್ನು ಮರೆತಿರಿ' ಎಂದರು.

ಅವರ ನಸುನಗುವನ್ನೂ ಮಾತಿನ ಅರ್ಥವನ್ನೂ ಮಕ್ಕಳು ಅರ್ಥಮಾಡಿ ಕೊಳ್ಳಲಾಗಲಿಲ್ಲ. ಶಾಂತಲೆಗೆ ಸ್ವಲ್ಪ ಕುತೂಹಲ ಉಂಟಾಗಿ 'ಅಯ್ಯಾ, ನೀವೂ ಈಗತಾನೆ ಬಂದಿರೆಂದು ಕಾಣುತ್ತದೆ. ಎಲ್ಲಿಗೆ ಹೋಗಿದ್ದಿರಿ? ಮನೆಯಲ್ಲಿ ನನ್ನ ಅವ್ವೆ ಅಯ್ಯ ಇಬ್ಬರೂ ಇರಲಿಲ್ಲ; ಎಲ್ಲಿಗೆ ಹೋಗಿದ್ದಾರೊ ತಿಳಿಯದು. ಯಾರೊಂದಿಗೂ ಹೇಳಿಯೂ ಹೋಗಿಲ್ಲ, ನಮಗೆ ಬಹಳ ಭಯವಾಗಿ ಇಲ್ಲಿಗೆ ಬಂದೆವು' ಎಂದಳು.

'ತಮ್ಮ ಮಕ್ಕಳಿಬ್ಬರ ರೂಪು, ವಿದ್ಯೆ, ಸಹಜ ಸುಗುಣಗಳು ಪ್ರಭುಗಳನ್ನು ಮೆಚ್ಚಿಸಿತಲ್ಲವೆ!' ಎಂಬ ಅಭಿಮಾನದಿಂದ ಪಂಡಿತರು ಆಗ ನಕ್ಕದ್ದು. ಒಂದು ನಿಮಿಷಕಾಲ ಪಂಡಿತರು ಯೋಚಿಸಿದರು. 'ವಿಷಯವನ್ನು ತಿಳಿಸುವುದೆ? ಬೇಡವೆ? ತಿಳಿಸುವುದರಿಂದ ತಪ್ಪೇನು? ಮಕ್ಕಳ ಮನಸ್ಸಿಗೆ ನೆಮ್ಮದಿಯನ್ನೂ ಸಂತೋಷವನ್ನೂ ಉಂಟುಮಾಡುವುದಕ್ಕಿಂತ ಹೆಚ್ಚಿಗೆ ಏನು? ಈ ಸಮಾಚಾರ ವನ್ನು ಇವರಿಂದ ಗೋಪ್ಯವಾಗಿಡಬೇಕಾದ ಕಾರಣಗಳು ಯಾವುವೂ ಇಲ್ಲ ವಲ್ಲಾ' ಎಂದು ನಿರ್ಧರಿಸಿ, ಮಕ್ಕಳೊಡನೆ 'ನಾನು ಅರಮನೆಯಿಂದ ಈಗ ತಾನೆ ಬಂದೆ, ಶಾಂತಲೆ. ನಿನ್ನ ಅವ್ವೆಯೂ ಅಯ್ಯನೂ ಅಲ್ಲಿಗೇ ಬಂದಿದ್ದರು' ಎಂದರು.

ಪಂಡಿತರು ಹಾಗೆನ್ನುತ್ತಲೆ ಮಕ್ಕಳಿಗೆ ಮೈಯಲ್ಲಿ ನಡುಕ ಉಂಟಾ ಯಿತು, ಮುಖ ವರ್ಣಹೀನವಾಯಿತು, ನೆತ್ತಿ ಬೆವರಿತು. 'ಮುಂದೇನು ಹೇಳು ತ್ತಾರೆಯೋ' ಎಂದು ಅಸ್ತಿಮಿತ ಹೃದಯಕ್ರಿಯೆಯಿಂದ ಕೂಡಿದವರಾದರು.

ಸಹೃದಯೆಯಾದ ಲಕ್ಷ್ಮಿ ಅಕ್ಕನ ಪ್ರಶ್ನೆಯನ್ನು ಮುಂದುವರಿಸಿ 'ಇದನ್ನು ಹೇಳುವುದಕ್ಕೆ ಇಷ್ಟು ಯೋಚನೆ ಮಾಡಬೇಕಾಗಿದ್ದಿತೆ ಅಯ್ಯ?' ಎಂದಳು.

ಪಂಡಿತರು ಮಗಳ ಮುಖವನ್ನು ನೋಡಿ 'ಭಲೆ ಗಟ್ಟಿಗಿತ್ತಿ! ನಿನ್ನ ಅಕ್ಕನ ಪ್ರಶ್ನೆಯನ್ನು ಮುಂದುವರಿಸಿದುದಕ್ಕೆ ನಿನಗೆ ಒಂದು ಸೊಗಸಾದ ಬಹುಮಾನ ಕೊಡುತ್ತೇನೆ' ಎಂದರು.

'ನನಗೆ ಏನು ಬಂದರೂ ಅಕ್ಕನಿಗೆ ಅದರಲ್ಲಿ ಹೆಚ್ಚಿನ ಪಾಲುಂಟು. ಅಕ್ಕನಾದರೂ ನನ್ನ ವಿಷಯದಲ್ಲಿ ಹಾಗೆಯೆ.'

'ಇದರಿಂದ ನಿನ್ನ ಅಕ್ಕ ನಿನ್ನನ್ನು ಎಲ್ಲ ವಿಷಯಗಳಲ್ಲೂ ನಡಸಿಕೊಂಡೇ ಹೋಗುವಳೆಂಬ ಭರವಸೆ ನನಗಾಯಿತು ಮಗಳೆ!' ಎಂದರು ಪಂಡಿತರು.

ಶಾಂತಲೆ: 'ಆ ವಿಷಯದಲ್ಲಿ ಅನುಮಾನವೇ ಬೇಡ, ಅಯ್ಯ. ನಾವಿಬ್ಬರೂ ಅನಂತಕಾಲದ, ಅನಂತಜನ್ಮಗಳ ಸಹಪದೆಯರು. ನಮನಮಗೆ ಯಾವ ಭೇದಭಾವಗಳೂ ಇಲ್ಲ. ಇದ್ದುದಿಲ್ಲ, ಇರುವುದಿಲ್ಲ.'

ಪಂಡಿತರಿಗೆ ಪರಮಾನಂದವಾಯಿತು. ಅವರು 'ಮಗು ಶಾಂತಲೆ, ನೀನು ಮಹಾನುಭಾವೆ. ನಿಮ್ಮಿಬ್ಬರ ಸ್ನೇಹ ಸೌಹಾರ್ದಗಳು ಈ ಲೋಕಕ್ಕೆ ಆದರ್ಶವಾಗಿರಲಿ. ಲಕ್ಷ್ಮಿಗಿಂತ ನೀನೇ ಜ್ಯೇಷ್ಠೆ. ನೀನು ಅವಳನ್ನು ಎಂತಹ ಕಷ್ಟದಲ್ಲಿಯೇ ಆಗಲಿ, ಸುಖದಲ್ಲಿಯೇ ಆಗಲಿ ನಡಸಿಕೊಳ್ಳಬೇಕು' ಎಂದರು.

ಶಾಂತಲೆ: 'ಅಯ್ಯ, ಇದನ್ನೂ ನೀವು ಹೇಳಬೇಕೆ? ತಪ್ಪಿದೆನಾದರೆ ನಿಮ್ಮ ಪಾದದಾಣೆ.'

ಲಕ್ಷ್ಮಿ: 'ಅಯ್ಯ, ಏನನ್ನೋ ಹೇಳುತ್ತಿದ್ದಿರಿ. ಮಾತು ಮರಸುವುದಕ್ಕಲ್ಲವಲ್ಲ?'

ಪಂಡಿತರು: 'ಯಾವ ಮಾತು, ಮಗು?'

ಶಾಂತಲೆ: 'ಲಕ್ಷ್ಮಿಯ ಗಟ್ಟಿಗತನಕ್ಕೆ ಏನೋ ಬಹುಮಾನವೆಂದಿರಲ್ಲ?'

ಪಂಡಿತರು: 'ಹೌದು ಹೌದು. ಒಳ್ಳೆಯ ಬಹುಮಾನವೆಂದರೆ ಒಳ್ಳೆಯದೆ. ಅದೂ ನಿಮಗೆ ತಕ್ಕಂಥದೆ. ಬಹು ಗುಟ್ಟಾದ ವಿಷಯ. ಹೆಂಗಸರ ಬಳಿ ಗುಟ್ಟು ಹೇಳಬಾರದೆಂದು ಶಾಸ್ತ್ರ ಹೇಳುತ್ತದೆ.'

ಶಾಂತಲೆ: 'ಅಯ್ಯೋ! ನಾವು ಹೆಂಗಸರಲ್ಲ, ನಿಮ್ಮ ಮಕ್ಕಳು.'

ಪಂಡಿತರು: 'ನಮ್ಮ ಮಕ್ಕಳನ್ನು ನಾನು ಬಲ್ಲೆನಾದರೂ, ವಿಷಯ ಬಹು ಗೋಪ್ಯವಾದುದು.'

ಲಕ್ಷ್ಮಿ: 'ಅಷ್ಟು ಗೋಪ್ಯವಾದರೆ, ಅದು ಬಹುಮಾನವೆಂತಾಗುವುದು?'

ಪಂಡಿತರು ಮಕ್ಕಳನ್ನು ನೋಡಿ: 'ಈ ಗುಟ್ಟನ್ನು ಬಹು ಗೌರವದಿಂದ ಕಾಣಬೇಕು. ರಕ್ಷಿಸಿಕೊಳ್ಳಬೇಕು . . . ಪ್ರಭುಗಳು ನಿಮ್ಮಿಬ್ಬರನ್ನೂ ಮದುವೆ ಯಾಗಲೊಪ್ಪಿದರು. ತಾವಾಗಿಯೆ ಒಪ್ಪಿದರು. ಈ ವಿಷಯದಲ್ಲಿ ಯಾರೂ ಅವರನ್ನು ಒತ್ತಾಯಪಡಿಸಲಿಲ್ಲ.'

ಶಾಂತಲೆ ಸಹಜ ಲಜ್ಜೆಯನ್ನು ಕ್ಷಣಕಾಲ ಅನುಭವಿಸಿ, ಮನಸ್ಸಿನಲ್ಲಿಯೇ 'ಒತ್ತಾಯಪಡಿಸಿ ಒಪ್ಪಿಸಿರುವವಳು ಶ್ರೀ ಶಾರದೆಯೆ' ಎಂದುಕೊಂಡು, ಸ್ಥಿರ ಮುದ್ರೆಯನ್ನು ತಾಳಿ 'ನಮ್ಮ ಉದ್ದೇಶ ಸಾಧುವಾಗಿದ್ದರೆ, ಭಗವಂತನೆ ಅದನ್ನು ನಡಸಿಕೊಡುವನೆಂದು ನೀವೇ ಅನೇಕ ಸಲ ಹೇಳಿರುವಿರಲ್ಲವೆ ಅಯ್ಯ?' ಎಂದಳು.

ಪಂಡಿತರು: 'ಮಗು, ಅದು ನಿಜ. ನಮ್ಮ ಸ್ಥೂಲಬುದ್ಧಿಗೆ ಇದು ನ್ಯಾಯ ಎಂದು ಕಂಡುಬರುವ ವಿಷಯ ಪರಮಾತ್ಮನ ಎಣಿಕೆಯಲ್ಲಿ ಯಾವ ರೂಪದಿಂದ ಬಂದು, ಯಾವ ರೂಪವನ್ನು ತಾಳಿ, ಯಾವುದನ್ನು ಸಾಧಿಸು ವುದೊ ಅಥವಾ ಭೇದಿಸುವುದೊ ಅದು ಪರಮಾತ್ಮನಿಗೆ ಮಾತ್ರ ವೇದ್ಯ. ನಮ್ಮ ಕಣ್ಣಿಗೆ ಅದು ನ್ಯಾಯವಲ್ಲವೆಂತಲೆ ಕಂಡುಬರಬಹುದು. ಈ ಸೂಕ್ಷ್ಮವನ್ನರಿ ಯಲು ಮಾನವರಲ್ಲಿ ಮಹಾತ್ಮರಿಗೂ ಸಾಧ್ಯವಿರಲಾರದು. ಸಾಮಾನ್ಯ ಜನರಿಗೆ ಅದನ್ನು ಅರಿಯಲು ಸಾಧ್ಯವೇ ಇಲ್ಲ. ತತ್ಕಾಲ, ದೇಶ, ವರ್ತಮಾನ ಪ್ರಮಾಣ ಗಳಿಂದ ಬಹುಶಃ . . . ಸ್ವಾಭಿಮಾನದಿಂದ ವಿಷಯವನ್ನು ತೂಗುವವರು ನಾವು. ಅದೇ ವಿಷಯವನ್ನು ಭವಿಷ್ಯನಿರೂಪಣಾದೃಷ್ಟಿಯಿಂದ ಅಳೆಯುವ ಶಕ್ತಿ ಪರ ಮಾತ್ಮನದು. ಶಾಂತಲೆ, ಕಳೆದ ರಾತ್ರಿ ನಿಮ್ಮ ಮನೆಯಲ್ಲಿ ನಿಮ್ಮೆಲ್ಲರ ಮೇಲೆ ಒಂದು ಮಹಾಪರ್ವತವೇ ಕವಿಯಿತೆಂದು ನಿನ್ನ ಅವ್ವೆ ಹೇಳಿದರು. ದೈವಕೃಪೆ ಯಿಂದ ಆ ಮಹಾಪರ್ವತವು ಈಗ ತನ್ನಷ್ಟಕ್ಕೆ ಹಕ್ಕಿಯ ಪುಕ್ಕದಷ್ಟು ಹಗುರವೂ ಮೃದುವೂ ಆಯಿತಲ್ಲವೆ! ಮಗು ಶಾಂತಲೆ, ಮಗು ಲಕ್ಷ್ಮಿ, ಈ ಸಂದರ್ಭದಲ್ಲಿ ನಿಮಗೆ ಒಂದು ಬಹುಮುಖ್ಯ ಉಪದೇಶವಿದು: 'ಯಾರು ನಿಜವಾಗಿಯೂ ಪರಮಾತ್ಮನಿಗೆ ಆತ್ಮಾರ್ಪಣೆ ಮಾಡಿಕೊಳ್ಳುತ್ತಾರೆಯೊ, ಅವರ ಯೋಗಕ್ಷೇಮ ವೆಲ್ಲವನ್ನೂ ಪರಮಾತ್ಮನೇ ವಹಿಸಿಕೊಳ್ಳುತ್ತಾನೆ. ಯಾವ ಕಾರ್ಯ ಮಾಡ

ಬೇಕಾದರೂ, ಯಾವ ಮಾತನ್ನು ನುಡಿಯಬೇಕಾದರೂ, ಯಾವ ಇಕ್ಕಟ್ಟಿನ ಸಂದರ್ಭ ಸಂಭವಿಸಿದಾಗಲೂ ನಿರ್ವಂಚನೆಯಿಂದ ನಿರಭಿಮಾನದಿಂದ ನಿಮ್ಮ ಅಂತ ರಾತ್ಮನ ಅಪ್ಪಣೆಯನ್ನು ಕೇಳಿ ಮಾಡಿರಿ. ಹೀಗೆ ಸ್ವಲ್ಪಕಾಲ ಅಭ್ಯಾಸವಾದರೆ, ನಿಮ್ಮಲ್ಲೆ ಒಂದು ದಿವ್ಯ ಅಂತಶ್ಚಕ್ಷು ಉದಯವಾಗುವುದು. ಆಗ ಪರಮಾತ್ಮನಿತ್ತ ಆ ಬೆಳಕೇ ನಿಮ್ಮ ಮಾರ್ಗದರ್ಶಿಯಾಗುವುದು. ಇದನ್ನು ಮರೆಯಬೇಡಿ.'

ಶಾಂತಲೆ, ಲಕ್ಷ್ಮಿ: 'ಮರೆಯುವುದಿಲ್ಲ, ಅಯ್ಯ. ಹಾಗೆಯೆ ನಡೆದು ಕೊಳ್ಳುವೆವು.'

ಆಗ ದೇಚ ಅಲ್ಲಿಗೆ ಬಂದು 'ಅಯ್ಯ ಅವ್ವೆ ಇಬ್ಬರೂ ನಿಮಗಾಗಿ ಕಾದಿ ದ್ದಾರೆ. ಅರಮನೆಗೆ ಓಗಿದ್ದರಂತೆ, ರಾಜರು ಒಪ್ಪಿದರು ಅಂತ ಯೇಳೂಂತಂದ್ರು' ಎಂದು ಶಾಂತಲೆಗೆ ತಿಳಿಸಿದ. ಶಾಂತಲೆ ಸಂತೃಪ್ತಹೃದಯೆಯಾಗಿ, ವಿಶ್ವಾಸ ದಿಂದ ಪಂಡಿತರಿಗೆ ನಮಸ್ಕರಿಸಿ, ಅಪ್ಪಣೆಯನ್ನು ಕೇಳಿ, ದೇಚನೊಡನೆ ಮನೆಗೆ ಹೋದಳು.

§

ಪ್ರಭುಗಳ ಮತ್ತು ಶಾಂತಲೆಯ ಜಾತಕಗಳನ್ನು ಗಂಗರಾಜರು ಪಂಡಿತ ರಲ್ಲಿಗೆ ಕಳಿಸಿಕೊಟ್ಟರು. ಲಕ್ಷ್ಮಿಯ ಜಾತಕ ಪಂಡಿತರ ಬಳಿಯೆ ಇದ್ದಿತು. ಪಂಡಿತರು ಪ್ರಭುಗಳ ಜಾತಕವನ್ನು ಹಿಂದೊಮ್ಮೆ ಸ್ಥೂಲವಾಗಿ ನೋಡಿದ್ದರು. ಅದು ಮಹಾಯೋಗ ಜಾತಕವೆಂದು ಪಂಡಿತರು ಆಗಲೆ ಅರಿತಿದ್ದರು. ಪ್ರಭುಗಳ ಆಯುರ್ದಾಯ ದಾರಾಪುತ್ರಾದಿ ಕ್ಷೇತ್ರಗಳನ್ನು ಅವರು ಸೂಕ್ಷ್ಮವಾಗಿ ಗುಣಿಸಿ ನೋಡಿರಲಿಲ್ಲ. ಪ್ರಭುಗಳಿಗೆ ಮಹಾಯೋಗಕಾರಕರುಗಳಾದ ಪುಣ್ಯಗ್ರಹಗಳ ಕ್ಷೇತ್ರಪ್ರಾಬಲ್ಯ ಚೆನ್ನಾಗಿದ್ದುದರಿಂದ, ನೀಚಗ್ರಹಗಳ ದೃಷ್ಟಿ ಒಂದು ವೇಳೆ ಇದ್ದರೂ ಅದು ಛಾಯಾಮಾತ್ರದಲ್ಲಿ ಪರ್ಯವಸಾನವಾಗುವುದೆಂದು ನಿರ್ಧರಿಸಿ ದ್ದರು ಪಂಡಿತರು. ಈಗ ಅವರೇ ಮಕ್ಕಳ ಜಾತಕಗಳನ್ನು ಪ್ರಭುಗಳ ಜಾತಕದ ದ್ವಾದಶಕೂಟಗಳೊಂದಿಗೆ ಹೋಲಿಸಿನೋಡುವ ಸಂದರ್ಭ ಬಂದಿತು.

ಮಕ್ಕಳ ತಂದೆಯ ಸ್ಥಾನದಲ್ಲಿರುವ ತಾನು ಅದನ್ನೆಲ್ಲ ಪರಿಶೀಲಿಸಬಾರದು. ಜಾತಕಗಳಲ್ಲಿನ ದೋಷಗಳನ್ನೂ ಪಾಪಫಲಗಳನ್ನೂ ಹುಡುಕುತ್ತ ಹೋಗುವುದು ಅಶ್ರೇಯಸ್ಸು, ಅಪರಾಧ ಎಂದುಕೊಂಡು, ಪಂಡಿತರು ಜಾತಕಗಳನ್ನು ದೇವರ ಮುಂದಿಟ್ಟು ಜ್ಯೋತಿಗಳನ್ನು ಬೆಳಗಿ, 'ಭಗವನ್, ನಿನ್ನ ಸಂಕಲ್ಪದಂತೆಯೂ,

ಅವರವರ ಕರ್ಮಫಲದಂತೆಯೂ, ನಡೆಯುವುದು. ಅದನ್ನು ಪರೀಕ್ಷಿಸುವ ಧಾರ್ಷ್ಟ್ಯ ನನಗೆ ಬೇಡ, ಆ ಜೀವಗಳನ್ನು ಮುಂದುವರಿಸುವ ಭಾರ ನಿನ್ನದು' ಎಂದು ಹೇಳಿ ನಮಸ್ಕರಿಸಿ ಜಾತಕಗಳನ್ನು ಅರಮನೆಯ ಜೋಯಿಸ ಭಟ್ಟರಲ್ಲಿಗೆ ಕಳಿಸಿಬಿಟ್ಟರು.

ಶಕವರ್ಷ ೧೦೪೪ ಶುಭಕೃತುನಾಮಸಂವತ್ಸರ ಪುಷ್ಯ ಬಹುಳ ದಶಮಿ ಸೋಮವಾರ ಪ್ರಾತಃಕಾಲ ಶುಭ ಕನ್ಯಾಲಗ್ನ ಮದುವೆಗೆ ಸುಮುಹೂರ್ತವೆಂದು ಸರ್ವಾನುಮತದಿಂದಾಯಿತು. ಮದುವೆಗೆ ಉಳಿದುದು ಇನ್ನು ಹಲವೇ ತಿಂಗಳು. ಆಗಬೇಕಾದ ಕೆಲಸಗಳು ಬಹ್ಮಾಂಡದಷ್ಟು. ರಾಜಮಾತೆ ಈ ಮೊದಲೆ ಗಂಗ ರಾಜರಿಗೆ ತಿಳಿಸಿಬಿಟ್ಟಿದ್ದರು: ಈ ಮದುವೆ ಇಂದ್ರನು ಕೂಡ ಆಶ್ಚರ್ಯಪಡುವಷ್ಟು ವಿಜೃಂಭಣೆಯಿಂದ ಇರಬೇಕೆಂದು. ಆಂತರ್ಯದಲ್ಲಿ ಗಂಗರಾಜರಿಗೂ ಅಷ್ಟೇ ಆಶೆಯಿತ್ತು. ಮಹಾದೇವಿ ಅಕ್ಕನವರು ತಮ್ಮ ತವರುಮನೆಯಿಂದ ತಂದಿದ್ದ ಆಭರಣ ಸರ್ವಸ್ವವೂ, ನೃಪಕಾಮಹೊಯಿಸಳರ ಕಾಲದಿಂದ ಬೆಳೆದು ಕಿಕ್ಕಿರಿದಿದ್ದ ಬೊಕ್ಕಸವೂ ಮದುವೆಯ ಖರ್ಜಿಗೆ ಮುಡುಪಾಯಿತು.

ಹೊಯಿಸಳ ವಿಷ್ಣುವರ್ಧನರಾಜರು ಮದುವೆಯಾಗುವರೆಂಬ ಸುದ್ದಿ ಮಿಂಚಿನಷ್ಟು ವೇಗದಿಂದ ಭಾರತದ ಮೂಲೆಮೂಲೆಗೂ ಹರಡಿತು. ರಾಜ ಮಾತೆಯ ಆಜ್ಞೆಯ ಮೇರೆಗೆ ಚಕ್ರೇಶ್ವರರಿಗೂ ರಾಜಮಹಾರಾಜರುಗಳಿಗೂ ಮಹಾಸಾಮಂತರಿಗೂ ಸಾಮಂತರಿಗೂ ಗೌಡಹೆಗ್ಗಡೆಗಳಿಗೂ ಅವರವರ ಅಂತಸ್ತು ಗೌರವಗಳಿಗೆ ತಕ್ಕಂತೆ ಒಕ್ಕಣಿಸಿದ ಲಗ್ನದ ಓಲೆಗಳನ್ನು ಯೋಗ್ಯರಾದ ರಾಯಸದವರು, ಭಟರು ಒಯ್ದರು.

ಇಂತಹ ಸಮಯಗಳು ಒದಗಿಬಂದಾಗ, ಸಾಮಂತರೂ, ಪ್ರಭುಗಳೊಡನೆ ಸ್ನೇಹಸೌಹಾರ್ದಗಳನ್ನು ಅಪೇಕ್ಷಿಸುವ ರಾಜರುಗಳೂ, ಮದುವೆಯ ವಯಸ್ಸಿನ ತಮ್ಮ ಹೆಣ್ಣುಮಕ್ಕಳನ್ನು ಪ್ರಭುಗಳಿಗೆ ಪತ್ನಿಯರನ್ನಾಗಿ ತಂದೊಪ್ಪಿಸುವುದು ಆ ಕಾಲದ ರೂಢಿ. ಆ ಕನ್ಯೆಯರ ಪಾಣಿಗ್ರಹಣ ಮಾಡುವುದರಿಂದ ಮಂಡ ಲೇಶ್ವರರಿಗೆ ಜನ ಧನ ಸಹಾಯ ಮಾತ್ರವಲ್ಲದೆ, ಆ ಸಾಮಂತರಿಗೂ ದೊಡ್ಡವ ರೊಡನೆ ನಂಟುತನ ಬೆಳಸಿದೆವೆಂಬ ಮಾನಗೌರವಗಳೂ ಉಂಟಾಗುತ್ತಿದ್ದುವು.

ಚಕ್ರಗೊಟ್ಟ, ನೀಲಪರ್ವತ, ಕೊಂಗು, ತುಳುವ, ಚೆಂಗಾಳ್ವ, ನಂಗಲಿ, ಕೋಳಾಲ, ತೆರೆಯೂರು, ಕೊಯಮುತ್ತೂರು, ಉಚ್ಚಂಗಿ, ತಲೆಯೂರು,

ಸಾಸಪುರ, ಅಂಧಾಸುರಚೌಕ, ಬಲಿಯಪಟ್ಟಣ, ಚಂಗೇರಿ, ಹಾನುಗಲ್ಲು, ಗಂಗವಾಡಿ, ನೊಳಂಬವಾಡಿ, ಘಟ್ಟಕವಟ್ಟ, ಕಾಂಚಿ, ಬನವಸಿ, ವಲ್ಲೂರು, ಹಂಜೇರು, ಸವಿಮಲೆ, ರಾಯರಾಯಪುರ ಮುಂತಾದ ಊರುಗಳ, ದೇಶಗಳ ನಾಯಕರು ತಮ್ಮ ಹೆಣ್ಣುಮಕ್ಕಳನ್ನು ಕೊಡಲು ಆಶೆಪಟ್ಟು ಗಂಗರಾಜರಿಗೂ ರಾಜಮಾತೆಯರಿಗೂ ಪತ್ರಗಳನ್ನು ಬರೆಯಿಸಿ ಕಳಿಸಿದರು.

ಚತುರಮತಿ ಗಂಗರಾಜರು ಸ್ವಲ್ಪ ನಿಧಾನಿಸಿ, ಗೂಢಚಾರದಿಂದ ಆ ಕನ್ಯೆಯರ ವಯಸ್ಸು, ಬಣ್ಣ, ರೂಪು, ಗುಣ, ವಿದ್ಯೆ, ಶೀಲಗಳನ್ನು ತಿಳಿದು ಕೊಂಡು, ಜಳ್ಳುಪೊಳ್ಳುಗಳನ್ನು ಜಾರಿಸಿ, ಯಾರ ಮೈತ್ರಿ ದೇಶಹಿತಕ್ಕೆ ಅತ್ಯಾ ವಶ್ಯಕವೆಂದು ಕಂಡಿತೊ ಅಂತಹ ಐದು ಪ್ರಬಲ ಸಾಮಂತರ ಕನ್ಯೆಯರನ್ನು ರಾಜಮಾತೆಯವರ ಸೂಕ್ತ ಸಲಹೆಗಳಿಂದ ಆರಿಸಿ, ರಾಜಮಾತೆಯವರಿಂದಲೆ ಕನ್ಯಾಪಿತೃಗಳಿಗೆ ಪ್ರಸನ್ನಪತ್ರಗಳನ್ನು ಬರೆಯಿಸಿದರು.

'ಇದೇಕೆ ಈ ಕೋಟಲೆಗಳು? ಇದಕ್ಕಾಗಿಯೆ ನನಗೆ ಮದುವೆ ಬೇಡ ವೆಂದೆ. ನನ್ನ ಮನಸ್ಸಿಗೆ ಇದು ನ್ಯಾಯವಲ್ಲ, ಧರ್ಮವಲ್ಲ, ಅವ್ವೆ, ಇದು ಬೇಡ' ಎಂದು ಹೊಯಿಸಳೇಶ್ವರರು ತಾಯಿಯೊಡನೆ ಹೇಳಿಕೊಂಡರು. ರಾಜ ಮಾತೆಗೆ ಉತ್ತರ ಹೇಳಲು ಕಷ್ಟವಾಯಿತು. 'ಈ ವಿಚಾರ ನನ್ನ ಮನಸ್ಸಿಗೂ ಸಮನೆನಿಸಲಿಲ್ಲ. ವೃಥಾ ಬೇಸರದ ಕಾರ್ಯಗಳಿವು. ಗಂಗರಾಜರೊಡನೆ ಚರ್ಚಿಸಿ, ಚರ್ಚಿಸಿ ನನಗೆ ಸಾಕುಸಾಕಾಯಿತು. ದೇಶಹಿತರಕ್ಷಣೆಗೆ ಇದು ಅಗತ್ಯವೆಂದೆ ಅವರ ಮತ. ನಿನ್ನ ಪೂಜ್ಯ ತಾತದಿರಿಗೆ ಅರವತ್ತು ಪತ್ನಿಯರಿದ್ದರಂತೆ. ನಿನ್ನ ಪೂಜ್ಯಪಿತರಿಗೆ ನನ್ನೊಡನೆ ಹದಿನೈದು ಪತ್ನಿಯರು. ಅವರೆಲ್ಲರೂ ಅವರವರ ಪಾಲು ಕೊಂಡು ತವರುಗಳನ್ನು ಸೇರಿದರು. ಇವರನ್ನು ಕಟ್ಟಿಕೊಂಡು ಬಾಳಿಸು ವುದಂತಿರಲಿ; ಇವರ ಮತ್ಸರಗಳನ್ನು, ದಿನದಿನದ ಜಗಳಗಳನ್ನು ತೀರಿಸುವು ದಕ್ಕೆ ಫಾಲಾಕ್ಷನೆ ಬರಬೇಕಾಗುತ್ತದೆ. ಗಂಗರಾಜರು ಆಯ್ದಿಟ್ಟಿದ್ದ ಹದಿನೈದನ್ನು ಪುನಃ ಪುನಃ ಆಯ್ದು ಐದಕ್ಕೆ ಇಳಿಸಿದೆವು. ಇವರು ಪ್ರಬಲರು, ಬಲಾಢ್ಯರು. ಇಂತಹವರನ್ನು ಬಂಧುತ್ವದಿಂದಲೆ ಒಲಿಸಿಕೊಳ್ಳಬೇಕು. ಹೆಸರಿಗೆ ಇದ್ದು ಕೊಳ್ಳಲಿ, ಅಪ್ಪಾಜಿ. ಇದರ ಭಾರವನ್ನು ನಾನು ವಹಿಸಿಕೊಳ್ಳುತ್ತೇನೆ' ಎಂದರು ರಾಜಮಾತೆ.

'ಅವ್ವೆ, ಇದು ಸಮಾಧಾನದ ಮಾತಾಯಿತು. ಆದರೆ ಇದು ಧರ್ಮ

ಬಾಹಿರವಾದುದು. ಮದುವೆಯಾಗುವೆನೆಂದು ಒಪ್ಪಿದ್ದೆ ನನ್ನ ತಪ್ಪಾಯಿತೆ? ನಮ್ಮ ದೇಶದ ಒಬ್ಬ ಸಾಮಾನ್ಯ ಪ್ರಜೆಗಿರುವಷ್ಟು ಸ್ವತಂತ್ರತೆಯೂ ನನಗೆ ಇಲ್ಲವಲ್ಲ!'

'ಅಪ್ಪಾಜಿ, ಅಣ್ಣದಿರಿಗೆ ನಾನು ಎಷ್ಟೋ ಹೇಳಿಯಾಯಿತು. ನೀನೂ ಒಮ್ಮೆ ಕರಸಿ ಕೇಳಬಹುದಲ್ಲ.'

'ಚೆನ್ನಾಗಿದೆ, ಚೆನ್ನಾಗಿದೆ, ನೀವಿಬ್ಬರೂ ಸೇರಿ ನನ್ನನ್ನು ಈ ಯಜ್ಞಕ್ಕೆ ಪಶು ಮಾಡಿದ ಮೇಲೆ, ನಾನೊಬ್ಬ ಏನುತಾನೆ ಮಾಡಲಾದೀತು?' ಎಂದು ಹೇಳಿ ಸೌಹಾರ್ದದಿಂದ ತಾಯಿಗೆ ನಮಸ್ಕರಿಸಿ ಹೊರಟುಹೋದರು.

§

ಮದುವೆಯ ಸಮಾರಂಭಕ್ಕಾಗಿ ದ್ವಾರವತಿ ಒಂದಕ್ಕೆ ಮೂರರಷ್ಟು ಬೆಳೆಯತೊಡಗಿತು. ನಾನಾ ಕಲಾವಿದರ, ವೃತ್ತಿಕುಶಲರ, ರೂವಾರಿಗಳ, ಸುಣ್ಣ ಬಣ್ಣದ ಕೆಲಸದವರ ಸಂಖ್ಯೆಯೇ ನಾಲ್ಕು ಸಾವಿರವಾಯಿತು. ಪುರಶುಚಿ ಕಾರರ, ಊಳಿಗದವರ ಸಂಖ್ಯೆ ಅದಕ್ಕೆ ಎರಡರಷ್ಟಾಯಿತು. ಕೆಲಸ ಕಾರ್ಯಗಳು ತಡವಿಲ್ಲದೆ, ಬಿಡುವಿಲ್ಲದೆ ಹಗಲೂ ರಾತ್ರಿ ಒಂದೇ ಸಮನಾಗಿ ನಡೆದವು.

ಅತಿಥಿಗಳು ಯಾರುಯಾರೆಂದು ನಿಖರವಾಯಿತು. ಮಂಡಲೇಶ್ವರರು ಗಳಿಗೆ, ರಾಜರುಗಳಿಗೆ, ಮಹಾಸಾಮಂತ ಸಾಮಂತರುಗಳಿಗೆ, ಮಹಾವರ್ತಕ ರಿಗೆ, ಶ್ರೇಷ್ಠಿಗಳಿಗೆ, ಪುರಪ್ರಮುಖರುಗಳಿಗೆ ಅರಮನೆಗಳಂತಹ ನಿವಾಸಗಳು ಮೊದಲುಗೊಂಡು, ಸಾಧಾರಣ ವಸತಿಗೃಹಗಳ ವರೆಗೆ ತಾತ್ಕಾಲಿಕ ಉಪಯೋಗ ಕ್ಕಾದರೂ, ಭವ್ಯವಾಗಿ ದೃಢವಾಗಿ ನಿರ್ಮಾಣವಾದುವು. ಕಡೆಗೆ ಆಹ್ವಾನಿತರ ಆನೆ, ಕುದುರೆ, ಒಂಟೆ, ಎತ್ತು ಇವುಗಳಿಗೆ ಜೋಪಡಿಗಳೂ, ಮೇವು, ನೀರು, ಇವುಗಳನ್ನು ಶೇಖರಿಸಿಡಲು ತಕ್ಕ ಸ್ಥಳಗಳೂ, ಇವುಗಳನ್ನು ನೋಡಿಕೊಳ್ಳುವ ಭೃತ್ಯರಿಗೆ ವಾಸಾರ್ಹವಾದ ಕುಟಿಗಳೂ, ಈ ಭೃತ್ಯರಿಗೆ ದಿನದಿನವೂ ಅರಮನೆ ಯಿಂದ ಒದಗಿಸಬೇಕಾಗಿದ್ದ ಪಡಿಭತ್ಯಗಳಿಗೆ ಅಲ್ಲಲ್ಲಿ ಉಗ್ರಾಣಗಳೂ, ಅವುಗಳ ವಿತರಣೆ ವಿಚಕ್ಷಣೆಗಳಿಗೆ ತಕ್ಕ ಅಧಿಕಾರಿಗಳೂ, ಎಲ್ಲ ಏರ್ಪಾಡುಗಳೂ, ಬಹು ಸಮರ್ಪಕವಾಗಿ ಆದವು.

ವಿವಾಹಕ್ಕೆ ಆಹ್ವಾನಿತರಾಗಿದ್ದ ಸರ್ವರಿಗೂ ಅವರವರ ಅಂತಸ್ತು ಗೌರವ

ಗಳಿಗೆ ತಕ್ಕಂತೆ ಉಪಚಾರ ಸೌಕರ್ಯಗಳಿಗೆ ತಕ್ಕ ಊಳಿಗದವರೂ, ಗಂಡಾಳು ಹೆಣ್ಣಾಳುಗಳೂ, ಅಡಿಗೆಯವರೂ, ಪಾತ್ರೆ ಪದಾರ್ಥಗಳೂ, ದವಸಧಾನ್ಯಗಳೂ, ವಾಹನಾದಿಗಳೂ ಏರ್ಪಾಡಾದುವು. ಇವೆಲ್ಲವನ್ನೂ ಮಾಡಿದ್ದಲ್ಲದೆ ಪ್ರತಿ ಯೊಂದು ಗೃಹ, ಸೌಧ, ಅರಮನೆಯಲ್ಲಿಯೂ, ಸೂಜಿ ದಾರದಿಂದ ಸುಪ್ಪತ್ತಿಗೆ ಯವರೆಗೂ ಬೇಕಾಗುವ ಸಮಸ್ತಸಾಮಗ್ರಿಗಳನ್ನೂ ತುಂಬಿಸಿಟ್ಟರು ಗಂಗ ರಾಜರು. ಈ ವಿತರಣೆ, ವಿಚಕ್ಷಣೆಗಳನ್ನು, ಅಂತಸ್ತು ಗೌರವಗಳ ಅಳತೆಗೆ ಸರಿತೂಗಿಸುವುದು ಗಂಗರಾಜರಿಗೆ ಮಾತ್ರ ಸಾಧ್ಯವಿದ್ದಿತು.

ನೂತನ ನಿರ್ಮಿತ ಸೌಧ, ಗೃಹಗಳ ವೀಧಿ ಎರಡು ಮೈಲಿಗಳ ನೀಳವಾ ಯಿತು. ಇಕ್ಕಡೆಗಳಲ್ಲೂ ಶೃಂಗಾರವಾದ ಸೌಧಗಳೂ ಗೃಹಗಳೂ ವಿರಾಜಿಸಿ ದವು. ಒಂದೇ ತಿಂಗಳೊಳಗೆ ಬೆಳೆದು ಹಬ್ಬಿ ಹೂಬಿಡುವ ಗಿಡಬಳ್ಳಿಗಳಿಂದ, ಶಾಲವೃಕ್ಷಗಳಿಂದ, ಗೃಹ ಗೃಹವೂ ಶೋಭಿಸಿತು. ಪ್ರತಿ ಗೃಹದ ಮುಂದೆಯೂ ರಾಜವೀಧಿಯಲ್ಲಿಯೂ ದೊಡ್ಡ ದೊಡ್ಡ ತೈಲದೀಪಗಳು, ಗೃಹಗಳ ಮುಂಭಾಗ ದಲ್ಲಿ ಒಳಗಡೆ, ಬೆಳಕನ್ನೀಯುವ, ಬಣ್ಣಬಣ್ಣದ ನಕ್ಷತ್ರಗಳಂತೆ ಹೊಳೆವ ನೂರಾರು, ಸಾವಿರಾರು ದೀಪಗಳು, ರಾತ್ರಿಯ ವೇಳೆಗಳಲ್ಲಿ ಇದುವೆ ನಕ್ಷತ್ರ ಲೋಕವೊ ಎಂದು ಭ್ರಮೆಗೊಳಿಸುವಂತೆ ಸಿಂಗರಿಸಲ್ಪಟ್ಟಿತ್ತು.

ಮದುವೆಯ ಸುಲಗ್ನವೆ ಪಿರಿಯರಸಿ ಶಾಂತಲದೇವಿಯ ಪಟ್ಟಾಭಿಷೇ ಕೋತ್ಸವ ಸಮಯವೆಂದೂ ನಿಶ್ಚಯವಾಯಿತು. ಗಂಗೆ, ಯಮುನೆ, ಸರಸ್ವತಿ, ಸಿಂಧು, ಬ್ರಹ್ಮಪುತ್ರ, ನರ್ಮದೆ, ಗೋದಾವರಿ, ಕೃಷ್ಣೆ, ಕಾವೇರಿ, ತುಂಗಭದ್ರೆ, ತಾಮ್ರಪರ್ಣಿ ಮುಂತಾದ ಮಹಾನದನದಿಗಳ ತೀರ್ಥಗಳನ್ನು ಅಭಿಷೇಕಕ್ಕೆ ಶೇಖರಿಸಲಾಯಿತು.

ಹಿಮಾಚಲ ನೇಪಾಳಗಳಿಂದ ಕಸ್ತೂರಿ, ಕೃಷ್ಣಾಗರು, ಕಾಶ್ಮೀರದಿಂದ ಕುಂಕುಮ ಹೂ, ಮಧು, ಮೃದುಕಂಬಳಗಳೂ, ವಾರಣಾಸಿ ಹಸ್ತಿನಾವತಿ ಕ್ಷೇತ್ರಗಳಿಂದ ಬಣ್ಣಬಣ್ಣದ ಪಟ್ಟುವಸ್ತ್ರ, ಪೀತಾಂಬರಗಳೂ, ಕುದುರೆ, ಒಂಟೆ, ಆನೆಗಳ ಮೇಲೆ ಹೇರಿಹೇರಿ ಬಂದವು.

ಸಾಲುಬಂಡಿಗಳಲ್ಲಿ, ಒಂಟೆಯ ಸಾಲುಗಳ ಮೇಲೆ, ಕುದುರೆಗಳ ಮೇಲೆ, ವೇಗವಾಗಿ ಚಲಿಸುವ ರಥಗಳಲ್ಲಿ, ಆನೆಗಳ ಮೇಲೆ, ಮೇನೆಗಳಲ್ಲಿ, ದೇಶದೇಶಗಳ ಅರಸರು, ಮಿಗಿಲಾದ ವೈಭವ ಅಟ್ಟಹಾಸಗಳೊಡನೆ, ಪತ್ನೀಪುತ್ರಾದಿ ಬಂಧು

ಬಾಂಧವರೊಡನೆ, ಆಪ್ತಮಿತ್ರರೊಡಗೂಡಿ, ಆಳುಕಾಳುಗಳೊಂದಿಗೆ ದ್ವಾರ ವತಿಯ ಮಾರ್ಗವನ್ನು ಹಿಡಿದು ಹೊರಟರು.

ದೇಶದೇಶಗಳ ವಿದ್ವಾಂಸರೂ, ಘನಪಾಠಿಗಳೂ, ಕವಿಶ್ರೇಷ್ಠರೂ, ಭೂಸು ರೋತ್ತಮರೂ ಸಂಸಾರಸಮೇತರಾಗಿ ಗುಂಪುಗುಂಪಾಗಿ ದ್ವಾರವತಿಯಲ್ಲಿ ಬಂದಿಳಿಯಲು ಉಪಕ್ರಮಿಸಿದರು.

ಸಾಹಸಮಲ್ಲರೂ, ಚತುರ ಬಿಲ್ಗಾರರೂ, ವಿವಿಧ ಆಯುಧಗಳಲ್ಲಿ ನೈಪುಣ್ಯ ಹೊಂದಿದವರೂ, ಇಂದ್ರಜಾಲ ಮಹೇಂದ್ರಜಾಲ ವಿದ್ಯೆಯನ್ನರಿತವರೂ, ಗಣೆಯ ಮೇಲೆ ವಿವಿಧ ಚಮತ್ಕಾರಗಳನ್ನೂ ದೇಹಸಾಮರ್ಥ್ಯಗಳನ್ನೂ ಪ್ರದರ್ಶಿಸಬಲ್ಲ ಡೊಂಬರೂ, ಮೃಗಪಕ್ಷಿಗಳ ವೇಷಗಳನ್ನು ಧರಿಸಿ ನಟಿಸುವ ಹಗಲುವೇಷಧಾರಿ ಗಳೂ, ನಟನಟಿಯರೂ, ಗಾಯಕಗಾಯಕಿಯರೂ, ಆಶುಕವಿಗಳೂ, ಹಾಸ್ಯ ಕಾರರೂ, ಕಾಡಿನ ಮೃಗಪಕ್ಷಿಗಳನ್ನು ಹಿಡಿದು ಪಳಗಿಸಿ ಆಡಿಸುವವರೂ, ನಾನಾ ಬಗೆಯ ನಾನಾ ಜಾತಿಯ ನಾನಾ ಕಸುಬಿನ ಜನಗಳೂ ದ್ವಾರವತಿಗೆ ಬಂದು ಕಿಕ್ಕಿರಿದರು. ಅಷ್ಟು ಹೆಚ್ಚಿನ ಜನಸಂದಣಿ ದಕ್ಷಿಣ ಭಾರತದಲ್ಲಿ ಆ ಹಿಂದೆ ಎಂದೂ ಆದುದಿಲ್ಲ.

ವಿವಾಹಮಂಟಪದ ವೈಶಾಲ್ಯ ವೈಖರಿಯಂತೂ ಹೇಳತೀರದು. 'ಇಂದ್ರ ಕುಬೇರರ ಸಭಾಸ್ಥಾನಗಳು ಇದಕ್ಕಿಂತ ಏನು ಮಿಗಿಲು?' ಎನ್ನುವ ಹಾಗೆ ಇತ್ತು. ಆ ಭವ್ಯಸ್ಥಾನವು, ಗಂಗರಾಜರ, ರಾಜಮಾತೆಯರ, ವಿಷ್ಣುವರ್ಧನ ಪ್ರಭುಗಳ ಹೃದಯವೈಶಾಲ್ಯವನ್ನು ಸೂಚಿಸುತ್ತಿದ್ದಿತು. ಆ ವಿತರಣೆ, ಆ ರುಚಿ, ಆ ಬೆಡಗು ಇನ್ನೆಲ್ಲಿ ನೋಡಲೂ ಸಾಧ್ಯವಿರಲಿಲ್ಲ. ಹೊನ್ನಿನ ಹೊಳೆಯನ್ನೇ ಹರಿಸಿ ನಿರ್ಮಿಸಿದ್ದರು ಆ ಕಲ್ಯಾಣಮಂಟಪವನ್ನು. ಅದರ ಒಳಹೊಕ್ಕರೆ ಗಂಧರ್ವಲೋಕವನ್ನೇ ಹೊಕ್ಕಂತೆ ಭ್ರಮೆಯಾಗುತ್ತಿತ್ತು.

ಹೋಮವೇದಿಕೆಯ ವಿತರಣೆ ಸ್ವತಃ ರಾಜಮಾತೆಯವರದೆ. ದೊಡ್ಡ ದೊಡ್ಡ ರಜತ ಪರಾತಗಳಲ್ಲಿ ಬಗೆಬಗೆಯ ಹೂ, ಹಣ್ಣುಗಳು ಲಗ್ನಕ್ಕೆ ಹಿಂದಿನ ರಾತ್ರಿಯೇ ಶೇಖರವಾದುವು. ಪುಷ್ಪಗಳ ರಾಣಿಯಂತೆ ಅರಳಿ ಕುಳಿತಿದ್ದ ಸಹಸ್ರಪತ್ರ ಕಮಲಗಳು, ಶ್ವೇತಪುಷ್ಪಗಳ ರಾಶಿಯ ಮೇಲೆ ಶ್ವೇತಸರೋರುಹ ಗಳು, ಇನ್ನೊಂದೆಡೆ ನಾನಾವಿಧ ಪೀತವರ್ಣ ಪುಷ್ಪಗಳ ನಡುವೆ ಸ್ವರ್ಣ ಕಮಲಗಳು, ನೀಲವರ್ಣದ ಪುಷ್ಪಗಳ ನಡುವೆ ನೀಲೋತ್ಪಲಗಳು ಸೊಬಗು

ಗೊಳಿಸುತ್ತಿದ್ದವು. ಆ ಪುಷ್ಪಗಳಲ್ಲಿ ಒಂದಾದರೂ ಮುರಿದ ರೇಕಿನ, ಸೊಂಪಾಗಿ ಬೆಳೆಯದ, ಪೂರ್ಣ ವಿಕಾಸವಾಗದ, ಹುಳಹುಪ್ಪಟೆಗಳಿಂದ ಭಿನ್ನಮಾಡಲ್ಪಟ್ಟ, ರೋಗಗ್ರಸ್ತವಾದ, ಬಣ್ಣ ಕುಂದಿದ, ಬಾಡಿದ ಪುಷ್ಪಗಳಿರಲಿಲ್ಲ. ಆಯ್ದು ಆಯ್ದು ತಂದಂಥಾ ಪುಷ್ಪಗಳು ಅವು. ಫಲಗಳೂ ಅಂತೆಯೇ; ಗಾತ್ರದಲ್ಲಿ, ಬಣ್ಣದಲ್ಲಿ, ರುಚಿಯಲ್ಲಿ ಶ್ರೇಷ್ಠವಾದುವು, ಪೂರ್ಣಪಕ್ವವಾದವು.

ಸುವರ್ಣಪಾತ್ರೆಗಳಲ್ಲಿ ಘೃತ, ಮಧು, ದಧಿ, ಕ್ಷೀರ, ಇಕ್ಷುರಸ; ಇನ್ನೊಂದೆಡೆ ಹರಿದ್ರಾ, ಕುಂಕುಮ, ಚಂದನ, ಮೃಗನಾಭಿ ಮೊದಲಾದ ಸುಮಂಗಲಗಳು, ಸುಗಂಧಗಳು, ರಜತಹರಿವಾಣದಲ್ಲಿ ಹಾಲುನೊರೆಯಂತಿದ್ದ ಲಾಜೆ. ವೇದಿಯ ಪೂರ್ವಾಭಿಮುಖವಾಗಿ, ಉತ್ತರಾಭಿಮುಖವಾಗಿ ಹಾಸಿದ ರಜತ ಪೀಠಗಳು, ನಡುವೆ ಮದುವಣಿಗರಾದ ಪ್ರಭುಗಳು ಮಂಡಿಸಲು ರತ್ನ ಖಚಿತವಾದೊಂದು ಸ್ವರ್ಣಫಲಕ. ಇಕ್ಕೆಡೆಗಳಲ್ಲಿ ರಾಜಬಂಧುಗಳು, ಕುಲ ಗುರುಗಳು, ರಾಜಪುರೋಹಿತರು ಕುಳಿತುಕೊಳ್ಳಲು ಶ್ರೇಷ್ಠ ಆಸನಗಳು. ಇವು ಗಳೆಲ್ಲ ಅರುಣೋದಯಕ್ಕೆ ಮೊದಲೆ ಅಣಿಯಾದವು.

ರಾತ್ರಿಯೆಲ್ಲ ದ್ವಾರವತಿಗೆ ಪೂರ್ಣ ಜಾಗರಣೆ. ಊರ ಜನರೆಲ್ಲ ಬೀದಿ ಗಳಲ್ಲಿ, ಅರಮನೆಯ ಮುಂದೆ. ಬೀದಿಗಳಲ್ಲಿ ಹತ್ತು ಹತ್ತು ಹೆಜ್ಜೆಗೆ ಹಸಿರು ಚಪ್ಪರಗಳು. ದಾರಿಗರನ್ನು ಕರೆಕರೆದು ಕೊಡುವ ತನಿವಣ್ಣು, ಎಳನೀರು, ಕಬ್ಬಿನ ರಸದ, ಪನಿವಾರಗಳ ಅರವಟ್ಟಿಗೆಗಳು. ನಾಟಕ ನೃತ್ಯ ಗೃಹಗಳೂ, ಭಜನೆ ಸುಕಥಾಗೋಷ್ಠಿಗಳೂ, ದೇವರ ಉತ್ಸವಗಳೂ, ದೀವಟಿಗೆಗಳ ಬೆಳಕಿನಲ್ಲಿ ಬಯಲಾಟ, ಲಾವಣಿ, ಸಮೂಹ ನಾಡುನೃತ್ಯಗಳೂ ರಾತ್ರಿಯನ್ನು ಬೆಳಗು ಮಾಡಿದವು. 'ಇನ್ನೂ ಬೆಳಗಾಗಲಿಲ್ಲವೆ!' ಎನ್ನುವಷ್ಟರಲ್ಲಿ ವಾಸಂತಿಕಾ ದೇವಿಯ ಆಲಯದಿಂದ ಪ್ರಭಾತಸೂಚಕ ಮಂಗಳವಾದ್ಯಗಳ ಸೊಲ್ಲು ಕೇಳ ಬಂದಿತು.

ಇತ್ತ ಅರಮನೆಯ ಕಲ್ಯಾಣಮಂಟಪದಲ್ಲೂ ಮಂಗಳವಾದ್ಯಗಳು ಭೋರ್ಗರೆದವು. ವಾಸಂತಿಕಾದೇವಿಯ ಆಲಯದಿಂದ ದೀವಟಿಗೆಗಳ ಸಾಲಿನಲ್ಲಿ, ಮಂಗಳಸೂಚಕಗಳಾಗಿ ಅಲಂಕರಿಸಲ್ಪಟ್ಟ ಆನೆಗಳು, ಕುದುರೆಗಳು, ಗೋವು, ಪುಂಗವಗಳೂ, ಪೂರ್ಣಕುಂಭ, ಕಂಚು ಕನ್ನಡಿ, ಕಲಶಗಳನ್ನು ಹೊತ್ತ ಸುಮಂಗಲಿಯರೂ, ಬ್ರಾಹ್ಮಣರೂ, ಭಕ್ತಾದಿಗಳೂ ದೇವಿಯ ಉತ್ಸವಮೂರ್ತಿ

ಯನ್ನು ಕಲ್ಯಾಣಮಂಟಪಕ್ಕೆ ಬಿಜಯ ಮಾಡಿಸಿದರು. ಅಷ್ಟು ಹೊತ್ತಿಗೆ ಚಿನ್ನಕ್ಕೆ ಮೆರಗಿಟ್ಟಂತೆ ಅರುಣೋದಯವಾಯಿತು.

ಕಲ್ಯಾಣಮಂಟಪಕ್ಕೆ ಆಹ್ವಾನಿತರು ಒಬ್ಬೊಬ್ಬರಾಗಿ ಬರತೊಡಗಿದರು. ಜನ ದೊಂಬಿಯಾಗದಂತೆ, ಗಲಭೆಯಾಗದಂತೆ ನೋಡಿಕೊಳ್ಳಲು ರಾವುತರೂ, ಆಯುಧಧಾರಿಗಳಾದ ಸೈನಿಕರೂ ನಿಯಮಿತ ಸ್ಥಾನಗಳಲ್ಲಿ ಸಜ್ಜಿತರಾಗಿ ನಿಂತರು. ಬಂದವರನ್ನು ಅವರವರಿಗೆ ನಿಗದಿಯಾಗಿದ್ದ ಸ್ಥಾನಗಳಲ್ಲಿ, ಉಚಿತ ಆಸನಗಳಲ್ಲಿ ಕೂಡಿಸಲು ಪ್ರಧಾನ ಮಹಾಪ್ರಧಾನರ ನೇತೃತ್ವದಲ್ಲಿ ಭಟರು ಸಿದ್ಧರಾಗಿ ಕೆಲಸ ಮಾಡುತ್ತಿದ್ದರು.

ಆಹ್ವಾನಿತರಾದ ರಾಜ್ಯೇಶ್ವರರು ರಾಜ್ಞೀಸಮೂಹ ಸಮೇತರಾಗಿ, ಪುತ್ರಪುತ್ರಿಯರೊಂದಿಗೆ, ಅಂಬಾರಿಗಳಲ್ಲಿ ಕುಳಿತು, ಚಿನ್ನ ಬೆಳ್ಳಿಯ ಮೇನೆ ಗಳಲ್ಲಿ ಕುಳಿತು, ದಿವ್ಯಾಶ್ವಾರೂಢರಾಗಿ, ವೈಭವಯುಕ್ತವಾದ ಉಡುಗೆತೊಡುಗೆ ಗಳಿಂದೊಪ್ಪುತ್ತ ಒಬ್ಬೊಬ್ಬರಾಗಿ ಕಲ್ಯಾಣಮಂಟಪಕ್ಕೆ ಬಂದರು. ಪ್ರಧಾನರು ಒಬ್ಬೊಬ್ಬರನ್ನೂ ಸ್ವಾಗತಿಸಿ, ಕುಶಲಪ್ರಶ್ನೆ ಮಾಡಿ, ಸ್ನೇಹಸೌಹಾರ್ದಗಳ ಅಂಕುರವಾಗಿ ಸುಖೋಷ್ಣವಾದ ಮಧುಮಿಶ್ರಿತವಾದ ಹಾಲನ್ನು ಸೇವಿಸು ವಂತೆ ಮಾಡಿ, ಹಸ್ತಕ್ಕೆ ಸುಗಂಧ, ಪುಷ್ಪಗಳನ್ನು ಕೊಟ್ಟು ಅವರಿಗಾಗಿಯೆ ಸಿದ್ಧಪಡಿಸಿಟ್ಟಿದ್ದ ಸುಖಾಸನಗಳಲ್ಲಿ ಅವರುಗಳನ್ನು ಕರೆದು ಕುಳ್ಳಿರಿಸಿ ಶಕ್ತಿ ಮೀರಿದ ಉಪಚಾರಗಳಿಂದ ಅವರನ್ನು ತೃಪ್ತಿಪಡಿಸಿದರು. ಅಷ್ಟು ವೈಭವದ ಕಲ್ಯಾಣಮಂಟಪವನ್ನೂ ಆದರೋಪಚಾರಗಳನ್ನೂ ಕಂಡು ಆಹ್ವಾನಿತರೆಲ್ಲರೂ ಬೆರಗಾದರು.

ಹಲವು ರಾಜರುಗಳ ಮನಸ್ಸಿನಲ್ಲಿ ಅಸೂಯೆಯೂ ಉತ್ಪನ್ನವಾಯಿತು. ಆದರೆ ಹೊಯಿಸಳೇಶ್ವರರ ವಿಂಧ್ಯಗಿರಿಗಳಂತಿದ್ದ ಯುದ್ಧದ ಆನೆಗಳನ್ನೂ, ತುರಗ ಶಸ್ತ್ರಾಸ್ತ್ರ ಸಂಪತ್ತಿಯನ್ನೂ, ಪ್ರಚಂಡ ದಂಡನಾಯಕರನ್ನೂ, ವಿಷಮಸಂಕಟ ಗಳಲ್ಲಿಯೂ ಸ್ವಾಮಿಯನ್ನು ರಕ್ಷಿಸಬಲ್ಲ ರಾಜತಂತ್ರಜ್ಞರಾದ ಪ್ರಧಾನರನ್ನೂ ಕಂಡು, ಹುಟ್ಟಿದ್ದ ಅಸೂಯೆ ತೊಟ್ಟಿನಲ್ಲಿಯೇ ಹುಟ್ಟಡಗಿಹೋಯಿತು.

ರಾಜ್ಯತಂತ್ರಜ್ಞರಾದ ರಾಜಮಾತೆಯವರು, ಆಹ್ವಾನಿತ ರಾಜಪತ್ನಿಯ ರನ್ನೂ ಸಾಮಂತರ ಪತ್ನಿಯರನ್ನೂ ಇತರ ಪ್ರಮುಖರ ಪತ್ನಿಯರನ್ನೂ ಪುತ್ರಿ ಯರನ್ನೂ ಹಿಂದಿನ ರಾತ್ರಿಯೆ ಅರಮನೆಗೆ ಕರಸಿಕೊಂಡು, ರಾಜವೈಭವದ

ಔತಣವಿತ್ತು, ಬಾಯಿತುಂಬ ಮಾತನಾಡಿ, ವೀಳೆಯವಿತ್ತು, ನಾಳಿನ ಕಲ್ಯಾಣಕ್ಕೆ ಬೇಗ ದಯಮಾಡಿಸಬೇಕೆಂದು ಹೇಳಿ, "ಪ್ರಯಾಣ ಶ್ರಮವಾಯಿತೆ? ನಮ್ಮ ಆಹ್ವಾನವನ್ನು ಗೌರವಿಸಿ ಬಂದಿರಲ್ಲ, ಬಹು ಸಂತೋಷ. ಇಲ್ಲಿ ಎಲ್ಲವೂ ಅನುಕೂಲವಾಗಿದೆಯೆ? ಸೌಕರ್ಯವಿದೆಯೆ?" ಎಂದು ಉಪಚಾರದಿಂದ ಒಬ್ಬೊಬ್ಬರನ್ನೂ ವಿಚಾರಿಸಿ ಕಳಿಸಿಕೊಟ್ಟಿದ್ದರು.

ಗಂಗರಾಜರು ಅಕ್ಕನವರ ಈ ರಾಜಕೀಯ ಚತುರತೆಗೆ ತಲೆತೂಗಿದರು. ಹೊಯಿಸಳ ರಾಜಬೊಕ್ಕಸ ಹೊಳೆಯಾಗಿ ಹರಿದುಹೋದರೂ, ಅಳಿಯದಾಗಿ ನಿಂತವು ಅವರ ಅಕ್ಕರೆಯ ಉಪಚಾರಗಳು.

ವಾಸಂತಿಕಾ ದೇವಿಯ ಉತ್ಸವ ಮೂರ್ತಿಯನ್ನು ವೇದಿಯ ಬಲಗಡೆ ಪೂರ್ವಾಭಿಮುಖವಾಗಿ ಪ್ರತಿಷ್ಠಿಸಿ, ಪೂರ್ಣಕುಂಭ ಕನಕಕಲಶಗಳನ್ನು ಇಡಬೇಕಾದೆಡೆ ಇಟ್ಟು, ಮುತ್ತೈದೆಯರು ವೇದಿಯನ್ನು ಬಲವಂದು, 'ಶುಭವೆಸಗು ತಾಯೆ' ಎಂದು ಹಾಡಿ, ಹೋಮಕುಂಡವನ್ನು ಪೂಜಿಸಿ, ದೇವಿಗೆ ಆರತಿ ಬೆಳಗುತ್ತಿರುವಾಗ, ಒಳಗಡೆ ಸುಸ್ವರದಲ್ಲಿ ವೇದಘೋಷ ಕೇಳಬಂತು. ರಾಜಪುರೋಹಿತರು, ರಾಜವರ್ಗದವರು, ವೇದಸಂಪನ್ನರಾದ ಬ್ರಾಹ್ಮಣರು ಕಲ್ಯಾಣ ಮಂಟಪವನ್ನು ಪ್ರವೇಶಿಸಿದರು. ಸಭೆ ಪ್ರಭುಗಳ, ಕನ್ಯೆಯರ ಆಗಮನವನ್ನು ಅತಿ ಕುತೂಹಲದಿಂದ ನಿರೀಕ್ಷಿಸಿತು.

ಹೆಣ್ಣಿನ ಕಡೆಯವರೂ ಕನ್ಯೆಯರೂ ಹಿಂದಿನ ರಾತ್ರಿಯೇ ಬಂದು ಅರಮನೆಯ ಒಂದು ಭಾಗದಲ್ಲಿ ಬಿಡಾರ ಮಾಡಿದ್ದರು. ಅರುಣೋದಯಕ್ಕೆ ಮೊದಲೆ ಮಾಚಿಕಬ್ಬೆಯವರು ಮಕ್ಕಳನ್ನೆಬ್ಬಿಸಿ ಪೀಠಗಳಲ್ಲಿ ಕುಳ್ಳಿರಿಸಿ, ಸುಮಂಗಲಿಯರಿಂದ ತಲೆಗೆ ಎಣ್ಣೆಯನ್ನು ಒತ್ತಿಸಿ, ಮಂಗಳಸ್ನಾನ ಮಾಡಿಸಿ, ನೀಲಕುಂತಲರಾಶಿಗೆ ಸೊಂಪಡರಲೆಂದು, ಘಮಘಮಿಸಲೆಂದು ಸುಗಂಧ ಧೂಪಗಳನ್ನು ಕೊಟ್ಟರು. ನೀಳವಾದ ಜಡೆಗಳನ್ನು ಹೆಣೆದು ಮೊಲ್ಲೆಯ, ಮಲ್ಲಿಗೆಯ, ಜಾಜಿಯ ದಂಡೆಗಳನ್ನು ತುರುಬಿಗೆ ಜಗ್ಗಿಸೂಡಿದರು. ಸಿಂಧೂರ, ಸುವರ್ಣ, ಕರ್ಪೂರಕಾಂತಿ, ಮಿಶ್ರಿತರಾಗವುಳ್ಳ ಅವರ ದೇಹಾಂಗಗಳಿಗೆ, ಕರ್ಪೂರ, ಮಲಯಜ, ಮೃಗನಾಭಿ, ಕೇಸರ, ಜವ್ವಾಜಿಗಳ ಸಾರಣೆಯನ್ನು ಲಘುವಾಗಿ ಲೇಪಿಸಿದರು. ಮೋಹಕವಾಗಿದ್ದ ಅವರ ವಿಶಾಲ ನಯನಗಳಿಗೆ ಕಪ್ಪನ್ನಿಟ್ಟು, ಅದನ್ನು ಸಂಮೋಹನಾಸ್ತ್ರವನ್ನಾಗಿ ಮಾಡಿದರು. ಹಾಲ್ನೊರೆಯಂತೆ ಶುಭ್ರ

ವಾದ ಚೀನಾಂಬರಗಳನ್ನುಡಿಸಿ, ಅಷ್ಟೇ ಶುಭ್ರವಾದ ವಕ್ಷವಸ್ತ್ರವನ್ನು ಲಘು ವಾಗಿ ಬಿಗಿದರು. ಮಧುರ ರವವುಳ್ಳ ನೂಪುರಶಿಂಜಿನಿಗಳನ್ನು ಕಾಲಿಗೆ ತೊಡಿಸಿ ದರು. ನವರತ್ನಸುವರ್ಣಮಣಿಖಚಿತವಾದ ಮಣಿಮೇಖಲೆಯನ್ನು ನಡುವಿಗೆ ಇಟ್ಟರು. ಜಗ್ಗುವ ಮುತ್ತಿನ ಗೊಂಚಲುಗಳುಳ್ಳ ಮರಕತಮಣಿ, ಪದ್ಮರಾಗ ಶೋಭಿತ ಕಟಿಸೂತ್ರವನ್ನು ಆ ಮೇಖಲೆಗೆ ಜೋಡಿಸಿದರು. ಅನರ್ಘವೂ ಸಮುದ್ರಸಾರಭೂತವೂ ಆದ ಮುಕ್ತಾಹಾರ, ವೈಜಯಂತಿಮಾಲೆಗಳಿಂದ ಕೊರಳನ್ನೂ ವಕ್ಷವನ್ನೂ ಅಲಂಕರಿಸಿದರು. ಪದ್ಮರಾಗ, ಮರಕತ, ಮಾಣಿಕ್ಯ ಗಳಿಂದಲಂಕೃತವಾದ ಕಂಕಣವಲಯಗಳನ್ನು ತೊಡಿಸಿದರು. ಅಮೃತದ ಮನೆ ಯಾದ, ತಾಯ್ತನಕ್ಕೆ ಸೌಭಾಗ್ಯಗಳಾದ ಆ ಮಕ್ಕಳ ತುಂಬಿದ ಎದೆಯ ಸೊಬ ಗನ್ನು ವಕ್ಷಾಭರಣಗಳಿಂದ ಹೆಚ್ಚಿಸಿದರು. ಕಿವಿಗಳಿಗೆ ಮುತ್ತುರತ್ನಗಳಿಂದ ಮನೋಹರವಾದ ಅವತಂಸಗಳನ್ನು ತೊಡಿಸಿದರು. ಹಣೆಗೆ ಕುಂಕುಮದ ಸೌಭಾಗ್ಯವನ್ನು ಸುಂದರವಾಗಿಟ್ಟರು.

ಇಷ್ಟೆಲ್ಲಾ ಅಲಂಕಾರಗಳು ಮುಗಿದ ಮೇಲೆ ಮಕ್ಕಳು ಶಾರದೆಯನ್ನು ಪೂಜಿಸಿದರು. ಗೋಪೂಜೆ ಮಾಡಿದರು. ಅನಂತರ ಅವ್ವೆಗೆ ನಮಸ್ಕಾರ ಮಾಡಿದರು. ಮಾಚಿಕಬ್ಬೆ ಮಕ್ಕಳನ್ನು ಮನಸಾರೆ ಹರಸಿ, ತನ್ನ ಕಣ್ಣು ದೃಷ್ಟಿಯೇ ಅವರಿಗೆ ತಾಗೀತು ಎಂದು ಕಾಯಿ ನೀವಾಳಿಸಿ ತೆಗೆದರು. ಮಕ್ಕಳ ಸೌಂದರ್ಯವನ್ನು ಮತ್ತೂ ಮತ್ತೂ ನೋಡಿ ನಲಿಯಿತು ಆ ತಾಯಿಹೃದಯ.

ಇಷ್ಟುಹೊತ್ತಿಗೆ ಮಾರಸಿಂಗಮಯ್ಯನವರೂ . ಪಂಡಿತರೂ 'ಹೊತ್ತಾ ಯಿತು, ಮಕ್ಕಳು ಸಿದ್ಧರಾದರೆ?' ಎನ್ನುತ್ತ ಬಂದರು. ಹೆತ್ತ ತಂದೆಗಳೇ ಆದರೂ 'ಒಂದೇ ರಾತ್ರಿಯಲ್ಲಿ ಇಷ್ಟು ಬೆಳೆದು ಇಷ್ಟು ಸೌಂದರ್ಯವತಿಯ ರಾದರೆ!' ಎಂದು ಪಿತೃಹೃದಯಗಳು ಆಶ್ಚರ್ಯಪಟ್ಟವು.

ಮಕ್ಕಳಿಬ್ಬರೂ ಇಬ್ಬರಿಗೂ ಸಾಷ್ಟಾಂಗವೆರಗಿದರು. ಪಂಡಿತರು ಇಬ್ಬರ ತಲೆಯನ್ನು ತಡವಿ ಅಂತರಿಕ್ಷಕ್ಕೆ ಕೈಜೋಡಿಸಿ 'ಕೇಶವನು ನಿಮ್ಮನ್ನು ನಡಸಿ ಕೊಳ್ಳಲಿ' ಎಂದರು. ಮಾರಸಿಂಗಮಯ್ಯ ಮಕ್ಕಳಿಬ್ಬರ ತಲೆಯನ್ನೂ ತಡವಿ 'ಸಾವಿತ್ರಿ ಅರುಂಧತಿಯರಾಗಿ ಯಶೋವತಿಯರಾಗಿ ಬದುಕಿರಿ' ಎಂದು ಹರಸಿದರು.

ಸೌಶೀಲ್ಯಗಾಂಭೀರ್ಯಗಳೂ ವಿದ್ಯಾವಿನಯಸಂಪನ್ನತೆಯೂ ಮಧುರಭಾವ

ಮಧುರರೂಪು ಲಾವಣ್ಯಗಳೂ ಮಧುರಪ್ರಾಯವೂ ಮಹದೈಶ್ವರ್ಯವೂ ಮಹಾನು ಭಾವನನ್ನು ಕೈಹಿಡಿಯುವ ಸೌಭಾಗ್ಯವೂ ಎಲ್ಲವೂ ಒಟ್ಟುಗೂಡಿ ಬಂದಿತ್ತು ಶಾಂತಲೆ ಲಕ್ಷ್ಮಿಯರಿಗೆ ಆಗ, ಅಂದು.

ಮಕ್ಕಳಿಗೆ ಮಧುಪರ್ಕವಿತ್ತು, ಮೇಲೆ ಹಾಲಿತ್ತು, ಮಾಚಿಕಬ್ಬೆ ಮಕ್ಕಳನ್ನು ರಾಜಮಾತೆಯರ ಬಳಿ ಕರೆದುಕೊಂಡು ಹೋದರು. ರಾಜಮಾತೆ ಮಜ್ಜನಾದಿಗಳನ್ನು ಮುಗಿಸಿ ಕಲ್ಯಾಣಮಂಟಪಕ್ಕೆ ಹೋಗಲು ಅಣಿಯಾಗು ತ್ತಿದ್ದರು. ದೂರದಿಂದಲೆ ನೂಪುರಶಿಂಜಿನಿಗಳ ಕಲಧ್ವನಿಯನ್ನು ಕೇಳಿ ತಿರುಗಿ ನೋಡಿ ಶಾಂತಲೆ ಲಕ್ಷ್ಮಿಯರನ್ನು ಕಂಡರು. ಅವರ ಅಂದಿನ ನಿಲುವು, ನಡೆ, ರೂಪು, ಮುಖವರ್ಚಸ್ಸು ರಾಜಮಾತೆಗೆ ಸುಖಮೂರ್ಛೆ ಬರುವಂತೆ ಮಾಡಿತು. ಅಲ್ಲಿದ್ದ ಆಸನದಲ್ಲಿಯೆ ಕುಳಿತುಬಿಟ್ಟರು. ಮಕ್ಕಳು ಅತ್ತೆಯವರ ಕಾಲ್ಗಳನ್ನು ಮುಟ್ಟಿ ನಮಸ್ಕಾರ ಮಾಡಿದರು. ರಾಜಮಾತೆಯವರು ಸುಖದ ಪರಮಾವಧಿ ಯನ್ನು ಅನುಭವಿಸುತ್ತ ಸೊಸೆಯರನ್ನು ಆಲಿಂಗಿಸಿಕೊಂಡರು. ಕಂಪಿಸುತ್ತಿದ್ದ ಕರಗಳಿಂದ ಮಕ್ಕಳ ತಲೆಗಳನ್ನು ನೇವರಿಸಿ, ಕಂಪಿತ ಧ್ವನಿಯಲ್ಲೆ ಮಾಚಿಕಬ್ಬೆ ಯನ್ನು ಕುರಿತು 'ಮಾಚಿ, ನಮ್ಮ ಮನೆ ತುಂಬುಗೊಟ್ಟೆಯವ್ವಾ; ನಮ್ಮ ಮನ ತುಂಬುಗೊಟ್ಟೆಯವ್ವಾ. ನಾವು ನಿನಗೇನು ಕೊಟ್ಟೇವು? ಏನು ಕೊಟ್ಟರೆ, ಎಷ್ಟು ಕೊಟ್ಟರೆ ಸಮನೆನಿಸೀತು?' ಎಂದು ಸಂತೋಷಾತಿರೇಕದಲ್ಲಿ ಅಂದರು. ರಾಜಮಾತೆಯವರ ಧ್ವನಿ ನಿಂತಿತು, ಮೈ ಕಂಪಿಸಿತು, ಬೆವರಿತು.

ಮಾಚಿಕಬ್ಬೆ ಬೀಸಣಿಗೆಯಿಂದ ಬಲವಾಗಿ ಗಾಳಿ ಹಾಕಿದರು. ಚೇಟಿ ಯರು ಮಿಕ್ಕ ಶೈತ್ಯೋಪಚಾರ ನಡಸಿದರು. ಒಂದೆರಡು ನಿಮಿಷಗಳಾದ ಮೇಲೆ ರಾಜಮಾತೆ ಕಣ್ತೆರೆದು ಮಕ್ಕಳನ್ನು ನೋಡಿ, ನಸುನಕ್ಕು, ಮಾಚಿಕಬ್ಬೆಯನ್ನು ನೋಡಿ 'ಏನಾಯ್ತು ಮಾಚಿ! ನಮಗೆ ಏನಾಯ್ತು?' ಎಂದು ಕೇಳಿದರು. ಮತ್ತೆ ಮಕ್ಕಳನ್ನು ನೋಡಿ 'ನಾವು ಇದುವರೆಗೆ ಬದುಕಿದ್ದುದು ಈ ಒಂದು ಸಂತೋಷಕ್ಕಾಗಿಯೆ. ಇನ್ನು ನಿಮ್ಮ ಧರ್ಮ ವೃದ್ಧಿಸಲಿ, ನಿಮ್ಮ ಯೌವನ ಚಿರಕಾಲವಿರಲಿ; ನಿಮ್ಮ ಕೈಹಿಡಿಯುವ ಪ್ರಭುಗಳ ಭಾಗ್ಯ, ಯಶಸ್ಸು ಆಚಂದ್ರಾರ್ಕವಾಗಲಿ; ಈ ನೆಲವಿರುವವರೆಗೂ ಈ ನನ್ನ ಸೊಸೆಯರ ನೆನಪು ಉಳಿಯಲಿ; ರಾಜವಂಶ ವೃದ್ಧಿಸಲಿ; ದೇಶದಲ್ಲಿ, ಪ್ರಜೆಗಳಲ್ಲಿ, ಧರ್ಮ ವೃದ್ಧಿ ಗೊಳ್ಳಲಿ. ಎಲ್ಲರಿಗೂ ಮಂಗಳವಾಗಲಿ . . . ಹೋಗಿರಿ, ನಿಮ್ಮ ಭಾಗ್ಯದ ದೈವ

ವೆಂದೇ ಆತನ ಕೈಹಿಡಿದು ನಡೆದುಕೊಳ್ಳಿರಿ, ಆತನೊಡನೆ ಗೌರವದಿಂದಿರಿ, ಭಕ್ತಿ ವಿಶ್ವಾಸಗಳಿಂದಿರಿ. ಇನ್ನು ನಿಮ್ಮ ಸೌಶೀಲ್ಯ ಸೌಭಾಗ್ಯಗಳೇ ಆತನ ಯಶಸ್ಸು, ಆತನ ಭಾಗ್ಯ' ಎಂದು ಹೇಳಿ, ಮಕ್ಕಳನ್ನು ಮಾಚಿಕಬ್ಬೆಯವರೊಡನೆ ಕಲ್ಯಾಣ ಮಂಟಪಕ್ಕೆ ಕಳಿಸಿಕೊಟ್ಟು, ತಾವೂ ಅಲ್ಲಿಗೆ ಹೊರಡಲು ಅಣಿಯಾದರು.

ಕಲ್ಯಾಣಮಂಟಪವು ಜನರಿಂದ ಕಿಕ್ಕಿರಿದಿದ್ದಿತು. ಒಮ್ಮೆಗೇ ಪಂಚ ಮಹಾವಾದ್ಯಗಳ ನಿನದವಾಯಿತು. ಹತ್ತು ವೈತಾಳಿಕರು ಏಕಕಂಠದಿಂದ ಹೊಯಿಸಳೇಶ್ವರರ ಬಿರುದಾವಳಿಗಳನ್ನು ಉದ್ಘೋಷಿಸಿದರು. ಪ್ರಕಾಶಮಾನ ವಾದ ಹಗಲುದೀವಟಿಗೆಗಳ ನಡುವೆ ನವಸೂರ್ಯೋದಯದಂತೆ ಹೊಯಿಸಳೇಶ್ವರ ವಿಷ್ಣುವರ್ಧನ ಪ್ರಭುಗಳು ಕಲ್ಯಾಣಮಂಟಪದಲ್ಲಿ ಕಾಣಿಸಿಕೊಂಡರು. ಸಭೆ ಯಲ್ಲಿದ್ದವರೆಲ್ಲ ಭಕ್ತಿಮರ್ಯಾದೆಗಳಿಂದ ಎದ್ದು ನಿಂತರು. ಶತಸಹಸ್ರಕಂಠಗಳು ಏಕಕಂಠವಾಗಿ 'ಉಘೇ, ಹೊಯಿಸಳೇಶ್ವರ, ಉಘೇ! ಉಘೇ!!' ಎಂದು ಬೊಬ್ಬಿರಿದುವು. ಪ್ರಭುಗಳು ಹಸನ್ಮುಖರಾಗಿ ಸಭೆಗೆ ವಂದನೆ ಮಾಡಿದರು.

ಸೂನ್ನತದೇಹ, ವೀರಶ್ರೀಯನ್ನು ಒಲಿಸಿಕೊಳ್ಳಬಲ್ಲ ಉದ್ದಂಡ ದೋರ್ದಂಡಬಾಹುಯುಗ್ಮ, ತುಂಬುಕುತ್ತಿಗೆ, ಉನ್ನತವೂ ವಿಶಾಲವೂ ಆದ ವಕ್ಷ, ಸಿಂಹಕಟಿ, ಸಾಮರ್ಥ್ಯಉಳ್ಳ ತೊಡೆ, ಕಾಲ್ಗಳು, ಗಂಭೀರನಡೆ, ಪದ್ಮ ದಂತೆ ವಿಶಾಲವಾದ ಮುಖ, ಚಂಚಲವಲ್ಲದ, ಚಪಲವಲ್ಲದ ಸೌಮ್ಯನೇತ್ರಗಳು, ಮಾಟವಾದ ನಾಸಿಕ, ಮನಸ್ಸಿನ ಧೃಢತೆಯನ್ನು ನಿರೂಪಿಸುವ ತುಟಿಗಳು, ಗಲ್ಲ, ಹೆಚ್ಚಲ್ಲದ ಕಡಮೆಯಲ್ಲದ ವೀರಶ್ಮಶ್ರು, ವಿಶಾಲಲಲಾಟ, ಭುಜದ ವರೆಗೆ ತೂಗಿ ಹರಿದುಬಂದಿರುವ ಕೇಶರಾಜಿ. 'ಇಂತಹ ವೀರಸೌಷ್ಠವಕ್ಕೆ ಅಲಂಕಾರ ಗಳೇಕೆ?' ಎನ್ನಿಸಿತು ನೋಡಿದವರಿಗೆ.

ಈತ ಬ್ರಹ್ಮಚರ್ಯವನ್ನು ಚೆನ್ನಾಗಿ ಪಾಲಿಸಿಕೊಂಡು ಬಂದವರು. ಸುಖ ಲಾಲಸೆ ಭೋಗಗಳಿಗೆ ದೇಹವನ್ನು ಇಳಿಬಿಟ್ಟವರಲ್ಲ. ದೈಹಿಕ ಮಾನಸಿಕ ಶಿಕ್ಷಣಗಳ ಪೂರ್ಣಫಲವನ್ನು ಪಡೆದಿದ್ದ ಅನುಭವಶಾಲಿ. ಕ್ಷತ್ರಿಯ ಯೋಧರಿಗೆ ಸಲ್ಲುವ ಸಕಲ ಅಸ್ತ್ರಶಸ್ತ್ರ ವಿದ್ಯೆಗಳನ್ನು ಬಹುಕಾಲ ಸಾಧಿಸಿ ಸಿದ್ಧಿಸಿಕೊಂಡಿದ್ದ ನಿಪ್ಣ. ನಿರ್ಮಮರೂ, ಧೀಮಂತರೂ ಧೀರರೂ ಆದ ಈ ಮಹಾನುಭಾವರು ಜನ್ಮಜನ್ಮಕ್ಕೂ ಸಹಾನುವರ್ತಿಗಳಾದ, ಮೇಲಾಗಿ ತಮ್ಮ ಪುಣ್ಯಾಂಶರೂಪವೇ ಆದ, ಈ ಅರ್ಧಾಂಗಿಯರನ್ನು ಇಹಜನ್ಮದಲ್ಲಿಯೂ ಒಂದುಗೂಡಲು, ಮಧುರ

ಭಾವದಿಂದ ಮಂದಸ್ಮಿತರಾಗಿ ಕೈಜೋಡಿಸಿಕೊಂಡು ಕಲ್ಯಾಣಮಂಟಪಕ್ಕೆ ಬಿಜಯಮಾಡಿದ್ದರು.

ಆಗ ರಾಜಪುರೋಹಿತರು ವಿಧಿಪೂರ್ವಕವಾಗಿ ಅಗ್ನಿಯನ್ನು ಆವಾಹನೆ ಗೈದು, ಅಗ್ನಿಕುಂಡದಲ್ಲಿ ಪ್ರತಿಷ್ಠಿಸಿ, ದಿಕ್ಪಾಲಕರನ್ನೂ ಮಹೇಂದ್ರನನ್ನೂ ಆಹ್ವಾನಿಸಿ, ಬ್ರಹ್ಮನನ್ನು ಪ್ರತಿಷ್ಠಿಸಿ, ಪ್ರಸನ್ನರಾಗಬೇಕೆಂದು ಬೇಡಿ, ಪರಿಸ್ತರಣಗಳ ಮೇಲೆ ದರ್ವಿ, ಸಮಿತ್ತು, ಆಜ್ಯಪಾತ್ರೆ, ಅರ್ಘ್ಯಪಾತ್ರೆ ಇವುಗಳನ್ನಿಟ್ಟು, ಪ್ರಭುಗಳ ಕೈಯಿಂದ ವಿಘ್ನೇಶ್ವರನ ಪೂಜೆಯನ್ನು ಮಾಡಿಸಿ, ಯಜ್ಞೇಶ್ವರನಿಗೆ ಸಮಿತ್ತು, ಹವಿಸ್ಸು ಆಜ್ಯಾಹುತಿಗಳನ್ನು ಮಾಡಿಸಿ, ವರಪ್ರಸಾದವನ್ನು ಸಾಧಿಸಿ, ಬ್ರಹ್ಮ, ಹರಿ, ಹರ ದೇವಾದಿಗಳನ್ನು ಶ್ರದ್ಧಾಭಕ್ತಿಗಳಿಂದ ಪೂಜೆ ಮಾಡಿಸಿ, ಅರ್ಹತ ಪಿತೃಮೂಲ, ಗುರುಮೂಲದವರುಗಳನ್ನೂ ಇಂದ್ರಾದಿ ಅಷ್ಟದಿಕ್ಪಾಲಕರನ್ನೂ ವಸು ರುದ್ರಾದಿಗಳನ್ನೂ ಗಂಧರ್ವಾದಿಯಕ್ಷನಾಗರುಗಳನ್ನೂ ಪ್ರಾರ್ಥನೆಮಾಡಿಕೊಳ್ಳುವಂತೆ ಹೇಳಿದರು. ಪ್ರಭುಗಳು ಹಾಗೆಯೆ ಮಾಡಿದರು.

ಕುವರವಿಷ್ಣುವೂ ಸ್ನಾನಮಾಡಿ ಪಟ್ಟುಮಡಿಯುಟ್ಟು ವೇದಿಕೆಯ ಮೇಲೆ ಬಂದ. ಅವನನ್ನು ಪ್ರಭುಗಳು ಕೈಹಿಡಿದು ತಮ್ಮ ಪಕ್ಕದಲ್ಲಿಯೆ ಕೂಡಿಸಿಕೊಂಡರು. ಅನಂತರ ಪುರೋಹಿತರು ಹೇಳಿದ ಈ ಅರ್ಥಬರುವ ಮಂತ್ರಗಳನ್ನು ಪ್ರಭುಗಳು ಶುದ್ಧವಾಗಿ, ಶ್ರದ್ಧೆಯಿಂದ ಉಚ್ಚರಿಸಿದರು: 'ಎಲೌ ಹುತವಹನೆ, ನಾನು ಇದುವರೆಗೆ ಬ್ರಹ್ಮಚರ್ಯದಲ್ಲಿದ್ದವನು. ಕಾಯಾ ವಾಚಾ ಮನಸಾ ಆ ವ್ರತವನ್ನು ಇದುವರೆಗೂ ಪಾಲಿಸಿಕೊಂಡು ಬಂದಿರುವೆ. ಈಗ ವಂಶಾಭಿವೃದ್ಧಿಗೆ, ಪುತ್ರಕಾಮನಾಗಿ, ಗೃಹಸ್ಥಾಶ್ರಮವನ್ನು ಕೈಗೊಳ್ಳುವವನಾಗಿದ್ದೇನೆ. ತೇಜಸ್ಸೂ ಯಶಸ್ಸೂ ಉಳ್ಳ ಆಯುಷ್ಮಂತನಾದ ಪುತ್ರನು ನನಗಾಗಲಿ ಎಂದು ಅನುಗ್ರಹಿಸು' ಎಂದು ಬೇಡಿದರು. ಅನಂತರ ಮುಹೂರ್ತದ ವೇಳೆಗೆ ಶಾಂತಲೆ ಲಕ್ಷ್ಮಿಯರ ಜೊತೆಗೆ ಇತರ ಕನ್ಯೆಯರನ್ನು ಮರೆಯಾಗಿಸಿದ್ದ ಕಾಂಡಪಟದ ಮುಂದೆ ರಜತಫಲಕದ ಮೇಲೆ ಹರವಿದ್ದ ಮೆಟ್ಟಕ್ಕಿಯ ಮೇಲೆ ಬಂದು ನಿಂತರು.

'ಸುಲಗ್ನಾಸ್ಸಾವಧಾನ, ಸುಮುಹೂರ್ತಾಸ್ಸಾವಧಾನ' ಎಂದು ಪುರೋಹಿತರೂ ಬ್ರಾಹ್ಮಣರೂ ಶಾಂತಿವಾಚನ ಮಾಡುತ್ತಿರಲು, ಮೇಲಿಂದ ಹೂಮಳೆ ಕರೆಯುತ್ತಿರಲು, ಮಂಗಳವಾದ್ಯಗಳು ಮೊಳಗುತ್ತಿರಲು, ಕಾಂಡಪಟ ಒಂದು ಪಕ್ಕಕ್ಕೆ ಸರಿಯಿತು.

ಆಗ ಪ್ರಭುಗಳ ಕಣ್ಣೆದುರಿಗೆ ಕೈಲಾಸದ ಧವಳಶಿಖರದಿಂದ ಭೂಮಿಗೆ ಇಳಿದು ಬಂದ ಗಂಗೆ ಗೌರಿಯರೊ ಎಂಬಂತೆ ಶೋಭಿಸಿದರು ನವವಧುಗಳು ಇಬ್ಬರೂ. ಹಿಂದೆ ನಿಂತಿದ್ದ ಐವರು ಕನ್ಯೆಯರೂ ಇವರ ಉಪಚಾರ ಕನ್ನಿಕೆಯ ರಂತೆ ಇದ್ದರು. ಶಾಂತಲೆ ಲಕ್ಷ್ಮಿಯರ ದೈವೀಸೌಂದರ್ಯವನ್ನು ಕಂಡ ಜನಗಳ ಉತ್ಸಾಹ ಕೋಲಾಹಲಗಳಂತೂ ಹೇಳತೀರದು. ಪ್ರಭುಗಳು ಈ ಇಬ್ಬರು ಮಂಗಳಗೌರಿಯರನ್ನು ಇಷ್ಟು ಸಮೀಪದಿಂದ ಹಿಂದೆ ಎಂದೂ ನೋಡಿರಲಿಲ್ಲ. ಅಂದು ಕುವರವಿಷ್ಣುವಿನ ಉಪನಯನದ ದಿನ, ಅನಂತರ ಈ ಕನ್ಯೆಯರ ವೀಣಾವಾದನ ಅರಮನೆಯಲ್ಲಿ ನಡೆದ ದಿನ ಪ್ರಭುಗಳು ಈ ಕನ್ಯೆಯರಲ್ಲಿ ನೋಡಿದ ಸೌಂದರ್ಯಕ್ಕಿಂತ ಇಂದು ಇಮ್ಮಡಿ ಹೆಚ್ಚಿದ್ದಿತು; ಅವರ ಸೌಂದರ್ಯ ಆಗ, ಆ ಹೊತ್ತಿನಲ್ಲಿ. ಮಾಚಿಕಬ್ಬೆ ಆ ಬೆಳಗ್ಗೆ ಮಕ್ಕಳನ್ನು ಮನಸಾರೆ ಶೃಂಗರಿಸಿದ ಮೇಲೆ ಅಂದುಕೊಂಡರು, 'ಈಗ ಈ ಮಕ್ಕಳು ಮುಕ್ಕಣ್ಣನ ತಪವನ್ನೂ ಭಂಗ ಮಾಡಿಯಾರು' ಎಂದು. ಈಗ ಅಂತಹ ಸೌಂದರ್ಯವತಿಯರನ್ನು ನೋಡಿ ಪ್ರಭುಗಳ ಹೃದಯ ಉಕ್ಕಿತು, ತಲೆ ತಗ್ಗಿಸಿದರು. ಮತ್ತೊಮ್ಮೆ ನೋಡುವ ಆಶೆಯಾಯಿತು ಆ ಸಂಯಮಿಗೂ. ಜನ್ಮಾಂತರಗಳ ಋಣಾನುಬಂಧದೊಂದಿಗೆ ಪ್ರಕೃತಿಯೂ ಆ ಸಮಯದಲ್ಲಿ ಸಹಕರಿಸಿತು. ಪ್ರಭುಗಳ ಮನಸ್ಸಿಗೆ ಮಾಯವೆ ಮುಸುಕಿತು. ವಿಷ್ಣುವರ್ಧನರೂ ಸ್ತ್ರೀರೂಪಕ್ಕೆ ಮರುಳಾಗಿಹೋದರು.

ಹತ್ತಿರ ನಿಂತಿದ್ದ ಮಾಚಿಕಬ್ಬೆ ಮಗಳ ಕೈಗೆ ಪುಷ್ಪಮಾಲೆಯನ್ನು ತೆಗೆದು ಕೊಟ್ಟರು. ಶಾಂತಲೆ ಅದನ್ನು ಕಣ್ಣಿಗೊತ್ತಿಕೊಂಡು, ಮುಖವೆತ್ತಿ, ಲಜ್ಜೆ ತುಂಬಿರಲು, ಸುಖದ ನಗು ಉಮ್ಮಳಿಸಲು ಹೃದಯಸ್ವಾಧೀನತೆ ಅಂಕೆ ಮೀರಿ ಲಜ್ಜೆಯಿಂದ ಸ್ವಲ್ಪವೆ ಮೇಲಕ್ಕೆತ್ತಿದ್ದ ತೋಮಾಲೆಯನ್ನು ಅಲ್ಲಿಗೇ ನಿಲ್ಲಿಸಲು, ತನ್ನ ನಿಲುವು ಆಕೆಗೆ ಎಟುಕಲಿಲ್ಲವೆಂಬ ಭಾವನೆಯಿಂದ, ಆ ಮಹಾ ಭಾಗನು ತನ್ನ ಹೃದಯೇಶ್ವರಿಗೆ ಶಿರಬಾಗಿದನು. ಶಾಂತಲೆ ಪುಷ್ಪಮಾಲೆ ಯನ್ನು ಪ್ರಭುಗಳ ಕೊರಳಿಗೆ ಮಾಲೆಮಾಡಿದಳು. ಮಾಲೆ ಹಾಕುವಾಗ್ಗೆ ಶಾಂತಲೆಯ ಕರಪಲ್ಲವಗಳು, ಪ್ರಭುವಿನ ಉತ್ತಮಾಂಗವನ್ನು ಸೋಕಿ, ಆಕೆಯ ಅಂಗಾಂಗವೆಲ್ಲವೂ ಸುಖಪುಳಕಾಂಕಿತವಾಯಿತು. ಸಭೆಯೆಲ್ಲ ಸಂತೋಷ ದಿಂದ ಕರತಾಡನಮಾಡಿತು.

ರಾಜಪುರೋಹಿತರು ನವಕುಮುದ ಮಾಲೆಯನ್ನು ಪ್ರಭುಗಳ ಕೈಗೆ

ಕೊಟ್ಟರು. ಅದನ್ನು ಪ್ರಭುಗಳು ಪ್ರೀತಿಯಿಂದ ಶಾಂತಲೆಯ ಕೊರಳಿಗೆ ಮಾಲೆ ಮಾಡಿದರು. ಸಭೆಯು ಉತ್ಸಾಹದಿಂದ ಹರ್ಷಧ್ವನಿಗೈದಿತು.

ಪಂಡಿತ ಪೆರುಮಲೆಯವರು ಅನಂತರ ಮಗಳ ಕೈಗೆ ನವಮಲ್ಲಿಕಾ ತೋಮಾಲೆಯನ್ನು ಕೊಟ್ಟರು. ಲಕ್ಷ್ಮೀದೇವಿ ಹಾರವನ್ನು ಕೈಗೆ ತೆಗೆದುಕೊಂಡು, ಕಣ್ಣಿಗೊತ್ತಿಕೊಂಡು, ಅಕ್ಕನ ಮುಖ ನೋಡಿ, ಅಪ್ಪಣೆ ಕೇಳಿ, ಹಸನ್ಮುಖ ರಾಗಿ ತಲೆಬಾಗಿ ನಿಂತಿದ್ದ ಪ್ರಭುವಿನ ಕೊರಳಿಗೆ ಹಾಕಿದಳು. ಸಭೆ ಪುನಃ ಹರ್ಷಧ್ವನಿಗೈದಿತು. ಪ್ರಭುವು ತಲೆಯೆತ್ತಿದಾಗ ಲಕ್ಷ್ಮಿಯ ಕರಪಲ್ಲವಗಳು ಪ್ರಭುಗಳ ಕಪೋಲ ಕಂಠ ಪ್ರದೇಶಗಳನ್ನು ಅಕಸ್ಮಾತ್ ಮೃದುವಾಗಿ ಸವರಿ ಇಳಿದವು. ಆಗ ಲಕ್ಷ್ಮಿಗೂ ಶಾಂತಲೆಗೆ ಆದಂತೆಯೇ ಅವರ್ಣನೀಯವಾದ ಸ್ಪರ್ಶಸುಖ ಉಂಟಾಯಿತು. ಪ್ರಭುಗಳಿಗೂ ಹಾಗೆಯೆ ಆಯಿತು ಅದು ಮೊದಲು ಆ ಮೂವರದೂ ಸಮಾನ ಅನುಕಂಪಹೃದಯಗಳಾದವು. ಪ್ರಭುಗಳು ನವವಿಕಸಿತ ನೀಲೋತ್ಪಲ ಮಾಲಿಕೆಯಿಂದ ಲಕ್ಷ್ಮಿಯ ಕಂಠ, ವಕ್ಷಪ್ರದೇಶ ಗಳನ್ನು ಅಲಂಕರಿಸಿದರು. ಆಗ ಆ ಯೌವನವತಿಯ ಅಮೃತಕಲಶಗಳನ್ನು ಹೊತ್ತಿದ್ದ ವಕ್ಷ ವಿಕಸಿಸಿತು, ತನು ರೋಮಾಂಚವಡೆದುದು.

ಅನಂತರ ಮಿಕ್ಕ ಐವರು ಕನ್ಯೆಯರೂ ಒಬ್ಬೊಬ್ಬರಾಗಿ ಪ್ರಭುಗಳಿಗೆ ಮಾಲೆಹಾಕಿದರು. ಪ್ರಭುಗಳೂ ಸಂತೋಷದಿಂದ ಮಂದಸ್ಮಿತರಾಗಿ ಅವರ ಒಬ್ಬೊಬ್ಬರ ಕೊರಳಿಗೂ ಸುಮಮಾಲೆಗಳನ್ನು ಹಾಕಿ ಗಾಂಧರ್ವ ವಿವಾಹ ರೀತ್ಯಾ ಅವರ ಒಬ್ಬೊಬ್ಬರ ಪಾಣಿಗ್ರಹಣವನ್ನೂ ಮಾಡಿ ಪತ್ನಿಯರನ್ನಾಗಿ ಮಾಡಿಕೊಂಡರು. ಜನಸ್ತೋಮವೆಲ್ಲ ಉತ್ಸಾಹದಿಂದ ಧ್ವನಿಗೈದಿತು.

ಇತ್ತ ಶಾಂತಲೆ ಲಕ್ಷ್ಮಿಯರು ನಡೆದುಬಂದು ಇದಿರು ನಿಂತು, ಪ್ರಭುಗಳ ಉತ್ತಮಾಂಗಕ್ಕೆ ಮುತ್ತಿನ ಸೇಸೆಯನ್ನಿಟ್ಟರು. ಪ್ರಭುಗಳೂ ಇಟ್ಟರು. ಹೀಗೆ ಮೂರು ಸಲ ನಡೆಯಿತು. ಸಭೆಯಾದ್ಯಂತ ಪ್ರತಿಸಲವೂ ಉತ್ಸಾಹದಿಂದ ಬೊಬ್ಬಿರಿಯಿತು. ಆಮೇಲೆ ಪ್ರಭುಗಳೂ ಕನ್ಯೆಯರೂ ಹೋಮಕುಂಡದ ಬಳಿಗೆ ಬಂದು, ಅಳವಡಿಸಿದ್ದ ಪೀಠಗಳ ಮೇಲೆ ಬಲಗಾಲೂರಿ ಕುಳಿತರು. ಪ್ರಭುಗಳ ಬಲಗಡೆ ಶಾಂತಲೆ ಲಕ್ಷ್ಮಿಯರೂ, ಇವರ ಹಿಂಭಾಗದಲ್ಲಿ ಇತರ ಕನ್ಯೆ ಯರೂ ಕುಳಿತರು. ಲಾಜಾಹೋಮಕ್ಕೆ ಎಲ್ಲವೂ ಅಣಿಯಾಯ್ತು.

ಲಾಜೆಯೆನ್ನು ಎತ್ತಿ ವಧುಗಳ ಬೊಗಸೆಗಳಿಗೆ ತುಂಬುವ ಬಾಧ್ಯತೆ

ವಧುಗಳ ಸೋದರರಿಗೆ ಮಾತ್ರ ಸೇರಿದ್ದು. ಶಾಂತಲೆಗಾಗಲಿ, ಲಕ್ಷ್ಮಿಗಾಗಲಿ ಒಡಹುಟ್ಟಿದವರು ಯಾರೂ ಇಲ್ಲದ್ದರಿಂದ, ರಾಜಮಾತೆ ಕುವರವಿಷ್ಣುವನ್ನೆ ಶಾಂತಲೆ ಲಕ್ಷ್ಮಿಯರಿಗೆ ಸಹೋದರನನ್ನಾಗಿ ಕೊಟ್ಟರು. ವಧುಗಳಿಬ್ಬರಿಗೂ ಅತ್ಯಾನಂದವಾಯಿತು. ಕುವರವಿಷ್ಣುವಿಗೆ ಆದ ಆನಂದ ಅಷ್ಟಿಷ್ಟಲ್ಲ. ಇಬ್ಬರು ಅಕ್ಕಂದಿರೂ ಈ ಹೊಸ ತಮ್ಮನನ್ನು ಎಳೆದು ತಮ್ಮಿಬ್ಬರ ನಡುವೆ ಕೂಡಿಸಿ ಕೊಂಡರು. ಶಾಂತಲೆ ಹಿತವಾಗಿ ಮಧುರವಾಗಿ ಕುವರನ ಕಿವಿಯಲ್ಲಿ 'ಸಹೋದರ' ಎಂದಳು. ಅವನೂ ನಕ್ಕು ಅಷ್ಟೇ ಮೃದುವಾಗಿ 'ಅಕ್ಕ' ಎಂದ. ಲಕ್ಷ್ಮಿ ಕುವರನ ಕೈಯಲ್ಲಿ ತನ್ನ ಕೈಯಿಟ್ಟು 'ತಮ್ಮಾ' ಎಂದಳು. ಲಕ್ಷ್ಮಿಯನ್ನು ನೋಡಿ ನಕ್ಕು ಕುವರ 'ಅಕ್ಕಾ' ಎಂದ. ಆ ಸುಮುಹೂರ್ತದಲ್ಲಿ, ಆ ಮಧುರ ಸನ್ನಿವೇಶದಲ್ಲಿ, ಅವರ ಸ್ವಯಂಕಲ್ಪಿತಬಂಧುತ್ವ ರಕ್ತಬಾಂಧವ್ಯಕ್ಕಿಂತ ಹೆಚ್ಚಾಗಿ, ಋಣಾನುಬಂಧವಾಗಿಯೆ ಏರ್ಪಟ್ಟಿತು. ವಧುಗಳಿಗೆ ಅಂದು ಪ್ರಾಣದಷ್ಟೆ ಪ್ರಿಯರಾದ ಭರ್ತ, ಭ್ರಾತೃ ಇಬ್ಬರೂ ದೊರಕಿದರು.

ಕುವರನು ಲಾಜೆಯನ್ನು ಎತ್ತಿಎತ್ತಿ ಅಕ್ಕಂದಿರ ಕೈಬೊಗಸೆಗಳಿಗೆ ತುಂಬಿದನು. ಪುರೋಹಿತರು ವಧುಗಳಿಂದ ಈ ಅರ್ಥಬರುವ ಮಂತ್ರಗಳನ್ನು ಹೇಳಿಸಿ ಅಗ್ನಿಗೆ ಲಾಜಾಹುತಿಯನ್ನು ಮೂರಾವರ್ತಿ ಮಾಡಿಸಿದರು: 'ನನ್ನ ಪತಿ ಆಯುಷ್ಮಂತನಾಗಲಿ, ಆತನಿಗೆ ಅಭ್ಯುದಯವಾಗಲಿ, ನಮ್ಮ ಜ್ಞಾತಿಗಳಿಗೆ ಅಭ್ಯುದಯವಾಗಲಿ, ನನ್ನ ಪತಿಯ ಬಂಧುಗಳೆಲ್ಲರಿಗೂ ಅಭ್ಯುದಯವಾಗಲಿ, ನನಗೂ ನನ್ನ ಪತಿಗೂ ಚೆನ್ನಾಗಿ ಹೊಂದಿಕೆಯುಂಟಾಗಲಿ. ಅಗ್ನಿಯೂ ಆತನ ಪತ್ನಿ ಸ್ವಾಹಾದೇವಿಯೂ ಇವುಗಳನ್ನು ನಡಸಿಕೊಡಲಿ' ಎಂದು.

ಅಗ್ನಿಗೆ ಯಥೇಚ್ಛ ಆಜ್ಯಾಹುತಿ ಹೋಮಗಳು ನಡೆದವು. ನವಗ್ರಹ ಜಪ, ಹೋಮ, ಶಾಂತಿ, ದಾನಗಳು ನಡೆದವು. ಶಾಂತಲೆ, ಲಕ್ಷ್ಮಿ, ಬಮ್ಮಲೆ, ರಾಜಲೆ, ಜಮ್ಮಲೆ, ಬಿಜ್ಜಲೆ, ದೇವಕಿ ಎಲ್ಲಾ ಕನ್ಯೆಯರೂ ಅರುಂಧತಿಯನ್ನು ಪೂಜಿಸಿದರು. ಮಾಂಗಲ್ಯಗಳ ಪೂಜೆಯೂ ಆಯಿತು. ಮುತ್ತೈದೆ ಸಾವಿತ್ರಿ ಪೂಜೆಗಳು ನಡೆದವು. ಪ್ರಾರ್ಥನೆಗಳನ್ನು ಸಲ್ಲಿಸಿ ಆಯಿತು. ಧಾರೋದಕ ಶೇಖರಣೆಯಾಯಿತು. ಮುತ್ತೈದೆಯರು ಮಾಂಗಲ್ಯಗಳನ್ನು ಮುಟ್ಟಿ, ಅರಿಸಿನ ಕುಂಕುಮಗಳನ್ನಿಟ್ಟು ಹರಸಿದರು.

ಎಲ್ಲ ಕನ್ಯೆಯರಿಗೂ ಪ್ರಭುಗಳು ಮಾಂಗಲ್ಯಗಳನ್ನು ಕಟ್ಟಿದರು ಮುಖ್ಯ

ವಧುಗಳಿಬ್ಬರೂ ಈಗ ಪ್ರಭುಗಳ ಎಡಪಾರ್ಶ್ವದಲ್ಲಿ ಬಂದು ಕುಳಿತರು. ಮಾಚಿಕಬ್ಬೆ ಮಾರಸಿಂಗಮಯ್ಯನವರುಗಳು ಪ್ರಭುಗಳ ಬಳಿಗೆ ಬಂದು, ಬೆಳ್ಳಿಯ ತಟ್ಟೆಯಲ್ಲಿ ಪ್ರಭುಗಳ ಕಾಲ್ಗಳನ್ನು ತೊಳೆದು, ಮಧುಪರ್ಕವಿತ್ತು ಸತ್ಕರಿಸಿ, ಶಾಂತಲೆಯ ಕೈಗೆ ನಾರಿಕೇಳ ಫಲವನ್ನಿತ್ತು, ಆ ಫಲವನ್ನು ಹೊತ್ತಿದ್ದ ಕೈಗಳನ್ನು ಪ್ರಭುಗಳ ಕೈಗಳಿಗೆ ಒಪ್ಪಿಸಿಕೊಟ್ಟು, ಕೆಳಗೆ ರಜತ ಹರಿವಾಣವನ್ನಿಟ್ಟು ಧಾರೋದಕದಿಂದ ಯಥಾವಿಧಿಯಾಗಿ ಧಾರೆಯೆರೆದು ತಮ್ಮ ಸರ್ವಸ್ವವಾದ ಶಾಂತಲೆಯನ್ನು ಆ ಮಹಾಭಾಗನಿಗೆ ಇತ್ತರು.

ಅನಂತರ ಪಂಡಿತರು ಲಕ್ಷ್ಮಿಯ ಕೈಗೆ ಪೂರ್ಣಫಲವಿತ್ತು, ಫಲ ಹೊತ್ತ ಕೈಗಳನ್ನು ಪ್ರಭುಗಳ ಕೈಗಳಿಗೆ ಒಪ್ಪಿಸಿಕೊಟ್ಟು, ಅಧಿಕ ಸಂತೋಷದಿಂದ ತಮ್ಮ ಹೃದಯಮಣಿಯಂತಿದ್ದ ಮಗಳನ್ನು ಪ್ರಭುಗಳಿಗೆ ಧಾರೆಯೆರೆದು ಕೊಟ್ಟರು. ಆಗ ಮಾಚಿಕಬ್ಬೆಯ ಹೃದಯ ಬರಿದಾಗಿ, ಆ ತಾಯಿಯ ಕಣ್ಣುಗಳಲ್ಲಿ ಅಶ್ರು ಧಾರೆಧಾರೆಯಾಯಿತು.

ಪುರೋಹಿತರು ಉಚ್ಚರಿಸಿದ ಮಂತ್ರವನ್ನು ಪ್ರಭುಗಳು ನಿಧಾನವಾಗಿ ಅರ್ಥವಾಗುವಂತೆ ಹೇಳಿದರು: 'ಸತ್ಸಂತಾನವನ್ನು ಪಡೆಯುವುದಕ್ಕಾಗಿ ನಿನ್ನ ಪತಿಯಾದ ನನ್ನೊಡನೆ ನೀನು ಶಾಶ್ವತವಾಗಿರಬೇಕೆಂದು ನಾನು ನಿನ್ನ ಕೈಹಿಡಿಯುತ್ತಿದ್ದೇನೆ. ಭಗ, ಅರ್ಯಮ, ಸವಿತಾ, ಪುರಂಧಿ ಈ ನಾಲ್ವರು ದೇವತೆಗಳೂ ನಿನ್ನನ್ನು ನನಗೆ ಕೊಟ್ಟಿರುತ್ತಾರೆ. ವೀರರೂ ದೇವಪಿತೃಗಳಲ್ಲಿ ಭಕ್ತಿಯುಳ್ಳವರೂ ಆದ ಮಕ್ಕಳನ್ನು ಹೆತ್ತು, ನಮಗೆ ಶುಭವನ್ನೂ ಸಂತೋಷವನ್ನೂ ಉಂಟುಮಾಡುವವಳಾಗು' ಎಂದು.

ಅನಂತರ ಪ್ರಭುಗಳು ಶಾಂತಲೆ ಲಕ್ಷ್ಮಿಯರನ್ನು ಅರೆಕಲ್ಲಿನ ಮೇಲೆ ನಿಲ್ಲಿಸಿ, ಈ ಅರ್ಥಕೊಡುವ ಮಂತ್ರಗಳನ್ನು ಉಚ್ಚರಿಸಿದರು: 'ಈ ಕಲ್ಲಿನ ಮೇಲೇರಿ ಕಲ್ಲಿನಂತೆಯೆ ಸ್ಥಿರವಾಗಿ ನಿಲ್ಲಿರಿ. ಜೀವನದಲ್ಲಿ ಎಷ್ಟೆ ಕಷ್ಟಗಳು, ಎಷ್ಟೆ ತೊಡರುಗಳು ಬರಲಿ, ನೀವು ಈ ಕಲ್ಲಿನಂತೆ, ಕದಲದೆ, ಧೃತಿಗೆಡದೆ ನಿಲ್ಲಿರಿ' ಎಂದರು. ಇದಾದನಂತರ ನಡೆದುದು ಸಪ್ತಪದಿ. ಪ್ರಭುಗಳು ಮಡದಿಯರೀರ್ವರ ಕೈಹಿಡಿದು ಒಟ್ಟಿಗೆ ಏಳು ಹೆಜ್ಜೆಗಳನ್ನು ನಡೆದರು. 'ಆಹಾರ ಶೇಖರಣೆ ಮಾಡುವೆವೆಂದು ಮೊದಲನೆಯ ಹೆಜ್ಜೆ. ಯಾವಾಗಲೂ ಶರೀರಾರೋಗ್ಯವನ್ನು ಕಾಪಾಡಿಕೊಳ್ಳುವೆವೆಂದು ಎರಡನೆಯ ಹೆಜ್ಜೆಗೆ ಪ್ರಮಾಣ. ಐಶ್ವರ್ಯಾಭಿವೃದ್ಧಿ

ಮಾಡಿಕೊಳ್ಳುವೆವೆಂದು ಮೂರನೆಯ ಹೆಜ್ಜೆಗೆ ಪ್ರಮಾಣ. ಪರಸ್ಪರ ಮಮತೆಗಳ ಪೋಷಣೆಗೆ, ಅಭಿವೃದ್ಧಿಗೆ ಸದಾ ಶ್ರಮಿಸುವೆವೆಂದು ನಾಲ್ಕನೆಯ ಹೆಜ್ಜೆಗೆ ಪ್ರಮಾಣ. ಸಂತತಿ ಅಭಿವೃದ್ಧಿಪಾಲನೆಗಳಿಗೆ ಐದನೆಯ ಹೆಜ್ಜೆ ಪ್ರಮಾಣ. ಇದಕ್ಕೆ ಅನುಕೂಲವಾದ ಋತುಕಾಲ ನಿಯಮಗಳನ್ನು ಅನುಸರಿಸುವುದಾಗಿ ಆರನೆಯ ಹೆಜ್ಜೆ ಪ್ರಮಾಣ. ಚಿರ ಸ್ನೇಹಸೌಹಾರ್ದಗಳಿಗಾಗಿ ಏಳನೆಯ ಹೆಜ್ಜೆ ಪ್ರಮಾಣ. ಈ ಏಳು ಹೆಜ್ಜೆಗಳನ್ನು ನಮ್ಮೊಡನೆ ನಡೆದು ನೀವು ನಮಗೆ ಸಖಿಯರಾದಿರಿ. ಒಮ್ಮನಸ್ಸಿನಿಂದಿರೋಣ, ಒಂದಾಗಿ ಸಂಕಲ್ಪಿಸೋಣ, ಒಬ್ಬರ ಹಿತವನ್ನೊಬ್ಬರು ಬಯಸೋಣ, ಸುಖದುಃಖಗಳಲ್ಲಿ ಸಮನಾಗಿ ಪಾಲು ಗೊಳ್ಳೋಣ, ಮನಸ್ಸುಗಳನ್ನು ಒಂದುಗೂಡಿಸಿ ಒಬ್ಬರನ್ನೊಬ್ಬರು ಚೆನ್ನಾಗಿ ಅರಿತು ಬದುಕೋಣ' ಎಂದು ಅರ್ಥಬರುವ ಮಂತ್ರಗಳನ್ನು ಹೇಳುತ್ತ ಅಗ್ನಿ ಸಾಕ್ಷಿಯಾಗಿ, ಸದಸ್ಸು ಸಾಕ್ಷಿಯಾಗಿ ಸಪ್ತಪದಿಯನ್ನು ಮುಗಿಸಿದರು.

ಪ್ರಭುಗಳು ಒಂದೊಂದು ಹೆಜ್ಜೆಗೂ ನಿಂತು ಪ್ರಮಾಣವಚನವನ್ನು ಹೇಳಿ 'ಇದರಲ್ಲಿ ನೀವು ನನ್ನನ್ನು ಅನುವರ್ತಿಸಿ' ಎನ್ನುತ್ತ ನಡೆದರು. 'ಅನುವರ್ತಿಸು ತ್ತೇವೆ, ಸಹಕರಿಸುತ್ತೇವೆ' ಎನ್ನುತ್ತ ವಧುಗಳಿಬ್ಬರೂ ಹೆಜ್ಜೆಹೆಜ್ಜೆಗೂ ನಿಂತು ಅಗ್ನಿ, ಸದಸ್ಸುಗಳ ಎದುರಿಗೆ ಪ್ರಮಾಣವಚನವನ್ನಿತ್ತರು.

ಸಪ್ತಪದಿಯಾದಮೇಲೆ, ಪ್ರಭುಗಳೂ ಶಾಂತಲೆಯೂ ಸಿಂಹಾಸನವನ್ನು ಬಲವಂದು, ಪೂಜಿಸಿ, ನಮಸ್ಕರಿಸಿ, ಸಿಂಹಾಸನವನ್ನೇರಿದರು. ಪ್ರಭುಗಳು ಕೈನೀಡಿ ಶಾಂತಲೆಯನ್ನು ಸಿಂಹಾಸನದ ಮೇಲಕ್ಕೆ ಕರೆದುಕೊಂಡು ತಮ್ಮ ವಾಮಪಾರ್ಶ್ವದಲ್ಲಿ ಕೂಡಿಸಿಕೊಂಡರು. ಪಂಚ ಮಹಾ ವಾದ್ಯಗಳು ಭೋರ್ಗರೆ ಯುತ್ತಿರಲು, ಸಭೆಯೆಲ್ಲ ಹರ್ಷದಿಂದ 'ಜಯವಾಗಲಿ, ಮಹಾರಾಣಿ ಶಾಂತಲಾ ದೇವಿಯರಿಗೆ ಜಯವಾಗಲಿ' ಎಂದು ಘೋಷಿಸುತ್ತಿರಲು, ಪ್ರಭುಗಳು ರತ್ನ ಖಚಿತವಾದ ಸುವರ್ಣಪಟ್ಟವನ್ನು ಶಾಂತಲೆಯ ಶುಭ್ರಕೋಮಲಲಲಾಟಕ್ಕೆ ಕಟ್ಟಿದರು. ರಾಜಪುರೋಹಿತರು, ಮಹಾಬ್ರಾಹ್ಮಣರು ಮಹಾನದಿಗಳ ಪುಣ್ಯೋ ದಕಗಳನ್ನು ಸುವರ್ಣಕುಂಭಗಳಲ್ಲಿ ತುಂಬಿ ತುಂಬಿ ಪ್ರಭುಗಳಿಗೆ ಶಾಂತಲದೇವಿಗೆ ಮಂತ್ರಪೂರ್ವಕವಾಗಿ ಅಭಿಷೇಕ ಮಾಡಿದರು. ಅನಂತರ ಪ್ರಭುಗಳೂ ಶಾಂತಲ ದೇವಿಯರೂ ಸಿಂಹಾಸನದಿಂದ ಇಳಿದರು. ಮಾಚಿಕಬ್ಬೆ, ಲಕ್ಷ್ಮಿ ಇಬ್ಬರೂ ಬಂದು ಶಾಂತಲೆಯ ಇಕ್ಕಡೆಗಳಲ್ಲೂ ಕೈಹಿಡಿದುಕೊಂಡು, ತೊಯ್ದ ಬಟ್ಟೆಗಳನ್ನು

ತೆಗೆಯಿಸಿ ನವವಸ್ತ್ರಧಾರಣೆ ಮಾಡಿಸಲು ಒಳಕ್ಕೆ ಕರೆದುಕೊಂಡು ಹೋದರು. ಪ್ರಭುಗಳೂ ಉಡುಗೆಯನ್ನು ಬದಲಾಯಿಸಲು ಹೋದರು.

ಶಾಂತಲದೇವಿಯೂ ಪ್ರಭುಗಳೂ ಹೊಸಬಟ್ಟೆಗಳನ್ನು ಧರಿಸಿಬಂದರು. ಬಳಿಕ ಶೇಷಹೋಮ, ಮಹಾಶೀರ್ವಾದಗಳು ನಡೆದವು.

ಗೌರಮ್ಮನವರೂ, ಇನ್ನೊಬ್ಬ ಕಟ್ಟಳೆ ಮುತ್ತೈದೆಯೂ, ಚಿನ್ನದ ಹರಿವಾಣದಲ್ಲಿ ಯಜ್ಞೇಶ್ವರನಿಗೂ ಪ್ರಭುಗಳಿಗೂ ಎಲ್ಲ ರಾಣಿಯರಿಗೂ ಆರತಿಯೆತ್ತಿ ಸೇಸೆಯನ್ನಿಟ್ಟರು. ಪ್ರಭುಗಳು ಇಂದು ತಲೆಯನ್ನು ಬಗ್ಗಿಸಿರಲಿಲ್ಲ. ಮುತ್ತೈದೆ ತಾಯಿಯನ್ನು ನೋಡಿ ಸುಮ್ಮಾನದಿಂದ ನಸುನಕ್ಕರು. ಗೌರವ್ವೆಯವರೂ ನಕ್ಕು 'ಒಳ್ಳೆಯ ಮಕ್ಕಳು ನೀವು, ನೀವೆಲ್ಲ ನೂರುವರ್ಷ ಕಾಲ ಚೆನ್ನಾಗಿ ಬದುಕಿರಿ' ಎಂದು ಹರಸಿ ಸೇಸೆಯನ್ನಿಟ್ಟರು. ಸಭೆಯವರೆಲ್ಲ ಉತ್ಸವದಂಪತಿಗಳ ಮೇಲೆ ಮಂಗಳಾಕ್ಷತೆಗಳ ಮಳೆಗರೆದರು.

ಸಭೆಯಲ್ಲಿದ್ದ ರಾಜ, ಮಹಾರಾಜ, ಸಾಮಂತ, ಶ್ರೀಮಂತಾದಿಗಳು ತಮ್ಮ ಪತ್ನಿಯರೊಡನೆ ಒಬ್ಬೊಬ್ಬರಾಗಿ ವೇದಿಕೆಯ ಮೇಲಕ್ಕೆ ಬಂದು ರಾಜದಂಪತಿಗಳಿಗೆ ಶುಭವನ್ನು ಕೋರಿ, ತಮ್ಮ ತೃಪ್ತಿಸಂತೋಷಗಳನ್ನು ಸೂಚಿಸಲು ರಾಜದಂಪತಿಗಳಿಗೆ ಅನರ್ಘಗಳಾದ ರತ್ನಾಭರಣಗಳನ್ನೂ ಶ್ರೇಷ್ಠ ದುಕೂಲಗಳನ್ನೂ ಒಪ್ಪಿಸಿದರು. ದೂರ ದೂರ ದೇಶಗಳ ಅರಸರುಗಳು ಅಪೂರ್ವವಾದಂಥ ವಸ್ತುಗಳನ್ನು ತಮ್ಮ ಸಂತೋಷಾರ್ಥವಾಗಿ ಕೊಟ್ಟುಕಳಿಸಿದ್ದರು. ಕಾಮರೂಪದ ಅರಸನು ವಿಂಧ್ಯಗಿರಿಗಳಂತಿದ್ದ ಐದು ದಂತಿಗಳನ್ನು ಕಳಿಸಿದ್ದನು. ಕಾಂಭೋಜದ ಅರಸನು ಉತ್ತಮ ಲಕ್ಷಣಗಳುಳ್ಳ, ವೇಗಶಾಲಿಗಳೂ ಶ್ರಮಸಹಿಷ್ಣುಗಳೂ ಆದ ಹತ್ತು ಅಶ್ವಗಳನ್ನು ಕಳಿಸಿದ್ದನು. ಸೈಂಧವ ಅರಸನು ಕಾಮಧೇನುಗಳಂತಿದ್ದ, ಚೆನ್ನಾಗಿ ಹಾಲುಕೊಡುವ ಒಂದುನೂರು ಕವಿಲೆಗಳನ್ನು ಕಳಿಸಿದ್ದನು. ಲಂಕಾಧಿಪನು ಅನರ್ಘರತ್ನಹಾರಗಳನ್ನು ಕಳಿಸಿದ್ದನು.

ಇವುಗಳೆಲ್ಲವನ್ನೂ ಸ್ವೀಕರಿಸಿದ ಪ್ರಭುಗಳು, ಈ ರಾಜಾಧಿರಾಜರುಗಳಿಗೆ, ಬಂದಿದ್ದವರು ತಮ್ಮ ಊರುಗಳಿಗೆ ಹಿಂದಿರುಗಿದಾಗ, ಒಂದಕ್ಕೆ ಎರಡರಷ್ಟು ಮರ್ಯಾದೆ ಉಡುಗೊರೆಗಳನ್ನು ಕೊಟ್ಟುಕಳಿಸಿದರು. ದೂರ ದೇಶಗಳ ರಾಜರುಗಳಿಗೆ ಸಮಯ ಒದಗಿದಾಗ ಸರಿಸಮನಾದ ಅಥವಾ ಹೆಚ್ಚಾದ ಮರ್ಯಾದೆಗಳನ್ನು ಕಳಿಸಿಕೊಟ್ಟರು.

ಕಲ್ಯಾಣಕ್ಕೆ ಬಂದಿದ್ದವರಿಗೆಲ್ಲ ಫಲಪುಷ್ಪಗಳ ವಿನಿಯೋಗವಾಯಿತು. ರಾಜವರ್ಗದವರಿಗೂ ಅತಿಥಿಗಳಿಗೂ ಇತರ ವರ್ಗದವರಿಗೂ ಅವರವರ ಅಂತಸ್ತಿಗೆ ತಕ್ಕಂತೆ ಊಟ ಉಪಚಾರಗಳು ನಡೆದವು. ವಸ್ತ್ರದಾನ, ಭೂದಾನ, ಗೋದಾನ, ಹಿರಣ್ಯದಾನ, ಮುಂತಾದವುಗಳು ಯಥೇಚ್ಛವಾಗಿ ನಡೆದವು. ಬಡಬಗ್ಗರಿಗೂ, ದೀನರಿಗೂ, ಅಂಗವಿಕಲರಿಗೂ, ಎಲ್ಲರಿಗೂ ಅನ್ನದಾನ ವಸ್ತ್ರದಾನ ತೃಪ್ತಿಯಾಗುವಷ್ಟು ನಡೆಯಿತು.

ಆ ರಾತ್ರಿ ಪ್ರಭುಗಳೂ ಶಾಂತಲೆ ಲಕ್ಷ್ಮಿಯರೂ ಆನೆಯ ಮೇಲೆ ಬೆಳ್ಳಿಯ ಅಂಬಾರಿಯಲ್ಲಿ ಕುಳಿತು ಸಮಸ್ತ ವೈಭವದೊಡನೆ ರಾಜಧಾನಿಯ ವೀಧಿಗಳಲ್ಲಿ ಉತ್ಸವ ಬಂದರು. ಎರಡು ಮೂರು ದಿನಗಳು ಕಲ್ಯಾಣಮಂಟಪದಲ್ಲಿ ಪ್ರಭುಗಳ ಮತ್ತು ರಾಣಿಯರ ಮುಂದೆ ವಿದ್ವದ್‌ಗೋಷ್ಠಿ, ಕವಿತಾಗೋಷ್ಠಿ, ಗಾಯನ, ನರ್ತನ, ಮಲ್ಲಯುದ್ಧ, ಶಸ್ತ್ರಾಸ್ತ್ರಸಾಮರ್ಥ್ಯ ಪ್ರಕಾಶನ, ವಿವಿಧಕಲಾ ಪ್ರದರ್ಶನಗಳು ನಡೆದವು. ಅವರವರ ಯೋಗ್ಯತೆಗಳಿಗೆ ತಕ್ಕಂತೆ ಪ್ರಭುಗಳು ಬಹುಮಾನಗಳನ್ನು ಕೊಟ್ಟರು.

# ಎರಡನೆಯ ಭಾಗ

§

ದೇಶದೇಶಗಳಿಂದ ಮದುವೆಗೆ ಬಂದಿದ್ದ ರಾಜ ಮಹಾರಾಜರುಗಳೂ ಸಾಮಂತರೂ ವಿದ್ವಾಂಸರೂ ಕಲಾವಿದರೂ ವ್ಯಾಪಾರಿಗಳೂ ಸಂತುಷ್ಟಿಯಿಂದ ತಮ್ಮ ತಮ್ಮ ದೇಶಗಳಿಗೆ ಹಿಂದಿರುಗಿದರು. ಕೆಲವರು ಹೊಯಿಸಳ ರಾಜರ ರೀತಿ, ನೀತಿ, ಸರ್ವಮತಸಮಾನಗೌರವ, ನ್ಯಾಯ, ಧರ್ಮ, ಇವುಗಳನ್ನು ಕಂಡು ರಾಜಧಾನಿಯಲ್ಲೆ ನೆಲಸಿದರು. ಹೀಗೆ ನೆಲಸಿದವರಲ್ಲಿ ಮಾರಸಿಂಗ ಮಯ್ಯನ ಸೋದರಳಿಯ ಕೇತಮಲ್ಲನಾಯಕನೂ ಒಬ್ಬ. 'ನಾಯಕ'ನೆಂಬ ಬಿರುದು ಕೆಲಕಾಲಾನಂತರ ಬಂದುದು. ಈ ಕೇತಮಲ್ಲ ತಲವನಪುರದ ನಿವಾಸಿ. ಆಗ ತಲವನಪುರವನ್ನು ರಾಷ್ಟ್ರಕೂಟ ಗಂಗರಸರ ಒಬ್ಬ ಸಾಮಂತ ಆಳುತ್ತಿದ್ದ. ರಾಷ್ಟ್ರಕೂಟರು ಆಗ ಚೋಳರ ಸಾಮಂತರಾಗಿದ್ದರು. ಅಂದ ಮೇಲೆ ಈ ಗಂಗರೂ ಚೋಳರ ಅಧೀನರೇ ಆಗಿದ್ದರು.

ಕೇತಮಲ್ಲ ದೊಡ್ಡ ವ್ಯಾಪಾರಿ. ಕಾಂಭೋಜ ದೇಶದಿಂದ ಕುದುರೆ ಗಳನ್ನು ತರಿಸಿ, ಆ ದೇಶಗಳಲ್ಲಿ ಮಾರಿ ಬಹಳ ಹಣ ಸಂಪಾದಿಸಿದ್ದ. ಸಮುದ್ರ ದಾಚೆಯ ಇತರ ದೇಶಗಳಲ್ಲಿಯೂ ವ್ಯಾಪಾರ ಸಂಪರ್ಕವನ್ನಿಟ್ಟುಕೊಂಡಿದ್ದ. ಆಗಿನ ಕಾಲದಲ್ಲಿ ಹಲವು ಬ್ರಾಹ್ಮಣರೂ ಸಮುದ್ರದಾಚೆಯ ದೇಶಗಳಲ್ಲಿ ವ್ಯಾಪಾರ ನಡುಸುತ್ತಿದ್ದರು. ಕೇತಮಲ್ಲನ ಐಶ್ವರ್ಯವನ್ನು ಕಂಡು ತಲಕಾಡಿನ ಅರಸನು ಕರುಬುಳ್ಳವನಾದ. ಮಿತಿಮೀರಿದ ರಾಜಾದಾಯವನ್ನು ಅನ್ಯಾಯ ವಾಗಿ ಕೇತಮಲ್ಲನ ಮೇಲೆ ವಿಧಿಸಿ, ಅವನ ಹಣದ ಬಹುಭಾಗವನ್ನು ಅಪಹರಿ ಸಿದ್ದನು. ಇಷ್ಟಲ್ಲದೆ, ಕೇತಮಲ್ಲ ಸಮುದ್ರದ ಮೇಲೆ ತರಿಸುತ್ತಿದ್ದ ಕುದುರೆ, ಒಂಟೆ, ಖರ್ಜೂರ ಇವುಗಳ ಮೇಲೆಯೂ ಹೇರಳವಾಗಿ ಸುಂಕ ವಿಧಿಸಿದನು. ಇನ್ನೂ ನಾನಾ ಬಗೆಯ ಕಿರುಕುಳಗಳನ್ನು ಕೊಟ್ಟನು. ಇವುಗಳನ್ನೆಲ್ಲ ಸಹಿಸಿ ಕೊಳ್ಳಲು ಕೇತಮಲ್ಲನಿಗೆ ಸಾಧ್ಯವಿಲ್ಲವಾಯಿತು. ಆದರೆ ಯಾರಿಗೆ ಹೇಳಿ ಕೊಳ್ಳುವುದು ? ಆ ಊರನ್ನೇ ಬಿಡುವುದೆಂದು ಕೇತಮಲ್ಲ ಒಮ್ಮೆ ಯೋಚಿಸಿದ್ದ.

ಅವನು, ಅವನ ಹೆಂಡತಿ ಜಕ್ಕಿಯಬ್ಬೆ, ಒಬ್ಬ ಮಗಳು ಚಂದಲೆ, ಈ ಮೂವರೆ ಅವನ ಸಂಸಾರವೆಲ್ಲ.

ಮಾಚಿಕಬ್ಬೆ ಇವರ ಮಗು ಚಂದಲೆಯನ್ನು ನೋಡಿದೊಡನೆಯೆ, ತನ್ನ ಶಾಂತಲೆಯೂ ಆ ವಯಸ್ಸಿನಲ್ಲಿ ಹಾಗೆಯೆ ಇದ್ದಳೆಂದುಕೊಂಡರು. ಮೇಲಾಗಿ ಕೇತಮಲ್ಲನೂ ತನ್ನ ಪತಿಯ ಬಂಧುವೆ ಅಲ್ಲವೆ! ಮಾಚಿಕಬ್ಬೆ ಕೇತಮಲ್ಲನಿಗೂ ಜಕ್ಕಿಯಬ್ಬೆಗೂ ಹೇಳಿದರು: 'ಆ ಅರಸರು ನಿಮಗೆ ಅಷ್ಟೊಂದು ತೊಂದರೆ ಗಳನ್ನು ಕೊಡುತ್ತಿರುವಾಗ ನೀವು ಇನ್ನು ಆ ರಾಜ್ಯದಲ್ಲಿರುವುದು ಕ್ಷೇಮವಲ್ಲ. ಚಿಕ್ಕಂದಿನಲ್ಲಿಯೇ ಬಳಗವನ್ನು ಬಿಟ್ಟು ದೂರದೇಶಕ್ಕೆ ಹೋಗಿ ನೆಲಸಿದಿರಿ. ಬಹುಶ್ರಮದಿಂದ ಶ್ರೀಯನ್ನೂ ಶ್ರೇಯಸ್ಸನ್ನೂ ಸಂಪಾದಿಸಿದಿರಿ. ನಿಮಗಿರುವುದು ಇದೊಂದು ಹೆಣ್ಣುಮಗು. ಇನ್ನು ನಮ್ಮ ನಾಡಿನಲ್ಲಿ ನೆಲಸಿರಿ. ಪ್ರಭುಗಳು ಒಳ್ಳೆಯವರು. ನಮ್ಮ ಅಳಿಯಂದಿರೆಂದು ಹೊಗಳಿಕೆಯ ಮಾತಲ್ಲ. ಇಲ್ಲಿಯೆ ಮನೆಮಾಡಿ ನಿಮ್ಮ ವ್ಯಾಪಾರಗಳನ್ನು ನಡಸಿರಿ. ಸಾಧ್ಯವಾದ ಯಾವ ಸಹಾಯವನ್ನು ಬೇಕಾದರೂ ಪ್ರಭುಗಳು ಸಂತೋಷದಿಂದ ಮಾಡುವರು. ನಿಮ್ಮ ವಿಚಾರವೆಲ್ಲವನ್ನೂ ಗಂಗರಾಜರೂ ರಾಜಮಾತೆಯವರೂ ಬಲ್ಲರು. ನಿಮ್ಮದೇ ಬಿಡಾರವಾಗುವತನಕ ನಮ್ಮೊಡನೆಯೆ ಇರತಕ್ಕದು' ಎಂದು ಬಲಾತ್ಕಾರಪಡಿಸಿ ಅವರನ್ನು ತಮ್ಮಲ್ಲಿಯೆ ನಿಲ್ಲಿಸಿಕೊಂಡರು.

ಶಾಂತಲೆಯನ್ನೆ ಹೋಲುತ್ತಿದ್ದ ಅವರ ಮಗು ಚಂದಲೆಯನ್ನು ಮಾಚಿಕಬ್ಬೆ ಪ್ರೀತಿಯಿಂದ 'ಶಾಂತಲೆ' ಎಂದೇ ಕರೆದರು. 'ನಮ್ಮ ಮಗು ಶಾಂತಲೆ ಅರಮನೆಯನ್ನು ಸೇರಿದಳು, ಲಕ್ಷ್ಮಿಯೂ ಸೇರಿದಳು. ನಮ್ಮ ಮನೆ ಬರಿದಾಗಬಾರದೆಂದು ದೇವರು ಈ ಮಗುವನ್ನು ನಮಗೆ ಕೊಟ್ಟುಕಳುಹಿಸಿದ' ಎಂದು ಮಾಚಿಕಬ್ಬೆ ತನ್ನ ಪತಿಯೊಡನೆ ಅಂದರು. ಆ ತಾಯಿಹೃದಯಕ್ಕೆ ಒಂದು ಮಗುವಾದರೂ ಯಾವಾಗಲೂ ಬೇಕಿತ್ತು. ಚಂದಲೆಯನ್ನು ಕಂಡು—ಮಾಚಿಕಬ್ಬೆಯ ಮನಸ್ಸಿಗೆ ಒಂದು ವಿಧವಾಗಿ ತೃಪ್ತಿಯಾಯಿತು.

ತಲವನಪುರದ ಅರಸನ ಕಿರುಕುಳ, ದುರ್ನಡತೆಗಳಿಗೆ ಕೋಪಗೊಂಡು, ಆ ಕೋಪವನ್ನು ತನ್ನೆದೆಯಲ್ಲಿ ಮೊಳೆಯಗೊಟ್ಟು, ಅದರ ವೃದ್ಧಿಗೆ ನೀರೆರೆಯುತ್ತಿದ್ದ ಕೇತಮಲ್ಲನಿಗೆ, ಹೊಯಿಸಳೇಶ್ವರರ ಆಶ್ರಯ ರಕ್ಷಣೆಗಳು ಆಗ ಅಗತ್ಯವೆ ಆದುವು. ಹಾಗೂ ಆ ಊರಿನಲ್ಲಿಯೆ ನೆಲಸುವುದಕ್ಕೆ ಮಾಚಿಕಬ್ಬೆ, ಮಾವ

ಮಾರಸಿಂಗಮಯ್ಯನವರ ಒತ್ತಾಯವೂ ಬಲವಾಯಿತು. ಜೊತೆಗೆ ಎಲ್ಲರ ಮನೋಭಿಪ್ರಾಯಕ್ಕೆ ಜಕ್ಕಿಯಬ್ಬೆಯೂ ಸಮ್ಮತಿಮುದ್ರೆಯನ್ನೊತ್ತಿಬಿಟ್ಟರು. ಕೇತಮಲ್ಲ ಅಂದಿನಿಂದ ದ್ವಾರವತಿಯನ್ನೇ ಮನೆಯಾಗಿ ಮಾಡಿಕೊಂಡ. ಕ್ರಮ ದಿಂದ ಉಪಾಯದಿಂದ ತಲವನಪುರದ ತನ್ನ ಐಶ್ವರ್ಯವನ್ನೆಲ್ಲ ಮೆಲ್ಲಮೆಲ್ಲಗೆ ದ್ವಾರವತಿಗೆ ತಂದು ಶೇಖರಿಸಿಕೊಂಡನು. ಇದನ್ನು ಕೇಳಿ ವಿಷ್ಣುವರ್ಧನರಿಗೆ ಸಂತೋಷವಾಯಿತು. ಕೇತಮಲ್ಲನನ್ನು ಮರ್ಯಾದೆಯೊಡನೆ ಅರಮನೆಗೆ ಬರ ಮಾಡಿಕೊಂಡು, ಅವನ ಸಮಸ್ತ ಚರಿತ್ರೆಯನ್ನೂ ತಲವನಪುರದ ಅರಸನ ನಡವಳಿಯನ್ನೂ ವಿಚಾರಿಸಿ ತಿಳಿದುಕೊಂಡರು.

ಕೇತಮಲ್ಲನಿಗೆ ಹೊಯಿಸಳೇಶ್ವರರು ಆಶ್ರಯಕೊಟ್ಟರೆಂದು ಕೇಳಿ ತಲವನ ಪುರದ ಅರಸನಿಗೆ ತಲೆ ಬೆಚ್ಚಗೆ ಆಯಿತು. ತನ್ನ ಸಮಸ್ತ ಐಶ್ವರ್ಯವನ್ನೂ ಕೇತಮಲ್ಲ ಉಪಾಯದಿಂದ ದ್ವಾರವತಿಗೆ ಸಾಗಿಸಿದನೆಂಬ ಮಾತನ್ನು ಕೇಳಿದ ಮೇಲಂತೂ ಅವನ ತಲೆ ಕೆಟ್ಟೇಹೋಯಿತು. ಕೇತಮಲ್ಲನ ಸಾಮಾನು ಸರಂಜಾಮುಗಳು, ಎತ್ತುಗಳು, ಹಸುಗಳು, ರಥಗಳು, ಆನೆಗಳು, ಬಹು ಸಂಖ್ಯೆಯ ಉತ್ತಮಾಶ್ವಗಳು, ಧನ ಕನಕ ರತ್ನ ವಸ್ತ್ರಭೂಷಣಾದಿಗಳನ್ನು ರಾಜಮಾರ್ಗದ ಸುಂಕದ ಅಧಿಕಾರಿಗಳು ಲಂಚತಿಂದೇ ದಾರಿಬಿಟ್ಟು ಕೊಟ್ಟರೆಂದು ಬಗೆದು ಆ ಅಧಿಕಾರಿಗಳನ್ನೆಲ್ಲ ಹಿಡಿತರಿಸಿ ಸೆರೆಯಲ್ಲಿ ಹಾಕಿಸಿದನು.

ಹೊಯಿಸಳೇಶ್ವರರ ವಿವಾಹಕ್ಕೆ ಆಹ್ವಾನಿತರಾಗಿಯೂ, ಅಸೂಯಾಪರ ರಾಗಿ ಬಾರದೆ ನಿಂತವರಲ್ಲಿ ಈ ತಲವನಪುರದರಸನೂ ಒಬ್ಬ. ಪಕ್ಕದ ರಾಜ್ಯ ತನ್ನ ಕೈಗಳನ್ನು ಪೂರ್ವಪಶ್ಚಿಮ ಸಮುದ್ರಗಳ ಎಲ್ಲೆಗೆ ಚಾಚುತ್ತಿರುವುದನ್ನು ಕಂಡು, ಅವನಿಗೆ ತಡೆಯಲಾಗದಷ್ಟು ಕರುಬು ಉಂಟಾಯಿತು.

ಹೊಯಿಸಳೇಶ್ವರರಿಗೂ ತಲವನಪುರದವನ ಮೇಲೆ ಅನುಮಾನವಿದ್ದೇ ಇದ್ದಿತು. ಕೇತಮಲ್ಲನ ಮಾತುಗಳಿಂದ ಅದು ಇನ್ನಷ್ಟು ದೃಢಪಟ್ಟಿತು.

ದ್ವಾರವತಿಯಲ್ಲಿ ಹೀಗೆ ನೆಲಸಿದ ಶ್ರೀಮಂತರಲ್ಲಿ ಇನ್ನೊಬ್ಬಾತ: ಶ್ರೀಮಂತ ಭಕ್ತ ಕುಲ್ಲಣರಾಹುತ. ಕುಲ್ಲಣರಾಹುತನ ತಂದೆ ಚವುಂಡಶೆಟ್ಟಿ, ತಾಯಿ ಕಾಂಚಿಯಕ್ಕ. ಕುಲ್ಲಣರಾಹುತನ ಹೆಂಡತಿ ಸಹಜದೇವಿ. ಈ ದಂಪತಿ ಗಳಿಗೆ ಮಕ್ಕಳಿರಲಿಲ್ಲ. ವಂಶವೃತ್ತಿಯಾಗಿ ಬಂದ ವ್ಯಾಪಾರವನ್ನು ಸ್ವಂತ ಉದ್ಯಮಗಳಿಂದ ಉನ್ನತವಾಗಿ ಬೆಳಸಿ ಅಧಿಕ ಧನಸಂಗ್ರಹಮಾಡಿದ್ದ ಈ

ಕುಲ್ಲಣರಾಹುತ. ಮಕ್ಕಳು ಆಗಲಿಲ್ಲವೆಂದು ಈ ದಂಪತಿಗಳು ತೀರ್ಥಯಾತ್ರೆ ಕೈಗೊಂಡು, ಭರತಖಂಡದ ಎಲ್ಲ ಪುಣ್ಯಕ್ಷೇತ್ರಗಳ ದರ್ಶನ, ಕ್ಷೇತ್ರದೇವತೆಗಳ ಸೇವೆ, ಮಹಾನದಿಗಳ ಸ್ನಾನ, ವ್ರತ, ನಿಯಮ ಇವುಗಳನ್ನು ನಿಷ್ಠೆಯಿಂದ ಆಚರಿಸುತ್ತ ಸಂಚಾರಮಾಡುತ್ತಿರುವಾಗ ಕೊಲ್ಹಾಪುರಕ್ಕೆ ಬಂದು ಮಹಾಲಕ್ಷ್ಮಿಯ ದರ್ಶನಮಾಡಿದರು. ಭಕ್ತಿಯಿಂದ ಸೇವೆ ಕೈಂಕರ್ಯಾದಿಗಳನ್ನು ನಡಸಿದರು. ಸಹಜದೇವಿ ಮಹಾಲಕ್ಷ್ಮಿಯನ್ನು ಪೂಜಿಸಿ 'ವಂಶಾಭಿವೃದ್ಧಿಗೆ ಒಂದೇ ಒಂದು ಗಂಡು ಮಗುವನ್ನಾದರೂ ಕರುಣಿಸು' ಎಂದು ಬೇಡಿಕೊಂಡಳು. ಮಹಾಲಕ್ಷ್ಮಿ ಆ ರಾತ್ರಿ ಸಹಜದೇವಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು 'ಈ ಜನ್ಮದಲ್ಲಿ ನಿಮಗೆ ಸಂತತಿಭಾಗ್ಯವಿಲ್ಲ. ಮುಂದಿನ ಜನ್ಮದಲ್ಲಿ ನಮ್ಮ ವರದಿಂದ ನಿಮ್ಮ ಇಷ್ಟಸಿದ್ಧಿಯಾಗುವುದು. ಈ ಜನ್ಮದಲ್ಲಿ ನಿಮಗೆ ವಿಪುಲಸಂಪತ್ತನ್ನು ಕರುಣಿಸಿದ್ದೇವೆ. ಇದರಿಂದ ನಿಮ್ಮ ಮನಸ್ಸಿಗೆ ಶಾಂತಿಯನ್ನುಂಟುಮಾಡಿಕೊಳ್ಳಿರಿ' ಎಂದು ಹೇಳಿದಂತಾಯ್ತು. ಸಹಜದೇವಿ ಇದನ್ನು ಪತಿಗೆ ಅರುಹಿದಳು. 'ವಿಪುಲಸಂಪತ್ತನ್ನು ಕರುಣಿಸಿದ್ದೇವೆ, ಇದರಿಂದ ನಿಮ್ಮ ಮನಸ್ಸಿಗೆ ಶಾಂತಿಯನ್ನುಂಟುಮಾಡಿಕೊಳ್ಳಿರಿ' ಎಂಬುದರ ಅರ್ಥವೇನೆಂದು ಕುಲ್ಲಣರಾಹುತ ಯೋಚನೆಮಾಡಿದ. 'ಸಂಪತ್ತಿನಿಂದ ಶಾಂತಿಯನ್ನು ಕಂಡವರು ಇದುವರೆಗೆ ಯಾರೂ ಇಲ್ಲವು. ಮಹಾತಾಯಿ ಹೀಗೇಕೆ ಅಪ್ಪಣೆ ಮಾಡಿದಳು!' ಎಂದು ಕುಲ್ಲಣರಾಹುತ ಬಹಳ ಯೋಚಿಸಿದ. ಬಗೆಹರಿಯಲಿಲ್ಲ. 'ಮಹಾಲಕ್ಷ್ಮಿಯೆ ದಿಕ್ಕುತೋರಲಿ' ಎಂದು ಸುಮ್ಮನಾಗಿಬಿಟ್ಟ. ಕೆಲದಿನಗಳನಂತರ ಹುಟ್ಟಿದ ಊರಿನ ಋಣ ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡಿತು. ಆ ವೇಳೆಗೆ ಅವನು ಹುಟ್ಟಿದ ಊರನ್ನು ಬಿಟ್ಟು ಮೂವತ್ತು ವರ್ಷಗಳಾಗಿದ್ದವು. ಪತ್ನಿಯೊಡಗೂಡಿ, ತಾನು ಹುಟ್ಟಿದ ಗ್ರಾಮಕ್ಕೆ ಬಂದ. ಆ ಗ್ರಾಮದ ಹೆಸರು ದೊಡ್ಡಗದ್ದುವಳ್ಳಿ. ಜೀವಿಸಿದ್ದ ನಂಟರಿಷ್ಟರು ಕೆಲವರು ಅವರನ್ನು ಸಂತೋಷದಿಂದ, ಆದರದಿಂದ ಬರಮಾಡಿಕೊಂಡರು. ಕುಲ್ಲಣರಾಹುತ ಅಲ್ಲಿಯೆ ಕೆಲಕಾಲ ನೆಲಸಿ, ಆ ಪಳ್ಳಿಯಲ್ಲಿ ದೊಡ್ಡದಾದ ಸುಂದರವಾದ ಶ್ರೀಮಹಾಲಕ್ಷ್ಮೀ ದೇವಾಲಯವನ್ನು ಕಟ್ಟಿಸಿ, ದೇವಿಯನ್ನು ಅಲ್ಲಿ ಪ್ರತಿಷ್ಠೆಮಾಡಿಸಿದ. ಇದು ನಡೆದುದು ಕ್ರಿ. ಶ. ೧೧೧೩ರಲ್ಲಿ. ಆಗ ದೊಡ್ಡಗದ್ದುಂಬಳ್ಳಿಗೆ 'ಅಭಿನವ ಕೊಲ್ಹಾಪುರ'ವೆಂದು ಹೊಸ ಹೆಸರು ಬಂದಿತು.

ಅದೇ ಸಮಯದಲ್ಲಿ ಅಲ್ಲಿಂದ ಎರಡು ಹರಿದಾರಿ ದೂರದಲ್ಲಿ, ಯಗಚಿ ನದಿಯ ತೀರದ ವೇಲಾಪುರದಲ್ಲಿ ವಿಷ್ಣುವರ್ಧನಪ್ರಭು, ತಾವು ಪಟ್ಟಕ್ಕೆ ಬಂದ ಹೊಸತರಲ್ಲಿಯೆ, ಪಂಡಿತ ಪೆರುಮಲೆಯವರಿಗೆ ಕೊಟ್ಟಿದ್ದ ಮಾತಿನ ಮೇರೆಗೆ, ಶ್ರೀ ವಿಜಯನಾರಾಯಣದೇವರಿಗೆ ಒಂದು ಮಹಾ ದೇವಾಲಯವನ್ನು ಕಟ್ಟಿಸು ತ್ತಿದ್ದರು. ಸೌಂದರ್ಯದಲ್ಲಾಗಲಿ, ವಿಶಾಲತೆಯಲ್ಲಾಗಲಿ, ಭವ್ಯತೆಯಲ್ಲಾ ಗಲಿ, ಶಿಲ್ಪಕಲಾನೈಪುಣ್ಯದಲ್ಲಾಗಲಿ, ಈ ಭರತಖಂಡದಲ್ಲಿಯೆ ಅಂತಹ ದೇವಾಲಯ ಬೇರೊಂದಿರಬಾರದೆಂದು ಪ್ರಭುಗಳು ಅಪಾರಹಣವನ್ನು ಸಾರ್ಥಕ ಗೊಳಿಸಿ ಕಟ್ಟಿಸುತ್ತಿದ್ದರು. ದೇವಾಲಯದ ಕಟ್ಟಡ ಹತ್ತಿರ ಹತ್ತಿರ ಪೂರ್ಣ ವಾಗುತ್ತ ಬಂದಿತ್ತು. ಪ್ರಭುಗಳು ಪಂಡಿತರ ದಿವ್ಯಜ್ಞಾನವನ್ನೂ ಪಾಂಡಿತ್ಯ ವನ್ನೂ ಕಂಡು ವಿಷ್ಣುಭಕ್ತಿಯ ಮಾರ್ಗವನ್ನು ಅವರಿಂದ ಉಪದೇಶಹೊಂದಿ, ತಾವು ಜನ್ಮತಃ ಜೈನರಾದರೂ ವಿಷ್ಣುಭಕ್ತಿಯ ಸಂಘವನ್ನು ಅನುಸರಣೆಗೆ ತಂದುಕೊಂಡಿದ್ದರು. ಇತ್ತ ಜೈನಮತದಲ್ಲಿಯೂ ಅವರ ಅಭಿಮಾನ ಗೌರವ ಗಳು ಕಡಮೆಯಾಗಲಿಲ್ಲ. ಅತ್ತ ಶೈವಮತದ ಮೇಲೆಯೂ ಅವರ ಅಭಿಮಾನ ಗೌರವಗಳು ಕುಂದಲಿಲ್ಲ. ಸರ್ವಮತ ಸಮದರ್ಶಿಯಾದರು ವಿಷ್ಣುವರ್ಧನ ಪ್ರಭುಗಳು.

ಈ ವಿಜಯನಾರಾಯಣದೇವಾಲಯ ರಚನೆಯಲ್ಲಿದ್ದಾಗ, ಅಲ್ಲಿನ ಕೆಲಸ ಕಾರ್ಯಗಳು ಸಮರ್ಪಕವಾಗಿ ನಡೆಯುತ್ತಿರುವುದನ್ನು ನೋಡುವುದಕ್ಕಾಗಿ, ಸಲಹೆಗಳನ್ನು ಕೊಡುವುದಕ್ಕಾಗಿ, ಪಂಡಿತರು ಮೇಲಿಂದ ಮೇಲೆ ದ್ವಾರವತಿ ಯಿಂದ ವೇಲಾಪುರಕ್ಕೆ ಬಂದು ಹೋಗುತ್ತಿದ್ದರು. ಅವರ ಜೊತೆಯಲ್ಲಿ ಆಗಾಗ್ಗೆ ಪ್ರಭುಗಳೂ ಬಂದುಹೋಗುತ್ತಿದ್ದರು. ನೃಪಕಾಮರ ಕಾಲದಿಂದ ಎರೆಯಂಗರ ಕಾಲದವರೆಗೂ ಈ ವೇಲಾಪುರಿಯೇ ಹೊಯಿಸಳ ರಾಜಧಾನಿ ಯಾಗಿತ್ತು. ಎರೆಯಂಗರು ವೇಲಾಪುರಿಗೆ ಸುಮಾರು ಮುಕ್ಕಾಲುಗಾವುದ ದೂರದಲ್ಲಿದ್ದ ಒಂದು ಊರನ್ನು ಹೊಸದಾಗಿ ಸ್ಥಾಪಿಸಿ, ಅದಕ್ಕೆ 'ದ್ವಾರವತಿ' ಯೆಂದು ಹೆಸರಿಟ್ಟು, ಕೋಟೆಕೊತ್ತಲಗಳನ್ನು ಕಟ್ಟಿಸಿ, ಅದನ್ನು ತಮ್ಮ ಹೊಸ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ದ್ವಾರವತಿಯು ಈಗ ಯಶೋ ವತಿಯಾದ ಮಹಾಪಟ್ಟಣವಾಗಿತ್ತು.

ಸರ್ವಕಾಲಕ್ಕೂ ಭಾರತದ ಶಿಲ್ಪಕಲಾನೈಪುಣ್ಯಸಾಕ್ಷಿಯಾದ ವೇಲಾಪುರಿ



ಬೇಲೂರಿನ ಶ್ರೀ ಚೆನ್ನಕೇಶವ ದೇವಾಲಯ

‘ಚೆನ್ನಕೇಶವಗಿಲ್ಲಿ ನೆಲೆಗಟ್ಟ ತೂಗಿಹರು’—ವಿ. ಸೀ.



ಶ್ರೀ ಚೆನ್ನಕೇಶವ ದೇವಾಲಯದ ಭಿತ್ತಿವೈಚಿತ್ರ್ಯ

‘ಬಾಳಗಾನವೆ ಘನಿಸಿ ಶಿಲ್ಪವಾಗಿದೆಯಿಲ್ಲಿ

ದೇವಾಲಯ ಪೂರ್ಣವಾಗಲು, ಪರಬ್ರಹ್ಮಸ್ವರೂಪನೂ ಅತಿಪ್ರಸನ್ನನೂ ಚೆನ್ನನೂ ಆದ ಶ್ರೀ ವಿಜಯನಾರಾಯಣಸ್ವಾಮಿಯನ್ನು ಹೊಯಿಸಳ ಬಿಟ್ಟಿದೇವ ಪ್ರಭುವು ಮಹಾಭಕ್ತಿಯಿಂದ ಶಕವರ್ಷ ೧೦೪೯ ಹೇವಿಳಂಬಿ ಸಂವತ್ಸರ ಚೈತ್ರ ಶುದ್ಧ ಪಂಚಮಿ ವಡ್ಡವಾರ ಸುಪ್ರತಿಷ್ಠಿಸಿ, ಆ ಭಗವಂತನ ಆಶೀರ್ವಾದವನ್ನೂ ಆತನ ನಾಮಾಂಕಿತವೆ ಆದ ವಿಷ್ಣುವರ್ಧನನೆಂಬ ಸಾರ್ಥಕನಾಮವನ್ನೂ ಆಂತರು.

ಕುಲ್ಲಣರಾಹುತನೂ ಸಹಜದೇವಿಯೂ ವಿಷ್ಣುವರ್ಧನ ಪ್ರಭುಗಳ ಮದುವೆಗೆ ಆಹ್ವಾನಿತರಾಗಿ ಬಂದವರು, ದ್ವಾರವತಿಯ ಶೋಭೆಯನ್ನೂ ಪ್ರಭುಗಳ ಧರ್ಮಶ್ರದ್ಧೆಗಳನ್ನೂ ಕಂಡು ಮೋಹಿತರಾಗಿ ಅಲ್ಲಿಯೂ ಒಂದು ಮನೆ ಮಾಡಿದರು. ಪ್ರಭುಗಳ ಆದರ ವಿಶ್ವಾಸಗಳಿಗೂ ಪಾತ್ರರಾದರು.

§

ಶಾಂತಲೆ ಲಕ್ಷ್ಮಿಯರನ್ನು ಮನೆ ತುಂಬಿಸಿಕೊಂಡ ಮೇಲೆ ರಾಜಮಾತೆಗೆ ಅರಮನೆ ಆನಂದಸ್ವರ್ಗವಾಯಿತು. ಪ್ರಭುಗಳಿಗೂ ಮಹೇಂದ್ರನ ಪಟ್ಟ ಬಂದಂತಾಯಿತು. ಜನರ ಜೀವನವೂ ಆನಂದಮಯವಾಯಿತು. ಆತ್ಮಸಖಿಯರ ಆದರ, ಅನುರಾಗ, ಗೌರವ, ಗಾಯನ ನರ್ತನ ಮಾಧುರ್ಯ, ಉತ್ತಮ ಪಾಂಡಿತ್ಯ, ಹೆಚ್ಚಿನ ಜ್ಞಾನ, ದೇವಪಿತೃಭಕ್ತಿ, ನಿರ್ಮಲಾಂತಃಕರಣ ಇವುಗಳಿಂದ ಪ್ರಭುಗಳ ನಿತ್ಯಜೀವನ ಆನಂದಮಯವಾಯಿತು. ಮಹಾಲಕ್ಷ್ಮಿ ಸರಸ್ವತಿ ಇಬ್ಬರೂ ಒಟ್ಟಿಗೆ ಮನೆಗೆ ಬಂದಿದ್ದರಲ್ಲವೆ!

ಬತ್ತಿಹೋಗಿದ್ದ ಅರಮನೆಯಲ್ಲಿ ಒಮ್ಮಿಂದೊಮ್ಮೆಗೆ ಪೂಜೆಗಳೂ ಉತ್ಸವಾದಿಗಳೂ ಮಂಗಳಕಾರ್ಯಗಳೂ ಮತ್ತೆ ಉಕ್ಕಿಹರಿಯತೊಡಗಿದವು. ಮಂಗಳಲಕ್ಷ್ಮಿ, ಭಾಗ್ಯಲಕ್ಷ್ಮಿ ನಲಿಯತೊಡಗಿದರು. ಪತ್ನಿಯರ ಸೌಶೀಲ್ಯ ಶುಚಿ, ರುಚಿ, ಆಚಾರ, ವಿಚಾರಗಳಿಂದ ಪ್ರಭುಗಳಿಗೆ ಒಳಿತಾಗುತ್ತಬಂದಿತು. ಎಲ್ಲ ಕಾರ್ಯಗಳೂ ಉದ್ಯಮಗಳೂ ಕೈಗೂಡುತ್ತಬಂದವು. ಯಾರುಯಾರಿಗೆ ಎಷ್ಟೇ ಕಾರ್ಯಗಳಿದ್ದರೂ ಮಧ್ಯಾಹ್ನದ ಆರೋಗಣೆಗೆ ಪ್ರಭುಗಳು ಬರುವವರೆಗೂ ಕಾದಿದ್ದು, ಅವರೊಡನೆ ರಾಜಮಾತೆಯವರೂ ಸೊಸೆಯರೂ ಒಟ್ಟಿಗೆ ಕುಳಿತುಕೊಳ್ಳುತ್ತಿದ್ದರು. ವಾರಕ್ಕೆ ಒಂದು ದಿನವಾದರೂ ಶಾಂತಲೆ ಲಕ್ಷ್ಮಿಯರು

ಕುವರವಿಷ್ಣುವನ್ನು ಆಶ್ರಮದಿಂದ ಕರಸಿಕೊಂಡು ತಮ್ಮೊಡನೆ ಊಟಕ್ಕೆ ಕುಳ್ಳಿರಿಸಿಕೊಳ್ಳುತ್ತಿದ್ದರು. ಕುವರನಿಗಂತೂ ಅಕ್ಕದಿರನ್ನು ಕಂಡರೆ ಅದೆಷ್ಟು ವಿಶ್ವಾಸವೋ ಹೇಳತೀರದು. ಹಿರಿಯಕ್ಕನಂತೂ, ವಿಷ್ಣುವನ್ನು 'ಏನೇನು ಕಲಿತೆ? ಹೊಸ ಪಾಠಪ್ರವಚನಗಳೇನು? ಕುದುರೆಯ ಸವಾರಿ ಹೇಗಿತ್ತು? ಆನೆಗೆ ಅಂಕುಶವೇ ಬೇಕೆ? ಬಿಲ್ವಿದ್ಯೆಯಲ್ಲಿ ಎಷ್ಟು ಮುಂದುವರಿದಿದ್ದೀಯೆ? ಎಷ್ಟುದೂರಕ್ಕೆ ಗುರಿಯಿಟ್ಟು ಹೊಡೆಯಬಲ್ಲೆ?' ಎಂಬ ಪ್ರಶ್ನೆಗಳನ್ನು ಬಂದಾಗ ಲೆಲ್ಲ ಕೇಳುವಳು. ಅಕ್ಕ ಕೇಳುವುದಕ್ಕೆ ಮುಂಚೆಯೇ ತಮ್ಮನಿಗೆ ಹೇಳಲು ಆತುರ. ಅಂತೂ ತಾನು ಕಲಿಯುತ್ತಿರುವ ಪಾಠಕ್ರಮಗಳು, ಅಭ್ಯಸಿಸುತ್ತಿರುವ ಹೊಸಹೊಸ ವಿದ್ಯೆಗಳ ವಿವರಗಳು ಎಲ್ಲವೂ ಅಕ್ಕನಿಗೆ ವಾರ ವಾರ ವರದಿ. ಅಕ್ಕ 'ಸೈ' ಎಂದು ಕುವರನ ಬೆನ್ನು ತಟ್ಟಬೇಕು; ಆಗ ಕುವರನಿಗೆ ತೃಪ್ತಿ. ಚಿಕ್ಕಕ್ಕನಂತೂ ಇವನ ಅಂತರ್ಯದ ಗುರು. ಸಂಸ್ಕೃತ, ವ್ಯಾಕರಣ, ತರ್ಕ, ಶಾಸ್ತ್ರ ಇತ್ಯಾದಿಗಳಲ್ಲಿ ಕಷ್ಟ ತೋರಿದಾಗ ಚಿಕ್ಕಕ್ಕನ ಬಳಿಗೆ ಓಡಿಬಂದು ಹೇಳಿಸಿಕೊಂಡು ಹೋಗುತ್ತಿದ್ದ. ಪ್ರಭುಗಳು ಒಂದು ದಿನ ಇದನ್ನು ಕಂಡು 'ಲಕ್ಷ್ಮಿ, ಮರ ಹತ್ತುವುದಕ್ಕೆ ಅವನೇ ಪ್ರಯತ್ನಪಡಲಿ. ಅವನನ್ನು ಕೊನೆಯ ವರೆಗೂ ನೀನೇ ನೂಕಲು ಸಾಧ್ಯವೆ?' ಎಂದರು.

ಅಧ್ಯಯನವಿಲ್ಲದ ದಿನಗಳಲ್ಲಿ ಅಕ್ಕದಿರನ್ನು ತೋಟಕ್ಕೊ, ಬೆಟ್ಟಕ್ಕೊ, ಅರಣ್ಯದ ರಮಣೀಯ ಸ್ಥಳಗಳಿಗೊ, ಸುಂದರವಾದ ನದಿ ಅಥವಾ ಸರೋವರ ಗಳ ತೀರಕ್ಕೊ ಕರೆದುಕೊಂಡು ಹೋಗುವುದೆಂದರೆ ಕುವರ ವಿಷ್ಣುವಿಗೆ ಬಹು ಆಸೆ. ಇಂತಹ ಅಪರೂಪ ದಿನಗಳಲ್ಲಿ ಪ್ರಭುಗಳೂ ಇವರ ಸಂಗಡ ಸೇರಿ, ಪಾದಚಾರಿಗಳಾಗಿ, ಬೆಟ್ಟಗುಡ್ಡಗಳನ್ನು ಹತ್ತಿ ಇಳಿದು, ಅರಣ್ಯಗಳಲ್ಲಿ ಸಂಚರಿಸಿ, ಹರಿಯುವ ಜಲದಲ್ಲಿ ಎಲ್ಲರೂ ಮಿಂದು, ಕಟ್ಟಿಗೆ ಅಡುಗಬ್ಬುಗಳನ್ನು ಕೂಡಿಸಿ ತಂದು, ಶಾಂತಲೆ ಲಕ್ಷ್ಮಿಯರು ಅಡುಗೆ ಮಾಡಿ, ಎಲ್ಲರೂ ಸೇರಿ ವನಭೋಜನ ಮಾಡಿದುದುಂಟು. ಇಂತಹ ದಿನಗಳಲ್ಲಿ ರಾಜಮಾತೆಯರೂ ಮಕ್ಕಳೊಂದಿಗೆ ಸೇರಿ ವಿಹರಿಸಿ ವನಭೋಜನದಲ್ಲಿ ಭಾಗವಹಿಸಿದುದುಂಟು. 'ನರ್ತನ ಮಾಡುವ ಕಾಲು ನಾಡಹಾದಿಯನ್ನು ಮೆಟ್ಟೀತೆ! ವೀಣೆ ನುಡಿಸುವ ಕೈ ಕಣಕ ಕುಟ್ಟೀತೆ!' ಎಂದು ಪ್ರಭುಗಳು ಶಾಂತಲೆಯನ್ನು ಮದುವೆಯಾದ ಹೊಸದರಲ್ಲಿ ಹಾಸ್ಯಮಾಡಿದ್ದರು. ಅಡುಗೆಯಲ್ಲಿ ತಾನು ನಳಮಹಾರಾಜನಿಗೆ ಬಲಗೈ ಎಂದು

ಶಾಂತಲೆ ಪ್ರಭುಗಳಿಗೆ ನಿದರ್ಶನಮಾಡಿಕೊಟ್ಟಳು. ಅಂದಿನ ಕಾಲದಲ್ಲಿ ಲಕ್ಷ್ಮಿ ಮಾಡಿಟ್ಟ ಉಳುಂದೋಗರೆ, ಪುಳಿಯೋಗರೆಗಳನ್ನು ಸವಿದು ಪ್ರಭುಗಳು ಬೆಪ್ಪಾಗಿ ಹೋಗಿದ್ದರು. ಅಂದಿನಿಂದ ಆ ಶ್ರೀವೈಷ್ಣವನಿಗೆ ವಾರಕ್ಕೆ ಒಮ್ಮೆಯಾದರೂ ಪುಳಿಯೋಗರೆ ನೈವೇದ್ಯ ಆವಶ್ಯವಾಗಿಹೋಯಿತು.

ರಾಜ್ಯದ ಗಹನ ವಿಷಯಗಳನ್ನು ಪ್ರಭುಗಳು ಒಮ್ಮೊಮ್ಮೆ ತಾಯಿಯೊಡನೆ ಆಲೋಚಿಸುತ್ತಿದ್ದರು. ಇಂತಹ ಗಹನ ವಿಷಯಗಳು ಸೊಸೆಯರಿಗೂ ತಿಳಿದಿರಲೆಂದು ರಾಜಮಾತೆ ಆ ಸಂದರ್ಭಗಳಲ್ಲಿ ಅವರನ್ನೂ ಕರೆದು ಹತ್ತಿರ ಕುಳ್ಳಿರಿಸಿಕೊಳ್ಳುತ್ತಿದ್ದರು. 'ಈ ಗೌರಿಗಳಿಗೇಕೆ ಗಂಡಸಿನ ದುಃಖ?' ಎಂದು ಪ್ರಭುಗಳು ತಾಯಿಯ ಬಳಿ ಅಂದರು. ರಾಜಮಾತೆ 'ಚೆನ್ನಾಯಿತು! ಈ ವಿಷಯಗಳೆಲ್ಲ ಇವರಿಗೆ ಇನ್ನ್ಯಾವಾಗ ತಿಳಿಯಬೇಕು? ರಾಜ್ಯದಲ್ಲಿ ಯಾರು ಏನು? ಏನು ಯಾವುದು? ಯಾವುದು ಏತಕ್ಕೆ? ಎಂದು ಇವರಿಗೆ ತಿಳಿಯಬೇಡವೆ? ರಾಜಧರ್ಮ, ಆಡಳಿತದ ರೀತಿನೀತಿಗಳು ಇವರಿಗೆ ಕ್ರಮಕ್ರಮೇಣ ತಿಳಿಯಲೆಬೇಕು. ನಿನ್ನ ತಂದೆಗಳು ಪ್ರತಿಯೊಂದು ಹೆಚ್ಚಿನ ಸಂದರ್ಭವನ್ನೂ ನನ್ನೊಡನೆ ಆಲೋಚಿಸದೆ ಇರುತ್ತಿರಲಿಲ್ಲ. ಯಾವುದೊಂದು ದೊಡ್ಡ ತೀರ್ಪೇ ಆದರೂ ನನ್ನ ಅಭಿಪ್ರಾಯವನ್ನು ಕೇಳದೆ ಇರುತ್ತಿರಲಿಲ್ಲ' ಎಂದರು. ಪ್ರಭುಗಳು 'ಹಾಗಾದರೆ, ನನ್ನೊಡನೆ ರಥದಲ್ಲಿ ಕುಳ್ಳಿರಿಸಿ, ಯುದ್ಧಭೂಮಿಗೂ ಕಳಿಸಿಕೊಡಿರಿ' ಎಂದು ಕುಶಾಲಿನಿಂದ ಅಂದರು.

ಪ್ರಭುಗಳು ಆಗ ಕುಶಾಲಿಗೆಂದ ಮಾತು ಸರ್ವಥಾ ನಿಜವಾಯಿತು. ಒಮ್ಮೆ ಮುಳ್ಳೂರಹೆಗ್ಗಡೆ ವಿಷ್ಣುವರ್ಧನರ ದೇವಿಯೊಬ್ಬರ ವಿಷಯದಲ್ಲಿ ಅಹಿತವಾಡಿದ. ಮುಳ್ಳೂರು ಆಗ ವಿಷ್ಣುವರ್ಧನ ಪ್ರಭುವಿನ ಕಿರಿಯರಸಿಯರಲ್ಲೊಬ್ಬಳಾದ ದೇವಕೀದೇವಿಯ ಆಡಳಿತದಲ್ಲಿತ್ತು. ಆ ಅನ್ಯಾಯದ ಮಾತಿಗೆ ಕೋಪಗೊಂಡ ಶಾಂತಲದೇವಿ ಅಸ್ತ್ರವನ್ನು ಹಿಡಿದು ಪತಿಯೊಡನೆ ರಥದಲ್ಲಿ ಕುಳಿತು, ಆ ಹೆಗ್ಗಡೆಯ ಮೇಲೆ ಯುದ್ಧಕ್ಕೆ ಹೊರಟು, ರಣದಲ್ಲಿ ಅವನ ಗರ್ವ ಭಂಗಮಾಡಿದಳು. ಅವನನ್ನು ಕೊಲ್ಲಬೇಕೆಂದು ಆಕೆಗೆ ಇಷ್ಟವಿರಲಿಲ್ಲ. ಡಣಾಯಕನೊಬ್ಬನ ಅಸ್ತ್ರ ಅಕಸ್ಮಾತ್ ಆ ಹೆಗ್ಗಡೆಯ ಎದೆಯಲ್ಲಿ ಬಂದು ನಟ್ಟಿತು. ದೈವವೇ ಶಿಕ್ಷೆ ವಿಧಿಸಿತು, ಎಂದು ಮಹಾರಾಣಿ ಅಂದುಕೊಂಡರು. ಆ ಹೆಗ್ಗಡೆ ರಣಭೂಮಿಯಲ್ಲಿ ಸತ್ತುಬಿದ್ದ. ಅದನ್ನು ಕಂಡ ಉತ್ತರಕ್ಷಣದಲ್ಲಿಯೆ ಶಾಂತಲೆಗೆ

ಪಶ್ಚಾತ್ತಾಪ ಹುಟ್ಟಿತು. ಮಾರನೆಯ ದಿನವೆ ಮಹಾರಾಣಿ ಶಾಂತಲೆ ಆ ಹೆಗ್ಗಡೆಯ ಇಬ್ಬರು ಗಂಡುಮಕ್ಕಳನ್ನು ಕರಸಿಕೊಂಡು, 'ನಮ್ಮ ಮಕ್ಕಳ ಮನಸ್ಸನ್ನು ಬಹಳ ನೋಯಿಸಿದೆವು. ನಿಮ್ಮ ತಂದೆಗಳು ಯಾರ ಬಾಣಕ್ಕೊ ಅಕಸ್ಮಾತ್ ಅಡ್ಡಬಂದು ಅದು ತಾಗಿ ದೈವಾಧೀನರಾದರು. ನಿಮ್ಮ ತಂದೆಗಳು ಇತರರ ವಿಷಯದಲ್ಲಿ ಅನ್ಯಾಯವಾಗಿ ಹೀನಾಯದ ಮಾತುಗಳನ್ನಾಡಿದುದು ತಪ್ಪು. ನಿಮ್ಮ ಹೆಗ್ಗಡೆತನವನ್ನು ನಾವು ತೊಡೆದುಹಾಕುವುದಿಲ್ಲ. ಈ 'ಕಮ್ಮೆನ' ಗ್ರಾಮವನ್ನು ನಿಮಗೆ ಉಂಬಳಿಯಾಗಿ ಕೊಟ್ಟಿದ್ದೇವೆ. ಇದನ್ನು ಚೆನ್ನಾಗಿ ವೃದ್ಧಿಪಡಿಸಿಕೊಳ್ಳಿರಿ. ನಮ್ಮ ಅಧೀನರಾಗಿ ಧರ್ಮದಿಂದ ಬಾಳತಕ್ಕದ್ದು' ಎಂದು ಹೇಳಿ ತನ್ನ ಮನೋವೈಶಾಲ್ಯವನ್ನು ದೇಶಕ್ಕೆ ವ್ಯಕ್ತಪಡಿಸಿದ್ದಳು.

ಶಾಂತಲೆ ಲಕ್ಷ್ಮಿಯರಿಗೆ ರಾಜಸಭೆಯಲ್ಲಿ ಸ್ಥಾನಮಾನಗಳು ದೊರೆತವು. ಚಿಕ್ಕಂದಿನಿಂದ ಉತ್ತಮ ವಾತಾವರಣದಲ್ಲಿ, ಸತ್ಸಹವಾಸದಲ್ಲಿ, ಭಕ್ತಿ ಧರ್ಮ ನ್ಯಾಯ ನೀತಿ ಮಾರ್ಗಗಳಲ್ಲೆ ಬೆಳೆದು ವೃದ್ಧಿಸಿದ್ದ ಮಹಾರಾಣಿಯ ಮನಸ್ಸು, ನ್ಯಾಯ ಅನ್ಯಾಯಗಳ ಪರಿಶೀಲನೆಯಲ್ಲಿ ಸತ್ಯಪಥಗಾಮಿಯಾಗಿಯೇ ಇರುತ್ತಿದ್ದು ದನ್ನು ಪ್ರಭುಗಳು ಮನಗಂಡರು. ಇದರಿಂದಲೂ ಪರಸ್ಪರ ಪ್ರೇಮ ವಿಶ್ವಾಸ ಗಳು ಗಾಢವಾಗಿ ಬೆಳೆದವು.

ಶಾಂತಲೆ ಲಕ್ಷ್ಮಿಯರು ಪ್ರಭುಗಳಲ್ಲಿ ಹೀಗೆ ಹೆಚ್ಚು ಪ್ರೇಮವಿಶ್ವಾಸ ಗಳನ್ನು ಗಳಿಸಿಕೊಂಡುದನ್ನು ಕಂಡು, ಬಗೆಹರಿಯದ, ಯೋಗ್ಯತೆ ಇಲ್ಲದ, ಹೆಚ್ಚು ಸಂಸ್ಕೃತರಲ್ಲದ ಕಿರಿಯ ರಾಣಿಯರಿಗೆ ಅಸೂಯೆ ಏರ್ಪಟ್ಟಿತು. ಈ ಐಶ್ವರ್ಯದ ಖನಿಯ ನಡುವೆ ಆ ಅಸೂಯೆ ದಿನದಿನಕ್ಕೆ ವೃದ್ಧಿಸಿತು. ಅನೇಕ ಕುಹಕಗಳನ್ನೂ ತಂತ್ರಗಳನ್ನೂ ಈ ರಾಣಿಯರು ಮಾಡಿದರಾದರೂ, ಅದರಿಂದ ತಮ್ಮ ಹೆಸರುಗಳನ್ನು ತಾವೇ ಕೆಡಿಸಿಕೊಂಡರೆ ಹೊರತು, ಶಾಂತಲಾ ಲಕ್ಷ್ಮಿ ವಿಷ್ಣುವರ್ಧನರ ಪರಸ್ಪರ ಪ್ರೇಮವಿಶ್ವಾಸಗಳಿಗೆ ಯಾವ ತೆರನಾದ ಭಂಗವನ್ನು ಉಂಟುಮಾಡಲು ಸಾಧ್ಯವಾಗಲಿಲ್ಲ. ಪ್ರಭುಗಳೇ ಕಿರಿಯ ರಾಣಿಯರ ನಡತೆ ಗಳನ್ನು ನೋಡಿ ಅಸಹ್ಯಗೊಳ್ಳುವಂತಾಯಿತು.

ಶಾಂತಲೆ ತನ್ನ ಸವತಿಯರಿಗೆ ಎಷ್ಟೋ ವಿಧಗಳಿಂದ ಬುದ್ಧಿವಾದ ಹೇಳಿ ದಳು. 'ಪ್ರಭುಗಳ ಪ್ರೇಮವನ್ನು ಸಾಧಿಸಲು ಇದು ತಪ್ಪು ಮಾರ್ಗ' ಎಂದಳು, 'ಅರಮನೆಯ ಗೌರವಕ್ಕೇ ಕುಂದು ತರುತ್ತಿರುವುದು ನಿಮ್ಮ ನಡತೆ' ಎಂದು

ಭಯಪಡಿಸಿದಳು. ಅಸೂಯೆಯ ಪರೆ ಮೂಡಿದ್ದ ಕಣ್ಣುಗಳಿಗೆ, ಮಂದಹೃದಯ ಗಳಿಗೆ, ಶಾಂತಲೆಯ ಬುದ್ಧಿಯ ಮಾತುಗಳು ಮೋಸವೆಂದು ಕಂಡುಬಂದವು. ಪ್ರಭುಗಳ ಮನಸ್ಸಿಗೂ ಇದರಿಂದ ನೆಮ್ಮದಿಭಂಗವಾಯಿತು. ಒಂದೆಡೆಯಲ್ಲಿದ್ದರೆ ಮನಸ್ತಾಪಗಳು ಹೆಚ್ಚಬಹುದೆಂದು ಪ್ರಭುಗಳು ಒಬ್ಬೊಬ್ಬ ಕಿರಿಯ ರಾಣಿಗೂ ಒಂದೊಂದು ಸಣ್ಣ ನಾಡಿನ ಆಧಿಪತ್ಯವನ್ನು ಕೊಟ್ಟು ಅವರುಗಳನ್ನು ಅಲ್ಲಲ್ಲಿ ಇರಿಸಿದರು. ಅಲ್ಲಿದ್ದುಕೊಂಡೂ ಅವರ ಕುಹಕಗಳು ತಪ್ಪಲಿಲ್ಲ. ನಡತೆಗಳು ಸರಿಹೋಗಲಿಲ್ಲ. ಇನ್ನು ಸ್ವೇಚ್ಛೆಯಾಗಿ ಬಿಡುವುದು ರಾಜಮನೆತನಕ್ಕೆ ಕೆಟ್ಟ ಹೆಸರನ್ನು ತರಬಹುದೆಂದೆಣಿಸಿ ಶಾಂತಲೆ ಅವರನ್ನೆಲ್ಲ ಪುನಃ ಅರಮನೆಗೇ ಕರಸಿ ಕೊಂಡು, ಅವರ ಮೇಲಿನ ದಂಡನಾಯಕತ್ವವನ್ನು ತಾನೆ ವಹಿಸಿ, ಅವರನ್ನು ಅಂಕೆಯಲ್ಲಿಟ್ಟುಕೊಂಡಳು. ಗಂಗರಾಜರು ಅದನ್ನು ಕಂಡು, 'ಭಲೆ! ಉದ್ವೃತ್ತ ಸವತಿ ಗಂಧವಾರಣೆ' ಎಂದು ಮಹಾರಾಣಿ ಶಾಂತಲೆಯನ್ನು ಕೊಂಡಾಡಿದರು. ಅಂದಿನಿಂದ ಶಾಂತಲದೇವಿಗೆ ಆ ಬಿರುದು ಶಾಶ್ವತವಾಗಿ ಉಳಿದುಹೋಯಿತು.

§

ಪಂಡಿತ ಪೆರುಮಲೆಯವರ ಕೋರಿಕೆಯ ಮೇಲೆ ಶ್ರೀ ವಿಜಯ ನಾರಾ ಯಣ ದೇವರ ಆಲಯವನ್ನು ನೋಡಿಕೊಂಡು ಬರಲು ರಾಜಮಾತೆಯವರೂ ಪ್ರಭುಗಳೂ ಶಾಂತಲೆ ಲಕ್ಷ್ಮಿಯರೂ ಕುವರ ವಿಷ್ಣುವೂ ಒಮ್ಮೆ ವೇಲಾಪುರಕ್ಕೆ ಬಂದರು.

ರಾಜಮಾತೆಯೂ ಶಾಂತಲೆ ಲಕ್ಷ್ಮಿಯರೂ ಆ ಮಹಾ ವಿಚಿತ್ರವಾದ, ಸುಂದರದಲ್ಲಿ ಸುಂದರವಾದ, ಭವ್ಯದಲ್ಲಿ ಭವ್ಯವಾದ, ದೇವಾಲಯವನ್ನು ನೋಡಿ ನೋಡಿ ಆಶ್ಚರ್ಯ ಆನಂದಭರಿತರಾದರು. ಐದು ನೂರು ಕೆಲಸದವರ ಎಂಟು ವರುಷಗಳ ಅವಿಚ್ಛಿನ್ನ ಕಾರ್ಯಸಾಧನೆ ಆ ಮಹಾದೇವಾಲಯ, ಆ ಹೊಯಿಸಳ ಯಶಸ್ತಂಭ. ಕಟ್ಟಿಸಿದವರ ಮನಸ್ಸೂ ಹೃದಯವಿಶಾಲತೆಯೂ ಎಷ್ಟು ಸುಂದ ರವೊ, ಎಷ್ಟು ದೊಡ್ಡದೊ, ಅಷ್ಟು ಸುಂದರ ಆ ದೇವಾಲಯ; ಅಷ್ಟು ವಿಶಾಲ ಅದರ ಪರಿಸ್ತರಣ. ರೂವಾರಿಗಳು ಒಬ್ಬರನ್ನೊಬ್ಬರು ಸ್ಪರ್ಧಿಸಿ ತಮ್ಮ ಕುಶಲತೆಯ ಪರಮಾವಧಿಯನ್ನು ಪ್ರಭುಗಳಲ್ಲಿ ಪ್ರದರ್ಶಿಸಬೇಕೆಂಬ ಆಕಾಂಕ್ಷೆಯಿಂದ ಅಮೋಘವಾದ ಕೆತ್ತನೆಯ, ಚಿತ್ರವಿಚಿತ್ರ ಕೆಲಸಗಳನ್ನು ಮಾಡಿದ್ದರು.

ಹಣದ ಅಥವಾ ಇತರ ವಿಧದ ಬಹುಮಾನಗಳ ಆಶೆಯಿಂದ ಕೆಲಸ ಮಾಡಿದವರಲ್ಲ ಆ ರೂವಾರಿಗಳು. ತಮ್ಮ ಕಲಾಕುಶಲತೆಯ ಈ ನಿದರ್ಶನ ಸರ್ವಕಾಲಕ್ಕೂ ನಿಂತೀತು ಎಂಬ ಆಶೆಯ ಮೇಲೆ ಶ್ರಮಿಸಿದ್ದರು. ಭಗವಂತನ ಔನ್ನತ್ಯವನ್ನು ಶಿಲ್ಪದಲ್ಲಿ ನಿರೂಪಿಸಲು ಸಾಧ್ಯವಾದ ಬಗೆ ಎರಡು; ಒಂದು—ಅದ್ಭುತ ಆಗಾರ, ಆಕಾರ ನಿರೂಪಣ; ಎರಡು—ಅನುಪಮಸೌಂದರ್ಯ ನಿರೂಪಣ. ಈ ಕಲೋಪಾಸಕ ರೂವಾರಿಗಳು ದೇವದೇವನ ಸೌಂದರ್ಯ ನಿರೂಪಣೆಯೇ ಭಗವಂತನಿಗೆ ತಾವು ಇಹಜನ್ಮದಲ್ಲಿ ಸಲ್ಲಿಸಬಹುದಾದ ಸೇವೆಯೆಂದು, ತಮಗೆ ಆ ದಿವ್ಯಶಕ್ತಿಯನ್ನು ಕರುಣಿಸಿದ್ದ ದೇವನಿಗೆ, ತಮ್ಮ ಕರ್ತವ್ಯನಿರೂಪಣೆಯನ್ನೂ ಆ ಮೂಲಕ ತಮ್ಮ ಮುಕ್ತಿಗೆ ಸಾಧನವನ್ನೂ ಗಳಿಸಿಕೊಂಡರು.

ಆ ದಿನ ಆರೋಗಣೆಯ ಸಮಯದಲ್ಲಿ ಪ್ರಭುಗಳು ಶಾಂತಲೆಯನ್ನು ಸಂಬೋಧಿಸಿ 'ದೇವಿ, ಈ ಮಹಾದೇವಾಲಯ ನಿನ್ನ ಮನಸ್ಸಿಗೆ ಒಪ್ಪಿತೆ?' ಎಂದು ಕೇಳಿದರು.

ಶಾಂತಲೆ: 'ಬಣ್ಣಿಸಲು ಬಾಯಿಲ್ಲದುದರಿಂದ ಸುಮ್ಮನಾದೆ, ದೇವ. ಇದರಲ್ಲಿ 'ನನ್ನದು' ಎಂಬ ಯಾವ ಪಾಲೂ ಇಲ್ಲವಲ್ಲ?'

ವಿಷ್ಣುವರ್ಧನ: 'ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಪತ್ನಿ ಸಭಾಗಿ ಯೆಂದು ಶಾಸ್ತ್ರವೆ ಇದೆಯಲ್ಲ!'

ಶಾಂತಲೆ: 'ಆದ್ದರಿಂದಲೆ ಸಮಭಾಗಿಯಾಗಲು ನನ್ನ ಹೆಸರಿನಲ್ಲಿಯೂ, ಇಷ್ಟು ದೊಡ್ಡದಲ್ಲದಿದ್ದರೂ, ಒಂದು ಭವ್ಯವಾದ ಚಿಕ್ಕ ದೇವಾಲಯ, ಒಂದು ಸುಂದರವಾದ ವಿಷ್ಣುಮೂರ್ತಿಯನ್ನು ಸ್ಥಾಪಿಸುವ ಆಶೆಯಾಗಿದೆ.'

ವಿಷ್ಣುವರ್ಧನ: (ಲಕ್ಷ್ಮಿಯನ್ನು ನೋಡಿ) 'ದೇವಿ, ನಿನ್ನ ಆಶೆಯೇನಿದೆ?'

ಲಕ್ಷ್ಮಿ: 'ನನ್ನ ಆಶೆ ಬೇರೆಯುಂಟೆ! ಅಕ್ಕನ ಆಶೆ ಸಂದರೆ ನನ್ನದೂ ಸಂದಂತೆಯೆ.'

ವಿಷ್ಣುವರ್ಧನ: 'ಓಹೊ! ನೀವಿಬ್ಬರೂ ಮೊದಲೆ ಮಾತನಾಡಿಕೊಂಡಿರು ವಂತಿದೆ.'

ಶಾಂತಲೆ: 'ಲಕ್ಷ್ಮಿಯೊಡನೆ ನಾನು ಈ ಸುದ್ದಿಯನ್ನು ಎತ್ತಿದವಳೆ ಅಲ್ಲ.'

ಪ್ರಭುಗಳು ಪಂಕ್ತಿಯಲ್ಲೆ ಊಟಮಾಡುತ್ತಿದ್ದ ತಾಯಿಯ ಮುಖವನ್ನು

ನೋಡಿದರು. ರಾಜಮಾತೆ ನಸುನಕ್ಕು 'ಅಪ್ಪಾಜಿ, ಮಕ್ಕಳ ಆಶೆ ಈಡೇರಿಸ ತಕ್ಕದ್ದು' ಎಂದರು.

ವಿಷ್ಣುವರ್ಧನ: 'ಅಯ್ಯೋ! ಅವ್ವೆ, ಇದರಲ್ಲಿ ನೀವೂ ಸೇರಿದ್ದೀರಾ! ಇನ್ನೂ ಯಾರುಯಾರು ಸೇರಿದ್ದೀರಿ? ಹೇಳಿಬಿಡಿ.

ಒಂದೆಡೆಯಲ್ಲಿ ಕುಳಿತು ಫಲಾಹಾರವನ್ನು ತೆಗೆದುಕೊಳ್ಳುತ್ತಿದ್ದ ಪಂಡಿತರು 'ಮಕ್ಕಳ ಆಶೆಗೆ ನಮ್ಮ ಸಹಾನುಭೂತಿಯೂ ಇದೆ' ಎಂದರು.

ವಿಷ್ಣುವರ್ಧನ: 'ಹೋ! ಮಾವಯ್ಯನವರೂ ಸಹ! ಇದು ಭಾರಿ ಒಳ ಸಂಚು. ಇನ್ನು ಯಾರಿದ್ದಾರೆ ಇಲ್ಲಿ?' ಎಂದು ಕುವರ ವಿಷ್ಣುವನ್ನು ನೋಡಿ 'ನೀನೇಕೆ ಸುಮ್ಮನಿದ್ದೀಯೆ?' ಎಂದರು.

ಕುವರ ವಿಷ್ಣು: 'ಅಪ್ಪಾಜಿಯವರು ಕೇಳಿದರೆ ಮಾತ್ರ ಹೇಳಬೇಕೆಂದಿದ್ದೆ. ಅಕ್ಕನ ಆಶೆಯೆ ನನ್ನ ಆಶೆ.'

ವಿಷ್ಣುವರ್ಧನ: 'ಏನು! ನೀನೂ ಆ ಕಡೆಯೇ ಒಲಿದೆಯಾ! ಇನ್ನು ನಾವು ಸೋತೆವು' ಎಂದು ಶಾಂತಲೆಯನ್ನು ನೋಡಿ 'ದೇವಿ, ಇದು ಬಹು ದೃಢವಾದ ಬುನಾದಿ, ಭೂಮಿ ಕಂಪಿಸಿದರೂ ಇದು ಇನ್ನು ಅಲ್ಲಾಡದು. ಇನ್ನು ಮುಂದುವರಿಯಲಿ ವ್ಯೂಹರಚನೆ' ಎಂದರು.

ಶಾಂತಲೆ ಗೆದ್ದೆನೆಂಬ ತೃಪ್ತಿಯ ನಗೆಯಿಂದ: 'ವಿಜಯನಾರಾಯಣ ದೇವರ ಗುಡಿಯ ಪಕ್ಕದಲ್ಲೇ ಒಂದು ಸಣ್ಣ ಸೌಮ್ಯಕೇಶವಸ್ವಾಮಿಯ ಗುಡಿ' ಎಂದಳು.

ವಿಷ್ಣುವರ್ಧನ: 'ವ್ಯೂಹನಿರ್ಮಾಣವೂ ಆಗಲೆ ಮುಂದುವರಿದಿದೆ! ಅದಕ್ಕೇ ಇಲ್ಲಿಗೆ ಬಂದಾಗಿನಿಂದ ಒಂದು ಮಾತನ್ನೂ ಆಡದೆ ಮೌನವಾಗಿಯೆ ಗುಣಾಕಾರವನ್ನು ಹಾಕುತ್ತಿದ್ದೆಯ! ತಥಾಸ್ತು, ತಥಾಸ್ತು, ತವ ಇಷ್ಟಾರ್ಥ ಸಿದ್ಧಿರಸ್ತು. ಈ ಸಂಕಲ್ಪ ವಿಜಯನಾರಾಯಣನದೆ. ಒಳ್ಳೆಯದು, ಆ ಭಗ ವಂತನೆ ಈ ಉದ್ಯಮವನ್ನೂ ನಡಸಿಕೊಡಲಿ. ಮಾವಯ್ಯನವರೇ ನಿಂತು ಈ ಕಾರ್ಯವನ್ನೂ ಮಾಡಿಸಿಬಿಡಲಿ.'

ಪಂಡಿತರು: 'ಮಹತ್ಸಂತೋಷದಿಂದ, ಚೆನ್ನಕೇಶವನ ಸಂಕಲ್ಪವೆ ಇದು. ಕೆಲಸದವರನ್ನೂ ರೂವಾರಿಗಳನ್ನೂ ನಾಳೆಯೆ ಬರಹೇಳುತ್ತೇನೆ.'

* * * *

ವಸಂತವೆರಡು ಕಳೆಯುವುದರೊಳಗೆ ಸೌಮ್ಯಕೇಶವ ದೇವಾಲಯವೂ ಪ್ರತಿಷ್ಠಾಪನೆಗೆ ಸರ್ವಾಂಗಸುಂದರವಾದ ಚೆನ್ನಕೇಶವಮೂರ್ತಿಯೂ ಸಿದ್ಧ ವಾದವು. ಪಂಡಿತರೂ ಆಗಮಿಕರೂ ಸೇರಿ ಶುಭ ದಿನ ಶುಭ ಮುಹೂರ್ತವನ್ನು ಪ್ರತಿಷ್ಠೆಗೆ ನಿಶ್ಚಯಿಸಿದರು. ವೇಲಾಪುರದಲ್ಲಿ ಚೆನ್ನಕೇಶವನ ಪ್ರತಿಷ್ಠಾಪನೋತ್ಸವದ ದಿನ ಲಕ್ಷಕ್ಕೆ ಮೇಲೆ ಜನ ಸೇರಿದರು. ದ್ವಾರವತಿ ವೇಲಾಪುರಿಗೆ ಬಂದಿತ್ತು.

'ಈ ಶುಭ ಮಹೋತ್ಸವಕ್ಕೆ ದಯಮಾಡಿಸಿ ಸೌಮ್ಯಕೇಶವಸ್ವಾಮಿಯ ಅನುಗ್ರಹಕ್ಕೆ ಪಾತ್ರರಾಗಬೇಕು' ಎಂದು ಕೋರಿ, ಪಂಡಿತರು ತಮ್ಮ ಗುರು ಪೀಠವಾದ ಶ್ರೀರಂಗದ ಯಾಮುನಾಚಾರ್ಯರ ಶಿಷ್ಯವೃಂದಕ್ಕೂ, ಶ್ರೀರಂಗನಾಥ ಸ್ವಾಮಿಯ ಮಹಾಭಕ್ತರುಗಳಿಗೂ, ಕಂಚಿಯ ವರದರಾಜಸ್ವಾಮಿಯ ಭಕ್ತರುಗಳಿಗೂ, ತಂಜಾವೂರು, ಮಧುರೆ, ರಾಮೇಶ್ವರ ಮುಂತಾದ ಪುಣ್ಯಸ್ಥಳಗಳ ಮಠಾಧಿಪತಿಗಳಿಗೂ ಮಹಾಭಕ್ತರಿಗೂ ಅಕ್ಕರೆಯ ಕರೆ ಓಲೆಗಳನ್ನು ಕಳಿಸಿದ್ದರು.

ಹೊಯಿಸಳರಾಜ್ಯದ ವೇಲಾಪುರಿಯ ಶ್ರೀ ವಿಜಯನಾರಾಯಣ ಸ್ವಾಮಿಯ ದೇವಾಲಯವನ್ನು ನೋಡಿ ಬಂದಿದ್ದವರಿಂದ ಅದರ ವರ್ಣನೆಯನ್ನು ಕೇಳಿ ತಿಳಿದು, ತಾವೂ ಆ ಶಿಲ್ಪಕಲಾನಿಧಿಯೆಂದೆನಿಸಿದ ಮಹಾದೇವಾಲಯವನ್ನು ನೋಡಬೇಕೆಂಬ ಆಶೆ ಹೊರದೇಶದವರಿಗೆ ಬಹುವಾಗಿ ಬೆಳೆದಿತ್ತು. ಇಂತಹ ಸುಸಮಯವನ್ನು ಕಳೆದುಕೊಳ್ಳಬಾರದೆಂದು ಸಾವಿರಾರು ಭಕ್ತಶಿರೋಮಣಿಗಳು ಅಂದು ವೇಲಾಪುರಿಗೆ ಆಗಮಿಸಿದ್ದರು.

ಸುತ್ತಮುತ್ತಲಿನ ಊರಿನವರೆಲ್ಲ ಮೊದಲೆ ವೇಲಾಪುರಿಗೆ ಬಂದು ಸೇರಿದ್ದರು. ಮಾಚಿಕಬ್ಬೆ ಮಾರಸಿಂಗಮಯ್ಯನವರೂ, ಕೇತಮಲ್ಲ ಜಕ್ಕಿಯಬ್ಬೆಯವರೂ, ಕುಲ್ಹಣರಾಹುತ ಸಹಜದೇವಿಯವರೂ ಬಂದರು. ರಾಜಮನೆತನದವರೆಲ್ಲ ಬಂದರು. ವೇಲಾಪುರ ವೈಕುಂಠಸಮವಾಯಿತು.

§

ಪ್ರತಿಷ್ಠಾಪನಾ ಮುಹೂರ್ತಕ್ಕೆ ಮೊದಲೆ ವಿಜಯನಾರಾಯಣ ದೇವಾಲಯದ ಆವರಣವೆಲ್ಲ ಭಕ್ತಜನರಿಂದ ಕಿಕ್ಕಿರಿದುಹೋಗಿತ್ತು. ಆವರಣದಲ್ಲಿಯೆ ಕಟ್ಟಿದ್ದ ಚೆನ್ನಕೇಶವಸ್ವಾಮಿಯ ಆಲಯದಲ್ಲಿ ಭಾಗವತೋತ್ತಮ



ಶ್ರೀ ಚೆನ್ನಕೇಶವ ದೇವಾಲಯದ ಒಂದು ಮಂಟಪ

'ರೂಪಿಗಾತ್ಮವ ತುಂಬಿ ಅಮೃತಗೈದಿರಲಿಲ್ಲಿ
ಕಲೆ ಸಫಲವಾಯ್ತೆಂದು ಶಿಲೆ ಸಾರಿದೆ'—ವಿ. ಸೀ.



ಶ್ರೀ ಚೆನ್ನಕೇಶವ ದೇವಾಲಯದ ಒಂದು ಸ್ತಂಭಶಿಲ್ಪ
'ಕಗ್ಗಲ್ಲ ಬಸಿರಿಂದ ಮೈವಡೆದ ಸೌಂದರ್ಯ'
—ಕೆ. ವಿ. ಅಯ್ಯರ್.

ರಿಗೂ ವಿಪ್ರೋತ್ತಮರಿಗೂ ರಾಜವಾಡೆಯವರಿಗೂ ಸ್ಥಾನಗಳು ಏರ್ಪಟ್ಟಿದ್ದವು. ಕೇಶವಸ್ವಾಮಿಯ ದರ್ಶನ ಎಲ್ಲರಿಗೂ ಲಭಿಸಲೆಂದು, ಹೊರಗೋಡೆ, ಬಾಗಿಲು ಗಳನ್ನು ಆಗ ಇನ್ನೂ ಕಟ್ಟಿಸಿರಲಿಲ್ಲ. ದೂರದಲ್ಲಿ ನಿಂತಿದ್ದರೂ ಗರ್ಭಗುಡಿಯಲ್ಲಿ ನಡೆಯುವ ಕೈಂಕರ್ಯಗಳು ಎಲ್ಲರಿಗೂ ಕಾಣಬರುವಂತಿತ್ತು.

ಪ್ರತಿಷ್ಠಾಪನೆಗೆ ಪೂರ್ವಭಾವಿಯಾದ ವಿಧಿಗಳೆಲ್ಲ ಸಾಂಗವಾಗಿ ನಡೆದವು. ರಾಜಮಾತೆಯರೂ ಪ್ರಭುಗಳೂ ಶಾಂತಲೆ ಲಕ್ಷ್ಮಿಯರೂ ಇತರ ರಾಣಿಯರೂ ಕುವರನೂ ಸ್ನಾನಮಾಡಿ, ಪಟ್ಟೆಮಡಿಗಳನ್ನುಟ್ಟು, ಮಂಗಳವಾದ್ಯಗಳೊಂದಿಗೆ, ಪೂಜಾಸಾಮಗ್ರಿಗಳನ್ನು ಕೈಗಳಲ್ಲಿ ಹಿಡಿದುಕೊಂಡು ಸೌಮ್ಯಕೇಶವನ ಗುಡಿಗೆ ನಡೆದುಬಂದರು. ಆಗಮಿಕರು ಆಗ ಸುಮುಹೂರ್ತದ ವೇಳೆಯೆಂದು ರಾಜರಲ್ಲಿ ಅರಿಕೆಮಾಡಿದರು. ಮಂಗಳವಾದ್ಯಗಳು ಮೊಳಗಿದುವು. ಚೆನ್ನಕೇಶವಸ್ವಾಮಿ ಯನ್ನು ಮುಚ್ಚಿದ್ದ ತೆರೆ ಸರಿದು ಎಲ್ಲರಿಗೂ ದಿವ್ಯದರ್ಶನ ಸಮಯ ಸನ್ನಿಹಿತ ವಾಯಿತೆಂದು ಎಲ್ಲರೂ ತೆರೆ ಸರಿಯುವುದನ್ನೇ ಕಾದು ನೋಡುತ್ತಿದ್ದರು. ಗರ್ಭ ಗುಡಿಯಲ್ಲಿ ಸಹಸ್ರ ದೀಪಗಳು ಪ್ರಜ್ವಲಿಸಿದವು. ದೇವಾಲಯದ ಮಹಾ ಘಂಟೆ ಗಳು ನಾದಕಟ್ಟಿದವು. ಹೊರಗೆ ಚರ್ಮವಾದ್ಯಗಳ ಮಹಾರವ ಮೊರೆಯಿತು. ತೆರೆಯ ಮುಂದೆ ಪರಾತದಲ್ಲಿಟ್ಟಿದ್ದ ಕರ್ಪೂರರಾಶಿ ಉರಿದು ಬೆಳಗಿ ಅಲ್ಲಿನ ಪ್ರದೇಶವನ್ನೆಲ್ಲಾ ಸುಗಂಧಮಯವನ್ನಾಗಿ ಮಾಡಿತು. ತೆರೆ ಸರಿಯಿತು. ಅತಿಶಯ ಸೌಂದರ್ಯದಿಂದ ಒಪ್ಪಿದ ಪ್ರಸನ್ನ ಚೆನ್ನಕೇಶವಸ್ವಾಮಿಯ ದರ್ಶನ ಎಲ್ಲರಿಗೂ ಲಭಿಸಿತು. ಎಲ್ಲರೂ ಮಹದಾನಂದಭರಿತರಾದರು. ಚೆನ್ನಕೇಶವ ಸ್ವಾಮಿಯ ಮಧುರಭಾವ, ನಿಲವು, ಭಂಗಿ, ಆಭರಣ ಸೌಂದರ್ಯ ಎಲ್ಲ ಮನ ಮೋಹಕವಾಗಿತ್ತು. ಆಗ ಆಗಮಿಕರು ಆ ಭವ್ಯಮೂರ್ತಿಯ ಶಿಲಾಪೀಠದಲ್ಲಿ ಲಿಖಿತವಾಗಿದ್ದ ಅಕ್ಷರಗಳನ್ನು ಮುಕ್ತಕಂಠದಿಂದ ಹೀಗೆಂದು ಓದಿದರು :

ಶಾನ್ತಿ್ತಕೃತ್ಸರ್ವಭೂತಾನಾಂ ಪ್ರತಿಷ್ಠಾ ಎಷ್ಣುಕಾಂತಯಾ
ಚೆನ್ನಕೇಶವದೇವಸ್ಯ ಶಾನ್ತಿದೇವ್ಯಾ ಕೃತೋತ್ತಮಾ

ಪುರೋಹಿತರು ಮಂತ್ರಗಳನ್ನು ಹೇಳುತ್ತಿರಲು, ಶಾಂತಲಾದೇವಿ ಹವನ ಹೋಮಾದಿ ಕೈಂಕರ್ಯಗಳನ್ನು ಮುಗಿಸಿ, ಅತಿಶಯ ಶ್ರದ್ಧಾಭಕ್ತಿಗಳಿಂದ ಚೆನ್ನಕೇಶವಸ್ವಾಮಿಯ ಪ್ರತಿಷ್ಠಾಪನಗೈದಳು. ಶಾಂತಲೆ ಲಕ್ಷ್ಮಿಯರಿಬ್ಬರೂ ಸಹಸ್ರ ಸಹಸ್ರ ಪುಷ್ಪಗಳಿಂದ ಪರಮಾತ್ಮನ ಪೂಜೆಮಾಡಿ ಧನ್ಯರಾದರು. ಇದ

ನ್ನೆಲ್ಲ ಮಾಡುತ್ತಿರುವಾಗ್ಗೆ ಶಾಂತಲೆಯ ಹೃದಯ ಆನಂದದಿಂದ ಉಕ್ಕಿ ಉಕ್ಕಿ ಆಕೆಗೆ ಭಕ್ತಿಯ ಆವೇಶವುಂಟಾಯಿತು. ತನಗೆ ಇಷ್ಟೆಲ್ಲ ಸೌಭಾಗ್ಯವನ್ನು ಕಲ್ಪಿಸಿಕೊಟ್ಟ ಪತಿಯ ಬಳಿಗೆ ಬಂದು, ತುಂಬಿದ ಸಭೆಯಲ್ಲಿ ಪಂಚಾಂಗ ಪ್ರಣಾಮಮಾಡಿದಳು. ಲಕ್ಷ್ಮಿಯೂ ಅಕ್ಕನನ್ನು ಅನುಸರಿಸಿದಳು. ಅನಂತರ ಇಬ್ಬರೂ ರಾಜಮಾತೆಯ, ತಮ್ಮ ಅಬ್ಬೆ ಅಯ್ಯದಿರ ಪಾದಗಳಿಗೆ ಎರಗಿದರು. ಪಂಡಿತರ ಪಾದಗಳಿಗೆ ಎರಗಿದರು. ಮಹಾರಾಣಿಯಾದರೂ ದೇವದೇವನ ಸನ್ನಿಧಿಯಲ್ಲಿ ತಾನು ಅಲ್ಪಳೆಂದು ಭಾವಿಸಿ, ಶಾಂತಲದೇವಿ ವಿನಯದಿಂದ ಕೈಜೋಡಿಸಿ, ಅಲ್ಲಿದ್ದ ಸಮಸ್ತ ಭಗವದ್ಭಕ್ತರುಗಳಿಗೂ, ದೇವತಾದರ್ಶನಕ್ಕೆಂದು ನೆರೆದಿದ್ದ ತನ್ನ ಪ್ರಜೆಗಳೆಲ್ಲರಿಗೂ ತಲೆಬಾಗಿ ಪ್ರಣಾಮಗಳನ್ನರ್ಪಿಸಿದಳು. ಅವರ ಕಣ್ಣುಗಳಿಗೆ ಶಾಂತಲೆ ಲಕ್ಷ್ಮಿಯರು, ಶ್ರೀದೇವಿ ಭೂದೇವಿಯರಂತೆ ಕಂಡು ಬಂದರು. ಶಾಂತಲದೇವಿಯ ಮನ ಆನಂದಸಮಾಧಿಯನ್ನಡರಿತು. ಲಕ್ಷ್ಮಿಯನ್ನು ನೋಡಿ 'ಲಕ್ಷ್ಮಿ, ವೀಣೆ ತೆಗೆದುಕೊ, ನಾನು ಇಂದು ನನ್ನ ದೇವನಿಗಾಗಿಯೆ ನರ್ತಿಸುತ್ತೇನೆ' ಎಂದಳು. ದೇಚ ಒಂದು ಕ್ಷಣದಲ್ಲಿ ವೀಣೆಯನ್ನೂ ಗೆಜ್ಜೆಸರಗಳನ್ನೂ ತಂದಿಟ್ಟ.

ಗೆಜ್ಜೆಯ ಸರಗಳನ್ನು ಕೈಯಲ್ಲಿ ಕೊಂಡು, ಶಾಂತಲೆ ಪ್ರಭುಗಳ ಬಳಿಗೆ ಬಂದು, ಆನಂದಾತಿಶಯದಿಂದ ನಮಸ್ಕರಿಸಿದಳು. ಪ್ರಭುಗಳು ಶಾಂತಲೆಯ ಮನೋಭಾವವನ್ನರಿತು ಸುಮ್ಮಾನದಿಂದ 'ಚೆನ್ನೆ, ನಡೆಯಲಿ ಚೆನ್ನಕೇಶವನಿಗೆ ನಿನ್ನ ಆನಂದನರ್ತನಸೇವೆ. ಇಲ್ಲಿ ನಿನಗೆ ಯಾವ ಸಂಕೋಚವೂ ಬೇಡ. ಇಲ್ಲಿರುವವರೆಲ್ಲರೂ ಸಂತರು. ನಾವೆಲ್ಲ ಈಗ ಅವನ ಮಕ್ಕಳು. ಅವನ ಗರ್ಭದಲ್ಲಿದ್ದೇವೆ' ಎಂದು ಹೇಳಿ ಅನುಮತಿಕೊಟ್ಟರು. ಆ ಬಳಿಕ ಶಾಂತಲದೇವಿ ರಾಜಮಾತೆ, ಪಂಡಿತರು, ತನ್ನ ಅಬ್ಬೆ, ಅಯ್ಯ, ಇವರಿಗೆ ನಮಸ್ಕರಿಸಿ, ಮತ್ತೆ ಸದಸ್ಸಿಗೆ ನಮಸ್ಕರಿಸಿ, ಗೆಜ್ಜೆಸರಗಳನ್ನು ಭಗವಂತನ ಅಡಿದಾವರೆಗಳಲ್ಲಿಟ್ಟು, ಪುಷ್ಪಗಳಿಂದ ಅರ್ಚಿಸಿ, ಕರ್ಪೂರ ಆರತಿಯನ್ನು ಬೆಳಗಿದಳು. ಅಷ್ಟುಹೊತ್ತಿಗೆ ಲಕ್ಷ್ಮಿ ವೀಣೆಯನ್ನು ಶ್ರುತಿಮಾಡಿಕೊಂಡಳು. ಶಾಂತಲೆ ಗೆಜ್ಜೆಯ ಸರಗಳನ್ನು ಕೈಗೆ ತೆಗೆದು ಕಣ್ಣಿಗೊತ್ತಿಕೊಂಡು, ಶಾರದೆಯನ್ನು ಮನದಲ್ಲಿ ಸ್ಮರಿಸಿ, ಕಣ್ಮುಚ್ಚಿ ಸ್ವಲ್ಪಕಾಲ ಧ್ಯಾನಾಸಕ್ತಳಾದಳು. ಕಣ್ತೆರೆದಾಗ ಶಾಂತಲೆಯ ಕಣ್ಣುಗಳ ಎದುರಿಗೆ ಶಿಲಾಮೂರ್ತಿ ಕಾಣಲಿಲ್ಲ. ಚೆನ್ನಕೇಶವನೆ ಸಾಕ್ಷಾತ್ ಎದುರಿಗೆ ನಿಂತು ಸ್ಮಿತವದನ

ನಾಗಿ ತನ್ನನ್ನು ನೋಡುತ್ತಿರುವನೆಂದು ಆಕೆಗೆ ಭಾವನೆಯಾಯ್ತು. ಅಷ್ಟು ಹೊತ್ತಿಗೆ ಲಕ್ಷ್ಮಿ ಅಕ್ಕನ ಕಾಲುಗಳಿಗೆ ಗೆಜ್ಜೆಯ ಸರಗಳನ್ನು ಅಲಂಕರಿಸಿದ್ದಳು. ದೇವಾಲಯದ ವಾತಾವರಣ ಆಗ ಬಹು ಪವಿತ್ರವಾಗಿತ್ತು. ಭಗವಂತನ ಎದುರಿನಲ್ಲಿ ಎಲ್ಲರೂ ಮಕ್ಕಳಾಗಿಹೋಗಿದ್ದರು. ಶಾಂತಲೆಯ ಹೃದಯ ಮಿಡಿಯಿತು. ದೇವಿಯರ ನರ್ತನಕ್ಕೆ ವಿಶಾಲ ಸ್ಥಳವೇರ್ಪಟ್ಟಿತು. ಲಕ್ಷ್ಮಿ ವೀಣೆಯ ನಿನದಕ್ಕೆ ತನ್ನ ಮಧುರಧ್ವನಿಯನ್ನು ಕೂಡಿಸಿದಳು. ಲಕ್ಷ್ಮಿಯೂ ಶಾಂತಲೆಯಷ್ಟೇ ಆನಂದಸಮಾಧಿಯಲ್ಲಿದ್ದಳು. ಅಕ್ಕನ ಕಾಲಿನ ಗೆಜ್ಜೆಯ ಧ್ವನಿ ತಾಳ ಕಟ್ಟಿತು. ಆಗ ಅಲ್ಲಿದ್ದ ಸಮಸ್ತ ಭಕ್ತರ ಹೃದಯಗಳೂ ಆ ಮಧುರಲಯದಲ್ಲಿ ಮಧುರ ನಾದಬ್ರಹ್ಮದಲ್ಲಿ ಐಕ್ಯವಾದುವು, ಭಕ್ತಿಪರಾಧೀನವಾದವು. ಇಹವು ಮರೆಯಿತು. ಎಲ್ಲರ ಹೃದಯಗತಿಯೂ ನೃತ್ಯದ ಲಯಕ್ಕೆ ಮೇಳಿಸಿತು.

ದೇವನ ಸಮ್ಮುಖದಲ್ಲಿ, ಭಕ್ತಿಯ ತುಂಬು ಆವೇಶದಲ್ಲಿ ಶಾಂತಲೆ ಆನಂದ ನರ್ತನವನ್ನು ಮಾಡುತ್ತಿದ್ದಾಳೆ. ಸ್ವರ್ಣಲತೆಯಂತಿರುವ ದೇವಿಯ ದೇಹ ತೂಗುತಿದೆ, ಬಳುಕುತಿದೆ; ಹಕ್ಕಿಗಿಂತ ಹಗುರವಾಗಿದೆ. ದೇವನ ಪ್ರಾತಃ ಪೂಜೆಗಾಗಿ ಶಾಂತಲೆ ಪುಷ್ಪೋದ್ಯಾನಕ್ಕೆ ಬಂದಿದ್ದಾಳೆ, ನವವಿಕಸಿತ ಕುಸುಮಗಳನ್ನು ಆಯ್ದು ಆಯ್ದು ಸಂಗ್ರಹಿಸುತ್ತಾಳೆ. ವಿಕಸಿಸುತ್ತಿರುವ ಕಮಲಗಳನ್ನು ಸಂಗ್ರಹಿಸುತ್ತ, ಭೃಂಗಗಳು ಬಂದು ಎರಗಿದರೆ, ತಾನೂ ಅವುಗಳಲ್ಲಿ ಒಂದು ಭೃಂಗಿಯಾಗಿ, ಹೂವಿಂದ ಹೂವಿಗೆ ಅವುಗಳೊಂದಿಗೆ ಹಾರಿ, ಹೂಗಳನ್ನು ಇತರ ತುಂಬಿಗಳು ಮುಟ್ಟದಂತೆ ನಿವಾರಿಸುತ್ತ ಮಕರಂದಪೂರ್ಣ ಸೌರಭಪೂರ್ಣ ಕುಸುಮಗಳನ್ನೆ ಹುಡುಕಿ ಹುಡುಕಿ ಶೇಖರಿಸುತ್ತಾಳೆ. ಶೇಖರಿಸಿದ ಪುಷ್ಪಗಳನ್ನು ದೇವಾಲಯಕ್ಕೆ ತರುತ್ತಾಳೆ, ಪರಮಭಕ್ತಿಯಿಂದ ದೇವನನ್ನು ಪುಷ್ಪಗಳಿಂದ ಅರ್ಚಿಸುತ್ತಾಳೆ, ಧೂಪದೀಪಗಳನ್ನು ಬೆಳಗುತ್ತಾಳೆ, ಆರತಿ ಬೆಳಗುತ್ತಾಳೆ, ಆನಂದ ನರ್ತನ ಮಾಡುತ್ತಾಳೆ. ಪ್ರಸನ್ನನಾಗೆಂದು ದೀನತೆಯಿಂದ ಬೇಡುತ್ತಾಳೆ, ಕಣ್ಣೀರು ಮಿಡಿದು ಬೇಡುತ್ತಾಳೆ, ತನ್ನ ಆತ್ಮವನ್ನೇ ನಿವೇದಿಸಿಕೊಳ್ಳುತ್ತಾಳೆ. ದೇವನು ಪ್ರತ್ಯಕ್ಷನಾಗುತ್ತಾನೆ, ಶಾಂತಲೆಯನ್ನು ಹರಸುತ್ತಾನೆ, ಆಕೆಯನ್ನು ತನ್ನಲ್ಲಿ ಐಕ್ಯಮಾಡಿಕೊಳ್ಳುತ್ತಾನೆ.

ಅಲ್ಲಿ ನೆರೆದಿದ್ದ ಭಾಗವತೋತ್ತಮರೂ ಭಕ್ತಾದಿಗಳೂ ಇಷ್ಟು ಭಾವಪೂರ್ಣವೂ, ಇಷ್ಟು ಸುಂದರವೂ, ಇಷ್ಟು ಭಕ್ತಿಪರವಶತೆಯಿಂದ ಕೂಡಿದ್ದೂ

ಆದ ನೃತ್ಯವನ್ನು ತಾವು ಎಂದೂ ನೋಡಿದ್ದೆ ಇಲ್ಲವೆಂದೂ, ಶಾಂತಲದೇವಿ ಖಂಡಿತವಾಗಿ ಮಹಾಲಕ್ಷ್ಮಿಯ ಅಂಶವೇ ಎಂದೂ, ತಮ್ಮ ಕಣ್ಣುಗಳು ಇಂದು ಸಾರ್ಥಕವಾದುವು ಎಂದೂ ಭಾವಿಸಿದರು. ಪ್ರಭು ವಿಷ್ಣುವರ್ಧನರ ಹೃದಯ ವೆಂತೂ ದೇವಿಯರ ನೃತ್ಯದಲ್ಲಿ ಸಮಭಾಗಿಯಾಗಿತ್ತು. ಆಕೆ ಭಾವೋನ್ನತ ಳಾಗಿ ಆನಂದನೃತ್ಯ ಮಾಡುತ್ತಿದ್ದಾಗ ಇವರ ಹೃದಯವೂ ಆನಂದತಾಂಡವ ವಾಡುತ್ತಿತ್ತು.

ದೇಹ ಸೋಲುವವರೆಗೂ ಶಾಂತಲೆ ಆನಂದನರ್ತನ ಮಾಡಿ, ತನ್ನ ಚೆನ್ನ ಕೇಶವನಿಗೆ ಸಾಷ್ಟಾಂಗವೆರಗಿದಂತೆಯೆ ಪ್ರಜ್ಞೆ ತಪ್ಪಿದಳು. ಈ ಸೂಕ್ಷ್ಮವ ನ್ನರಿತ ಲಕ್ಷ್ಮಿ ಒಡನೆ ತನ್ನ ವೀಣೆಯನ್ನು ಕೆಳಗಿಟ್ಟು ಓಡಿಬಂದು ಅಕ್ಕನನ್ನು ಬಾಚಿ ಎತ್ತಿಕೊಂಡು, ಮೇಲ್ಮುಖವಾಗಿ ಮಲಗಿಸಿ ಬೀಸಣಿಗೆಯಿಂದ ಗಾಳಿ ಹಾಕಿದಳು. ಮಾಚಿಕಬ್ಬೆ, ನೆತ್ತಿಗೆ ತಣ್ಣೀರು ತಳಿದು ಎಚ್ಚರಿಸಿದರು. ಪ್ರಭು ಗಳು ಆತುರದಿಂದ ದೇವಿಯ ಬಳಿಗೆ ಬಂದರು. ಆಗ ತಾನೆ ಕಣ್ಣು ತೆರೆದು ಬಾಹ್ಯಪ್ರಪಂಚಕ್ಕೆ ಮರಳುತ್ತಿದ್ದ ಶಾಂತಲೆಗೆ ಚೆನ್ನಕೇಶವನೇ ಬಳಿಗೆ ಬಂದಂತಾ ಯಿತು. ನಡುಗುತ್ತಿದ್ದ ಕೈಗಳನ್ನು ಕಷ್ಟದಿಂದ ಜೋಡಿಸಿದಳು. ಪ್ರಭುಗಳು ಶಾಂತಲೆಯನ್ನು ತಮ್ಮ ಕೈಗಳಿಂದ ಹಿಡಿದು ಮೆಲ್ಲನೆ ಎಬ್ಬಿಸಿ ಕೂಡಿಸಿ 'ದೇವಿ, ನಿನಗೆ ಬಹು ಆಯಾಸವಾಯಿತು. ನಮಗೆಲ್ಲರಿಗೂ ಮಹದಾನಂದವಾಯಿತು. ಎಲ್ಲರಿಗಿಂತಲೂ ಹೆಚ್ಚು ಆನಂದ ನಿನ್ನ ಚೆನ್ನಕೇಶವನಿಗಾಯಿತು. ಇನ್ನು ನೀನು ಮನೆಗೆ ಹೋಗಿ ವಿಶ್ರಮಿಸತಕ್ಕುದು' ಎಂದು ಹೇಳಿದರು. ಅಷ್ಟು ಹೊತ್ತಿಗೆ ರಾಜಮಾತೆ, ಪಂಡಿತರು, ಗಂಗರಾಜರು, ಮಾರಸಿಂಗಮಯ್ಯ ಎಲ್ಲರೂ ಬಳಿಗೆ ಬಂದಿದ್ದರು. ಕೆಲವು ನಿಮಿಷಗಳ ಬಳಿಕ, ಸ್ವಲ್ಪ ಜಲಪಾನಮಾಡಿ, ಶಾಂತಲೆ ಎದ್ದುನಿಂತಳು. ಎಲ್ಲರಿಗೂ ನಮಸ್ಕಾರ ಮಾಡಿದಳು. ಅಲ್ಲಿದ್ದ ಜನ ರೆಲ್ಲ 'ಉಘೇ! ಉಘೇ! ತಾಯಿ ಶಾಂತಲದೇವಿ! ಮಹಾರಾಣಿ ಉಘೇ! ನೃತ್ಯಸರಸ್ವತಿ ಉಘೇ!' ಎಂದು ಮೇರೆಮೀರಿದ ಹರ್ಷಾನಂದಗಳಿಂದ ಕೂಗಿ ದರು. ತಮ್ಮ ಮಹಾರಾಣಿಗೆ ತಲೆಬಾಗಿ ಭಕ್ತಿವಿಶ್ವಾಸಗಳಿಂದ ಎಲ್ಲರೂ ನಮಸ್ಕರಿಸಿದರು. ಪ್ರಜೆಗಳ ಭಕ್ತಿಗೌರವಗಳು ಹೆಚ್ಚಾದುವು.

ರಾಜಮಾತೆಯೊಡನೆ ಮಾಚಿಕಬ್ಬೆ, ಶಾಂತಲೆ, ಲಕ್ಷ್ಮಿ ಇವರೆಲ್ಲ ವಿಶ್ರಮಿ ಸಲು ಅರಮನೆಗೆ ಹೊರಟರು. ಪ್ರಭುಗಳು ಪಂಡಿತರೊಡನೆ ಅಂದಿನ ವಿಶೇಷ



'ನೃತ್ಯಸರಸ್ವತಿ'

'ನಟನವಾಡಿದಳ್—ತರುಣಿ—ನಟನವಾಡಿದಳ್'

—ಡಿ. ವಿ. ಜಿ.



ಒಂದು ಮದನಿಕಾವಿಗ್ರಹ

'ಕೈಯ ಕನ್ನಡಿಯಲ್ಲಿ ಹಣೆಯ ತಿಲಕವ ತಿದ್ದಿ'

—ವಿ. ಸೀ.



ಇನ್ನೊಂದು ಮದನಿಕಾವಿಗ್ರಹ

'ಮೋಹಿನಿವೇಷದೆ ಭಸ್ಮದಾನವನ
ದಾಹಿಸಿ ಧರ್ಮವ ಕಾಯ್ದ ಚರಿತೆಯಿದು'—ಡಿ. ವಿ. ಜಿ.



ಮತ್ತೊಂದು ಮದನಿಕಾವಿಗ್ರಹ

'ಸ್ತ್ರೀವಿಲಾಸದ ಸೀಮೆ ನೀನೆಲೆ ಕೇಶವೇಶ್ವರ ಮೋಹಿನೀ'

—ಡಿ. ವಿ. ಜಿ.

ಪೂಜೆಗಳನ್ನು ಸಮರ್ಪಿಸಲು ವಿಜಯನಾರಾಯಣನ ಗುಡಿಗೆ ಹೊರಟರು. ಭಕ್ತಸಮೂಹವೆಲ್ಲ ಅವರನ್ನು ಹಿಂಬಾಲಿಸಿತು.

ಮಹಾರಾಣಿಯ ಸ್ವರ್ಗೀಯ ನೃತ್ಯವನ್ನು ನೋಡಿದ ಕುಶಲ ರೂವಾರಿಗಳಿಗೆ, ಆಗ ಮನಸ್ಸಿಗೆ ಒಂದು ಸ್ಫೂರ್ತಿ ಹೊಳೆಯಿತು. ಮಹಾರಾಣಿಯ ನೃತ್ಯಭಾವಭಂಗಿಗಳಲ್ಲಿ ಕೆಲವನ್ನಾದರೂ ತಮ್ಮ ಕಲೆಯಲ್ಲಿ ನಿರೂಪಿಸಿ ದೇವಾಲಯವನ್ನು ಇನ್ನು ಹತ್ತುಮಡಿ ಸೊಗಸುಗೊಳಿಸಬೇಕೆಂದು ಆಶೆಯುಳ್ಳವರಾದರು. ಒಬ್ಬೊಬ್ಬರು ಒಂದೊಂದು ಲಾಸ್ಯವನ್ನು, ಒಂದೊಂದು ಭಾವವನ್ನು ಆರಿಸಿಕೊಂಡರು. 'ಸೊಬಗಿನ, ಶೃಂಗಾರಸಾರದ ನೆಲೆವೀಡುಗಳು ಇವು' ಎಂಬಂತೆ ಶಿಲಾಬಾಲಿಕೆಯರನ್ನು ಕಡೆದು, ದೇವಾಲಯದ ಸುತ್ತಲೂ ಕಣ್ಣಿಗೆ ರಮ್ಯವಾಗಿ ಕಾಣಬರುವ ಎಡೆಗಳಲ್ಲಿ ಜೋಡಿಸಿ ನಿಲ್ಲಿಸಿದರು. ಅದನ್ನು ಪ್ರಭುಗಳೂ, ಮಹಾರಾಣಿ ಶಾಂತಲೆ, ಲಕ್ಷ್ಮಿಯರೂ ನೋಡಿ ಮುಗ್ಧರಾದರು. ಪ್ರಭುಗಳು ಉತ್ತಮ ರೂವಾರಿಗಳಾದ ಅವರಿಗೆ ಉತ್ತಮ ಬೆಳೆಭೂಮಿಗಳನ್ನು ಬಹುಮಾನವನ್ನಾಗಿ ಕೊಟ್ಟರು. ಅದರ ಕಲಾನೈಪುಣ್ಯವನ್ನು ಬಹುವಾಗಿ ಮೆಚ್ಚಿಕೊಂಡರು.

ಮಹಾರಾಣಿಯ ಅತಿಶಯ ನೃತ್ಯವನ್ನು ಕಂಡು ಆನಂದಪಟ್ಟ ಕೇತಮಲ್ಲನಿಗೆ ಆಕ್ಷಣವೆ ಮನಸ್ಸಿನಲ್ಲಿ ಒಂದು ಭವ್ಯವಾದ ಆಲೋಚನೆ ಮೂಡಿತು. ಕ್ಷಿಪ್ರದಲ್ಲಿಯೆ ಅದು ಅವನ ಮಹಾಭಿಲಾಷೆಯಾಗಿ ವರ್ಧಿಸಿತು. ವಿಜಯನಾರಾಯಣ, ಚೆನ್ನಕೇಶವ ದೇವಾಲಯಗಳನ್ನು ಕಂಡು ಕೇತಮಲ್ಲ ಬೆರಗಾಗಿದ್ದ. ವ್ಯಾಪಾರಿಗನಾಗಿ ದೇಶದೇಶಗಳನ್ನು ಸುತ್ತಿ ನೋಡಿದ್ದ ಅವನು ಇಂತಹ ಕಲಾಕುಶಲತೆಯನ್ನು ಬೇರಾವ ದೇಶದಲ್ಲಿಯೂ ಕಂಡಿರಲಿಲ್ಲ. ಇಂತಹ ದಿವ್ಯ ದೇವಾಲಯಗಳನ್ನು ಕಂಡು ಜನರಿಗೆ ಆಗುವ ಭಕ್ತಿ ಆನಂದಗಳನ್ನು ಕೇತಮಲ್ಲ ಈಗ ಕಣ್ಣಾರೆ ಕಂಡ. ಹೊಯಿಸಳ ನಾಡಿನ ಪ್ರಜೆಗಳಲ್ಲಿ, ಪ್ರಭುಗಳಲ್ಲಿ, ಇದ್ದ ಇಂತಹ ದೈವಭಕ್ತಿಯನ್ನೂ ಧರ್ಮದೃಷ್ಟಿಯನ್ನೂ ಅವನು ಇನ್ನೆಲ್ಲಿಯೂ ನೋಡಿರಲಿಲ್ಲ. ವಿಷ್ಣುವರ್ಧನ ಪ್ರಭುಗಳಲ್ಲಿ, ಆತನ ಹಿರಿಯ ರಾಣಿಯರಲ್ಲಿ, ಕೇತಮಲ್ಲನ ಭಕ್ತಿವಿಶ್ವಾಸಗಳು ನೂರ್ಮಡಿ ಹೆಚ್ಚಿದವು. 'ದೇಶದಲ್ಲಿ ದೈವಭಕ್ತಿಯುಳ್ಳ ಧರ್ಮಿಷ್ಠನಾದ ಪ್ರಭುವಿರಬೇಕು. ಅಂತಹ ದೇಶ ವರ್ಧಿಸುವುದು. ಪ್ರಜೆಗಳಲ್ಲಿ ದೈವಭಕ್ತಿ ನೆಲಸಿದಷ್ಟೂ ಧರ್ಮವೂ ಸುಭಿಕ್ಷವೂ ನೆಲಸು

ವುವು' ಎಂದು ಕೇತಮಲ್ಲನು ತಿಳಿದ. ಆದ್ದರಿಂದ ಅವನು ದೇವನ ಕೃಪೆಯಿಂದ ಒದಗಿದ ತನ್ನ ಎಲ್ಲ ಸಂಪತ್ತನ್ನೂ ದೇವನಿಗೇ ಸಮರ್ಪಿಸಿ, ಉಳಿದ ಆಯುಷ್ಯವನ್ನು ವಿಷ್ಣುವರ್ಧನಪ್ರಭುವಿನ ಹಂಸದಂತೆಯೂ, ಗರುಡನಂತೆಯೂ, ನಂದಿಯಂತೆಯೂ, ಸೇವೆಯಲ್ಲಿ ಕಳೆಯುವುದೆ ತನಗೆ ಪರಮ ಶ್ರೇಯಸ್ಸೆಂದು ಭಾವಿಸಿದ. ಈ ಯೋಜನೆಗೆ ತನ್ನ ಪತ್ನಿ ಜಕ್ಕಿಯಬ್ಬೆಯ ಒಪ್ಪಿಗೆ ಇದ್ದೇ ಇರುವುದೆಂದು ಆ ಉತ್ತಮನು ಅರಿತಿದ್ದನಾದರೂ, ಆಕೆಗೆ ತನ್ನ ಮನಸ್ಸನ್ನು ಬಿಚ್ಚಿ ಹೇಳಿದ ನಂತರವೆ ಕಾರ್ಯೋನ್ಮುಖನಾಗಬೇಕೆಂದು ನಿರ್ಧರಿಸಿದ.

§

ಅದೇ ದಿನ ಸಂಜೆ ಕೇತಮಲ್ಲ ಜಕ್ಕಿಯಬ್ಬೆಯವರು ತಮ್ಮ ಮಗಳು ಚಂದಲೆಯನ್ನು ಕರೆದುಕೊಂಡು ಮಹಾರಾಣಿ ಶಾಂತಲೆಯ ಆರೋಗ್ಯವನ್ನು ವಿಚಾರಿಸುವುದಕ್ಕೆ ಅರಮನೆಗೆ ಬಂದರು. ಮಾಚಿಕಬ್ಬೆಯೇ ಅವರನ್ನು ತಮ್ಮ ಮಗಳ ಬಳಿಗೆ ಕರೆದೊಯ್ದರು. ಶಾಂತಲದೇವಿ ತನ್ನ ತಂದೆಗೆ ಧನಿಕನಾದ ಸೋದರಳಿಯ ಒಬ್ಬನಿರುವನೆಂದೂ, ಆತ ದೊಡ್ಡ ವ್ಯಾಪಾರಿಯೆಂದೂ, ದೇಶಾಂತರಗಳಿಂದ ಕುದುರೆಗಳನ್ನು, ಒಂಟೆಗಳನ್ನು ತರಿಸಿ ವ್ಯಾಪಾರ ಮಾಡುತ್ತಿರುವನೆಂದೂ ಕೇಳಿದ್ದಳೇ ಹೊರತು ಆತನನ್ನು ಅದುವರೆಗೆ ಕಂಡಿರಲಿಲ್ಲ. ಮಹಾರಾಣಿಗೆ ಈ ಸಂದರ್ಭದಲ್ಲಿ ಹತ್ತಿರದ ಬಂಧುವೊಬ್ಬನ ಪರಿಚಯವಾಯಿತು.

ಜಕ್ಕಿಯಬ್ಬೆ ಮಹಾರಾಣಿಗೆ ವಂದಿಸಿ 'ಇಂದಿನ ಭಕ್ತಿನರ್ತನದಿಂದ ತಮಗೆ ಬಹು ಆಯಾಸವಾಗಿರಬೇಕು. ಇಷ್ಟು ಅದ್ಭುತವಾದ ಆನಂದನರ್ತನವನ್ನು ನಾವು ಕಂಡದ್ದೆ ಇಲ್ಲ. ನಾವು ನೋಡಿರುವುದು ಹಳ್ಳಿಯ ಜನರ ಕುಣಿತವನ್ನು. ಇದು ದೇವವಿದ್ಯೆ, ಗಂಧರ್ವವಿದ್ಯೆ, ಬಹು ಸಂತೋಷಪಟ್ಟೆವು. ಈಗ ತಮ್ಮ ಕುಶಲವನ್ನು ಕೇಳಲು ಬಂದೆವು. ದೇವಿಯವರಿಗೆ ಆಯಾಸ ಪರಿಹಾರವಾಯಿತೆ? ತಮ್ಮ ತಾಯಿತಂದೆಗಳು ನಮ್ಮನ್ನು ಇಲ್ಲಿಯೆ ಕಟ್ಟಿಹಾಕಿ ನಿಲ್ಲಿಸಿಕೊಂಡುಬಿಟ್ಟಿದ್ದಾರೆ. ತಮ್ಮ ರಾಜ್ಯ ಬಹು ಚೆನ್ನಾಗಿದೆ. ಪ್ರಭುಗಳು ಮಹಾವೀರರು, ಉದಾರಿಗಳು, ಧರ್ಮಿಗಳು, ಜಾತ್ಯಾತೀತರು, ಭಗವದ್ಭಕ್ತರು. ಇಂತಹ ಪ್ರಭುಗಳ ರಕ್ಷಣೆಯಲ್ಲಿರಲು ನಮಗೆ ಒಂದು ಧೈರ್ಯ, ಒಂದು ಆನಂದ' ಎಂದಳು.

ಶಾಂತಲೆ: 'ಅವ್ವೆ, ನೀವು ನನಗೆ ಪಾವೆಯಲ್ಲಿ ತಾಯಿಯಂತೆ. ನಮಗೆ ಹತ್ತಿರದ ಬಂಧುಗಳೆಂದರೆ ನೀವುಗಳೆ. ನೀವು ನಮ್ಮ ದೇಶದಲ್ಲಿರುವುದು ನಮಗೆ ಬಹು ಸಂತೋಷ. ನನ್ನ ಅಯ್ಯ ಅವ್ವೆ ಇಬ್ಬರೂ ನಿಮ್ಮಿಬ್ಬರ ವಿಷಯವಾಗಿ ಬಹಳ ಹೇಳಿರುವರು. ಈ ಕನ್ಯೆ ನಿಮ್ಮ ಮಗಳೆ?'

ಮಾಚಿಕಬ್ಬೆ: 'ಹೌದು, ನಮಗೆ ನೀನಿರುವ ಹಾಗೆ ಅವರಿಗೂ ಇವಳೊಬ್ಬಳೆ.'

ಶಾಂತಲೆ: 'ಹೌದೆ! ಇಲ್ಲಿ ಬಾ ತಂಗಿ, ನಿನ್ನ ಹೆಸರೇನು?'

ಹುಡುಗಿ: 'ನನ್ನ ಹೆಸರು ಚಂದಲೆ.'

ಶಾಂತಲೆ: 'ಚಂದಲೆ! ಎಷ್ಟು ಸೊಗಸಾದ ಹೆಸರು! ನಿನ್ನ ರೂಪಿಗೆ ತಕ್ಕಂಥ ಹೆಸರು. ಚಂದಲೆ, ನೀನು ಏನೇನನ್ನು ಕಲಿತಿರುವೆ? ಕಲಿಯುತ್ತಿರುವೆ?'

ಜಕ್ಕಿಯಬ್ಬೆ: 'ನಾವು ಊರೂರು ತಿರುಗುತ್ತಿದ್ದರೆ ಇವಳಿಗೆ ವಿದ್ಯೆ ಹೇಗೆ? ಇವಳಿಗಾಗಿಯಾದರೂ ನಾವು ಇಲ್ಲಿ ನಿಲ್ಲಬೇಕು.'

ಶಾಂತಲೆ: 'ಕಲಿಯುವುದಕ್ಕೆ ಈಗ ವಯಸ್ಸೇನು ಮೀರಿತು? ಅಥವಾ ಯಾವ ವಯಸ್ಸಾದರೆ ಏನು? ನಮ್ಮ ಗುರುಗಳು ಹೇಳುತ್ತಿದ್ದರು—ಯಾರಿಗೆ ವಿದ್ಯೆ ಕಲಿಯಲು ಆಶೆಯಿಲ್ಲವೊ, ಅಥವಾ ಆಶೆ ಮುಗಿಯುತ್ತದೆಯೊ, ಅಲ್ಲಿಗೆ ಅವರ ಆಯುಸ್ಸೂ ಮುಗಿದಂತೆಯೇ,—ಎಂದು. ನನ್ನ ತಂಗಿ ಚೆನ್ನಾಗಿಯೆ ಕಲಿಯುವಳು. ಅಲ್ಲವೆ ಚಂದಲೆ?'

ಚಂದಲೆ ನಾಚಿಕೆಯಿಂದ ತಲೆ ತಗ್ಗಿಸಿದಳು.

ಮಾಚಿಕಬ್ಬೆ ಶಾಂತಲೆಯನ್ನು ಕುರಿತು 'ಮಗಳೆ, ನೀನು ಅರಮನೆಗೆ ಹೋದಮೇಲೆ, ಅತ್ತ ಲಕ್ಷ್ಮಿಯೂ ಹೋದಮೇಲೆ, ಮನೆ ಬರಿದಾಯಿತು. ನಿನ್ನ ಅಯ್ಯನಿಗಂತೂ ಬಾಳೇ ಬರಿದಾಗಿ ಕಂಡಿತು. ಈಗ ಇವರೆಲ್ಲ ನಮ್ಮ ಮನೆಯಲ್ಲೆ ಇದ್ದಾರೆ. ನಿನ್ನ ಮಾವನವರನ್ನು ಒಪ್ಪಿಸಬೇಕಾದರೆ ಬಲು ಕಷ್ಟವಾಯಿತು' ಎಂದರು.

ಶಾಂತಲೆ ಕೇತಮಲ್ಲನನ್ನು ನೋಡಿ ಕೈಮುಗಿದು 'ಮಾವಯ್ಯನವರು ಒಪ್ಪಿದುದು ಬಹು ಸಂತೋಷ. ಪ್ರಭುಗಳೂ ಇದನ್ನು ಕೇಳಿ ತೃಪ್ತಿಪಟ್ಟರು. ಮಾವಯ್ಯ, ಬೇರೆ ಮನೆ ಮಾಡುವುದು ಖಂಡಿತ ಬೇಡ, ಅವ್ವೆಗಂತೂ

ಸಾಕುವುದಕ್ಕೆ ಒಂದು ಮಗು ಬೇಕೇ ಬೇಕು. ಇವೆಲ್ಲ ಉತ್ಸವಗಳು ಮುಗಿದ ಮೇಲೆ, ಮಾವಯ್ಯ, ನೀವು ಪ್ರಭುಗಳನ್ನು ದ್ವಾರವತಿಯಲ್ಲಿ ಇನ್ನೊಮ್ಮೆ ಕಂಡು ಮಾತನಾಡಬೇಕು' ಎಂದಳು.

ಕೇತಮಲ್ಲ: 'ಊರೂರು ದೇಶದೇಶಗಳನ್ನು ಅಲೆದಲೆದು ಕೊನೆಗೆ ಮನೆಯನ್ನು ಸೌಖ್ಯವಾಗಿ ಬಂದು ಸೇರಿದಂತಾಯ್ತು ಈಗ ನಮಗೆ. ಇನ್ನೆಲ್ಲಿಗೆ ಹೋಗುವೆವು? ಇಲ್ಲಿಯೆ ಇರುವೆವು.'

ಆಗ ಮಾಚಿಕಬ್ಬೆ ಮಗಳ ಹತ್ತಿರ ಬಂದು, ಕಿವಿಯಲ್ಲಿ ಯಾವುದೊ ಗುಪ್ತವಾದ ವಿಷಯವನ್ನು ಸ್ವಲ್ಪ ಹೊತ್ತಿನವರೆಗೂ ಹೇಳಿದರು. ಅದನ್ನು ಕೇಳುತ್ತ ಕೇಳುತ್ತ ಶಾಂತಲೆಯ ಮುಖಭಾವದಲ್ಲಿ ಮೊದಲು ಮೊದಲು ಕುತೂಹಲ ತೋರಿ, ಬರುಬರುತ್ತ ಆಶ್ಚರ್ಯ, ತೃಪ್ತಿ, ಆನಂದಗಳು ತೋರಿದವು. ಶಾಂತಲೆ ಮಾವಯ್ಯನನ್ನು ಕುರಿತು 'ಮಾವಯ್ಯ, ಇದು ನನ್ನ ಮನಸ್ಸಿಗೆ ಬಹು ಒಪ್ಪಿಗೆ. ಈ ಗುಟ್ಟನ್ನು ನಾನು ಕಾಪಾಡಿಕೊಂಡು ಬರುತ್ತೇನೆ. ಇನ್ನು ನನ್ನನ್ನು ನೀವು ಮಹಾರಾಣಿಯೆಂದು ಸಂಬೋಧಿಸಬಾರದು. ಚಂದಲೆಯಂತೆ ನಾನೂ ನಿಮ್ಮ ಮಗಳು. ಹಾಗೆಂದೆ ಭಾವಿಸಿ ನನಗೆ ಆಶೀರ್ವಾದ ಮಾಡಿರಿ' ಎನ್ನುತ್ತ ಎದ್ದು ಮುಂದೆ ಬಂದು, ಭಕ್ತಿವಿಶ್ವಾಸಗಳಿಂದ ಕೇತಮಲ್ಲ ಜಕ್ಕಿಯಬ್ಬೆಯರಿಗೆ ನಮಸ್ಕಾರ ಮಾಡಿದಳು. ದಂಪತಿಗಳು 'ಮಗಳೆ, ನಿನ್ನ ಧರ್ಮ ವರ್ಧಿಸಲಿ, ಮಹೋನ್ನತೆಯಾಗು' ಎಂದು ಹರಸಿದರು.

ಶಾಂತಲಾದೇವಿ ಚಂದಲೆಯನ್ನು ಹತ್ತಿರಕ್ಕೆ ಕರೆದುಕೊಂಡು, ಮೈ ತಡವಿ, 'ನನ್ನ ಅವ್ವೆಗೆ ನೀನೇ ಈಗ ಶಾಂತಲೆ. ಕಲಿಯುವುದಕ್ಕೆ ಆಶೆಪಡು. ನನ್ನ ಅವ್ವೆ ಒಳ್ಳೆಯ ವಿದ್ಯಾಗುರುಗಳನ್ನು ನಿನಗಾಗಿ ಏರ್ಪಡಿಸುವರು. ನೀನು ವಿದ್ಯಾವಂತೆಯಾಗುವೆ, ಭಾಗ್ಯಶಾಲಿಯಾಗುವೆ' ಎಂದಳು.

ಮಹಾರಾಣಿ ಶಾಂತಲಾದೇವಿಯ ಕೋರಿಕೆಯಂತೆ ಕೇತಮಲ್ಲ ಜಕ್ಕಿಯಬ್ಬೆಯವರು ದೇವರ ಉತ್ಸವಾದಿಗಳನ್ನು ಇದ್ದು ನೋಡಿಕೊಂಡು, ಅನಂತರ ದ್ವಾರವತಿಗೆ ಎಲ್ಲರೊಡನೆ ಸೇರಿ ಹೋಗುವುದೆಂದು ನಿರ್ಧರಿಸಿ, ಮೂರು ದಿನಗಳೂ ವೇಲಾಪುರಿಯಲ್ಲಿಯೇ ಇದ್ದು ಬಿಟ್ಟರು.

ಆ ಮೂರು ದಿನಗಳೂ ವಿಜಯನಾರಾಯಣನಿಗೆ, ಚೆನ್ನಕೇಶವನಿಗೆ, ವಿಶೇಷ ಪೂಜೆ ಉತ್ಸವಾದಿಗಳು ನಡೆದವು. ಉತ್ಸವದ ಕೊನೆಯ ದಿನದಂದು

ವಿಜಯನಾರಾಯಣನ ಎದುರಿನಲ್ಲಿ ಶಾಂತಲೆ ಲಕ್ಷ್ಮಿಯರು ವೀಣೆ ನುಡಿಸಿ ಹಾಡಿದರು. ಮಹಾರಾಣಿ ಚೆನ್ನಕೇಶವನ ಮುಂದೆ ಎಷ್ಟು ಆನಂದದಿಂದ ನರ್ತಿಸಿದ್ದಳೊ ಅಷ್ಟೇ ಆನಂದ ಉತ್ಸಾಹಗಳಿಂದ ವಿಜಯನಾರಾಯಣನ ಸಮ್ಮುಖದಲ್ಲಿಯೂ ಇಂದು ನರ್ತಿಸಿದಳು.

ಮಹಾಜನರೂ ಭಗವದ್ಭಕ್ತರೂ ತಮ್ಮ ಮಹಾರಾಣಿಯನ್ನು 'ನಾಟ್ಯ ಸರಸ್ವತಿ, ಗಾನಸರಸ್ವತಿ' ಎಂದೂ, ಲಕ್ಷ್ಮೀದೇವಿಯನ್ನು 'ವಿಧ್ಯಾಭರಣೆ, ಗಾನಕಲಾನಿಧಿ' ಎಂದೂ ಮುಕ್ತಕಂಠದಿಂದ ಹೊಗಳಿ ಹಾಡಿದರು. ಉತ್ಸವ ಗಳು ವಿಜೃಂಭಣೆಯಿಂದ ನಡೆದವು. ಅರಮನೆಯಿಂದ ದಾನಧರ್ಮಗಳು ಯಥೇಚ್ಛವಾಗಿ ನಡೆದವು. ಶಾಂತಲೆ ಲಕ್ಷ್ಮಿಯರೆ ನಿಂತು, ಬಡವರಿಗೆ, ಅಂಗ ವಿಕಲರಿಗೆ, ಅನಾಥ ಮಕ್ಕಳಿಗೆ, ಯಥೇಚ್ಛ ಅನ್ನದಾನ, ವಸ್ತ್ರದಾನ, ದ್ರವ್ಯ ದಾನಗಳನ್ನೂ ಭೂಸುರೋತ್ತಮರಿಗೆ ಗೋದಾನ ಭೂದಾನಗಳನ್ನು ನಡಸಿ ದರು. ಪರದೇಶಗಳಿಂದ ಉತ್ಸವಕ್ಕೆಂದು ಬಂದಿದ್ದ ಭಕ್ತ ಅತಿಥಿಗಳಿಗೆ ಸರ್ವ ಸಂಪೂರ್ಣ ಉಪಚಾರಗಳನ್ನೂ ಪಂಡಿತರೇ ನಿಂತು ಮಾಡಿಸಿದ್ದಲ್ಲದೆ, ಉತ್ತಮ ಉಡುಗೊರೆಗಳನ್ನೂ ಯೋಗ್ಯತಾನುಸಾರ ಪ್ರಭುಗಳ ಹಸ್ತದಿಂದ ಕೊಡಿಸಿ ಸಂತುಷ್ಟಿಪಡಿಸಿ ಕಳಿಸಿಕೊಟ್ಟರು.

ಪ್ರಭುಗಳು ಒಂದು ದಿನ ಸಕುಟುಂಬಿಗಳಾಗಿ ಶ್ರವಣಬೆಳ್ಗೊಳಕ್ಕೆ ದಯೆ ಮಾಡಿಸಿದ್ದರು. ಅನಂತರ ಎಲ್ಲರೂ ದ್ವಾರವತಿಗೆ ಹಿಂದಿರುಗಿದರು. ಇನ್ನೂ ಮುಗಿಯಬೇಕಾಗಿದ್ದ ದೇವಾಲಯಗಳ ಕಾರ್ಯಗಳನ್ನೂ ತ್ವರೆಗೊಳಿಸುತ್ತ ಪಂಡಿ ತರು ವೇಲಾಪುರಿಯಲ್ಲಿ ನಿಂತರು.

ದ್ವಾರವತಿಯನ್ನು ಸೇರಿದೊಡನೆಯೆ ಕೇತಮಲ್ಲ ತನ್ನ ಬೃಹದುದ್ಯಮಕ್ಕೆ ತಳಹದಿಯನ್ನು ಹಾಕತೊಡಗಿದ. ಮಾಚಿಕಬ್ಬೆ ಮಾರಸಿಂಗಮಯ್ಯ ಇವರು ಗಳು ಕೇತಮಲ್ಲನ ಈ ಮಹಾಕಾರ್ಯಕ್ಕೆ ಬೆಂಬಲವಾಗಿ ನಿಂತರು. ಭಗವದ್ಭಕ್ತೆ ಯಾದ ಜಕ್ಕಿಯಬ್ಬೆಗಂತೂ 'ಈ ಕನಸು ಎಷ್ಟು ಬೇಗ ಕೈಗೂಡುವುದೋ' ಎಂಬ ಆತುರ ಹುಟ್ಟಿತು. 'ಈ ಸಂಕಲ್ಪ ದೈವಪ್ರೇರಣೆ, ಮಹಾದೇವನಿಗೆ ಸಮರ್ಪಣೆ, ಆದ್ದರಿಂದ ಈ ಕೆಲಸಕ್ಕೆ ಯಾವ ಚ್ಯುತಿಯೂ, ಯಾವ ಪ್ರತಿ ಬಂಧಕವೂ ಬರಲಾರದು' ಎಂದರು ಮಾರಸಿಂಗಮಯ್ಯ.

ವಿಜಯನಾರಾಯಣ, ಚೆನ್ನಕೇಶವ ದೇವಾಲಯಗಳನ್ನು ಕಟ್ಟಿದ

ರೂವಾರಿಗಳಲ್ಲದೆ, ಉಚ್ಚಂಗಿಯ ಭಂಡಾರಿ ಮಧುವಣ್ಣ, ಗಂಗವಾಡಿಯ ದೇವೋಜ, ಬಳ್ಳಿಗ್ರಾಮದ ದಾಸೋಜ ಇವರುಗಳನ್ನೂ ಬರಮಾಡಿಕೊಂಡು, ಬೇಕಾದಷ್ಟು ವಸ್ತು ಧನಧಾನ್ಯಗಳ ಸಂಗ್ರಹಮಾಡಿಕೊಂಡು ಶುಭಮುಹೂರ್ತದಲ್ಲಿ ಹೊಸ ದೇವಾಲಯದ ಶಂಕುಸ್ಥಾಪನೆಯನ್ನು ನೆರವೇರಿಸಿದರು. ಐದು ನೂರು ಕೆಲಸದವರೂ, ನೂರಾರು ರೂವಾರಿಗಳೂ, ಐದು ವರ್ಷಗಳ ಕಾಲ ಅವಿಚ್ಛಿನ್ನವಾಗಿ ಕೆಲಸಮಾಡಿ ದೇವಾಲಯದ ಗರ್ಭಗುಡಿ, ಒಳ ಆವರಣ ಇವಷ್ಟನ್ನು ಕಟ್ಟಿ ಮುಗಿಸಿದರು. ದೇವಾಲಯದ ಹೊರ ಆವರಣದ ಬ್ರಹ್ಮಾಂಡ ಕೆಲಸ ಇನ್ನೂ ಹಾಗೆಯೆ ಉಳಿದಿದ್ದಿತು.

ವೇಲಾಪುರಿಯ ದೇವಾಲಯಗಳು ಶ್ರೀ ಮಹಾವಿಷ್ಣುವಿಗೆ ಅರ್ಪಿತವಾದುವು. ದ್ವಾರವತಿಯ ಜೋಡಿ ದೇವಾಲಯಗಳು ಶ್ರೀ ಮಹಾದೇವನಿಗೆ ಅರ್ಪಿತವಾದುವು. ಕೇತಮಲ್ಲ ತನಗೆ ಶಿವಕೃಪೆಯಿಂದ ಲಭ್ಯವಾಗಿದ್ದ ಸಮಸ್ತ ಸಿರಿಯನ್ನೂ ಶಿವನಿಗೇ ಅರ್ಪಿಸಿ ಕೃತಾರ್ಥನಾದ. ದ್ವಾರವತಿಯಲ್ಲೂ ಜೋಡಿ ದೇವಾಲಯಗಳು ಕಟ್ಟಲ್ಪಟ್ಟವು. ಆದರೆ ವೇಲಾಪುರಿಯಲ್ಲಿದ್ದಂತೆ ಬೇರೆಬೇರೆಯಾಗಿರದೆ, ಒಂದನ್ನೊಂದು ಅಂಟಿ ಇದ್ದವು. ಎರಡು ದೇವಾಲಯಗಳ ನವರಂಗವನ್ನೂ ಒಂದೇ ಹೆದ್ವಾರಿ ಕೂಡಿಸಿತ್ತು. ಈ ಜೋಡಿ ಶಿವಾಲಯಗಳ ಎದುರಿಗೆ ಎರಡು ದೊಡ್ಡ ದೊಡ್ಡ ನಂದಿಮಂಟಪಗಳು ಕಟ್ಟಿ ಸಿದ್ಧವಾಗಿದ್ದವು. ಆದರೆ ನಂದಿಗಳನ್ನು ಇನ್ನೂ ಸಿದ್ಧಗೊಳಿಸಿರಲಿಲ್ಲ. ಆ ದೊಡ್ಡ ಮಂಟಪಗಳಿಗೆ ತಕ್ಕಂತೆ ಬೃಹದಾಕಾರದ ನಂದಿಗಳೆ ಬೇಕಾಗಿ, ಅಂತಹ ನಂದಿಗಳನ್ನು ಕೆತ್ತಿ ಮಾಡುವುದಕ್ಕೆ ದೊಡ್ಡ ದೊಡ್ಡ ನಯಕಲ್ಲಿನ ಬಂಡೆಗಳು ಬೇಕಾಗಿದ್ದವು. ಅಂತಹ ನಯಕಲ್ಲಿನ ಬಂಡೆಗಳು ಹತ್ತಿರ ಎಲ್ಲಿಯೂ ದೊರಕಲಿಲ್ಲವಾದುದರಿಂದ ಆ ಕೆಲಸ ಹಾಗೆಯೆ ಉಳಿಯಿತು. ಆದರೆ ಮಹಾದೇವನ ಪ್ರತಿಷ್ಠಾಪನೋತ್ಸವದ ಸಮಯಕ್ಕೆ ನಂದಿಗಳು ಅಗತ್ಯ ಬೇಕಿದ್ದವು. ಒಂದು ನಂದಿಯ ಮಂಟಪದ ಹಿಂಭಾಗದಲ್ಲಿ ಭಗವಾನ್ ಸೂರ್ಯನಾರಾಯಣನಿಗೆ ಒಂದು ಚಿಕ್ಕ ಗುಡಿಯೂ ಕಟ್ಟಲ್ಪಟ್ಟಿತು.

ದೇವಾಲಯದ ಪ್ರಥಮ ಪೀಠಭಾಗವು ನೆಲದಿಂದ ಐದಡಿಗಳ ಎತ್ತರ ಬಿಟ್ಟು, ಅಲ್ಲಿಂದ ದೇವಾಲಯದ ಸುತ್ತ ಪ್ರದಕ್ಷಿಣಪಥ ಸುಮಾರು ಹತ್ತು ಹತ್ತು ಅಡಿಗಳಷ್ಟು ವೈಶಾಲ್ಯವನ್ನು ಬಿಟ್ಟು, ಅಲ್ಲಿಂದ ದೇವಾಲಯ ಪ್ರಾರಂಭ

ವಾಗಿತ್ತು. ಈ ಹೊರಗೋಡೆಯಲ್ಲಿ ಆರೆಂಟು ಅಡುಕುಗಳು ಇದ್ದುವು. ಒಂದೊಂದು ಅಡುಕಿನಲ್ಲಿಯೂ ಬಹು ಸುಂದರವಾದ ಕೆತ್ತನೆಯ ಕೆಲಸಗಳು ಮಾಡಲ್ಪಟ್ಟಿದ್ದವು. ಕೆಳಗಿನ ಕಟ್ಟನಲ್ಲಿ ಒಂದರ ಹಿಂದೆ ಒಂದು ಸೇರಿ ಕೊಂಡಂತೆ ಹೊರಟ, ಯುದ್ಧಕ್ಕೆ ಸಜ್ಜುಗೊಳಿಸಿದ್ದ ಆನೆಗಳ ಸಾಲು. ಹೀಗೆ ಸಾವಿರಕ್ಕೆ ಮೇಲೆ ಆನೆಗಳಿದ್ದರೂ, ಅಂಗಭಂಗಿಯಲ್ಲಿ, ಆಭರಣದಲ್ಲಿ, ನಡಗೆ ಯಲ್ಲಿ, ನೋಟದಲ್ಲಿ, ಓಟದಲ್ಲಿ ಒಂದು ಇದ್ದಂತೆ ಇನ್ನೊಂದಿಲ್ಲ. ಇದು ರೂವಾರಿಗಳ ಕೌಶಲ. ಎರಡನೆಯ ಕಟ್ಟನಲ್ಲಿ ಸುರುಳಿಸುರುಳಿಯಾಗಿ ಹಬ್ಬಿ ದೇವಾಲಯದ ಸುತ್ತ ಹರಡಿರುವ ಹೂಬಳ್ಳಿ. ಮೂರನೆಯ ಕಟ್ಟನಲ್ಲಿ ಭಯಂಕರಗಳಾದ ಸಿಂಹಗಳು, ಶಾರ್ದೂಲಗಳು, ಯಾಳಿಗಳು. ನಾಲ್ಕನೆಯ ಕಟ್ಟನಲ್ಲಿ ಸುಂದರವಾದ ಹಂಸಪಕ್ಷಿ ಅನ್ನಪಕ್ಷಿಗಳೂ, ಐದನೆಯ ಕಟ್ಟನಲ್ಲಿ ಸಜ್ಜುಗೊಳಿಸಿದ್ದ ಯುದ್ಧಾಶ್ವಗಳನ್ನು ಏರಿ ನಡಸುತ್ತಿರುವ ಸೈನಿಕರು, ಕುದುರೆ ಗಳನ್ನು ಹಿಡಿದು ನಿಂತಿರುವ ಭಟರು, ಅಸ್ತ್ರಶಸ್ತ್ರಗಳನ್ನು ಧರಿಸಿ ಯುದ್ಧೋ ನ್ಮುಖರಾಗಿರುವವರೂ, ಯುದ್ಧಮಾಡುತ್ತಿರುವ ಕರಿ, ತುರಗ, ರಥ, ಕಾಲಾಳು ಬಲಗಳು, ಅತಿರಥ ಮಹಾರಥರು, ಯುದ್ಧೋತ್ಸಾಹವನ್ನು ಉಲ್ಬಣಿಸುವ ನಾನಾತೆರನಾದ ವಾದ್ಯಗಳನ್ನು ಬಾರಿಸುತ್ತಿರುವವರು, ಅಸ್ತ್ರಶಸ್ತ್ರಗಳ ಯುದ್ಧ, ಕತ್ತಿ ಗುರಾಣಿಗಳ ಯುದ್ಧ, ತೋಮರ ಬಿಂಡಿವಾಲಗಳ ಯುದ್ಧ, ಗಜಗಜಗಳ ಹೋರಾಟ, ರಣಭೂಮಿಯಲ್ಲಿ ಶಾಕಿನಿ ಢಾಕಿನಿಗಳ ನರ್ತನ, ಇದರ ಮೇಲ್ಕಟ್ಟಿ ನಲ್ಲಿ ಪುರಾಣ ಇತಿಹಾಸ ಸುಕಥೆಗಳ ನಿರೂಪಣ, ಯಕ್ಷ ಗಂಧರ್ವ ಕಿನ್ನರರು, ಅದರ ಮೇಲಿನ ಕಟ್ಟನಲ್ಲಿ ದೇವತೆಗಳು, ದಶ ಅವತಾರಗಳು, ಬ್ರಹ್ಮ ವಿಷ್ಣು ಮಹೇಶ್ವರರ ಅನಂತ ರೂಪಗಳು, ಅವರ ಶಕ್ತಿಯರ ಅನಂತ ರೂಪಗಳು, ಅನಂತ ನಾಟ್ಯಗಳು—ಇವುಗಳೆಲ್ಲ ಬಹು ಸುಂದರವಾಗಿ, ಸೌಮ್ಯ ಕೋಮಲ ವಾಗಿ, ಅನಂತಾನಂತವಾಗಿ ಕೆತ್ತಲ್ಪಟ್ಟಿದ್ದವು.

ಕೆಲಸಕ್ಕೆ ಮೊದಲಿಟ್ಟ ಐದು ವರ್ಷಗಳೊಳಗೆ ದೇವಾಲಯಗಳ ಒಳಭಾಗ ವೆಲ್ಲ ಸಿದ್ಧವಾದರೂ, ಹೊರಗಣ ಈ ಅಲಂಕಾರ ಕೆತ್ತನೆಗಳ ಕೆಲಸ ಇನ್ನೆಷ್ಟು ಕಾಲ ನಡೆದರೂ ಕೊನೆ ಮುಟ್ಟುವಂತೆಯೇ ಕಾಣಬರಲಿಲ್ಲ. ವೇಲಾಪುರಿಯ ದೇವಾಲಯದ ಕಲಾಕೌಶಲಕ್ಕಿಂತ ಒಂದು ಕೈ ಮಿಗಿಲೆನಿಸಿತು ಈ ದ್ವಾರವತಿಯ ಜೋಡಿದೇವಾಲಯಗಳ ಸೊಬಗು.

§

ವೇಲಾಪುರಿಯಲ್ಲಿ ಅಂದು, ಮಹಾರಾಣಿ ಶಾಂತಲೆ ಚೆನ್ನಕೇಶವಸ್ವಾಮಿಯನ್ನು ಪ್ರತಿಷ್ಠಾಪನೆ ಗೈದ ದಿನ ಗಂಗರಾಜರು ಅಲ್ಲಿಯೆ ಇದ್ದು, ಅದೇ ಸಂಜೆಗೆ' ಶ್ರವಣಬೆಳ್ಗೊಳಕ್ಕೆ ಪ್ರಯಾಣ ಮಾಡಿದರು. ಮರುದಿನ ಅವರು ಶ್ರವಣಬೆಳ್ಗೊಳದ ಚಂದ್ರಗಿರಿಯ ಶಾಸನಬಸದಿಯಲ್ಲಿ ಆದಿನಾಥ ಜಿನನ ಪ್ರತಿಷ್ಠಾಪನೆ ಮಾಡಬೇಕಾಗಿದ್ದಿತು. ತಮ್ಮ ತಾಯಿ ಪೋಚಿಕಬ್ಬೆಯ ಹೆಸರಿನಲ್ಲಿ ಆ ಬಸದಿಯನ್ನು ಗಂಗರಾಜರು ಕಟ್ಟಿಸಿದ್ದರು. ಆ ಬಸದಿಯ ಆದಿನಾಥ ಸ್ವಾಮಿಯ ಸೇವಾರ್ಥ 'ಪರಮ' ಎಂಬ ಗ್ರಾಮವನ್ನು ದತ್ತಿ ಬಿಡುವುದಾಗಿ ನಿಶ್ಚಯಿಸಿದ್ದರು. ಇದು ಶಾಸನವಾದಾಗ ಆ ಬಸದಿಗೆ 'ಶಾಸನಬಸದಿ'ಯೆಂದು ಹೆಸರಾಯಿತು.

ಈ 'ಪರಮ' ಗ್ರಾಮವನ್ನು ಪ್ರಭು ವಿಷ್ಣುವರ್ಧನರು ಗಂಗರಾಜರಿಗೆ ಜಹಗೀರು ಕೊಟ್ಟಿದ್ದರು. ಆದಿನಾಥಸ್ವಾಮಿಯ ಪ್ರತಿಷ್ಠೆ ಅತಿ ವಿಜೃಂಭಣೆಯಿಂದ ನಡೆಯಿತು. ಪ್ರತಿಷ್ಠಾಪನೋತ್ಸವಕ್ಕೆ ಪ್ರಭುಗಳೂ, ರಾಜಮಾತೆ, ಶಾಂತಲೆ ಲಕ್ಷ್ಮಿಯರೂ ಬಂದು ಮಹೋತ್ಸವದಲ್ಲಿ ಕಲೆತು ಆನಂದಪಟ್ಟರು. ಪ್ರಭುಗಳು ಅಲ್ಲಿನ ಚೈತ್ಯಾಲಯಗಳಿಗೆ ಆಗ ಹೆಚ್ಚು ಧನಸಹಾಯ ಮಾಡಿದರು.

ಮಾರನೆಯ ದಿನ ಪ್ರಭುಗಳು ವೇಲಾಪುರಿಗೆ ಹಿಂದಿರುಗಿದರು. ಗಂಗರಾಜರು ವೇಲಾಪುರಿಯಲ್ಲಿ ನಿಲ್ಲದೆ ನೆಟ್ಟಗೆ ರಾಜಧಾನಿಗೆ ಹೊರಟುಹೋದರು. ದ್ವಾರವತಿಯನ್ನು ಸೇರಿದ ಮೇಲೆ ಗಂಗರಾಜರು ಮಗ ಬೊಪ್ಪಣನನ್ನು ಕರೆದು 'ಏಚಣ್ಣ, ಹೊಯಿಸಳರಾಜ್ಯದ ದ್ರೋಹಿಗರನ್ನು ನಾಶಮಾಡಿ, ದೇಶವನ್ನು ವಿಸ್ತಾರಪಡಿಸಿ, ನಿರುಪಾಧಿಕಮಾಡಿ, ದೇಶಸೇವೆಯನ್ನು ಮಾಡಿದ ಈ ಕತ್ತಿಯನ್ನು ಇನ್ನು ನೀನು ಹಿಡಿ. ಪ್ರಭುಗಳು ನಿನ್ನನ್ನು ಇಮ್ಮಡಿ ದಂಡನಾಯಕನನ್ನಾಗಿ ಮಾಡಿಕೊಳ್ಳಲು ಇಷ್ಟಪಟ್ಟಿರುವರು. ಈ ವಿಷಯವನ್ನು ನನಗೆ ಬೆಳ್ಗೊಳದಲ್ಲೆ ತಿಳಿಸಿದರು. ನೀನು ಆ ಸ್ವಾಮಿಯ ಸೇವೆಯನ್ನು ನನಗಿಂತ ಹೆಚ್ಚಾದ ಶ್ರದ್ಧಾಭಕ್ತಿಗಳಿಂದ ಮಾಡುವುದು' ಎಂದು ಆಶೀರ್ವಾದ ಮಾಡಿದರು.

ಪ್ರಭುಗಳು ರಾಜಧಾನಿಗೆ ಹಿಂದಿರುಗಿದ ಮೇಲೆ ಒಂದು ದಿನ ಬೊಪ್ಪಣ ಪ್ರಭುಗಳಲ್ಲಿಗೆ ಬಂದು, ವಿನಯ ಭಕ್ತಿಗಳಿಂದ ನಮಸ್ಕರಿಸಿ, ಅವರ ಕೈಯಿಂದಲೆ ಇಮ್ಮಡಿ ದಂಡನಾಯಕ ಪ್ರಶಸ್ತಿಯನ್ನು ಕೈಕೊಂಡು, ತನ್ನ ತಂದೆ ಮಹಾ

ಮಂತ್ರಿಯಾಗುವುದಕ್ಕೆ ಮುಂಚೆ ಯಾವ ವೀರತ್ವದಿಂದ ಯುದ್ಧಭೂಮಿಯಲ್ಲಿ 'ಏಕೈಕವೀರ'ನೆಂಬ ಖ್ಯಾತಿಯನ್ನು ಗಳಿಸಿದ್ದರೊ ಅಂತಹ ಕೀರ್ತಿಯನ್ನೆ ತಾನೂ ಗಳಿಸಿ, ಸ್ವಾಮಿಯ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡುವೆ ನೆಂದು ಪಣತೊಟ್ಟ. ಪ್ರಭುಗಳು ಬೊಪ್ಪಣನ ಕೈಗೆ ಇಮ್ಮಡಿ ದಂಡನಾಯ ಕತ್ವದ ಪ್ರಶಸ್ತಿದಂಡವನ್ನು ಕೊಡುವಾಗ 'ಏಚಣ್ಣ, ನಾವು ಈ ರಾಜ್ಯಕ್ಕೆ ರಾಜರಾದರೂ, ರಾಜ್ಯವನ್ನು ಗಳಿಸಿಕೊಟ್ಟು, ಅದನ್ನು ನಮಗಾಗಿ ಸಂರಕ್ಷಣೆ ಮಾಡಿದವರು ನಿನ್ನ ಅಯ್ಯದಿರು. ಇಂತಹವರ ಮಗನಿಗೆ ಈಗ ನಾವು ಕೊಡು ತ್ತಿರುವ ಗೌರವ ಸ್ವಲ್ಪವೆಂದೇ ನಮ್ಮ ಭಾವನೆ. ನಿನ್ನ ತಂದೆಯವರ ಪದವಿಗೆ ನೀನೇರಿ ಬರಬೇಕು. ಅದನ್ನು ನೋಡಿ ಸಂತೋಷಿಸುವ ಕಾಲ ನಮ್ಮದಾಗಲಿ' ಎಂದು ಹೇಳಿ ಆಶೀರ್ವದಿಸಿ ಇಮ್ಮಡಿ ದಂಡನಾಯಕತ್ವದ ಪ್ರಶಸ್ತಿದಂಡವನ್ನು ತುಂಬುಓಲಗದಲ್ಲಿ ಬೊಪ್ಪಣನಿಗೆ ಕೊಟ್ಟರು.

ಬೊಪ್ಪಣ ತಂದೆಯಂತೆಯೆ ಗುಣಶಾಲಿ, ವೀರ, ಉದಾರಿ. ಯುದ್ಧ ಕಲೆಯನ್ನೂ, ಅಸ್ತ್ರಶಸ್ತ್ರಗಳಲ್ಲಿ ನೈಪುಣ್ಯವನ್ನೂ ತಂದೆಯಿಂದ ಕಲಿತು, ನಿರಂತರ ಅಭ್ಯಾಸಗಳಿಂದ ಅವುಗಳಲ್ಲಿ ಆದರ್ಶನಿಪುಣತೆಯನ್ನು ಪಡೆದು, ತನ್ನ ಅಯ್ಯ ನಿಂದಲೆ 'ಭಲೆ' ಎನಿಸಿಕೊಂಡಿದ್ದ. ತಂದೆಯೊಡನೆ ಒಂದೆರಡು ಸಲ ಯುದ್ಧ ಭೂಮಿಗೆ ಹೋಗಿ, ಅಲ್ಲಿಯೂ ತನ್ನ ಧೈರ್ಯ ಶಕ್ತಿ ಸಾಹಸಗಳನ್ನು ಪ್ರದರ್ಶಿಸಿದ್ದ.

ಬೊಪ್ಪಣ ಆಕ್ಷಣವೆ ತನ್ನ ಸೈನ್ಯಭಾಗದ ಅಧಿಕಾರ ವಹಿಸಿ, ಅವರನ್ನು ಕಟ್ಟಿಕೊಂಡು ಹೊಯಿಸಳರಾಜ್ಯದ ಪಶ್ಚಿಮ, ಉತ್ತರ, ಪೂರ್ವ ಎಲ್ಲೆಗಳಲ್ಲಿ ಸಂಚರಿಸಿ, ಸುತ್ತುಮುತ್ತಲಿನ ಸಾಮಂತರ, ನಾಯಕರ, ಹೆಗ್ಗಡೆಗಳ ಪರಿಚಯ ವನ್ನೂ ಎಲ್ಲೆನಾಡುಗಳ ಪರಿಚಯವನ್ನೂ ಚೆನ್ನಾಗಿ ಮಾಡಿಕೊಂಡ.

ಎಲ್ಲೆನಾಡಾದ ತಲವನಪುರದ ಅರಸನ ಕಿರುಕುಳ ಇದ್ದೇ ಇತ್ತು. ಕೇತಮಲ್ಲ ತನ್ನ ರಾಜ್ಯವನ್ನು ಬಿಟ್ಟು ಹೊಯಿಸಳ ರಾಜರ ಆಶ್ರಯ ರಕ್ಷಣೆ ಗಳನ್ನು ಪಡೆದನೆಂದೂ, ಅವನಿಗಿದ್ದ ಆಸ್ತಿಯೆಲ್ಲವನ್ನೂ ತನ್ನ ನಾಡಿನಿಂದ ಉಪಾಯವಾಗಿ ಹೊಯಿಸಳ ನಾಡಿಗೆ ಸಾಗಿಸಿಬಿಟ್ಟನೆಂದೂ ಕೇಳಿ ತಲವನಪುರದ ಅರಸ, ಹೊಯಿಸಳ ಪ್ರಭುಗಳ ಮೇಲೆ ವಿಷಕಾರಿದ. ಹೊಯಿಸಳ ಸೇನೆಯವರೆ ಗುಪ್ತವೇಷದಿಂದ ಕೇತಮಲ್ಲನ ಗೋಧನ, ಅಶ್ವಸಮೂಹಗಳನ್ನು ತಲಕಾಡು ಎಲ್ಲೆಯಿಂದ ದಾಟಿಸಿ ಹೊಯಿಸಳ ರಾಜ್ಯಕ್ಕೆ ಕೊಂಡೊಯ್ದರೆಂಬ ಸುಳ್ಳುಪೊಳ್ಳು

ದೂರುಗಳನ್ನು ಕೇಳಿ, ನಿಜವೆಂದೇ ನಂಬಿ ತಲವನಪುರದರಸ ಉರಿದುರಿದು ಬಿದ್ದನು. 'ಹೇಡಿ ಕೇತಮಲ್ಲ, ಹೊಯಿಸಳ ಅರಸನ ಬೆನ್ನಹಿಂದೆ ಅವಿತು ಕೊಂಡಿದ್ದಾನೆ. ನಮಗೆ ಮಾರಿದ್ದ ಹಸುಗಳನ್ನೂ ಕುದುರೆಗಳನ್ನೂ ತನ್ನವೆಂದೇ ಕಳ್ಳನ ಹಾಗೆ ಕದ್ದು ಸಾಗಿಸಿದ್ದಾನೆ. ಆ ಹೊಯಿಸಳ ಇವನಿಗೆ ಬೆಂಬಲಿಗ ನಾಗಿದ್ದಾನೆ.' ಎಂದಾಡಿದ ತಲವನಪುರದ ಅರಸನ ಸಲ್ಲದ ಮಾತುಗಳನ್ನು ಕೇಳಿ ಕೇತಮಲ್ಲನಿಗೆ ಸಿಟ್ಟು ಉಲ್ಬಣಿಸಿ ಬಂತು.

ಆ ಕ್ಷಣವೆ ಕೇತಮಲ್ಲ ಪ್ರಭು ವಿಷ್ಣುವರ್ಧನರಲ್ಲಿಗೆ ಹೋಗಿ 'ಪ್ರಭುವೆ, ಆ ನೀಚ ಹೀಗೆನ್ನುತ್ತಿದ್ದಾನೆ. ನನ್ನಿಂದ ತಾವು ಆ ಖಳನ ಪರುಷ ವಾಕ್ಯ ಗಳನ್ನು ಕೇಳಬೇಕಾಯಿತು. ನನಗೆ ತಮ್ಮ ಸೈನ್ಯದಲ್ಲಿ ಒಂದು ಅತಿ ಸಾಮಾನ್ಯ ಸ್ಥಾನವನ್ನು ದಯಪಾಲಿಸಿರಿ. ತಮ್ಮ ವೀರಹಸ್ತದಿಂದ ಒಂದು ಕತ್ತಿಯನ್ನೂ ದಯಪಾಲಿಸಿರಿ. ಆ ಖಳನ ತಲೆಯನ್ನು ತಂದೊಪ್ಪಿಸುತ್ತೇನೆ, ಕೃಪೆಮಾಡಿರಿ' ಎಂದು ಬಿನ್ನವಿಸಿಕೊಂಡ. ಪ್ರಭುಗಳು ಕೇತಮಲ್ಲನ ವೀರಕ್ಕೆ, ರಾಜಭಕ್ತಿಗೆ, ಮನಸ್ಸಿನ ಔದಾರ್ಯಕ್ಕೆ ಮೆಚ್ಚಿ, 'ಮಹಾಭಾಗರಾದ ನಿಮ್ಮನ್ನು ನಾವು ಬಹು ವಾಗಿ ಮೆಚ್ಚಿಕೊಂಡಿರುವೆವು. ತಲವನಪುರದರಸನಿಗೆ ದೇವರು ಇನ್ನಾದರೂ ಸದ್ಬುದ್ಧಿಯನ್ನು ಕೊಟ್ಟಾನೆಂದು ನಾವು ಕಾದು ನೋಡಿ ಆಯಿತು. ಅವನು ಪ್ರಯತ್ನಪಡಲಿಲ್ಲ. ತನ್ನ ತಪ್ಪುಗಳನ್ನು ತಿಳಿದುಕೊಳ್ಳಲಿಲ್ಲ. ಇಂಥವರಿಗೆ ದೈವವಾದರೂ ಏನು ಸಹಾಯ ಮಾಡೀತು! ಅವನಿಗಿಂತ ಅವನ ಸಹಾಯಕ್ಕೆ ನಿಂತಿರುವ ಆ ಚೋಳ ಸೇನಾಧಿಪತಿ ಆದಿಯಮ ಕ್ರೂರಿಯೂ, ಕಪಟಿಯೂ, ಶೀಲರಹಿತನೂ ಆಗಿದ್ದಾನೆ. ಇವರ ಪ್ರೋತ್ಸಾಹಿಗಳು ಆ ಚೋಳ ಸಾಮಂತ ರಾಷ್ಟ್ರಕೂಟರು. ಧರ್ಮಕ್ಕಿಂತ ದರ್ಪವೇ ಹೆಚ್ಚಿನದೆಂದು ಭಾವಿಸುವವರಿವರು. ಇವರೆಲ್ಲರ ಕುತ್ಸಿತ ಕಾರ್ಯಗಳು ಒಳಗೊಳಗೇ ನಡೆಯುತ್ತಿವೆ. ಈ ಆದಿಯಮ ಹೆಸರಿಗೆ ತಕ್ಕವನಾಗಿದ್ದಾನೆ. ಆದರೆ ಇವನು ಧರ್ಮಬಾಹಿರನಾದ ಯಮ. ನಾವು ಗೂಢಾಚಾರರಿಂದ ಸಮಾಚಾರಗಳನ್ನು ತರಿಸಿಕೊಳ್ಳುತ್ತಿದ್ದೇವೆ. ದುಡ್ಡಿಗೆ, ಕೊಳ್ಳೆಗೆ, ಆಶೆಪಡುವ ಹಲವು ನಾಯಕರನ್ನು ಈ ರಾಷ್ಟ್ರಕೂಟರು ಆ ಚೋಳರಿಗೆ ಕೂಡಿಸಿಕೊಟ್ಟಿದ್ದಾರೆ. ಕಾರಣ ಬೇರೆ ಏನೂ ಇಲ್ಲ. ಹೊಯಿಸಳದೇಶದ ಜನರು ಉಡಲು ಉಣ್ಣಲು ಸಾಕಷ್ಟು ಹೊಂದಿ ಸುಖಸಂತೋಷಗಳಿಂದಿರುವುದನ್ನು ಅವರು ಸಹಿಸಲಾರರು. ಹೊಯಿಸಳ ಭಂಡಾರದಲ್ಲಿ ಅಪಾರ ಐಶ್ವರ್ಯವಿರುವು

ದೆಂದು ಅವರ ಎಣಿಕೆ, ಕರುಬು. ತಲವನಪುರದ ಅರಸನಿಂದ ನಮ್ಮನ್ನು ಕೆಣಕಿಸಿ, ನಾವು ಅವನೊಡನೆ ಯುದ್ಧೋನ್ಮುಖರಾದಾಗ, ಹಿಂದಿನಿಂದ, ಎಡ ಬಲಗಳಿಂದ ಈ ದರೋಡೆಕಳ್ಳರನ್ನು ದ್ವಾರವತಿಯ ಮೇಲೆ ನಡಸಲು ಹವಣಿಸುತ್ತಿದ್ದಾರೆ ಆ ರಾಷ್ಟ್ರಕೂಟರು. ಭಾರಿ ಒಳಸಂಚು ನಡೆಯುತ್ತಿದೆ. ಇದಕ್ಕೆ ತಕ್ಕ ಮುಂಜಾಗ್ರತೆ ಕಾರ್ಯಗಳನ್ನೂ ಪ್ರತೀಕಾರವನ್ನೂ ನಾವು ಅತಿ ಶೀಘ್ರದಲ್ಲಿಯೇ ಕೈಗೊಳ್ಳುತ್ತಿದ್ದೇವೆ. ಗಂಗರಾಜರೇ ಈ ವಿಷಯಗಳೆಲ್ಲವನ್ನೂ ಅವಲೋಕಿಸುತ್ತಿದ್ದಾರೆ. ನಮ್ಮ ಮುಂದಿನ ವಿಜಯಯಾತ್ರೆ ತಲವನಪುರದಿಂದಲೇ ಮೊದಲಾಗುತ್ತದೆ. ನಿಮ್ಮ ಸಹಾಯ ನಮಗೆ ಅಗತ್ಯ. ಆ ದೇಶವನ್ನು ನೀವು ಚೆನ್ನಾಗಿ ಬಲ್ಲವರು. ನಮ್ಮ ಸೈನ್ಯಕ್ಕೆ ಸ್ವಾಭಾವಿಕವಾದ ರಕ್ಷಣಾನುಕೂಲಗಳನ್ನು ನೀವು ತೋರಿಕೊಡಬೇಕಾಗುತ್ತದೆ. ಸೈನ್ಯದಲ್ಲಿ ನಿಮಗೆ ಒಂದು ನಾಯಕಪದವಿಯನ್ನು ಕೊಡಲು ನಿಶ್ಚಯಿಸಿದ್ದೇವೆ. ಅದರ ಸೂಚನೆಯಾಗಿ, ಇಗೊ ಈ ಉತ್ತಮ ಖಡ್ಗವನ್ನು ನಿಮಗೆ ಕೊಡುತ್ತಿದ್ದೇವೆ. ಇದನ್ನು ನೀವು ಧರಿಸತಕ್ಕದ್ದು' ಎನ್ನುತ್ತ ಪ್ರಭುಗಳು ಬೆಳ್ಳಿಯ ಒರೆಯಿಂದ ಚಿನ್ನದ ಹಿಡಿಯಿಂದ ಕೂಡಿದ ಖಡ್ಗವೊಂದನ್ನು ಕೇತಮಲ್ಲನಿಗೆ ಕೊಟ್ಟರು. ಕೇತಮಲ್ಲ ಈಗ 'ಕೇತಮಲ್ಲನಾಯಕ'ರಾದರು. ಕೇತಮಲ್ಲನಾಯಕರು ಆ ಖಡ್ಗವನ್ನು ಭಕ್ತಿಯಿಂದ ಸ್ವೀಕರಿಸಿ 'ಪ್ರಭುಗಳಲ್ಲಿ ನನ್ನದು ಇನ್ನೊಂದು ಅರಿಕೆ. ಈಗ ನಾನು ಕಟ್ಟಿಸುತ್ತಿರುವ ಶಿವಾಲಯಗಳೆರಡನ್ನೂ ತಾವು ಒಂದು, ಮಹಾರಾಣಿಯವರೊಂದು ಹೀಗೆ ಸ್ವೀಕರಿಸಬೇಕು. ಹಾಗೆ ಮಾಡಿದರೆ ಮಹಾದೇವನೆ ಸ್ವೀಕರಿಸಿದನೆಂದು ನನಗೆ ತೃಪ್ತಿಯಾಗುತ್ತದೆ. ನಾನು ಧನ್ಯನಾಗುತ್ತೇನೆ' ಎಂದರು.

ವಿಷ್ಣುವರ್ಧನ (ಆಶ್ಚರ್ಯದಿಂದ): 'ನಾಯಕರೆ, ಇದು ಕಂಡರಿಯದ, ಕೇಳರಿಯದ ತ್ಯಾಗ! ನಿಮ್ಮ ಮಹದುದ್ಯಮ ನಿಮ್ಮ ಹೆಸರಿನಲ್ಲಿಯೆ ಮಹಾದೇವನಿಗೆ ಅರ್ಪಣೆಯಾಗಲಿ.'

'ಪ್ರಭುಗಳು ಸಂಕೋಚಪಡಬಾರದು. ಯಾವ ಪ್ರತಿಫಲಕ್ಕೂ ನಾನು ಆಶೆಪಟ್ಟಿಲ್ಲ. ಪಡುವವನೂ ಅಲ್ಲ. ಪ್ರಭುಗಳಿಗೂ ಮಹಾರಾಣಿಯವರಿಗೂ ಒಪ್ಪಿಸಬೇಕೆಂಬ ಸಂಕಲ್ಪದಿಂದಲೆ ಈ ದೇವಾಲಯಗಳನ್ನು ಕಟ್ಟಿಸಲು ಪ್ರಾರಂಭಿಸಿದೆ. ಹೊಯಿಸಳೇಶ್ವರ, ಶಾಂತಲೇಶ್ವರ, ದೇವಾಲಯಗಳೆಂದೇ ಹೆಸರಿಟ್ಟು ಕಾರ್ಯಾರಂಭಮಾಡಿದೆ. ತಮ್ಮಿಬ್ಬರ ದೇಹಗಳೂ ಆತ್ಮವೂ ಒಂದೇ ಎಂಬ

ಸಂಕೇತಕ್ಕೆ ದೇವಾಲಯಗಳೆರಡನ್ನು ಒಂದೆ ದೇವಾಲಯದಂತೆ ಕಟ್ಟಿಸಿದೆ. ಇದನ್ನು ಪ್ರಭುಗಳು ಸ್ವೀಕರಿಸದಿದ್ದರೆ, ಈ ಕೇತಮಲ್ಲನು ತಾನು ಅತಿನಿಕೃಷ್ಟ ನೆಂದೇ ಭಾವಿಸಿಕೊಳ್ಳುವನು.'

'ನಾಯಕರೆ, ಬಹು ನಿರ್ಬಂಧಕ್ಕೆ ಒಳಪಡಿಸುತ್ತಿದ್ದೀರಿ. ಇದಕ್ಕೆ ದೇವಿಯರೂ ಒಪ್ಪಬೇಕಲ್ಲವೆ? ಒಂದುವೇಳೆ ಹಾಗೆ ಒಪ್ಪಿದರೂ, ನಮ್ಮ ಒಂದು ಮಾತನ್ನು ನೀವೂ ಗೌರವಿಸಲೇಬೇಕಾದೀತು.'

'ಶಿರಸಾವಹಿಸುವೆವು._ ಒಪ್ಪಲಾರದಂತಹ ಮಾತನ್ನು ಪ್ರಭುಗಳು ಎಂದೂ ಅಪ್ಪಣೆಕೊಡಿಸರೆಂದು ನಮ್ಮ ನಂಬುಗೆ.'

'ದೇವಿಯರು ಒಪ್ಪಿದರೆ ನಾವು ಒಪ್ಪಿದಂತೆಯೆ ಭಾವಿಸಬಹುದು. ದೇವಾಲಯಗಳ ಒಳಭಾಗದ ಕೆಲಸಗಳೆಲ್ಲವೂ ಪೂರ್ಣವಾದುವೆಂದು ಸುದ್ದಿ ನಮಗೆ ಬಂದಿದೆ. ಇನ್ನು ಹೊರಗಿನ ಕೆಲಸಗಳೆಲ್ಲ ನಮ್ಮ ಪಾಲಿಗೆ ಇರಲಿ. ಅಷ್ಟಾದರೂ ನಮ್ಮ ಮನಸ್ಸಿಗೆ ಒಂದು ತೃಪ್ತಿ.'

'ಇನ್ನೂ ಮೂರು ಪಾಲಿನಷ್ಟು ಕೆಲಸವದು. ನಂದಿಗಳಾಗಬೇಕು. ಹೊರ ಆವರಣದ ಕೆಲಸವೆ ದೇವಾಲಯಗಳ ಸಮಸ್ತ ಸೊಬಗು. ದ್ವಾರಪಾಲಕರಾಗ ಬೇಕು. ಪ್ರಾಕಾರವಾಗಬೇಕು.'

'ಇಷ್ಟು ಮಾತ್ರವೂ ನಮ್ಮ ಪಾಲಿಗೆ ಬೇಡವೆ! ಇನ್ನು ನೀವು ನಿಶ್ಚಿಂತರಾಗಬೇಕು, ನಾಯಕರೆ.'

'ಈಶ್ವರಸಂಕಲ್ಪ, ಪ್ರಭುಗಳ ಚಿತ್ತ. ನನ್ನ ಬಾಯಿ ಕಟ್ಟಿಹೋಯಿತು. ಈ ಕಾರ್ಯಗಳನ್ನು ಪೂರ್ಣಮಾಡಿ, ಪ್ರಭುಗಳೂ ಮಹಾರಾಣಿಯವರೂ ಅಮೃತ ಹಸ್ತಗಳಿಂದ ಮಹಾದೇವನನ್ನು ಪ್ರತಿಷ್ಠಿಸಿದರೆ ನಾನೂ ನನ್ನ ಗೃಹಿಣಿಯೂ ಧನ್ಯರಾಗುವೆವು.'

'ನಾಯಕರೆ, ನಿಮ್ಮ ಮನಸ್ಸಿದ್ದಂತೆಯೆ ಮಹಾದೇವನು ನಡಸಿಕೊಡುವನು. ಬೊಪ್ಪಣನಿಗೂ ನಿಮಗೂ ವಿಶ್ವಾಸವುಂಟೆಂದು ಕೇಳಿಬಲ್ಲೆವು. ಬಹು ಸಂತೋಷ. ಒಮ್ಮೆ ಗಂಗರಾಜರನ್ನೂ ಕಂಡು ಅವರ ಆಶೀರ್ವಾದವನ್ನೂ ಪಡೆಯಿರಿ.'

'ಅದನ್ನು ನಾನು ಅರಿತವನೇ ಆಗಿದ್ದೇನೆ, ಪ್ರಭೂ. ಗಂಗರಾಜರು ನನಗೆ ದೂರದವರೇನಲ್ಲ. ಅವರ ವಿಶ್ವಾಸ ನನಗುಂಟು. ನನಗೆ ಆದರದಿಂದ

ಆಶೀರ್ವಾದಮಾಡುವರು' ಎಂದು ಹೇಳಿ, ಕೇತಮಲ್ಲನಾಯಕ ಪ್ರಭುಗಳಿಗೆ ಭಕ್ತಿ ಆನಂದಗಳಿಂದ ನಮಸ್ಕರಿಸಿ ಅಪ್ಪಣೆಪಡೆದು ಅರಮನೆಯಿಂದ ಹೊರಟ.

§

ಚೆನ್ನಕೇಶವಸ್ವಾಮಿಯ ಪ್ರತಿಷ್ಠಾಪನೋತ್ಸವಗಳು ಮುಗಿದು ಆರೆಂಟು ತಿಂಗಳಾದುವು. ಅಮಾತ್ಯವರ್ಯ ಗಂಗರಾಜರು ಸುತ್ತುಮುತ್ತಲಿನ ರಾಜ್ಯಗಳಿಗೆ ಕಳಿಸಿದ್ದ ಗೂಢಚಾರರು ಗಂಗರ, ಕೊಂಗರ, ಚೆಂಗಾಳ್ವರ, ಕೊಂಗಾಳ್ವರ, ಸಿಂದರ, ಸಂತಾರರ, ಕದಂಬರ, ಚೋಳರ, ಚಾಲುಕ್ಯರ, ಪಾಂಡ್ಯರ, ಚೇರರ ರಾಜ್ಯಗಳಲ್ಲಿ ವಿವಿಧ ವೃತ್ತಿಜೀವನಗಳಲ್ಲಿದ್ದುಕೊಂಡು ಉಪಾಯದಿಂದ, ಪ್ರಯಾಸದಿಂದ ಅಲ್ಲಿನ ರಾಜ್ಯಕುತಂತ್ರಗಳನ್ನೂ ಹೊಯಿಸಳರಾಜ್ಯದ ಪ್ರಗತಿಗೆ ಆತಂಕ ತರುವಂಥ ಕುಹಕಗಳನ್ನೂ ಸಂಗ್ರಹಿಸಿ, ಗಂಗರಾಜರಿಗೆ ವರದಿಗಳನ್ನು ಕಳಿಸುತ್ತಿದ್ದರು.

ಕರ್ಣಾಟಕ ಚೋಳರೂ, ಚಾಲುಕ್ಯರೂ, ತೆಲುಂಗಿ ಚೋಳರೂ, ಸೇರಿ ಹೊಯಿಸಳ ರಾಜ್ಯವನ್ನು ಹರಿದು ತಮ್ಮತಮ್ಮಲ್ಲಿ ಪಾಲುಗೊಳ್ಳುವ ಹಂಚಿಕೆಗಳನ್ನು ಮಾಡುತ್ತಿದ್ದುದು ಗಂಗರಾಜರಿಗೆ ತಿಳಿದುಬಂದಿತು. ಚೋಳರ ಆದಿಯಮ, ದಾಮೋದರ, ನರಸಿಂಹವರ್ಮ ಇವರುಗಳು ಉತ್ತರದಿಕ್ಕಿನಿಂದ ಹೊಯಿಸಳ ರಾಜ್ಯದ ಮೇಲೆ ದಂಡೆತ್ತಿ ಬರುವುದೆಂದೂ, ಅದೇ ಸಮಯಕ್ಕೆ ತೆಲುಂಗಿ ಚೋಳರು ಕೋಳಾಲಪುರದ ಕಡೆಯಿಂದ, ತಮಿಳು ಚೋಳರು ಶಾಲ್ಯ, ಕೊಯಮತ್ತೂರುಗಳ ಕಡೆಯಿಂದ, ಪಶ್ಚಿಮದಲ್ಲಿ ಕೊಂಗಾಳ್ವರೂ ಚೆಂಗಾಳ್ವರೂ ಪಶ್ಚಿಮದ ಕಡೆಯಿಂದ ಒಟ್ಟಿಗೆ ಹೊಯಿಸಳ ರಾಜ್ಯದ ಮೇಲೆ ದಂಡೆತ್ತಿ ಬರುವುದೆಂದೂ ಸಿದ್ಧತೆಗಳನ್ನು ಒಳಒಳಗೇ ನಡಸುತ್ತಿದ್ದರು. ಈ ಸಮಾಚಾರಗಳು ಗೂಢಚಾರರ ಮೂಲಕ ಪ್ರಭುಗಳಿಗೂ ಗಂಗರಾಜರಿಗೂ ವರದಿಯಾಗುತ್ತಲೆ ಇದ್ದವು. ಆಗ ವರ್ಷಕಾಲವಾಗಿತ್ತು.

ಇಷ್ಟರಲ್ಲಿ ಗಂಗರಾಜರು ಎಲ್ಲ ಚಮೂಪತಿಗಳನ್ನೂ ಡಣಾಯಕರುಗಳನ್ನೂ ದ್ವಾರವತಿಗೆ ಕರಸಿಕೊಂಡು 'ಶತ್ರುಗಳು ದಂಡೆತ್ತಿಬರುವ ಮುನ್ನವೆ ನಾವೇ ಅವರನ್ನು ತುಂಡಿಸಬೇಕು. ಚಾಲುಕ್ಯರ ಈ ಕುಹಕವನ್ನು ಮುರಿಯಲೆಬೇಕು' ಎಂದು ಮಾತನಾಡಿ ನಿರ್ಧರಿಸಿ ಹೊಯಿಸಳ ಸೇನೆಯ ಸರ್ವಸೇನಾಧಿಪತ್ಯವನ್ನು ಆಗ ತಾವೆ ವಹಿಸಿಕೊಂಡರು. 'ಈ ವಯಸ್ಸಿನಲ್ಲಿ ಈ ಶ್ರಮಸಾಧ್ಯ

ಕಾರ್ಯವನ್ನು ನೀವು ಕೈಗೊಳ್ಳುವುದು ಸರ್ವಥಾ ನ್ಯಾಯವಲ್ಲ. ಈ ಸಲ ನಾವೇ ಯುದ್ಧಭೂಮಿಗೆ ತೆರಳುತ್ತೇವೆ' ಎಂದು ಗಂಗರಾಜರಿಗೆ ಪ್ರಭುಗಳೆಂದರು. ಅದಕ್ಕೆ ಗಂಗರಾಜರು ಪ್ರಫುಲ್ಲವದನರಾಗಿ 'ಪ್ರಭುಗಳು ಹಾಗೆ ಬರುವುದು ವಿಜಯಲಕ್ಷ್ಮಿ ನಮ್ಮ ಜೊತೆಯಲ್ಲಿ ಬಂದಂತೆಯೆ ಆಯಿತು. ನಾನು ಕತ್ತಿ ಹಿಡಿಯುವುದೂ ಇದೆ ಕೊನೆಯ ಸಲ. ಇದಕ್ಕೆ ಅಡ್ಡಿ ತರಬೇಡಿ. ನಮ್ಮ ದೇಶದ ಸುತ್ತ ಹೆಬ್ಬುಲಿಗಳು ಹೆಚ್ಚಿಕೊಂಡಿವೆ. ಇವುಗಳನ್ನು ಬೇಟೆಯಾಡಿ ನಿಗ್ರಹಿಸಲೇಬೇಕು. ಅದುವರೆಗೆ ಈ ನನ್ನ ಕತ್ತಿಯನ್ನು ಒರೆಗೆ ಹಾಕುವುದಿಲ್ಲ' ಎಂದು ಗಂಗರಾಜರು ತಮ್ಮ ಕತ್ತಿಯನ್ನು ಒರೆಯಿಂದ ಎಳೆದು ಪ್ರಭುಗಳೆದುರಿಗೆ ವೀರಪ್ರತಿಜ್ಞೆ ಮಾಡಿದರು.

ವರ್ಷಾಕಾಲ ಮುಗಿಯಿತು. ಗಂಗರಾಜರೊಡನೆ ಡಣಾಯಕರುಗಳಾದ ಮಾರಸಿಂಗಮಯ್ಯ, ಪುನೀಸ, ಬೊಕ್ಕಣ, ಕೇತಮಲ್ಲ ನಾಯಕರುಗಳು ಯುದ್ಧಭೂಮಿಗೆ ಹೊರಡಲನುವಾದರು. ಗಂಗರಾಜರ ಪುತ್ರ ಬೊಪ್ಪಣ 'ನಾನೂ ಬರುವೆ'ನೆಂದ. 'ರಾಜಧಾನಿಯ ರಕ್ಷಣೆಗೆ ನೀನು ಇಲ್ಲಿಯೆ ಇರ ತಕ್ಕುದು' ಎಂದು ಗಂಗರಾಜರು ಅವನನ್ನು ಒಂದು ಸುಸಜ್ಜಿತ ಸೇನೆಯೊಂದಿಗೆ ದ್ವಾರವತಿಯಲ್ಲೆ ನಿಲ್ಲಿಸಿದರು.

ಈ ದಂಡಯಾತ್ರೆಗೆ ಹೊರಟ ಸೇನೆ ಹದಿನೈದು ಸಾವಿರ. ಇದರ ಜೊತೆ ಯಲ್ಲಿ ಸಿಬ್ಬಂದಿಗಳೂ, ಆನೆ, ಕುದುರೆ, ಎತ್ತು, ಹಾಲುಕರೆವ ಹಸುಗಳೂ, ವಿವಿಧ ಕೆಲಸಗಾರರೂ, ಅಸ್ತ್ರಶಸ್ತ್ರಗಳನ್ನು ಹದಮಾಡಿ ಒದಗಿಸುವವರೂ, ರಣ ವೈದ್ಯರೂ, ಪ್ರಾರ್ಥನಾದಿಗಳನ್ನು ನಡಸುವ ಕಟಕಾಚಾರ್ಯರೂ, ಅಡುಗೆಮಾಡು ವವರೂ, ಸೇವಕರೂ, ಆಹಾರಸಾಮಗ್ರಿಗಳೂ ಎಲ್ಲ ಸೇರಿ ಸಮುದ್ರದಂತೆ ಅಗಾಧ ವಾಯಿತು. ಇದಕ್ಕೆ ಮೊದಲು ಸೈನ್ಯಕ್ಕೆಲ್ಲ ಆರು ತಿಂಗಳ ಕಾಲ ಅಹರ್ನಿಶಿ ಗಂಗರಾಜರ ನೇತೃತ್ವದಲ್ಲಿ ಕಠಿಣ ಯುದ್ಧಶಿಕ್ಷಣ ನಡೆದಿತ್ತು.

ವಿಜಯದಶಮಿಯ ಸುಮುಹೂರ್ತದಲ್ಲಿ ವಿಜಯಯಾತ್ರೆ ಹೊರಡುವು ದೆಂದು ನಿಶ್ಚಯವಾಯಿತು. ಆ ಮುಹೂರ್ತ ಪ್ರಭುಗಳ ಜನ್ಮತಾರೆಗೂ ಚೆನ್ನಾಗಿ ಕೂಡಿಬಂದಿತ್ತು. ಹೊರಡುವ ಮುನ್ನ ಪ್ರಭುಗಳು ವಿನಾಯಕ, ವಾಸಂತಿಕಾ ದೇವಿ, ಮಹಾವಿಷ್ಣು, ಮಹೇಶ್ವರ ಇವರನ್ನು ಪೂಜಿಸಿ, ಶಾಂತಲೆ ಲಕ್ಷ್ಮಿಯ ರನ್ನು ನೋಡಲು ಹೋದರು. ದೇವಿಯರು ಪ್ರಭುಗಳಿಗೆ ಮಂಗಳವಾಗಲೆಂದು

ಆರತಿ ಬೆಳಗಿ ಶುಭ ಕೋರಿದರು. ಶಾಂತಲೆ ಅರಸನಿಗೆ ವಿಜಯಮಾಲಿಕೆಯನ್ನು ಹಾಕಿ, ಪಟ್ಟಗತ್ತಿಯನ್ನು ಕೈಗೆ ಕೊಟ್ಟು, ವಿಜಯವನ್ನು ಕೋರಿದಳು. ಇತರ ರಾಣಿಯರೂ ಪ್ರಭುಗಳಿಗೆ ವಿಜಯವನ್ನು ಕೋರಿದರು. ಪ್ರಭುಗಳು ಎಲ್ಲ ರೊಡನೆಯೂ ಸರಸವಾಗಿ ಮಾತನಾಡಿ, ತಾವು ಎಷ್ಟು ದೂರದಲ್ಲಿದ್ದರೂ ಅರಮನೆಯಿಂದ ತಾವಿರುವಲ್ಲಿಗೆ, ಹಾಗೆಯೆ ಅಲ್ಲಿಂದಲೂ ಇಲ್ಲಿಗೆ ಜಾಗ್ರತೆ ಸಮಾಚಾರಗಳನ್ನು ತರಿಸಿಕೊಳ್ಳುವ, ಕೊಟ್ಟುಕಳಿಸುವ ಏರ್ಪಾಡುಗಳನ್ನು ಮಾಡುವೆವೆಂದು ಹೇಳಿ, ಅನಂತರ ತಾಯಿಯ ದರ್ಶನ ಆಶೀರ್ವಾದಗಳಿಗೆ ಹೋದರು. ರಾಜಮಾತೆ ಪುತ್ರನನ್ನು ಆಲಿಂಗಿಸಿ ತಲೆಯ ಮೇಲೆ ಕೈಯಿಟ್ಟು, 'ಭಗವಂತನು ಕಾಪಾಡಲಿ' ಎಂದು ಹರಸಿದರು, ಭಗವಂತನನ್ನು ಬೇಡಿ ರಕ್ಷೆ ಯಿಟ್ಟರು. ಪ್ರಭುಗಳು ಕುವರನನ್ನು ಕರಸಿ, ಅರಮನೆಯ ರಕ್ಷಣೆಯನ್ನು ಅವನಿಗೊಪ್ಪಿಸಿ ಪ್ರೀತಿಯಿಂದ ಅವನನ್ನು ಆಲಿಂಗಿಸಿ ಅನಂತರ ಗಂಗರಾಜರೊಡನೆ ಆನೆಯ ಮೇಲೆ ಕುಳಿತುಕೊಂಡು ಸೇನೆ ಸಿದ್ಧವಾಗಿ ನಿಂತಿದ್ದೆಡೆಗೆ ಹೊರಟರು. ಉದ್ದಕ್ಕೂ ನಿಂತಿದ್ದ ಸೇನೆಯನ್ನು ಪರಾಂಬರಿಸಿದರು.

ಆ ವೇಳೆಗೆ ಕಟಕಾಚಾರ್ಯರು ರಣಗಂಬವನ್ನು ನೆಟ್ಟು ಪೂಜಿಸಿ ವಿಜಯ ವನ್ನು ಕೋರಿ ಪ್ರಾರ್ಥನೆಗಳನ್ನು ಸಲ್ಲಿಸಿದರು. ರಣಗಂಬದ ಬಳಿಗೆ ಪ್ರಭುಗಳು ಬಂದಾಗ ಮಹಾವಾದ್ಯಗಳು ಮೊಳಗಿದುವು, ಮಹಾಆರತಿ ಬೆಳಗಿತು. ಆಗ ಕೆಂಪುವಸ್ತ್ರವನ್ನುಟ್ಟು, ಕೆಂಪು ಕಣಿಗಲು ಹೂಗಳ ಮಾಲೆಗಳಿಂದಲಂಕೃತನಾಗಿ, ದೇಹಕ್ಕೆಲ್ಲ ಕುಂಕುಮವನ್ನು ಪೂಸಿಕೊಂಡು, ಹೊಸತಾಗಿ ಸಾಣೆಹಿಡಿದಿದ್ದ ಕತ್ತಿಯನ್ನು ಕೈಯಲ್ಲಿ ಹಿಡಿದು, ರಣಕೇಕೆಯನ್ನು ಹಾಕುತ್ತ ಬೋಕಿಮಯ್ಯ ಪ್ರಭುಗಳಲ್ಲಿಗೆ ಬಂದು ಅಡ್ಡಬಿದ್ದು, ಬಳಿಕ ರಣಗಂಬಕ್ಕೆ ಮೂರು ಸೂಳು ಬಲ ವಂದು, ಬಲವಾಗಿ ಕೇಕೆಹಾಕಿದ. ರಣಭೇರಿ, ಕೊಂಬು, ಕಹಳೆ, ತುಮುಲು, ತಮ್ಮಟೆಗಳು ಕಿವಿ ಚಿಟ್ಟಾಗುವಂತೆ ಮೊರೆದುವು. ಎಲ್ಲರೂ ನೋಡುತ್ತಿದ್ದಂತೆಯೆ ಬೋಕಿಮಯ್ಯ ಎಡದ ಕೈಯಿಂದ ತನ್ನ ಶಿಖೆಯನ್ನು ಬಲವಾಗಿ ಹಿಡಿದುಕೊಂಡು, ಬಲಗೈಕತ್ತಿಯಿಂದ ಒಂದೇ ಬೀಸಿಗೆ ತನ್ನ ಶಿರಸ್ಸನ್ನು ಛೇದಿಸಿಕೊಂಡುಬಿಟ್ಟ. ರುಂಡದಿಂದ ಬೇರೆಯಾದ ಮುಂಡದ ಕುತ್ತಿಗೆಯಿಂದ ರಕ್ತವು ಕಾರಂಜಿಯಂತೆ ಚಿಮ್ಮಿತು. ರುಂಡವು ರಣಗಂಬದ ತಳಕ್ಕೆ ಉರುಳಿತು. ಮುಂಡವು ತಕತಕನೆ ಹತ್ತಾರು ಹೆಜ್ಜೆ ಕುಣಿದು ಕುಸಿಯಿತು. ಸೈನ್ಯವೆಲ್ಲ ಮಹಾಧ್ವನಿಯೊಡನೆ

ಜಯಜಯಕಾರಮಾಡಿತು. ಆ ಮಹಾಶಬ್ದಕ್ಕೆ ಕುದುರೆಗಳು ಕೆನೆದವು, ಎತ್ತು ಗಳೂ ಗೂಳಿಗಳೂ ಗುಟುರುಹಾಕಿದವು. ಆನೆಗಳು ಘೀಳಿಟ್ಟವು, ರಣವಾದ್ಯ ಗಳು ಮೊರೆದವು.

'ರಣಬಲಿ'ಯಾದ ಬೋಕಿಮಯ್ಯನ ಹೆಂಡಿರುಮಕ್ಕಳಿಗೆ ಪ್ರಭುಗಳು ಒಂದು ಗ್ರಾಮವನ್ನೆ ಉಂಬಳಿಕೊಟ್ಟರು. ರಣಬಲಿಯಾದ ಬೋಕಿಮಯ್ಯನ ಹೆಸರಿನಲ್ಲಿ 'ವೀರಗಲ್ಲು' ನೆಡಿಸಿದರು. ಬೋಕಿಮಯ್ಯ ವೀರಸ್ವರ್ಗಕ್ಕೆ ಸಂದ.

ಪ್ರಭುಗಳೂ ಗಂಗರಾಜರೂ ಕುಳಿತ್ತಿದ್ದ ಮಹಾದಂತಿ, ಸೊಂಡಿಲನ್ನು ಮೇಲಕೆತ್ತಿ ದೊಡ್ಡದಾಗಿ ರಣೋತ್ಸಾಹದ ಕೂಗುಹಾಕಿ, ವೇಗವಾಗಿ ಮುಂದೆ ಮುಂದೆ ನಡೆಯಿತು. ಅದರ ಹಿಂದೆಯೆ ಹೊಯಿಸಳ ಮಹಾಸೇನೆ ಪ್ರಳಯಜಲ ಮುನ್ನುಗ್ಗಿದಂತೆ ಶತ್ರುರಾಜ್ಯಗಳ ಮೇಲೆ ದಾಳಿಗೆ ಹೊರಟಿತು.

ಹಲವು ದಿನಗಳ ಪ್ರಯಾಣಮಾಡಿ ಹೊಯಿಸಳಸೇನೆ ತಲವನಪುರದ ಬಳಿ ಕಾವೇರಿಯ ಆಚೆಯ ದಡದಲ್ಲಿ ಪಾಳೆಯಬಿಟ್ಟಿತು. ಅಷ್ಟು ಹೊತ್ತಿಗೆ ರಾಷ್ಟ್ರಕೂಟಗಂಗರು ಚೋಳರ ಸಾಮಂತರಾಗಿಹೋಗಿದ್ದರು. ತಲವನಪುರದ ಗಂಗರಸ ದಾಮೋದರ, ತನ್ನ ಸಹಾಯಕ್ಕೆ ಚೋಳರ ಪ್ರಚಂಡ ಸೇನಾಧಿಪತಿ ಆದಿಯಮನನ್ನು ಕರಸಿಕೊಂಡಿದ್ದ. ಆದಿಯಮ ಮಹಾಸೈನ್ಯದೊಡನೆ ಕಾವೇ ರಿಯ ಈಚೆಯ ತೀರದಲ್ಲಿದ್ದ ತಲವನಪುರದ ರಕ್ಷಣೆಗೆ ಸಿದ್ಧನಾಗಿ ನಿಂತಿದ್ದ.

'ನೀನು ನಮಗೆ ಶರಣಾಗತನಾಗುವುದು ಲೇಸು', ಎಂದು ಗಂಗರಾಜರು ದಾಮೋದರನಿಗೂ ಆದಿಯಮನಿಗೂ ಹೇಳಿಕಳಿಸಿದರು. 'ಯುದ್ಧಮಾಡಿ ಗೆದ್ದು ಕೊಳ್ಳಿರಿ' ಎಂದು ಉತ್ತರವಿತ್ತ ಆದಿಯಮ. ಹಸ್ತ ಚಿತ್ತೆ ಮಳೆಗಳು ಹುಚ್ಚು ಹುಚ್ಚಾಗಿ ಹುಯ್ದು, ಹೆಚ್ಚು ಪ್ರವಾಹದಲ್ಲಿದ್ದಳು ಕಾವೇರಿ ಆಗ. ಇದೇ ಆದಿ ಯಮ ದಾಮೋದರರಿಗೆ ಅಷ್ಟು ಹೆಚ್ಚಿನ ಧೈರ್ಯ ಕೊಟ್ಟದ್ದು.

ಅಷ್ಟು ಪೂರ್ಣಪ್ರವಾಹದಲ್ಲಿದ್ದ ಕಾವೇರಿಯನ್ನು ದಾಟಲು ಉದ್ಯಮಿಸು ವುದು ಉದ್ಧಟತನವೆಂದು ಗಂಗರಾಜರು ತಿಳಿದವರಾದರೂ, ಪ್ರವಾಹ ಅಡಗು ವಷ್ಟು ದಿನ ಕಾಲಹರಣಮಾಡುವುದೂ ಉತ್ಸಾಹಕ್ಕೆ ಅಡ್ಡಿ ಎಂದುಕೊಂಡರು. ಅಷ್ಟರಲ್ಲಿ ನದಿಯನ್ನು ದಾಟುವ ಯೋಚನೆಗಾಗಿಯೆ ಕಳಿಸಲ್ಪಟ್ಟಿದ್ದ ನಾಯಕರು ಬಂದು, 'ಶಿವಸಮುದ್ರದ ಕಡೆ ಒಂದೆಡೆಯಲ್ಲಿ ಪ್ರಯತ್ನದಿಂದ ದಾಟಲು ಸಾಧ್ಯ' ಎಂದು ವರದಿ ತಂದರು.

ಭೀಷ್ಮರೂ ಪ್ರಭುಗಳೂ ಮರುದಿನ ಬೆಳಗ್ಗೆ ನದಿಯಲ್ಲಿ ಮಿಂದು, 'ದಾರಿ ತೋರು ತಾಯೆ' ಎಂದು ಕಾವೇರಿಯನ್ನು ಪ್ರಾರ್ಥಿಸಿ, ಭಕ್ತಿಯಿಂದ ಉಪವಾಸ ವ್ರತವನ್ನಾಚರಿಸಿ ಧ್ಯಾನದಲ್ಲಿ ಕುಳಿತರು. ಸಂಜೆಯ ಹೊತ್ತಿಗೆ ಸರ್ವರಿಗೂ ಆಶ್ಚರ್ಯ ವಾಗುವಂತೆ ನದಿಯಲ್ಲಿ ಒಂದು ಧನುಸ್ಸಿನ ಪ್ರಮಾಣ ನೀರು ತಗ್ಗಿತು. ರಾತ್ರಿಯ ವೇಳೆಗೆ ಇನ್ನೂ ಒಂದು ಅರ್ಧ ಧನುಸ್ಸಿನಷ್ಟು ಕಡಮೆಯಾಗಬಹುದೆಂಬ ಭರ ವಸೆಯೂ ಕಂಡಿತು. ದೈವವು ತಮ್ಮ ಪಾಲಿಗೆ ಇದೆಯೆಂದು ಹೊಯಿಸಳ ಸೇನೆಗೆ ಧೈರ್ಯಬಂದಿತು. ಹೊಯಿಸಳ ಸೇನೆಗೆ ಇದು ಒಂದು ಭರವಸೆಯೆ ಆಯಿತು.

ಅರ್ಧರಾತ್ರಿಗೆ ಸ್ವಲ್ಪ ಮುಂಚೆ ನದಿಯ ಪ್ರವಾಹ ಇನ್ನೂ ಒಂದು ಮೊಳ ದಷ್ಟು ತಗ್ಗಿತು. ಗಂಗರಾಜರು ಆಗ ಸೇನೆಯನ್ನು ಇಬ್ಭಾಗಮಾಡಿ, ಅರ್ಧ ಸೈನ್ಯವನ್ನು ಪುನೀಸನ ಕೈಕೆಳಗಿಟ್ಟು, ಶಿವಸಮುದ್ರದ ಬಳಿ ಜಾಗರೂಕತೆಯಿಂದ, ಸುರಕ್ಷಿತವಾಗಿ, ಬೆಳಗಾಗುವ ಮುನ್ನ ಆಚೆಯ ದಡವನ್ನು ಸೇರಿ, ಸೂರ್ಯೋ ದಯವಾದ ಒಂದೆರಡು ಗಂಟೆಗಳೊಳಗಾಗಿ, ಆದಿಯಮನ ಸೈನ್ಯವನ್ನು ಹಿಂದು ಗಡೆಯಿಂದ ಬಲವಾಗಿ ಮುತ್ತಿ ಕೊಚ್ಚಬೇಕೆಂದು ಕಟ್ಟಾಜ್ಞೆಮಾಡಿ, ಮಿಕ್ಕ ಅರ್ಧ ಸೈನ್ಯವನ್ನೂ, ಭಾರವಾದ ರಥ, ಇತರ ಸಾಮಗ್ರಿಗಳನ್ನೂ ಅಲ್ಲಿಂದಲೇ ದಡದಾಟಿಸುವ ಮಹಾ ಉದ್ಯಮವನ್ನು ತಾವೇ ಕೈಗೊಂಡರು.

ಎತ್ತರವಾದ ನಾಲ್ಕು ಸಲಗಗಳನ್ನು ಆಯ್ದು, ಅಗಲವಾದ ಮರದ ಹಲಗೆಗಳನ್ನು ಅವುಗಳ ದಂತಕ್ಕೆ ಸರಿಯಾಗಿ ರಂಧ್ರಮಾಡಿ ಜೋಡಿಸಿ, ಅವನ್ನು ಹಿಂದಿನಿಂದ ಅವುಗಳ ಕುತ್ತಿಗೆಗೆ ಬಿಗಿದು, ಶತ್ರುಗಳ ಶರಗಳಿಂದ ಅವುಗಳಿಗಾಗಲಿ, ಅವುಗಳ ಹಿಂದೆ ರಕ್ಷಣೆಹೊಂದಿ ಮುಂದುವರಿಯುತ್ತಿದ್ದ ಸೇನೆಗಳಿಗಾಗಲಿ ಏನೊಂದಪಾಯವೂ ಇಲ್ಲದಂತೆ ಮಾಡಿ, ಆ ಕತ್ತಲಲ್ಲಿಯೆ ಮೆಲ್ಲಗೆ ನದಿ ಯೊಳಕ್ಕೆ ಇಳಿಸಿ, ಆಚೆಯ ದಡದವರೆಗೂ ನಡೆಯಿಸಿ, ಕಾಡಿನ ಮರೆಯ ಒಂದು ಪ್ರದೇಶದಲ್ಲಿ ನಿಲ್ಲಿಸಿಕೊಂಡರು. ಮಿಕ್ಕ ಆನೆಗಳಿಂದ ದಡದ ಮೇಲಿದ್ದ ಸಣ್ಣ ದೊಡ್ಡ ಮರಗಳನ್ನು ಉರುಳಿಸಿ, ಆ ಮರಗಳನ್ನು ನದಿಯಲ್ಲಿ ಬಂಡೆಗಳಿದ್ದ ಕಡೆ ಇರುಕುಗಳಲ್ಲಿ ಸೇರಿಸಿದರು. ಒಬ್ಬೊಬ್ಬ ಸೈನಿಕನೂ ಮರಗಳನ್ನು ಹೊತ್ತು ಹೊತ್ತು ನದಿಯ ಉದ್ದಕ್ಕೆ ಸುರಿದನು. ನದಿಯಲ್ಲಿ ಹೀಗೆ ಒಂದು ದಾರಿಯನ್ನು ಕಲ್ಪಿಸಿಕೊಂಡರು. ನದಿಯಲ್ಲಿ ಪ್ರವಾಹವೂ ಕಡಿಮೆಯಾಗಿತ್ತು. ಎಲ್ಲ ಸಾಮಾನುಗಳನ್ನು ಕುದುರೆಗಳು, ಆನೆಗಳ ಬೆನ್ನಿನ ಮೇಲೆಯೆ ಆಚೆಯ

ದಡಕ್ಕೆ ಸಾಗಿಸಿದರು. ಕೆಲಸವೇನೊ ವಿಪರೀತ ಕಷ್ಟವಾಗಿತ್ತು. ಎಷ್ಟೇ ಕಷ್ಟ ವಾದರೂ ಪ್ರಭುಗಳಾಗಲಿ, ಗಂಗರಾಜರಾಗಲಿ ಹಿಂದೆಗೆಯುವ ಸ್ವಭಾವದವ ರಾಗಿರಲಿಲ್ಲ.

ಬೆಳಕು ಹರಿಯುವುದಕ್ಕೆ ಮುಂಚೆಯೆ ಹೊಯಿಸಳ ಸೇನೆ ಸದ್ದಿಲ್ಲದೆ ಆಚೆಯ ದಡವನ್ನು ಸೇರಿ, ಕಾಡಿನ ಮರಗಳ ಮರೆಯಲ್ಲಿ ಸಜ್ಜುಗೊಂಡವು. ಹೊಯಿಸಳ ಸೇನೆಯೆಲ್ಲ ನದಿಯನ್ನು ದಾಟಿಬಂದ ಮೇಲೆ ಆದಿಯಮ ಎಚ್ಚತ್ತು ಕೊಂಡ. ಪೂರ್ಣಪ್ರವಾಹದಲ್ಲಿರುವ ಕಾವೇರಿಯನ್ನು ಒಂದು ದೊಡ್ಡ ಸೇನೆ ನದಿ ಯಲ್ಲಿಳಿದು ದಾಟುವುದು ಅಸಾಧ್ಯವೆಂದು ಆದಿಯಮ ನಿಶ್ಚಿಂತನಾಗಿ ತನ್ನ ಶಿಬಿರ ದಲ್ಲಿ ನಿದ್ರಿಸಿದ್ದ. 'ಹೊಯಿಸಳಸೇನೆ ರಾತ್ರಿಯೆ ನದಿಯನ್ನು ದಾಟಿ ತಲವನಪುರದ ಕಡೆಗೆ ಬರುತ್ತಿದೆ' ಎಂಬ ಸುದ್ದಿಯನ್ನು ಕೇಳಿ, ಆದಿಯಮನ ಧೈರ್ಯ ಅರ್ಧ ಕುಂದಿತು. 'ಆನೆಗಳೇ ಕೊಚ್ಚಿಹೋಗುವ ಈ ಪ್ರವಾಹವನ್ನು ಸೇನೆಗಳು ಹೇಗೆ ದಾಟಿ ಬಂದುವು!' ಎನ್ನುವುದು ಅವನಿಗೆ ಆಶ್ಚರ್ಯವಾಗಿಯೆ ಉಳಿಯಿತು.

ಬೆಳಕು ಹರಿದದ್ದೇ ತಡ, ಎರಡು ಸೇನೆಗಳೂ ಜೀವದ ಹಂಗನ್ನು ತೊರೆದು ಭಯಂಕರವಾದ ಯುದ್ಧವನ್ನುಪಕ್ರಮಿಸಿದವು. ಎರಡು ಕಡೆಗಳಲ್ಲೂ ಅಪಾರ ನಷ್ಟ ಸಂಭವಿಸಿತು. ಅಷ್ಟುಹೊತ್ತಿಗೆ ಸೂರ್ಯೋದಯವಾಗಿ ಎರಡು ಗಂಟೆ ಕಾಲವಾಯಿತು. ಶಿವಸಮುದ್ರದ ಕಡೆಯಿಂದ ನದಿಯನ್ನು ದಾಟಿಬಂದ ಪುನೀಸನ ಕೈಕೆಳಗಿದ್ದ ಸೇನೆ, ಆದಿಯಮನ ಸೇನೆಯನ್ನು ಹಿಂದುಗಡೆಯಿಂದ ಬಲವಾಗಿ ಮುತ್ತಿತು. ಎರಡು ಸೈನ್ಯಗಳ ಇರುಕಿನಲ್ಲಿ ಈಗ ಸಿಕ್ಕಿಬಿದ್ದ ಆದಿಯಮನ ಸೇನೆ ಚೂರ್ಣವಾಗಿಹೋಯಿತು. ಭೀಷ್ಮರ ಯುದ್ಧನೈಪುಣ್ಯ ಪ್ರಭಾವ ಆದಿಯಮನಿಗೆ ಆಗ ತಿಳಿಯಿತು. ಆದಿಯಮ ದಿಕ್ಕುಗೆಟ್ಟ. ಹೇಗೊ ನುಣುಚಿಕೊಂಡು ಯುದ್ಧಭೂಮಿಯಿಂದ ಓಡಿದ. ದಾಮೋದರನ ಮುಕ್ಕಾಲು ಭಾಗ ಸೈನ್ಯವನ್ನು ಹೊಯಿಸಳ ಸೇನೆ ಕೊಚ್ಚಿ, ಕೊಚ್ಚಿ ನದಿಗೆ ಬೀಸಾಡಿತು. ಹಾಲ್ನೊರೆಯಂತಿದ್ದ ಕಾವೇರಿಯ ನೀರು ಕೆನ್ನೀರಾಯಿತು. ದಾಮೋದರನು ಜೀವ ಉಳಿದರೆ ಸಾಕೆಂದು, ಅರಮನೆಯಲ್ಲಿ ತನ್ನ ಹೆಂಡಿರು ಮಕ್ಕಳನ್ನೂ ಬಿಟ್ಟು ಓಡಿಹೋಗುವುದಕ್ಕೆ ಹವಣಿಸುತ್ತಿರುವನೆಂಬ ಸುದ್ದಿ ಹೊಯಿಸಳ ಶಿಬಿರಕ್ಕೆ ಮುಟ್ಟಿತು. ತತ್‌ಕ್ಷಣವೆ ಕೇತಮಲ್ಲನಾಯಕ ತನ್ನ ಕೈಕೆಳಗಿನ ಸೇನೆ ಯನ್ನು ತೆಗೆದುಕೊಂಡು ವಾಯುವೇಗದಿಂದ ಹೋಗಿ ಅರಮನೆಯನ್ನು ಸುತ್ತು

ಕಟ್ಟಿದ. ದಾಮೋದರ ಒಂದು ಗುಪ್ತಸುರಂಗದ ಮೂಲಕ ತಪ್ಪಿಸಿಕೊಂಡು ಕುದುರೆಯನ್ನು ಹತ್ತಿ ಓಡಿಹೋಗುತ್ತಿದ್ದಾಗ ದುರದೃಷ್ಟವಶಾತ್ ಆ ಗುಪ್ತ ಮಾರ್ಗವನ್ನು ಬಲ್ಲ, ಅಲ್ಲಿಯೇ ಕಾದಿದ್ದ ಕೇತಮಲ್ಲನಾಯಕನ ಕೈಗೆ ಸಿಕ್ಕಿಬಿದ್ದ. ಕೇತಮಲ್ಲನಾಯಕ ದಾಮೋದರನನ್ನು ಅಟ್ಟಿಸಿಕೊಂಡುಹೋಗಿ, ಓಡುತ್ತಿದ್ದ ಅವನ ಕುದುರೆಯನ್ನು ಉದ್ದನಾದ ಭಲ್ಲೆಯಿಂದ ತಿವಿದ. ಪೆಟ್ಟುತಿಂದ ಕುದುರೆ ದಾಮೋದರನನ್ನು ಕೆಳಕ್ಕೆ ಕೆಡವಿ ಓಡಿತು. ಕೇತಮಲ್ಲನಾಯಕ ತನ್ನ ಕುದುರೆಯಿಂದ ಕೆಳಕ್ಕೆ ದುಮುಕಿ 'ಹೆಂಡಿರು ಮಕ್ಕಳನ್ನೂ ಬಿಟ್ಟು ಓಡಿಹೋಗು ತ್ತಿರುವ ಹೇಡಿ ನೀನು. ಇಲ್ಲಿ ನೋಡು, ನಾನು ಕೇತಮಲ್ಲ. ಹೇಡಿಯಲ್ಲ. ನೀನು ಇನ್ನೆಲ್ಲಿಗೆ ಓಡುವೆ! ತಪ್ಪಿಸಿಕೊಂಡು ಓಡಿಹೋಗುವುದು ಇತರರ ಸ್ವತ್ತನ್ನು ಅಪಹರಿಸುವಷ್ಟು ಸುಲಭವಲ್ಲ' ಎನ್ನುತ್ತ ದಾಮೋದರನ ತಲೆಯನ್ನು ತನ್ನ ಕತ್ತಿಯ ಒಂದೇ ಪೆಟ್ಟಿಗೆ ಮುಂಡದಿಂದ ಬೇರೆಮಾಡಿ, ಆ ತಲೆಯನ್ನು ತನ್ನ ಭಲ್ಲೆಯದ ತುದಿಗೆ ಸಿಕ್ಕಿಸಿಕೊಂಡು, ಪಟ್ಟಣದ ಬೀದಿಗಳಲ್ಲಿ ಮೆರವಣಿಗೆ ತಂದು, ಆ ರುಂಡವನ್ನು ಪ್ರಭು ಹೊಯಿಸಳೇಶ್ವರರ ಪಾದಗಳ ಮೇಲೆ ಕೆಡವಿ, 'ಪ್ರಭೊ, ಇದೋ ನನ್ನ ಕಾಣಿಕೆ' ಎಂದು ಅರ್ಪಿಸಿದ, ಹಠಗಾರ ಕೇತಮಲ್ಲನಾಯಕ. ಪ್ರಭುಗಳು ಕೇತಮಲ್ಲನಾಯಕನ ಸಾಹಸಕ್ಕೆ ಮೆಚ್ಚಿ, ಅವನನ್ನು ಆಕ್ಷಣವೆ ದಂಡನಾಯಕನ ಪದವಿಗೆ ಏರಿಸಿ ಗೌರವಿಸಿದರು.

ಚೋಳಗಂಗರ ತಲವನಪುರ ವಿಷ್ಣುವರ್ಧನನದಾಯಿತು. ಅಪಾರ ಯುದ್ಧಸಾಮಗ್ರಿ, ದವಸಧಾನ್ಯ ದಾಮೋದರನ ಸಮಸ್ತಭಂಡಾರ ಎಲ್ಲವೂ ಹೊಯಿಸಳ ಪ್ರಭುವಿನದಾಯ್ತು. ಆ ದಿನವೆ ಪ್ರಭುವು ತಮ್ಮ ಪ್ರಪ್ರಥಮ ವಿಜಯಸ್ತಂಭವನ್ನು ನೆಡಿಸಿ, ಅದೇ ಸ್ಥಳದಲ್ಲಿ ಕೀರ್ತಿನಾರಾಯಣ ದೇವಾಲಯ ವನ್ನು ಕಟ್ಟುವಂತೆ ಆಜ್ಞೆಮಾಡಿ, ನಗರವನ್ನು ತಕ್ಕ ರಕ್ಷಣಾಸೈನ್ಯದೊಂದಿಗೆ ತನ್ನ ನಾಯಕನೊಬ್ಬನ ರಕ್ಷಣೆಯಲ್ಲಿರಿಸಿ, ಓಡಿಹೋದ ಆ ಆದಿಯಮನನ್ನು ಅಟ್ಟಿಸಿ ಕೊಂಡು ಅದೇ ದಿನವೇ ಅಲ್ಲಿಂದ ವೇಗವಾಗಿ ಹೊರಟರು.

ಅದಿಯಮ ಓಡಿ ಓಡಿ, ದಾರಿಯಲ್ಲಿ ಚೋಳಸಾಮಂತ ನರಸಿಂಹ ವರ್ಮನ ಆಶ್ರಯದಲ್ಲಿ ನಿಂತ. ನರಸಿಂಹವರ್ಮ ಹೊಯಿಸಳ ಸಾಮರ್ಥ್ಯವನ್ನರಿ ಯದೆ ಅಡ್ಡಕಟ್ಟಿ ನಿಂತ. ಎರಡೇ ದಿನದಲ್ಲಿ ಅವನ ಸೇನೆ ಧ್ವಂಸವಾಗಿ ಹೋಯಿತು. ವಿಷ್ಣುವರ್ಧನನ ಕತ್ತಿಯ ಏಟಿನಿಂದ ನರಸಿಂಹವರ್ಮನ ತಲೆ

ಇಬ್ಭಾಗವಾಗಿ ಬಿರಿಯಿತು. ಆದಿಯಮ ಅಲ್ಲಿಂದ ಕಂಚಿಗೆ ಓಡಿದ. ಹೊಯಿಸಳ ಸೇನೆ ಅಲ್ಲಿಗೂ ಅವನ ಬೆನ್ನಟ್ಟಿತು. ರಣಮತ್ತರಾದ, ವಿಜಯಮತ್ತರಾದ ಹೊಯಿಸಳ ಸೇನೆಗೆ ಈಗ ಅಡ್ಡಿ ಯಾವುದು! ಆತಂಕ ಯಾವುದು! ಆದಿಯಮ ಅಲ್ಲಿಂದ ಮುಂದಕ್ಕೆ ಹೊರಗೆ ಎಲ್ಲಿಯೂ ಕಾಣಿಸಿಕೊಳ್ಳದೆ ಇಲಿ, ಹೆಗ್ಗಣಗಳಂತೆ ಎಲ್ಲಿಯೊ ಭೂಮಿಯಲ್ಲಿ ಅಡಗಿಬಿಟ್ಟ.

ಪ್ರಭುಗಳು ತಮ್ಮ ತಂದೆ ಎರೆಯಂಗರಂತೆ ಕಂಚಿಯ ವರದರಾಜ ಸ್ವಾಮಿಗೆ, ಕಾಮಾಕ್ಷಿದೇವಿಗೆ, ವಸ್ತ್ರವಸ್ತ್ರಾಲಂಕಾರಗಳನ್ನು ಒಪ್ಪಿಸಿದರು. ಅದೇ ದಿನಗಳಲ್ಲಿಯೆ ಪ್ರಭುಗಳ ಬೊಕ್ಕಸದ ಹಣದಿಂದ ಮೇಲುಕೋಟೆಯಲ್ಲಿ ಚೆಲುವನಾರಾಯಣ ದೇವಾಲಯವೂ ಕಟ್ಟಲ್ಪಡುತ್ತಿತ್ತು. ಶ್ರೀರಂಗಪಟ್ಟಣದ ಬಳಿ ಇರುವ ತೊಂಡನೂರಿನಲ್ಲಿಯೂ ನಾರಾಯಣದೇವರ ದೇವಾಲಯ ಕಟ್ಟಲ್ಪಡುತ್ತಿತ್ತು. ಪ್ರಭುಗಳು ಮೇಲುಕೋಟೆಯ ಒಂದು ಶಿವಾಲಯಕ್ಕೂ ಆಗ ದತ್ತಿ ತೆಗೆದುಕೊಟ್ಟರು. ಇಂತಹ ಸರ್ವಮತಸಮದೃಷ್ಟಿಯುಳ್ಳಾತನಿಗೆ, ಭೇದರಹಿತನಿಗೆ, ದೈವವನ್ನು ಸರ್ವವಸ್ತುಗಳಲ್ಲಿಯೂ ಕಂಡವನಿಗೆ ವಿಜಯಲಕ್ಷ್ಮಿ ಒಲಿದದ್ದು ಏನಾಶ್ಚರ್ಯ!

ಪ್ರಭುವು ಕಂಚಿಯಿಂದ ಮಧುರೆಯ ಕಡೆ ಹೋಗಿ, ಅಲ್ಲಿಯ ಪಾಂಡ್ಯ ರಾಜನಿಂದ ಕಪ್ಪ ಕೊಂಡು, ಅಲ್ಲಿನ ದಕ್ಷಿಣಸಮುದ್ರತೀರವನ್ನು ಸೇರಿ, ಅಲ್ಲಿ ತನ್ನ ಜಯಸ್ತಂಭವನ್ನು ನೆಡಿಸಿ, ಪುನಃ ಕಂಚಿಗೆ ಬಂದು, ದೇವಾಲಯದಲ್ಲಿದ್ದ ಮಹಾದುಂದುಭಿಯನ್ನು ಬಾರಿಸಿದರು. ಅದರ ಅರ್ಥ 'ಹೊಯಿಸಳರ ಒಡೆತನವನ್ನು ದಕ್ಷಿಣದ ಅರಸರೆಲ್ಲ ಒಪ್ಪಬೇಕು' ಎಂದು. ಇದರಿಂದ ದಕ್ಷಿಣದ ಅಧಿಪತಿಗಳಿಗೆಲ್ಲ ಅಸೂಯೆ ಕ್ರೋಧಗಳುಂಟಾದವು. ಕೊಂಗು ದೇಶದ ಅರಸರಿಗೆ ವಿಪರೀತ ಸಿಟ್ಟುಬಂದಿತು.

ವಿಷ್ಣುವರ್ಧನಪ್ರಭುವು ಕಂಚಿಯಿಂದ ಕೋಲಾಲಪುರಕ್ಕೆ ಬಂದರು. ಕೋಲಾಲಪುರ, ನಂಗಲಿ, ನೊಳಂಬವಾಡಿ, ಗಂಗವಾಡಿಗಳು ತಾವಾಗಿಯೆ ಶರಣು ಬಂದವು. ಪ್ರಭುವು ಅಲ್ಲಿಯ ಚೋಳಸಾಮಂತರನ್ನು ಕರಸಿ, ಅವರನ್ನು ತಮ್ಮ ಸಾಮಂತರನ್ನಾಗಿ ಮಾಡಿಕೊಂಡು ಗೌರವಿಸಿ 'ಧರ್ಮದಿಂದ ಚೆನ್ನಾಗಿ ರಾಜ್ಯ ನಡಸಿಕೊಂಡುಬನ್ನಿ'ರೆಂದು ವಿವೇಕಹೇಳಿ, ರಾಜ್ಯಗಳನ್ನು ಅವರವರಿಗೇ ಒಪ್ಪಿಸಿ, ಅಲ್ಲಿನ ನ್ಯಾಯ, ರೀತಿ, ನೀತಿಗಳನ್ನು ಕ್ರಮಪಡಿಸುವ ಭಾರವನ್ನು ಗಂಗರಾಜರಿಗೆ

ಒಪ್ಪಿಸಿದರು. ಪ್ರಭುಗಳು ಸ್ವಲ್ಪಕಾಲ ಕೋಳಾಲಪುರದಲ್ಲಿ ನಿಂತು, ಪುನೀಸನ ಕೈಗೆ ಒಂದು ಮಹಾಸೈನ್ಯವನ್ನು ಜೊತೆಮಾಡಿಕೊಟ್ಟು, ಆಳ್ವಖೇಡ, ಚೆಂಗಾಳ್ವ, ತೊದವ, ಕೇರಳರನ್ನು ಜಯಿಸಿ ಬಾ' ಎಂದು ಹೇಳಿಕಳಿಸಿ, ತಾವು ಹಂಚೇರಿನ ಮೇಲೆ ಸೈನ್ಯ ನಡಸಿಕೊಂಡು ಹೋದರು. ಅಲ್ಲಿನ ಚೋಳ ಸಾಮಂತ ಇರುಂಗೋಲ ವಿಷ್ಣುವರ್ಧನರಿಗೆ ಶರಣುಬಂದ. ಪ್ರಭುವು ಅವನನ್ನು ಗೌರವಿಸಿ, ಧರ್ಮದಿಂದ ನಾಡನ್ನಾಳುವಂತೆ ಹೇಳಿ, ಮುಂದಕ್ಕೆ ಚೇರ, ಪಲ್ಲವರ ಮೇಲೆ ಯುದ್ಧಕ್ಕೆ ಅಣಿಮಾಡಿಕೊಳ್ಳುತ್ತಿದ್ದರು.

ಚೇರರ ರಾಮರಾಯಪುರ ವಿಷ್ಣುವರ್ಧನನ ಕಡತಕ್ಕೆ ಸೇರಿತು. ಪಲ್ಲವರ ಸೊಲ್ಲನ್ನಡಗಿಸಿ, ಚಕ್ರಗೊಟ್ಟದ ಸೋಮೇಶ್ವರನನ್ನು ಗೆದ್ದು ಸಾಮಂತನನ್ನಾಗಿ ಮಾಡಿಕೊಂಡು, ಓಢ್ರ ದೇಶದ ಎಲ್ಲೆಗೂ ಹೋಗಿ, ಪೂರ್ವಸಮುದ್ರ ಕರಾವಳಿ ಯಲ್ಲಿ ತಮ್ಮ ಜಯಸ್ತಂಭವನ್ನು ನೆಡಿಸಿ, ಪ್ರಭುವು ಹೀಗೆ ದಕ್ಷಿಣಪೂರ್ವದೇಶಗಳ ದಿಗ್ವಿಜಯವನ್ನು ಪೂರ್ಣಗೊಳಿಸಿದರು.

ಸೈನ್ಯವನ್ನು ತೆಗೆದುಕೊಂಡು ಹೊರಟ ಪುನೀಸ, ಕೇತಮಲ್ಲನಾಯಕರು ಚೆಂಗಾಳ್ವರನ್ನು ಗೆದ್ದು, ತುಳುವರನ್ನು ಸೋಲಿಸಿ ನೀಲಪರ್ವತವನ್ನು ಸೇರಿ, ಪರ್ವತಶಿಖರದ ಮೇಲೆ ಹೊಯಿಸಳ ಪತಾಕೆಯನ್ನು ನೆಟ್ಟು, ಅಲ್ಲಿಂದ ಬಯಲು ಸೀಮೆಗೆ ಇಳಿದು, ಕೊಯಮತ್ತೂರನ್ನು ಗೆದ್ದು, ಅಪಾರ ದ್ರವ್ಯ ಧಾನ್ಯಗಳನ್ನು ತಂದು ಪ್ರಭುಗಳಿಗೆ ಒಪ್ಪಿಸಿದರು.

ಈ ವೇಳೆಗೆ ಪ್ರಭುವು ರಾಜಧಾನಿಯಿಂದ ಹೊರಟು ಮೂರು ವರ್ಷ ಗಳಾಗಿಹೋಗಿತ್ತು. ರಾಜಧಾನಿ ಬೊಪ್ಪಣ, ಕುವರವಿಷ್ಣು ಇವರ ರಕ್ಷಣೆಯ ಲ್ಲಿತ್ತು. ಅರಮನೆಯ ಆಡಳಿತವನ್ನೆಲ್ಲ ಮಹಾರಾಣಿ ಶಾಂತಲ ದೇವಿಯೆ ನಡಸುತ್ತಿದ್ದಳು. ಪ್ರತಿ ಹತ್ತು ಹನ್ನೆರಡು ದಿನಗಳಿಗೊಮ್ಮೆ ಯುದ್ಧಭೂಮಿ ಯಿಂದ ರಾಜಧಾನಿಗೆ ತಪ್ಪದೆ ಸಮಾಚಾರಗಳು ಬರುತ್ತಿದ್ದವು. ರಾಜಧಾನಿ ಯಿಂದ ಯುದ್ಧಭೂಮಿಗೆ ವಸ್ತುಗಳ ಸಾಗಣೆಯೂ, ಕ್ಷೇಮಸಮಾಚಾರಗಳನ್ನು ತಪ್ಪದೆ ಕಳಿಸುವುದೂ ಅಷ್ಟೇ ತೀವ್ರವಾಗಿ ನಡೆದಿದ್ದಿತು.

ಕುವರವಿಷ್ಣುವಿಗೆ ಈಗ ಸುಮಾರು ಹದಿನಾರು ಹದಿನೇಳು ವರ್ಷಗಳ ಪ್ರಾಯ. ಅಸ್ತ್ರಶಸ್ತ್ರಪಾರಂಗತನೂ, ಶಸ್ತ್ರಾಧ್ಯಯನಸಂಪನ್ನನೂ ಆಗಿದ್ದ. ಪ್ರಭುಗಳಂತೆಯೇ ಮಹಾಶೂರ, ಅತಿ ಧೈರ್ಯಶಾಲಿ, ವಿವೇಚನಾಪರ, ಅಕ್ಕನಿಗೆ

ಬಲಗೈ, ರಾಜಮಾತೆಗೆ ಜೀವವಾಗಿದ್ದ. ಶಾಂತಲದೇವಿ ಪ್ರತಿ ಶುಕ್ರವಾರ ಓಲಗದಲ್ಲಿ ಸಿಂಹಾಸನದ ಮೇಲೆ ಕುಳಿತು, ರಾಜ್ಯದ ಆಡಳಿತಗಳನ್ನೆಲ್ಲ ವಿಚಾರಿಸಿ ವಿಮರ್ಶಿಸಿ, ಉತ್ತಮವಾದ ಸಲಹೆಗಳನ್ನು ಕೊಡುತ್ತಿದ್ದಳು. ಹೇಮಾದ್ರಿಗಳು ಆಕೆಯ ಆಲೋಚನೆ ಅಭಿಪ್ರಾಯಗಳನ್ನು ಮನಸಾರೆ ಗೌರವಿಸುತ್ತಿದ್ದರು. ಅನೇಕ ವೇಳೆಗಳಲ್ಲಿ ಶಾಂತಲಾದೇವಿ ಬಹು ತೊಡಕಿನ ನ್ಯಾಯಗಳನ್ನು ಬಿಡಿಸಿ ವ್ಯಾಜ್ಯಗಳ ತೀರ್ಪನ್ನೂ ಕೊಡುತ್ತಿದ್ದಳು. ಲೌಕಿಕವನ್ನೂ ಧರ್ಮದೃಷ್ಟಿ ಯಿಂದಲೆ ಅಳೆಯುತ್ತಿದ್ದ ಆಕೆಗೆ ತೀರ್ಪುಗಳನ್ನು ಕೊಡಲು ಕಷ್ಟವಾಗುತ್ತಿರಲಿಲ್ಲ. ತಪ್ಪು ಮಾಡಿದವರಿಗೆ ಶಿಕ್ಷೆಯನ್ನು ವಿಧಿಸುವುದಕ್ಕಿಂತ, ಅಂತಹವರಲ್ಲಿ ವಿವೇಚನೆ ಯನ್ನೂ ಧರ್ಮದೃಷ್ಟಿಯನ್ನೂ ಉತ್ಪಾದನೆ ಮಾಡಿ ಅವರನ್ನೂ ಉತ್ತಮ ಪ್ರಜೆ ಗಳನ್ನಾಗಿ ಪರಿವರ್ತಿಸಲು ಆಕೆ ಸರ್ವಪ್ರಯತ್ನ ಪಡುತ್ತಿದ್ದುದು ಅತ್ಯಂತ ಶ್ಲಾಘನೀಯವಾಗಿತ್ತು.

ಒಮ್ಮೆ ದೇವಣ್ಣನೆಂಬ ನಾಗರಿಕನೊಬ್ಬ, ಭಂಡಾರಿ ಆದಿಯಣ್ಣನೆಂಬಾತ ನಿಗೆ ತನ್ನ ಭೂಮಿಯನ್ನು ಕ್ರಯಮಾಡಿದ್ದ. ದೇವಣ್ಣ ಸತ್ತ ಮೇಲೆ, ಅವನ ಮಕ್ಕಳಾದ ನಾಗಣ್ಣ, ಸೋಮಣ್ಣ ಇಬ್ಬರೂ ತಮ್ಮ ತಂದೆ ದೇವಣ್ಣ ಪಿತ್ರಾರ್ಜಿತ ಆಸ್ತಿಯನ್ನು ಭಂಡಾರಿ ಆದಿಯಣ್ಣನಿಗೆ ಕ್ರಯಕ್ಕೆ ಕೊಟ್ಟಾಗ ತಾವು ಚಿಕ್ಕವ ರೆಂದೂ, ಅದು ತಮಗೆ ತಿಳಿಯದೆಂದೂ ವಾದ ತಂದರು. ಈ ವಾದ ಶಾಂತಲ ಮಹಾ ರಾಣಿಯ ಮುಂದೆ ತೀರ್ಪಿಗೆ ಬಂದಿತು. ಭಂಡಾರಿ ಆದಿಯಣ್ಣ ಹೇಳಿದ: ದೇವಣ್ಣ ಹಣಕ್ಕಾಗಿ ಬಹು ತೊಂದರೆಪಡುತ್ತಿದ್ದಾಗ ತಾನು ಇಪ್ಪತ್ತು ಗದ್ಯಾಣ ಗಳನ್ನು ಕೊಟ್ಟು ಮೃತನ ಭೂಮಿಯನ್ನು ಕ್ರಯಕ್ಕೆ ಪಡೆದೆನೆಂದು, ಈಗ ಆ ಭೂಮಿಗೆ ವ್ರಯವಿಟ್ಟು ಉತ್ತಮಪಡಿಸಿಕೊಂಡಿರುವೆನೆಂದು . . . ಮಹಾರಾಣಿ ಶಾಂತಲದೇವಿ ನಾಗಣ್ಣ ಸೋಮಣ್ಣ ಇವರುಗಳನ್ನು ಕುರಿತು 'ನಾಗರಿಕರೆ, ನಿಮ್ಮ ತಂದೆ ದೇವಣ್ಣ ಧರ್ಮಿಯಾಗಿ ಬದುಕಿದನೊ, ಅಥವಾ ಅಧರ್ಮಿಯಾಗಿ ಬದುಕಿ ದನೊ?' ಎಂದು ಒಂದೇ ಪ್ರಶ್ನೆ ಕೇಳಿದಳು. ದೇವಣ್ಣನ ಮಕ್ಕಳು ಒಬ್ಬರ ಮುಖವನ್ನೊಬ್ಬರು ನೋಡಿದರು . . . ನಾಗರಿಕ ದೇವಣ್ಣ ಧರ್ಮಿಯಾಗಿಯೇ ಬಾಳಿದನೆಂಬ ಸಂಗತಿ ಲೋಕ ಬಲ್ಲುದು, ಶಾಂತಲೆಯೂ ಬಲ್ಲವಳಾಗಿದ್ದಳು. ಧರ್ಮಕ್ಕೆ, ಸತ್ಯಕ್ಕೆ ಯಾವ ಕಾಲಕ್ಕೂ ಚ್ಯುತಿಬಾರದೆಂಬ ದೃಢ ನಂಬಿಕೆ ಆಕೆಗೆ ಇತ್ತು. 'ನಮ್ಮ ತಂದೆ ಧರ್ಮಿಯಾಗಿಯೂ ಶೀಲವಂತನಾಗಿಯೂ ಬಾಳಿದನು'

ಎಂದರು ಮಕ್ಕಳು. ಆಗ ಶಾಂತಲ ಮಹಾರಾಣಿ ಎಂದಳು: 'ಅಂತಹ ಧರ್ಮಿಯು ತನ್ನ ಮಕ್ಕಳಿಗೆ ಅಹಿತವನ್ನೆಂದಿಗೂ ಬಯಸಿರಲಾರ. ನ್ಯಾಯವಾದ ವೆಚ್ಚಗಳನ್ನು ಸರಿದೂಗಿಸಲು ಭೂವಿಕ್ರಯ ಮಾಡಿರಬೇಕು. ಅಂತಹ ತಂದೆ ನಡೆಸಿದುದನ್ನು ಮಕ್ಕಳು ಗೌರವಿಸಬೇಕು. ನಿಮಗೆ ವ್ಯವಸಾಯಕ್ಕೆ ಭೂಮಿಯಿಲ್ಲದಿದ್ದರೆ, ದೇವಾಲಯಕ್ಕೆ ಸೇರಿರುವ ಶೂನ್ಯಮಾನ್ಯದ ಭೂಮಿಯನ್ನು ನಾವು ಕೊಡಿಸಿ ಕೊಡುತ್ತೇವೆ. ಅಣ್ಣತಮ್ಮಂದಿರು ಅನ್ಯೋನ್ಯರಾಗಿದ್ದುಕೊಂಡು, ಈ ಜೀವನೋಪಾಯವನ್ನು ದೇವರೇ ಕರುಣಿಸಿಕೊಟ್ಟನೆಂದು ಭಾವಿಸಿ, ಕಷ್ಟಪಟ್ಟು ಬೇಸಾಯ ಮಾಡಿ, ದೇವರ ಸೇವೆಗೆ ಅರ್ಧಭಾಗವನ್ನು ಒಪ್ಪಿಸಿ, ಮಿಕ್ಕರ್ಧವನ್ನು ನೀವು ಸಮನಾಗಿ ಹಂಚಿಕೊಳ್ಳಿರಿ' ಎಂದು ತೀರ್ಪು ಕೊಟ್ಟಳು. ಹೀಗೆ ಶಾಂತಲ ಮಹಾರಾಣಿ ಆ ಇಬ್ಬರು ಯುವಕರಲ್ಲಿ ದೈವಭಕ್ತಿಯನ್ನು ಬಿತ್ತಿ, ನ್ಯಾಯ ಧರ್ಮಗಳನ್ನು ಬೆಳಸಿ ಸಜ್ಜನರನ್ನಾಗಿ ಮಾಡಿದಳು.

§

ಹೊಯಿಸಳೇಶ್ವರರು ರಾಜಧಾನಿಯಿಂದ ಬಹುದೂರದಲ್ಲಿರುವ ಸಮಯವನ್ನೇ ಕಾಯುತ್ತಿದ್ದ ಕೆಲವು ಮಲೆಪರು, ಹೊಯಿಸಳ ರಾಜಧಾನಿ ಈಗ ರಕ್ಷಕರಿಲ್ಲದ ಊರೆಂದು ಭಾವಿಸಿ, ತಮ್ಮ ಉದ್ದೇಶಸಾಧನೆಗೆ ಇದೇ ತಕ್ಕ ಸಮಯವೆಂದು ನೆನೆದು, ಸಜ್ಜಿತರಲ್ಲದ ಕಾಡುಜನರನ್ನು ಒಟ್ಟುಗೂಡಿಸಿಕೊಂಡು, ದ್ವಾರವತಿಯನ್ನು ಸೂರೆಮಾಡಲು ಬಂದರು.

ರಾಜಧಾನಿಯನ್ನು ರಕ್ಷಿಸಲು ಬೊಪ್ಪಣ ಸಿದ್ಧನಾಗಿಯೆ ಇದ್ದ. ಮಲೆಪರು ಹೊಯಿಸಳ ರಾಜಧಾನಿ ರಕ್ಷಕರೇ ಇಲ್ಲದ ನಾಡೆಂದು ಬಗೆದಿದ್ದರು. ಅದೇ ಸಮಯಕ್ಕೆ ಚಮೂಪ ಪುನೀಸನಿಂದ ಪೆಟ್ಟುತಿಂದು ಓಡಿದ್ದ ಕೊಂಗುದೇಶದವರೆಲ್ಲ ಒಟ್ಟುಗೂಡಿ, ಸೈನ್ಯ ಸಾಮಗ್ರಿಗಳನ್ನು ಕೂಡಿಸಿಕೊಂಡು, ಶಾಲ್ಯ ಹೊಸೂರುಗಳ ಮಾರ್ಗವಾಗಿ ಪ್ರಯಾಣಮಾಡಿ ನೆಲಮಂಗಲವನ್ನು ದಾಟಿ ಹೊಯಿಸಳ ನಾಡನ್ನು ಪ್ರವೇಶಿಸಿದರು. ಕೊಂಗರ ಸೇನೆ ಭಯಂಕರವಾಗಿತ್ತು. ಅನೇಕ ಆನೆಗಳೂ ಕುದುರೆಗಳ ದಂಡೂ ಅವರಲ್ಲಿ ಇದ್ದುವು. ಹೊಯಿಸಳರ ನಾಡನ್ನೆಲ್ಲಾ ಸುಟ್ಟುಬಿಡಬೇಕೆಂದೇ ಬಂದಿತ್ತು ಆ ಕೊಂಗು ಸೇನೆ. ಪಶ್ಚಿಮದ ಕಡೆಯಿಂದ ಮಲೆಪರೂ, ಪೂರ್ವದಕ್ಷಿಣಗಳಿಂದ ಈ ಕೊಂಗು ಸೇನೆಯೂ

ಹೊಯಿಸಳ ರಾಜಧಾನಿಯನ್ನು ಮುತ್ತಲು ಸಾಹಸಪಟ್ಟು ಬರುತ್ತಿರುವುದೆಂಬ ಸುದ್ದಿ ರಾಜಮಾತೆಯರ ಕಿವಿಗೂ ಮುಟ್ಟಿತು.

ವಿಷ್ಣುವರ್ಧನಪ್ರಭು ರಾಜಧಾನಿಗೆ ಬಹು ದೂರದಲ್ಲಿದ್ದರು. ಗಂಗ ರಾಜರು ತಾವು ಗೆದ್ದ ರಾಷ್ಟ್ರಗಳ ಸಂರಕ್ಷಣೆಗೆ ದಕ್ಷರಾದವರನ್ನು ನಿಯಮಿಸುತ್ತ ಆಯಾ ದೇಶದ ಸ್ಥಿತಿಗತಿಗಳನ್ನು ಕೂಲಂಕಷವಾಗಿ ವಿಚಾರಿಸಿ ತೃಪ್ತಿಯಾದ ಏರ್ಪಾಡುಗಳನ್ನು ಮಾಡುವುದರಲ್ಲಿ ನಿರತರಾಗಿದ್ದರು. 'ಈ ಹೊಸ ದೇಶಗಳಲ್ಲಿ ನರರಿಗಿಂತ ಕಿರಾತರೇ ಹೆಚ್ಚು ಇದ್ದಾರೆ' ಎಂದು ಗಂಗರಾಜರು ಪ್ರಭುಗಳಿಗೆ ಒಮ್ಮೆ ಬರೆದು ಕಳಿಸಿದ್ದರು. 'ದೈವದಲ್ಲಿ ಭಕ್ತಿ, ಧರ್ಮದಲ್ಲಿ ಶ್ರದ್ಧೆ ಈ ಎರಡೂ ಅಳಿದ ದೇಶ ಅಳಿಸಿಹೋದಂತೆಯೆ,' ಎಂದು ಗಂಗರಾಜರು ತಿಳಿಸಿದ್ದರು.

ಪ್ರಭುಗಳಿದ್ದ ಸ್ಥಳ ರಾಜಧಾನಿಯಿಂದ ಈಗ ಬಹುದೂರವಾಗಿದ್ದುದರಿಂದ, ಪ್ರಭುಗಳು ರಾಜಧಾನಿಗೆ ಒಮ್ಮೆ ಹಿಂದಿರುಗುವುದೆಂದು ನಿರ್ಧರಿಸಿದರು, ಅಥವಾ, ದೈವವೇ ಆ ಯೋಚನೆಯನ್ನು ಅವರಿಗೆ ಸೂಚಿಸಿತು. ಸ್ವಲ್ಪ ಸೈನ್ಯದೊಂದಿಗೆ ರಾಜಧಾನಿಯ ಮಾರ್ಗವನ್ನು ಹಿಡಿದರು. ಎಷ್ಟೇ ವೇಗವಾಗಿ ಬಂದರೂ ರಾಜ ಧಾನಿ ಹದಿನೈದು ದಿನಗಳ ಪ್ರಯಾಣವಿತ್ತು.

ಇತ್ತ ರಾಜಮಾತೆ, ಶಾಂತಲೆ, ಲಕ್ಷ್ಮಿ, ಬೊಪ್ಪಣ, ಕುವರವಿಷ್ಣು, ಗಂಗರಾಜರ ಪತ್ನಿ ಲಕ್ಷ್ಮೀಮತಿ ದಂಡನಾಯಕಿತಿ, ಒಬ್ಬಿಬ್ಬರು ರಾಜ್ಯದಾಡಳಿತ ದವರು, ನಾಲ್ಕು ಜನ ಮಂತ್ರಿಗಳು, ಅರಮನೆಯಲ್ಲಿ ಸಭೆ ಸೇರಿ, ಈ ಸನ್ನಿವೇಶ ದಲ್ಲಿ ತಮ್ಮ ಕರ್ತವ್ಯವೇನೆಂದು ನಿರ್ಧರಿಸಲು ಕುಳಿತರು. ಇಷ್ಟರೊಳಗೆ ಪ್ರಭು ಗಳ ಬಳಿಗೂ ಗಂಗರಾಜರ ಬಳಿಗೂ 'ತಕ್ಕಷ್ಟು ಸೈನ್ಯದೊಡನೆ ಆದಷ್ಟು ಬೇಗನೆ ರಾಜಧಾನಿಯ ಕಡೆಗೆ ಬರಬೇಕೆಂದೂ, ಒಂದು ಕಡೆ ಮಲೆಪರೂ ಮತ್ತೊಂದು ಕಡೆ ಮಹಾಸೇನೆಯೊಡನೆ ಕೊಂಗರೂ ರಾಜಧಾನಿಯ ಮೇಲೆ ಬರುತ್ತಿರುವ ರೆಂದೂ' ಸಮಾಚಾರವನ್ನು ಕಳಿಸಿಯಾಗಿತ್ತು. ಆಗ ಯುದ್ಧಭೂಮಿ ಎಷ್ಟು ದೂರದಲ್ಲಿದ್ದರೂ, ಅಷ್ಟು ದೂರದವರೆಗೆ ಗಾವುದಕ್ಕೆ ಇಬ್ಬಿಬ್ಬರಂತೆ ವಾರ್ತಾ ಸವಾರರ ಏರ್ಪಾಡು ಇದ್ದಿತು. ಹೀಗಿದ್ದೂ ಪ್ರಭುಗಳಿಗೆ ಸಮಾಚಾರ ಮುಟ್ಟಲು ಮೂರು ದಿನಗಳಾದವು.

ಬೊಪ್ಪಣ ನಗರರಕ್ಷಣೆಗೆ ಇದ್ದ ಐದಾರು ಸಾವಿರ ಸೈನ್ಯವನ್ನು ಸಿದ್ಧ ಮಾಡಿಕೊಂಡ. 'ಹದಿನೈದು ಇಪ್ಪತ್ತು ದಿನಗಳ ವರೆಗೆ ಎಂತಹ ಉಗ್ರ ದಾಳಿ

ಯನ್ನಾದರೂ ತಡೆಯಬಲ್ಲೆ. ಅಷ್ಟರಲ್ಲಿ ಅಯ್ಯದಿರಾಗಲಿ, ಪ್ರಭುಗಳಾಗಲಿ, ಬಂದೇ ಬರುವರು. ಅಲ್ಲದಿದ್ದರೆ, ಮಾವ ಮಾರಸಿಂಗಮಯ್ಯನವರಾಗಲಿ, ಪುನೀಸರಾಗಲಿ ಬಂದೇಬರುವರು. ನಮಗೆ ಯಾವ ಭಯವೂ ಬೇಡ' ಎಂದ ಬೊಪ್ಪಣ. 'ಅರಮನೆಯೆಲ್ಲ ವೇಲಾಪುರಕ್ಕೆ ಹೋಗುವುದು ಮೇಲು' ಎಂದರು ಯಾರೊ ಒಬ್ಬರು. 'ಅದು ಹೇಡಿತನ. ಆ ಊರಾದರೂ ನಮಗೆ ಹೇಗೆ ರಕ್ಷಣೆ ಕೊಟ್ಟೀತು? ಶತ್ರುಗಳು ಆ ಊರಿಗೆ ಬರಲಾರರೆ? ಪ್ರಜೆಗಳನ್ನು ಶತ್ರುಗಳಿಗೆ ಬಿಟ್ಟುಕೊಟ್ಟು ರಾಜಧಾನಿಯನ್ನು ಬಿಟ್ಟೋಡಿದ ಹೇಡಿಗಳಿಗೆ ವಿಜಯ ನಾರಾಯಣನೆಂದಿಗೂ ಆಶ್ರಯ ಕೊಡ' ಎಂದಳು ಲಕ್ಷ್ಮಿ. 'ಚೆನ್ನಾಗಿ ಹೇಳಿದೆ, ಲಕ್ಷ್ಮಿ' ಎಂದಳು ಶಾಂತಲೆ. ಕುವರವಿಷ್ಣು ಬಹಳ ಹೊತ್ತಿನವರೆಗೂ ತನ್ನಲ್ಲಿ ತಾನೆ ಯೋಚಿಸುತ್ತಿದ್ದು, ಕಡೆಗೆ ಬೊಪ್ಪಣನನ್ನು ನೋಡಿ 'ಅಣ್ಣನವರು ಹೇಳಲಿ. ಎಂಟು ದಿನ ನಗರರಕ್ಷಣೆಗೆ ಕಡಮೆಯೆಂದರೆ ಕಡಮೆ ಎಷ್ಟು ಸೈನ್ಯ ಬೇಕಾದೀತು? ಮಲೆಪರ ಸೈನ್ಯವೆಲ್ಲ ಸೇರಿದರೂ, ಆರು ಸಾವಿರದ ಮೇಲೆ ಆಗದು. ಅದೂ ಅಸ್ತ್ರಶಸ್ತ್ರಗಳಿಲ್ಲದ ಕಾಡುಸೇನೆ. ನಮಗೆ ಸಹಾಯ ಒದಗಬೇಕಾದರೆ ಎಂಟು ಹತ್ತು ದಿನಗಳಾದರೂ ಆದೀತು ಎಂದಿಟ್ಟುಕೊಳ್ಳೋಣ' ಎಂದ ಕುವರ ವಿಷ್ಣು.

ಬೊಪ್ಪಣ: 'ಕೋಟೆಯ ಅಗಳ್ತೆಯ ತುಂಬ ನೀರು ಹಾಯಿಸಿ, ನಗರವನ್ನು ರಕ್ಷಿಸಿಕೊಳ್ಳುವುದಕ್ಕೆ ಕನಿಷ್ಠಪಕ್ಷ ಎರಡು ಸಾವಿರ ಸೇನೆಯಾದರೂ ಬೇಕೇಬೇಕು. ಕೋಟೆಯ ಮೇಲೆ ಸುತ್ತಲೂ ಸೇನೆಯನ್ನು ನಿಲ್ಲಿಸಿದರೆ, ಕೋಟೆಯೊಳಗೂ ಬಲವಾದ ಸೇನೆ ಇರುವುದೆಂದುಕೊಳ್ಳುತ್ತಾರೆ. ಮಲೆಪರಿಗೆ ಹೆಚ್ಚು ಹೆದರಬೇಕಾಗಿಲ್ಲ. ದಂಡೆತ್ತಿ ಬರುವ ಕೊಂಗರ ಸೇನೆಯಲ್ಲಿ ಆನೆಗಳೂ, ಕುದುರೆಗಳೂ, ಕಾಲ್ಬಲವೂ ಹೆಚ್ಚಾಗಿರುವವೆಂದು ಸುದ್ದಿ. ಅಲ್ಲದೆ ಅವರಲ್ಲಿ ಶಸ್ತ್ರಾಸ್ತ್ರಗಳೂ ಬೇಕಾದಷ್ಟು ಇವೆಯಂತೆ, ಚತುರ ಬಿಲ್ಗಾರರೂ ಇರುವರಂತೆ.'

ಕುವರವಿಷ್ಣು: 'ಈ ಶತ್ರುಸೇನೆಗಳು ಹತ್ತಿರ ಬಂದು ಒಂದುಗೂಡುವವರೆಗೂ ನಾವು ಸಮಯ ಕೊಡಬಾರದಣ್ಣ. ನಗರದ ಜನರಿಗೆ ಭೀತಿ ಹುಟ್ಟಬಾರದು. ಆದ್ದರಿಂದ ಅಣ್ಣದಿರು ವೇಲಾಪುರಿಯ ಪ್ರಜೆಗಳಿಗೆ ಧೈರ್ಯಕೊಡಲು ಐದು ನೂರು ಸೈನ್ಯವನ್ನು ಕಳಿಸಿ, ಎರಡು ಸಾವಿರ ಸೈನ್ಯವನ್ನು ನೀವು ಕೈಯಲ್ಲಿಟ್ಟುಕೊಳ್ಳಿರಿ. ಆ ಮಲೆಪರನ್ನು ರಾಜಧಾನಿಯ ವರೆಗೂ ಬರಗೊಡಿಸಬೇಡಿ.

ವೇಲಾಪುರಿಯ ಕಡೆಯಿಂದಲೂ, ಇಲ್ಲಿನಿಂದಲೂ ಸೈನ್ಯಗಳು ಅವರನ್ನು ಸುತ್ತು ಗಟ್ಟಿ ನರಪಿಳ್ಳೆ ನಿಲ್ಲದಂತೆ ಬೇಟೆಯಾಡಿಬಿಡಿ. ನಾನು ಮೂರು ಸಾವಿರ ಸೈನಿಕರನ್ನು ಕೊಂಡುಹೋಗಿ, ಈ ಕೊಂಗರನ್ನು ದೂರದಲ್ಲಿಯೆ ಸಹಾಯ ಒದಗುವವರೆಗೂ ತಡೆದಿಟ್ಟಿರುತ್ತೇನೆ.'

ಬೊಪ್ಪಣ: 'ಹುಡುಗನ ಕೈಯಲ್ಲಿ ಇದು ಸಾಧ್ಯವೆ!' ಎಂದುಕೊಂಡು, 'ಇಬ್ಬರೂ ಸೇರಿ ರಕ್ಷಿಸುವುದು ಒಳಿತಲ್ಲವೆ? ಅಷ್ಟರಲ್ಲಿ ಸಹಾಯ ಬಂದೇಬರು ವುದು' ಎಂದನು.

ಕುವರವಿಷ್ಣು: 'ನಿನ್ನ ಅಯ್ಯದಿರಾಗಲಿ, ನನ್ನ ಅಪ್ಪಾಜಿಗಳಾಗಲಿ ಮಕ್ಕಳು ಹೇಡಿಗಳೆಂದೂ ಕೋಟೆಯೊಳಗೆ ಸೇರಿಕೊಂಡರೆಂದೂ ಎಣಿಸ ಬಾರದಲ್ಲ.'

ಶಾಂತಲದೇವಿಗೆ ಆಗ ಕುವರನನ್ನು ಬಿಗಿದು ಅಪ್ಪಿಕೊಳ್ಳುವಷ್ಟು ಆಶೆ ಯಾಯ್ತು. ಬೊಪ್ಪಣನಿಗೆ ಬಾಯಿಕಟ್ಟಿತು. ರಾಜಮಾತೆ ಅಂದರು: 'ನಮ್ಮ ವಿಷ್ಣುವಿನ ಮಾತು ಚೆನ್ನಮುದಂಡಾಧೀಶರ ವೀರರಕ್ತಕ್ಕೆ ಸಾಕ್ಷಿ. ಅವನೆಂದ ಹಾಗೆ ಶತ್ರುಗಳನ್ನು ನಗರದವರೆಗೂ ಬರಲವಕಾಶ ಕೊಡಬಾರದು. ಪ್ರಜೆಗಳಿಗೆ ಭೀತಿ ಯುಂಟಾಗಬಾರದು. ಸೈನಿಕರಲ್ಲೂ ಅಧೈರ್ಯ ಹುಟ್ಟಬಾರದು. ಇದಕ್ಕೆ ತಕ್ಕ ಯೋಚನೆಗಳನ್ನು ನಿಮ್ಮ ನಿಮ್ಮಲ್ಲೇ ನಿರ್ಧರಿಸಿಕೊಂಡು, ಅನಂತರ ನಮಗೆ ತಿಳಿಸಿರಿ' ಎಂದು ಹೇಳಿ, ಯೋಚನೆಯನ್ನು ಹೊತ್ತು, ತಮ್ಮ ವಿಶ್ರಾಂತಿಗೃಹಕ್ಕೆ ಹೋದರು. ಉಳಿದವರು ಶಾಂತಲೆ, ಲಕ್ಷ್ಮಿ, ಬೊಪ್ಪಣ, ಕುವರ, ಇಷ್ಟೇ ಜನ. ಅಕ್ಕ ಎದ್ದುಬಂದು ತಮ್ಮನನ್ನು ಬಹು ಪ್ರೀತಿಯಿಂದ ಅಪ್ಪಿಕೊಂಡಳು. ಕುವರ ನಿಗೆ ಅತಿಶಯ ಆನಂದವಾಯ್ತು.

ನಾಲ್ವರೂ ಸೇರಿ ಬಹು ಹೊತ್ತಿನವರೆಗೆ ಚರ್ಚಿಸಿ, ಕಡೆಗೆ ಕುವರವಿಷ್ಣು ಹೇಳಿದ ಮಾತಿಗೆ ಒಪ್ಪಲೇಬೇಕಾಯಿತು. ಆ ರಾತ್ರಿಯೆ ಬೊಪ್ಪಣ ಒಂದು ಸಾವಿರ ಸೈನಿಕರನ್ನು ಸಕಲ ಶಸ್ತ್ರಾಸ್ತ್ರಗಳೊಂದಿಗೆ ವೇಲಾಪುರಿಗೆ ಕಳುಹಿಸಿಕೊಟ್ಟು, ಆ ಕಡೆಯಿಂದ ಅವರು ಮಲೆಪರ ಮೇಲೆ ಹಾಯ್ದುಬರಬೇಕೆಂದು ತಿಳಿಸಿ, ಐನೂರು ಸುಸಜ್ಜಿತ ವೀರರನ್ನು ರಾಜಧಾನಿಯ ಆಪದ್ರಕ್ಷಣೆಗಿಟ್ಟು, ಸಾವಿರ ಸೈನ್ಯವನ್ನು ತಾನು ನಡಸಿಕೊಂಡು ಬೆಳಗಾಗುವುದರೊಳಗಾಗಿ ರಾಜಧಾನಿಯನ್ನು ಬಿಟ್ಟು ಹೊರಟ. 'ನಿನ್ನ ಅಯ್ಯದಿರಾಗಲಿ, ನನ್ನ ಅಪ್ಪಾಜಿಗಳಾಗಲಿ, ಮಕ್ಕಳು

ಹೇಡಿಗಳೆಂದೂ ಕೋಟೆಯೊಳಗೆ ಸೇರಿಕೊಂಡರೆಂದೂ ಎಣಿಸಬಾರದಲ್ಲ' ಎಂದು ಕುವರನಾಡಿದ ಮಾತು ಬೊಪ್ಪಣನ ಎದೆಯಲ್ಲಿ ನೆಟ್ಟು ನಿಂತಿತ್ತು. ಬೊಪ್ಪಣ ತಂದೆಯಂತೆ ಸಾಹಸಿ, ಚಿಕ್ಕವಯಸ್ಸು. ಸೈನ್ಯಗಳನ್ನು ಚತುರತೆಯಿಂದ ನಡಸು ವುದೂ, ಯುದ್ಧಮಾಡುವುದೂ, ಅವನಿಗೆ ವಂಶಗತವಾಗಿ ಬಂದದ್ದು.

ಬೊಪ್ಪಣನ ಎರಡು ಸುಶಿಕ್ಷಿತ ಸೇನೆಗಳು ಮಲೆಪರನ್ನು ದಾರಿಯಲ್ಲೆ ಮಲೆಗಳ ಇರುಕುಗಳಲ್ಲಿಯೆ ಸಿಕ್ಕಿಸಿಕೊಂಡಿತು. ಕೊಡಲಿ, ಗುದ್ದಲಿ, ದೊಣ್ಣೆ, ಕತ್ತಿಗಳನ್ನು ಹಿಡಿದುಬಂದಿದ್ದ ಬಿಲ್ಗಾರರಲ್ಲದ ಆ ಕಾಡುಮಲೆಪರನ್ನು ಬಾಣ ವರ್ಷಗಳಿಂದ ಸಾಯಿಸಿ ಕೆಡವಿದರು. ಹೊಯಿಸಳ ಸೇನೆ ಇಷ್ಟು ಬೇಗನೆ ಹಿಂದಿನಿಂದ, ಮುಂದಿನಿಂದ, ಮೇಲಿನಿಂದ ತಮ್ಮ ಮೇಲೆ ಕವಿದು, ಅಸ್ತ್ರಗಳ ಮಳೆ ಸುರಿಸುವುದೆಂದು ಆ ಮಲೆಪರು ಊಹಿಸಿರಲಿಲ್ಲ. ರಕ್ಷಕರಿಲ್ಲದ ರಾಜಧಾನಿಗೆ ತಮ್ಮ ದೊಣ್ಣೆಯ ಪೆಟ್ಟುಗಳೆ ಸಾಕು, ಎಂದು ಅವರು ಬಗೆದಿದ್ದರು. ಮಲೆಪರಲ್ಲಿ ನರಪಿಳ್ಳೆಯನ್ನೂ ತಪ್ಪಿಸಿಕೊಂಡುಹೋಗಲು ಬಿಡದೆ, ಬೊಪ್ಪಣ ಅವರನ್ನೆಲ್ಲ ಬೇಟೆಯಾಡಿ ಮುಗಿಸಲು ಆರೆಂಟು ದಿನಗಳಾದವು.

ಇತ್ತ ಕುವರವಿಷ್ಣು ಬೊಪ್ಪಣ ಹೊರಟ ದಿನವೆ ಇನ್ನೂರು ಸಾಹಸಿಗರಾದ ಗೂಢಚಾರರನ್ನು ಜೊತೆಮಾಡಿ ನಾಡುಜನರ ವಸ್ತ್ರಭೂಷಣಗಳನ್ನು ಅವರಿಗೆ ಒದಗಿಸಿ, 'ಈಗ ನೀವು ಮಾತ್ರ ನಾವು ಹೇಳಿದಂತೆ ನಡಸಿಕೊಟ್ಟರೆ, ನಾವು ಖಂಡಿತವಾಗಿ ಜಯಗಳಿಸುತ್ತೇವೆ. ರಾಜಧಾನಿ ನೆಮ್ಮದಿಯಾಗುತ್ತದೆ. ರಾಜ ಧಾನಿಯ ಹೆಂಡಿರುಮಕ್ಕಳೆಲ್ಲಾ ಸುರಕ್ಷಿತರಾಗುತ್ತಾರೆ. ಆದ್ದರಿಂದ ನಾವು ಹೇಳುವುದನ್ನು ಚೆನ್ನಾಗಿ ಗಮನಿಸಿರಿ. . . . ಕೊಂಗರ ಸೇನೆ ಇಲ್ಲಿಗೆ ಮೂರು ಗಾವುದ ದೂರದಲ್ಲಿದೆ. ನೀವುಗಳು ಅಲ್ಲಿಂದ ಒಂದು ಗಾವುದದಷ್ಟು ದೂರಕ್ಕೆ ಹೋಗಿ, ಅಲ್ಲಿಂದ ಮುಂದಕ್ಕೆ ಹತ್ತು ಗಾವುದಗಳಷ್ಟು ದೂರದವರೆಗೆ ಇರುವ ಊರಿನವರನ್ನೂ ಗ್ರಾಮಗಳಲ್ಲಿರುವವರನ್ನೂ ತತ್‌ಕ್ಷಣವೇ ರಾಜಮಾರ್ಗದಿಂದ, ಕಡಮೆ ಒಂದು ಗಾವುದದಷ್ಟು ದೂರವಿರುವ ಗ್ರಾಮಗಳಿಗೆ ಹೋಗುವಂತೆ ಹೇಳಬೇಕು, ಹೋಗುವಂತೆ ಮಾಡಬೇಕು. ಅವರಿದ್ದ ಹಳ್ಳಿಗಳಲ್ಲಿ ನಿಂತಿರುವ ಪೈರುಪಚ್ಚೆಗಳನ್ನೂ ಕೊಯ್ದು ತಮ್ಮ ಕಾಲ್ನಡೆಗಳ ಮೇವಿಗಾಗಿ ಕೊಂಡೊ ಯ್ಯಲಿ. ಅವರವರ ಬಳಿ ಇರುವ ದವಸ ಧಾನ್ಯಗಳನ್ನು ಒಂದೇ ಒಂದು ಕಾಳು ಬಿಡದೆ ಕೊಂಡೊಯ್ಯಲಿ. ಒಂದೊಂದು ಗ್ರಾಮದವರೂ ಬಿಟ್ಟುಹೋದ ಕೂಡಲೆ

ಆ ಊರ ಕೆರೆಯ ನೀರು ಒಂದು ತೊಟ್ಟೂ ನಿಲ್ಲದಂತೆ ಹರಿದುಹೋಗಲು ತೂಬುಗಳನ್ನು ತೆಗೆದುಬಿಡಿ. ಕುಂಟೆ, ಬಾವಿಗಳನ್ನು ಮಣ್ಣು ತುಂಬಿಸಿ ಮುಚ್ಚಿಸಿಬಿಡಿ. ಹೀಗೆ, ಹತ್ತು ಗಾವುದಗಳ ದೂರದವರೆಗೆ ರಾಜಮಾರ್ಗದ ಎರಡು ಕಡೆ ಒಂದೊಂದು ಗಾವುದ ದೂರದ ವರೆಗೆ ಒಂದೇ ತೊಟ್ಟು ನೀರಾಗಲಿ ಒಂದೇ ಕಾಳು ಧಾನ್ಯವಾಗಲಿ ಶತ್ರುಗಳಿಗೆ ಸಿಕ್ಕದಂತೆ ಮಾಡಿರಿ. ಈ ಯುದ್ಧ ಮುಗಿದತಂತರ ಆ ಗ್ರಾಮಗಳ ಪುನರುದ್ಧಾರಕ್ಕೆ, ಗ್ರಾಮಸ್ಥರಿಗೆ ಆದ ನಷ್ಟಕ್ಕೆ ಪ್ರತಿ ಪಣವನ್ನು ರಾಜಬೊಕ್ಕಸದಿಂದ ಕೊಡಿಸುತ್ತೇವೆ ಎಂದು ಭರವಸೆ ಕೊಡಿರಿ. ಏತಕ್ಕಾಗಿ ಹೀಗೆ ಮಾಡಬೇಕಾಗಿದೆಯೆಂದೂ ತಿಳಿಸಿರಿ. ರಾಜಮುದ್ರಿಕೆಯಿಂದ ಕೂಡಿದ ಈ ತಾಮ್ರ ಶಾಸನವನ್ನು ಭರವಸೆಯ ಮಾತಾಗಿ ನಿಮ್ಮೊಡನೆ ಕೊಡುವೆವು. ಇದನ್ನು ಪ್ರತಿಯೊಂದು ಗ್ರಾಮದ ಹೆಗ್ಗಡೆ, ಗವುಂಡರಿಗೆ ತೋರಿಸಿಯೇ ನೀವು ಈ ಕಾರ್ಯವನ್ನು ನಿರ್ವಹಿಸತಕ್ಕದ್ದು. ನೀವು ಎಷ್ಟು ಬೇಗ ಈ ಕಾರ್ಯವನ್ನು ಎಷ್ಟು ತೃಪ್ತಿಕರವಾಗಿ ಗೋಪ್ಯವಾಗಿ ನಿರ್ವಹಿಸುತ್ತೀರೋ, ಅಷ್ಟು ಬೇಗ ನಮಗೆ ಜಯ ಲಭಿಸುವುದು. ಶತ್ರುಗಳ ಬಲವನ್ನು ನಾವು ಈ ರೀತಿ ಕುಗ್ಗಿಸದಿದ್ದರೆ, ಸದ್ಯಕ್ಕೆ ಬೇರೆ ಮಾರ್ಗವೆ ಇಲ್ಲ. ಕೈಕೊಂಡಿರುವ ಈ ಕಾರ್ಯ ಹೇಯವಾದದ್ದು. ದೇಶದ ಹಿತದೃಷ್ಟಿಯಿಂದ ಈ ಅನಿಷ್ಟವನ್ನೂ ಈಗ ನಡಸಬೇಕಾಗಿದೆ' ಎಂದು ಹೇಳಿ ರಾಜಮುದ್ರೆ ಮಾಡಿದ್ದ ತಾಮ್ರಶಾಸನಗಳನ್ನು ಅವರ ಕೈಗಿತ್ತು, ಕುವರವಿಷ್ಣು ಆ ಇನ್ನೂರು ಜನರನ್ನು ಇನ್ನೂರು ಕಾರ್ಯಗಳ ಮೇಲೆ ಕಳಿಸಿದನು.

ಅನಂತರ ಕುವರವಿಷ್ಣು ಸುಮಾರು ಎರಡು ಸಾವಿರಕ್ಕೆ ಮೀರಿದ ಸೇನೆಯನ್ನು ಅಣಿಮಾಡಿಕೊಂಡು, ಊರಹೊರಗೆ ಹೊರಡಲು ಸಿದ್ಧಮಾಡಿ ನಿಲ್ಲಿಸಿ, ತಾನು ಯೋಧನ ವಸ್ತ್ರಗಳನ್ನು ಧರಿಸಿ, ರಾಜಮಾತೆಯ, ಅಕ್ಕದಿರ ಆಶೀರ್ವಾದಗಳನ್ನು ಪಡೆಯಲು ಅರಮನೆಗೆ ಬಂದನು.

ಕುವರನ ವೇಷಭೂಷಣಗಳನ್ನು ನೋಡಿ ರಾಜಮಾತೆಗೆ ಭಯವಾಯಿತು. 'ಅಪ್ಪಾಜಿ, ಇದೇನು?' ಎಂದು ಕೇಳಿದರು. ಕುವರನು ರಾಜಮಾತೆಗೆ ಸಾಷ್ಟಾಂಗವೆರಗಿ 'ಅಮ್ಮಾಜಿ, ಜಯಶೀಲನಾಗೆಂದು ನನ್ನನ್ನು ಹರಸಿರಿ, ನಿಮ್ಮ ಆಶೀರ್ವಾದ ನನಗೆ ಈಗ ವಜ್ರರಕ್ಷೆಯಾಗಬೇಕು. ಅಪ್ಪಣೆ ಕೊಡಿ ಅವ್ವೆ, ಕಣ್ಣೀರು ಕೂಡದು. ಖಂಡಿತ ಕೂಡದು' ಎಂದು ಒಂದು ವಿಧವಾಗಿ ಆಜ್ಞೆಯನ್ನೆ ಮಾಡಿದ. ರಾಜಮಾತೆ ಅರ್ಥವನ್ನು ತತ್‌ಕ್ಷಣವೆ ಗ್ರಹಿಸಿ, ಕುವರನು ಕೊಂಗರ

ಮೇಲೆ ಯುದ್ಧಕ್ಕೆ ಹೊರಟಿರುವನೆಂದು ತಿಳಿದು, ಕಣ್ಣೀರು ಆ ಸಮಯದಲ್ಲಿ ಅಶ್ರೇಯಸ್ಸು ಎಂಬುದನ್ನರಿತು 'ನಮ್ಮೆಲ್ಲರ ಪುಣ್ಯಗಳೂ ಸದಾ ನಿನ್ನ ಜೊತೆಯಲ್ಲಿದ್ದು ನಿನ್ನನ್ನು ಕಾಪಾಡಲಿ' ಎಂದು ಹರಸಿ, ಹೃದಯದ ಉದ್ವೇಗವನ್ನು ತಡೆಯಲಾರದೆ ಅಲ್ಲಿದ್ದ ಆಸನದಲ್ಲಿ ಕುಸಿದರು. ಮಾತು ಬೆಳಸಿ ಸಮಾಧಾನ ಪಡಿಸಲು ಸಮಯವಿದಲ್ಲವೆಂದು, ಕುವರನು ಚೇಟಿಯರನ್ನು ಶೈತ್ಯೋಪಚಾರಗಳಿಗೆ ನಿಯಮಿಸಿ, ಅಕ್ಕದಿರನ್ನು ನೋಡಲು ಹೋದನು.

ಅಕ್ಕದಿರಿಬ್ಬರಿಗೂ ಭಕ್ತಿಯಿಂದ ನಮಸ್ಕರಿಸಿದ. ಇಬ್ಬರೂ ವಿಶ್ವಾಸದಿಂದ ತಮ್ಮನನ್ನು ಅಪ್ಪಿಕೊಂಡರು. ಹಿರಿಯಕ್ಕನು ಅವನ ನಡುವಿಗೆ ಕತ್ತಿಯನ್ನು ಬಿಗಿದು, ಆರತಿಮಾಡಿ ರಕ್ಷೆಯಿಟ್ಟು, ವಿಜಯನಾರಾಯಣನಿಗೆ ಪೂಜೆಮಾಡಿದ್ದ ಪುಷ್ಪಗಳನ್ನು ಅವನ ತಲೆಯ ಮೇಲಿಟ್ಟು 'ದೈವವೂ ಧರ್ಮವೂ ನಿನ್ನನ್ನು ಎಲ್ಲಾ ವಿಪತ್ತುಗಳಿಂದಲೂ ರಕ್ಷಿಸಲಿ. ಜಯಶೀಲನಾಗಿ ನೀನು ಬರುವವರೆಗೂ ನಮಗೆ ಅನ್ನ ನಿದ್ರೆಗಳು ಸೇರವು' ಎಂದಳು. ಬಳಿಕ ಕುವರನು ಕುದುರೆಯನ್ನು ಹತ್ತಿ, ಊರಹೊರಗೆ ಸಿದ್ಧವಾಗಿ ನಿಂತಿದ್ದ ಸೇನೆಯನ್ನು ಸೇರಿ ಅವರನ್ನುದ್ದೇಶಿಸಿ 'ಮಹಾಯೋಧರೆ, ದೈವವೆ ನಮ್ಮ ಧೈರ್ಯ, ಶಕ್ತಿ ಸಾಮರ್ಥ್ಯಗಳನ್ನು ಇಂದು ಪರೀಕ್ಷಿಸಲು ಉಜ್ಜುಗಿಸಿದೆಯೆಂದು ಕಾಣುತ್ತದೆ. ಧೀರತನದಿಂದ ಯುದ್ಧದಲ್ಲಿ ಮಡಿದರೆ ಯಶಸ್ಸುಂಟು' ವೀರಸ್ವರ್ಗವುಂಟು. ನಮ್ಮ ಮನೆಗಳನ್ನು ಸೂರೆ ಮಾಡಿ, ಸುಟ್ಟು, ಹೆಂಗಸರ, ಮಕ್ಕಳ ಶೀಲಭಂಗವನ್ನು ಶತ್ರುಗಳು ಮಾಡದಂತೆ ತಡೆಯಲು; ಈ ಹೊಯಿಸಳ ಧರ್ಮರಾಜ್ಯವನ್ನು ಕಾಪಾಡಿಕೊಳ್ಳಲು ನಾವು ಈಗ ಹೊರಟಿರುವೆವು. ನಮ್ಮಲ್ಲಿ ಯಾರೂ ಹೇಡಿಗಳಿಲ್ಲ. ಹೇಡಿಗಳಿಗೆ ದೈವ ಸಹಾಯವಿಲ್ಲ. ಜೀವದ ಹಂಗನ್ನು ತೊರೆದು ಶತ್ರುಗಳನ್ನು ನಿಗ್ರಹಿಸೋಣ. ನಾವೂ ಉಳಿದು ನಮ್ಮವರೆಲ್ಲರನ್ನೂ ಉಳಿಸಿಕೊಳ್ಳುವೆವೆಂದು ನೀವು ಒಬ್ಬೊಬ್ಬರೂ ಈಗ ವೀರಪ್ರತಿಜ್ಞೆಮಾಡಬೇಕು. ಮುಂದಿಟ್ಟ ಹೆಜ್ಜೆ ಹಿಂದಿಡುವುದಿಲ್ಲವೆಂದು ನನ್ನೊಡನೆ ಎಲ್ಲರೂ ಪ್ರಮಾಣಮಾಡಿರಿ' ಎಂದು ಹೇಳುತ್ತಿರುವಾಗ, ಸೈನಿಕರೆಲ್ಲರೂ ಏಕಕಂಠದಿಂದ 'ಪ್ರಭುವೆ, ನಮ್ಮೆದೆಯಲ್ಲಿ ಒಂದೇ ತೊಟ್ಟು ರಕ್ತವಿದ್ದರೂ ಆಗಲೂ ಶತ್ರುವನ್ನು ಒಂದು ಹೆಜ್ಜೆಯಾದರೂ ಮುಂದಕ್ಕೆ ಬಿಡೆವು. ಇದು ಸತ್ಯ' ಎಂದು ಒಬ್ಬೊಬ್ಬ ಸೈನಿಕನೂ ಕುಂಭದಲ್ಲಿ ತಂದಿಟ್ಟಿದ್ದ ಹಾಲನ್ನು ಮುಟ್ಟಿ ಪ್ರಮಾಣವಚನವನ್ನಿತ್ತನು.

ಶತ್ರುಸೇನೆ ರಾಜಧಾನಿಗೆ ಸುಮಾರು ಮೂರು ಗಾವುದಗಳ ದೂರದಲ್ಲಿ ಪಾಳೆಯ ಇಳಿಸಿತ್ತು. ಕುವರವಿಷ್ಣು ತನ್ನ ಸೇನೆಯೊಡನೆ ಮಾರನೆಯ ದಿನ ಮಧ್ಯಾಹ್ನಾನಂತರ ಶತ್ರುಶಿಬಿರವನ್ನು ಕಂಡ. ಆ ಕ್ಷಣವೆ ಶತ್ರುಗಳ ಮೇಲೆ ಬೀಳದೆ, ನಡುರಾತ್ರಿಯವರೆಗೆ ದೂರದ ದಟ್ಟವಾದ ಅರಣ್ಯದಲ್ಲಿ ಅಡಗಿದ್ದು, ಅನಂತರ ಚಂಡಮಾರುತದಂತೆ, ಸಿಡುಗಿನಂತೆ, ನಿದ್ರೆಯಲ್ಲಿದ್ದ ಶತ್ರುಶಿಬಿರದ ಮೇಲೆ ಬಿದ್ದು, ಅನಾಹುತ ನಡಸಿದ. ಅವರ ವಸ್ತು, ದವಸ, ಅಸ್ತ್ರಗಳ ಸಂಗ್ರಹಕ್ಕೆ ಮೊದಲು ಬೆಂಕಿ ಇಟ್ಟ. ಅವರ ಕುದುರೆಗಳನ್ನು ಓಡಿಸಿದ, ಆನೆಗಳ ಮುಖದ ಬಳಿ ಪಂಜುಗಳನ್ನು ಹಿಡಿದು ಬಿಸಿ ಅಂಟಿಸಿದ. ಅವುಗಳು ಭಯದಿಂದ ಘೀಳಿಡುತ್ತ ಕಟ್ಟಿದ ಹಗ್ಗ ಸರಪಳಿಗಳನ್ನು ಹರಿದು ಓಡಿದವು. ಶತ್ರುಗಳು 'ಅಯ್ಯೋ ಕೆಟ್ಟೆವಲ್ಲ' ಎಂದು ಎಚ್ಚೆತ್ತುಕೊಂಡು ಉರಿಯುತ್ತಿದ್ದ ಬೆಂಕಿಗಳನ್ನು ಆರಿಸುವುದಕ್ಕೆ ಪ್ರಯತ್ನಪಟ್ಟರು. ಕೆಲವರು ಶಸ್ತ್ರಗಳನ್ನು ಹಿಡಿದು ಯುದ್ಧಕ್ಕೆ ನಿಂತರು. ಕುವರವಿಷ್ಣುವಿನ ಕತ್ತಿಗೆ ಎದುರಿಲ್ಲದಂತಾಯ್ತು. ಪಂಜುಗಳ ಬೆಳಕಿನಲ್ಲಿ ಕುವರನ ಕತ್ತಿ, ಮುಂಗಾರುಮೋಡಗಳ ನಡುವೆ ಮಿಂಚು ಎಡಬಿಡದೆ ಮಿಂಚುವಂತೆ ಹೊಳೆಯಿತು. ಇಂತಹ ಅಪ್ರತಿಮ ವೀರ ಸೇನಾಧಿಪತಿಯನ್ನು ನೋಡಿ, ಹೊಯಿಸಳ ಸೈನಿಕರಿಗೆ ವೀರಾವೇಶ ಬಂದು, ಶತ್ರುಸೈನ್ಯವನ್ನು ನಿರ್ಭೀತಿಯಿಂದ ಕೊಚ್ಚಿದರು. ಶತ್ರುಸೇನೆಯಲ್ಲಿ ಆಗ ಹೆಬ್ಬುಲಿಗಳು ಕುರಿಯ ಹಿಂಡಿನಲ್ಲಿ ಹೊಕ್ಕು ಹೊರಟಂತಾಯಿತು.

ಕುವರವಿಷ್ಣುವಿನಿಂದ ಮುಂದಾಗಿ ಕಳುಹಲ್ಪಟ್ಟ ಇನ್ನೂರು ಗೂಢ ಚಾರರೂ ತಮಗೆ ಬೆಸಸಿದ್ದ ಕಾರ್ಯವನ್ನು ಸಮರ್ಪಕವಾಗಿ ಮಾಡುತ್ತ ನಡೆದಿದ್ದರು. ಈ ಮೊದಲು ರಾತ್ರಿಯ ದಾಳಿಯಲ್ಲಿಯೇ ಶತ್ರುಸೈನ್ಯದಲ್ಲಿ ಅರ್ಧ ಸಾಮಗ್ರಿ ದವಸ ಧಾನ್ಯ ಸಂಗ್ರಹ ಬಹುಮಟ್ಟಿಗೆ ಬೆಂಕಿಗೆ ತುತ್ತಾಯಿತು. ಇನ್ನು ಉಳಿದಿದ್ದ ಆಹಾರ ಸಂಗ್ರಹ ಮುಗಿಯುತ್ತ ಬಂದಷ್ಟೂ, ಅವರ ಅಂತ್ಯವೂ ಸಮೀಪಿಸುತ್ತ ಬರುತ್ತಿತ್ತು. ತಮ್ಮಲ್ಲಿ ಶೇಖರಿಸಿಕೊಂಡಿದ್ದ ನೀರನ್ನೆಲ್ಲ ಮೊದಲು ರಾತ್ರಿಯ ಬೆಂಕಿಯನ್ನಾರಿಸುವುದರಲ್ಲೆ ವೆಚ್ಚಮಾಡಿದ್ದರು. ಮಾರನೆಯ ದಿನ ನೀರಿಗಾಗಿ ಹಳ್ಳ, ಬಾವಿಗಳನ್ನು ತೋಡಿಕೊಳ್ಳುವುದೆ ಶತ್ರುಸೈನ್ಯಗಳಿಗೆ ಕೆಲಸವಾಯಿತು. ಓಡಿಹೋಗಿದ್ದ ಕುದುರೆಗಳನ್ನೂ ಆನೆಗಳನ್ನೂ ಹಿಡಿದು ತರುವುದು ಇನ್ನೊಂದು ಕೆಲಸವಾಯಿತು. ಹೀಗಾಗಿ ಶತ್ರುಸೇನೆ ಆ ದಿನ ಮುಂದೆ ಹೆಜ್ಜೆ

ಇಡಲಾಗಲಿಲ್ಲ. ಹಿಂದೆ ಹೋಗಲಾಗಲಿಲ್ಲ. ಕೊಂಗು ಸೇನೆ ಬಹು ಕಷ್ಟ ನಷ್ಟಗಳಿಗೆ ಒಳಗಾಯಿತು.

§

ಅತ್ತ ಸೇನೆಯೊಡನೆ ರಾಜಧಾನಿಗೆಂದೇ ಹೊರಟಿದ್ದ ಪ್ರಭುಗಳಿಗೆ, ಮಲೆಪರೂ ಕೊಂಗರೂ ರಾಜಧಾನಿಯ ಮೇಲೆ ದಂಡೆತ್ತಿ ಬರುತ್ತಿರುವರೆಂದೂ, ಆದಷ್ಟು ಬೇಗ ಸಹಾಯಕ್ಕೆ ಸೈನ್ಯದೊಡನೆ ಬರಬೇಕೆಂದೂ ರಾಜಮಾತೆ ಸುದ್ದಿಯನ್ನು ಕಳಿಸಿದ್ದರು, ಗಂಗರಾಜರಿಗೂ ಕಳಿಸಿದ್ದರು. ಪ್ರಭುಗಳು 'ನಾವು ರಾಜಧಾನಿಯ ರಕ್ಷಣೆಗೆ ಹೊರಟೆವು, ಆದಷ್ಟು ಬೇಗ ಅಲ್ಲಿಗೆ ಸೇರಲು ಯತ್ನಿಸುವೆವು. ನೀವು ನಿಮ್ಮ ಎಲ್ಲ ಕೆಲಸಗಳನ್ನೂ ಮುಗಿಸಿಯೇ ಬರುವುದು. ನಿಮ್ಮಲ್ಲಿರುವ ಹೆಚ್ಚು ಸೈನ್ಯವನ್ನು ರಾಜಧಾನಿಯ ರಕ್ಷಣೆಗೆ ಒಡನೆ ಕಳಿಸಿರಿ' ಎಂದು ಗಂಗರಾಜರ ಬಳಿಗೆ ಸಮಾಚಾರ ಕಳಿಸಿಕೊಟ್ಟು, ತಾವು ಎರಡೆರಡು ದಿನಗಳ ಪ್ರಯಾಣವನ್ನು ಒಂದೊಂದೇ ದಿನದಲ್ಲಿ ಮುಗಿಸುತ್ತ, ಎಂಟು ದಿನಗಳಲ್ಲಿ ರಾಜಧಾನಿಯ ಎಲ್ಲೆಯನ್ನು ಮುಟ್ಟಿದರು. ಮಹಾರಾಣಿ ಶಾಂತಲೆ ಪ್ರತಿನಿತ್ಯವೂ ಪ್ರಭುಗಳಿಗೆ ಸಮಾಚಾರವನ್ನು ಕಳಿಸುತ್ತಲೆ ಇದ್ದಳು. ಬೊಪ್ಪಣ ಮಲೆಪರ ಮೇಲೆ ಸೈನ್ಯ ತೆಗೆದುಕೊಂಡು ಹೋದುದೂ, ಕುವರ ಕೊಂಗರನ್ನು ಅಡ್ಡಗಟ್ಟಿ ಮುಂದಡಿ ಇಡದಂತೆ ತಡೆದು ನಿಲ್ಲಿಸಿದ್ದುದೂ ಪ್ರಭುಗಳಿಗೆ ಈಗ ತಿಳಿದಿತ್ತು. ಕುವರನ ಕೈಯಲ್ಲಿ ಸಾಕಷ್ಟು ಸೈನ್ಯವಿಲ್ಲದುದನ್ನು ಬಲ್ಲ ಪ್ರಭುಗಳ ಮನಸ್ಸಿನಲ್ಲಿ ಭಯ ವ್ಯಾಕುಲಗಳು ಉಂಟಾಗಿದ್ದವು. ರಾಜಧಾನಿಯನ್ನು ಬಿಟ್ಟು, ಅಷ್ಟು ದೂರ, ಅಷ್ಟು ಕಾಲ ಹೋದುದು ತಪ್ಪು ಎಂದು ಆಗ ಅವರ ಮನಸ್ಸಿಗೆ ತಟ್ಟಿತು.

ರಾಜಧಾನಿ ಅಲ್ಲಿಯವರೆಗೆ ಸುರಕ್ಷಿತವಾಗಿರುವುದನ್ನು ಕಂಡು ಪ್ರಭುಗಳ ಮನಸ್ಸು ಈಗ ಸ್ವಲ್ಪ ನೆಮ್ಮದಿಗೊಂಡಿತು. ಬೊಪ್ಪಣ, ಕುವರವಿಷ್ಣು ಇವರ ಕ್ಷೇಮಸಮಾಚಾರಗಳನ್ನು ಅರಿಯಲು ಅವರ ಮನಸ್ಸು ಆತುರಪಟ್ಟಿತು. ದ್ವಾರವತಿಯ ಹತ್ತಿರ ಹತ್ತಿರ ಬರುತ್ತಾ, ಅವರ ಹೃದಯದ ಆತುರ ಇನ್ನೂ ಹೆಚ್ಚಿತು. ಅದುವರೆಗೆ 'ದ್ವಾರವತಿಯನ್ನು ಕಂಡೇನೆ?' ಎಂಬ ಯೋಚನೆಯೊಂದೇ ಪ್ರಭುಗಳ ಮನವನ್ನೆಲ್ಲಾ ಆಕ್ರಮಿಸಿತ್ತು. ಈಗ ಮಿಕ್ಕ ಯೋಚನೆಗಳೂ ಮೇಲೇರಿ ಬಂದವು. ಸೈನ್ಯವನ್ನು ಊರ ಹೊರಗೆ ನಿಲ್ಲಿಸಿ, ತಮ್ಮ ಕಾಂಭೋಜಿಯನ್ನು ವೇಗವಾಗಿ ಓಡಿಸುತ್ತ, ಅರಮನೆಯನ್ನು ಸೇರಿ, ತಾವು

ಧರಿಸಿದ್ದ ಯೋಧರ ವೇಷಭೂಷಗಳನ್ನು ಬಿಚ್ಚದೆ, ಮೊದಲು ತಮ್ಮ ತಾಯಿಯನ್ನು ನೋಡಲು ಹೋದರು. ದಾಸದಾಸಿಯರು ಪ್ರಭುಗಳ ಈ ವೇಷವನ್ನು ನೋಡಿ ಅಚ್ಚರಿಗೊಂಡರು, ಅವರ ಆತುರವನ್ನು ಕಂಡು ಭಯಗೊಂಡರು.

'ಕನಸಿನಲ್ಲೂ ಕಾಣದಿದ್ದವರನ್ನು ಕಣ್ಣೆದುರಿಗೇ ಕಂಡಂತೆ' ಆಯಿತು ರಾಜಮಾತೆಗೆ. ಪ್ರಭುಗಳು ಕಾತರರಾಗಿ ತಾಯಿಯ ಪಾದಗಳಿಗೆ ತಲೆ ಮುಟ್ಟಿಸಿ ನಮಸ್ಕಾರ ಮಾಡಿದರು. ಹೆತ್ತವ್ವೆಯ ಕಣ್ಣುಗಳಲ್ಲಿ ಅಶ್ರು ಧಾರೆಯಾಯಿತು. 'ಅವ್ವೆ, ಕುವರನ ಸಮಾಚಾರವೇನು?' ಎನ್ನುವುದೆ ಪ್ರಭುಗಳ ಪ್ರಥಮ ಪ್ರಶ್ನೆಯಾಯಿತು.

'ಅಪ್ಪಾಜಿ, ನನಗೆ ಮನಸ್ಸಿಲ್ಲದಿದ್ದರೂ, ಕೊಂಗರ ಮೇಲೆ ಸೈನ್ಯಗಳನ್ನು ನಡೆಸಿಕೊಂಡು ಹೋದ. ಇಂದಿಗೆ ಒಂಬತ್ತು ದಿನಗಳಾದವು. ನಾನು ನಿದ್ದೆ ಮಾಡಿಯೂ ಅಷ್ಟೇ ದಿನಗಳಾದವು. ಬಹು ಚಮತ್ಕಾರವಾದ ಯುದ್ಧ ಮಾಡುತ್ತಿರುವನಂತೆ ಮಗು. ದೇವರೇ ಅವನನ್ನು ರಕ್ಷಿಸುತ್ತಿದ್ದಾನೆ. ಅಪ್ಪಾಜಿ, ನೀನು ಬಂದುದು ನನಗೆ ಹೋದ ಜೀವ ಬಂದಂತೆ ಆಯಿತು. ಹೋಗು, ಮೊದಲು ಮಗುವಿನ ರಕ್ಷಣೆಗೆ ಹೋಗು' ಎಂದರು ರಾಜಮಾತೆ.

'ಅವ್ವೆ, ಇದುವರೆಗೆ ರಾಜಧಾನಿಯನ್ನು ರಕ್ಷಿಸುತ್ತಿರುವ ವಿಜಯನಾರಾಯಣನೇ ಕುವರನನ್ನೂ ರಕ್ಷಿಸುತ್ತಿರುವನು, ರಕ್ಷಿಸುವನು. ನಿಮ್ಮಂತೆಯೆ ನನಗೂ ಕುವರನನ್ನು ಕಾಣುವವರೆಗೂ ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ನಾನು ಸೈನ್ಯದೊಡನೆ ಈಗಲೆ ಸಹಾಯಕ್ಕೆ ಹೋಗುತ್ತೇನೆ. ಈ ಒಂಬತ್ತು ದಿನಗಳೂ ಶತ್ರುಗಳನ್ನು ಹಿಡಿದು ನಿಲ್ಲಿಸಿರುವನಲ್ಲ ಈ ನರಸಿಂಹ! ಅವ್ವೆ, ಅದೇ ನನಗೆ ಆಶ್ಚರ್ಯ. ಬೊಪ್ಪಣನ ಸಮಾಚಾರವೇನು?'

'ಅಪ್ಪಾಜಿ, ಅದು ಸಮಾಧಾನಕರವಾಗಿದೆ. ಬೊಪ್ಪಣ ದಂಡೆತ್ತಿ ಬಂದಿದ್ದ ಮಲೆಪರೆಲ್ಲರನ್ನೂ ಅಳಿಸಿಬಿಟ್ಟನಂತೆ. ಇಂದೊ ನಾಳೆಯೊ ರಾಜಧಾನಿಗೆ ಬರಬಹುದು.'

'ಅವ್ವೆ, ಈ ಸಂಕಟದಲ್ಲಿಯೂ ಅದೊಂದು ಸಂತೋಷದ ಸುದ್ದಿ. ಎಷ್ಟಾದರೂ ಗಂಗಾರಾಜರ ರಕ್ತವಲ್ಲವೆ ಅದು!'

ಪ್ರಭುಗಳು ತಾಯಿಯ ವಿಶ್ರಾಂತಿಗೃಹದಿಂದ ಈಚೆಗೆ ಬಂದು, ಅರಮನೆಯ ಅಧಿಕಾರಿಯೊಬ್ಬನನ್ನು ಕರೆದು, 'ಈಗಲೆ ಹೋಗಿ ಊರ ಹೊರಗೆ

ನಿಂತಿರುವ ನಮ್ಮ ಸೈನ್ಯಗಳಿಗೆ ನಾವು ಹೀಗೆ ಆಜ್ಞಾಪಿಸಿದೆವೆಂದು ತಿಳಿಸಿರಿ. ತೊಟ್ಟಿರುವ ಯುದ್ಧತ್ರಾಣಗಳನ್ನು ಬಿಚ್ಚಿಡಬೇಡಿ. ಸಕಲ ಸೈನ್ಯವೂ ಹಾಗೆಯೇ ಆಹಾರವನ್ನು ತೆಗೆದುಕೊಳ್ಳಲಿ, ಕುದುರೆಗಳೂ ಮೇವು ನೀರನ್ನು ತೆಗೆದುಕೊಳ್ಳಲಿ, ಇಷ್ಟೆಲ್ಲ ಅರ್ಧಗಂಟೆಯೊಳಗೆ ಮುಗಿಸಿ ಪ್ರಯಾಣಕ್ಕೆ ಸಿದ್ಧರಾಗಿರಬೇಕು. ನಾವು ಕುವರರ ರಕ್ಷಣೆಗೆ ಹೋಗುವವರಿದ್ದೇವೆ' ಎಂದರು. ಅನಂತರ ಪ್ರಭುಗಳು ದೇವಿಯರನ್ನು ನೋಡಲು ಹೋದರು.

ಚೇಟಿಯೊಬ್ಬಳು ಪ್ರಭುಗಳ ಅನಿರೀಕ್ಷಿತ ಶೀಘ್ರ ಆಗಮನವನ್ನು ಮಹಾ ರಾಣಿಗೆ ತಿಳಿಸುತ್ತಿದ್ದಂತೆಯೇ ಪ್ರಭುಗಳೇ ಅಲ್ಲಿಗೆ ದಯಮಾಡಿಸಿದರು. ಶಾಂತಲೆ ಎದ್ದು ಪ್ರಭುಗಳನ್ನು ಬಾಗಿಲಲ್ಲೆ ಎದುರುಗೊಂಡಳು. ಮುಖದಲ್ಲಿ ನಗು ಮೂಡಿತ್ತು, ಕಣ್ಣಲ್ಲಿ ಆನಂದಬಾಷ್ಪ ತುಳುಕಾಡಿತು, ಪ್ರಭುಗಳ ಪಾದ ಗಳನ್ನು ಮುಟ್ಟಿ ನಮಸ್ಕರಿಸಿದಳು. ಪ್ರಭುಗಳು ಆದರ ಆನಂದಗಳೊಡನೆ ದೇವಿಯರ ನಳಿತೋಳ್ಗಳನ್ನು ಹಿಡಿದೆತ್ತಿ 'ಸೌಖ್ಯವೆ?' ಎಂದು ಕೇಳಿದರು, ಹಾಗೆಯೇ ಆ ಕೋಣೆಯ ಸುತ್ತ ನೋಡಿದರು. ಅಲ್ಲಿದ್ದುದು ಒಂದು ಮರದ ಮಂಚ. ಅದರ ಮೇಲೆ ಒಂದು ಮಂದಲಿಗೆ, ನೆಲದ ಮೇಲೊಂದು ಮಂದಲಿಗೆ, ಒಂದು ತಲೆದಿಂಬು, ಹಚ್ಚಡ, ದೇವಮೂಲೆಯಲ್ಲಿ ಪೂಜೆ ಪುಷ್ಪಾರ್ಚನೆಗಳಿಂದ ಒಪ್ಪಿದ ಶಾರದಾ ವಿಗ್ರಹ, ಒಂದೆರಡು ಮರದ ಪೀಠಗಳು, ವೀಣೆ, ಪೂಜಾ ಸಾಮಗ್ರಿ ಇಷ್ಟೆಲ್ಲ ಕಂಡುಬಂದುವು. ಶಾಂತಲದೇವಿ ಬಹು ಸೊರಗಿದ್ದಳು. ವಸ್ತ್ರಭೂಷಣಗಳಿಲ್ಲ, ಅಲಂಕಾರಗಳಿಲ್ಲ. ಮುಖದಲ್ಲಿ ಮಾತ್ರ ಉಜ್ಜ್ವಲ ದೈವೀ ತೇಜಸ್ಸಿದೆ. ನಿಷ್ಕಾಮಪರಳಾಗಿದ್ದ ದೇವಿ ಯೋಗಿನಿಯಂತೆ ಕಂಡು ಬಂದಳು.

ಪ್ರಭುಗಳು ಮಂಚದ ಮೇಲೆ ಕುಳಿತರು. ಶಾಂತಲೆ ಶಾರದೆಯ ಪುಷ್ಪ ಪ್ರಸಾದಗಳನ್ನು ಪ್ರಭುಗಳಿಗೆ ಕೊಟ್ಟಳು. ಪ್ರಭುಗಳು ಎದ್ದುನಿಂತು ಅವು ಗಳನ್ನು ಸ್ವೀಕರಿಸಿ ತಮ್ಮ ಕಣ್ಣುಗಳಿಗೊತ್ತಿಕೊಂಡರು. ಅನಂತರ ಶಾಂತಲೆ ಶೇಷೆ ಹಾಲನ್ನು ಪ್ರಭುಗಳಿಗೆ ಕೊಟ್ಟಳು. ಪ್ರಭುಗಳು ಅದನ್ನೂ ಕಣ್ಣಿಗೆ ಸೋಕಿಸಿಕೊಂಡು, ಅನಂತರ ಕುಡಿದರು. ಶಾಂತಲೆ ತನ್ನ ಮನಸ್ಸಿನ ಪ್ರಫುಲ್ಲತೆ ಯನ್ನು ವ್ಯಕ್ತಪಡಿಸುತ್ತ 'ಶಾರದೆ ನಿಮ್ಮನ್ನು ಬೇಗನೆ ಕರೆದುತಂದಳು. ನಾನು ನಿತ್ಯವೂ ದೇವಿಯನ್ನು ಬೇಡಿಕೊಳ್ಳುತ್ತಿದ್ದೆ. ನೀವು ಇಂದು ಬರುವಿ

ರೆಂದು ನನಗೆ ಸ್ವಪ್ನವಾಯಿತು. ಸ್ವಪ್ನ ನಿಜವೆ ಆಯಿತು. ನನ್ನ ತಮ್ಮನೂ ಹೀಗೆಯೆ ಬರಲೆಂದು ನೋಂಪಿಗೊಂಡಿದ್ದೇನೆ. ಲಕ್ಷ್ಮಿ, ಅಯ್ಯನನ್ನು ನೋಡಿ ಬರಲು ನೆನ್ನೆ ವೇಲಾಪುರಕ್ಕೆ ಹೋದಳು. ಈ ರಾತ್ರಿಯೆ ಬಂದಾಳು, ಬಾರ ದಿದ್ದರೆ ಸಮಾಚಾರ ಹೇಳಿಕಳಿಸುವೆನೆಂದಿರುವಳು' ಎಂದು ಹೇಳಿದಳು.

ವಿಷ್ಣುವರ್ಧನ: 'ದೇವಿ, ನೀನು ಕಠಿಣನಿಷ್ಠೆಯಲ್ಲಿರುವೆ. ನಿಯಮ ಗಳಿಂದ ನಿನ್ನ ಶರೀರ ಬಹಳ ಕೃಶವಾಗಿದೆ. ಇದು ಇಷ್ಟು ಅಗತ್ಯವಿತ್ತೆ?'

ಶಾಂತಲೆ: ಕಠಿಣವ್ರತ ಕೈಗೊಂಡುದು ನನ್ನ ಅಣುಗ ತಮ್ಮ ಯುದ್ಧಕ್ಕೆ ಹೊರಟ ದಿನದಿಂದ. ನಿಮ್ಮ ಕ್ಷೇಮಕ್ಕಾಗಿ, ಅವನ ಕ್ಷೇಮಕ್ಕಾಗಿ, ನನ್ನ ಹೃದಯಶಾಂತಿಗಾಗಿ ನನ್ನ ಈ ವ್ರತ.'

ಆ ಮಾತುಗಳನ್ನು ಕೇಳಿ ಪ್ರಭುಗಳ ಕಣ್ಣುಗಳಿಂದ ಆನಂದಾಶ್ರು ಗಳಗಳನೆ ಸುರಿಯಿತು. 'ಇದೆಂತಹ ಅಮೃತಮಯ ಹೃದಯ ದೇವಿಯದು!' ಎನ್ನಿಸಿತು. ಒಂದು ಕ್ಷಣಕಾಲ ಆ ಧೀರೋದಾತ್ತನ ಹೃದಯವು ತಲ್ಲಣ ಗೊಂಡಿತು. ಅಧೀರನಂತೆ ಮಾತನಾಡಿದರು: 'ದೇವಿ, ಕುವರನು ಸೌಖ್ಯ ವಾಗಿ ಬರುವನೆ? ಕೊಂಗರನ್ನು ಗೆದ್ದು ಅವರ ಆನೆಗಳನ್ನು ತರುವನೆ? ಅವನ ನಗುಮೊಗವನ್ನು ನಾನು ಕಂಡೇನೆ? 'ಅಪ್ಪಾಜಿ' ಎನ್ನುವ ಅವನ ಸೊಲ್ಲನ್ನು ಪುನಃ ಕೇಳುವೆನೆ? ಅವನು ವಿಜಯೋತ್ಸವದೊಡನೆ ಬರುವನೆ? ದೇವಿ, ಅವನು ಇನ್ನೂ ಬಾಲಕನಲ್ಲವೆ! ಯುದ್ಧದ ಕಷ್ಟಗಳನ್ನು ಹೇಗೆ ಸಹಿಸಿಯಾನು? ಬೇಡು, ನಿನ್ನ ಶಾರದೆಯನ್ನು ಬೇಡು; ಕುವರನ ಕೂದಲು ಕೊಂಕದಿರಲಿ ಎಂದು ಬೇಡು, ಕುವರನನ್ನು ಸುಖವಾಗಿ ತಂದುಕೊಡೆಂದು ಬೇಡು' ಎಂದು ಆ ಪ್ರಭುವಿನ ಪ್ರೇಮಹೃದಯ ಅರೆಕ್ಷಣ ವಿಲಿವಿಲಿ ಒದ್ದಾಡಿಹೋಯಿತು. ಶಾಂತಲೆಯ ಕಣ್ಣುಗಳಲ್ಲೂ ದುಃಖ ಧಾರೆಧಾರೆಯಾಯಿತು. ಆಕೆ 'ದೇವ, ನೆನ್ನೆಯ ವರೆಗೂ ದೈವ ಅವನನ್ನು ರಕ್ಷಿಸಿಕೊಂಡೇ ಬಂದಿದೆ. ಈ ಹೊತ್ತು ಇನ್ನೇನು ಸುದ್ದಿ ಬರುವ ಸಮಯ. ಚಿಕ್ಕವನಿದ್ದರೂ ಮಹಾ ಪರಾಕ್ರಮದಿಂದ ಹೋರಾಡುತ್ತಿರುವನಂತೆ. ಶತ್ರುಸೈನ್ಯದಲ್ಲಿ ಮಹಾ ನಷ್ಟವನ್ನುಂಟುಮಾಡಿರು ವನಂತೆ.'

ವಿಷ್ಣುವರ್ಧನ: 'ಅಮೃತವಾಗಲಿ ದೇವಿ, ನಿನ್ನ ವಾಕ್ಕು ಅಮೃತ ವಾಗಲಿ. ಹಾಗಿದ್ದರೆ ಯುದ್ಧಮಾಡಿ ಜಯ ಗಳಿಸುತ್ತಿರುವವನು ವಿಜಯ

ನಾರಾಯಣ. ಅವನಿಗೆ, ನಿನ್ನ ಶಾರದೆಗೆ ನನ್ನ ಕೋಟಿ ಕೋಟಿ ನಮಸ್ಕಾರಗಳು.'

ಶಾಂತಲೆ ತನ್ನ ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು, 'ಪ್ರಭುಗಳ ಮನಸ್ಸಿಗೆ ಶಾಂತಿ ನೀಡು ತಾಯೆ' ಎಂದು, ಅಲ್ಲಿದ್ದ ನೀಲಾಂಜನವನ್ನು ಹಚ್ಚಿ ಶಾರದೆಗೆ ಬೆಳಗಿದಳು. ಆಗ ಚೇಟಿಯೊಬ್ಬಳು ಅವಸರದಿಂದ ಬಾಗಿಲನ್ನು ನೂಕಿಕೊಂಡು ಒಳಕ್ಕೆ ಬಂದಳು. ಪ್ರಭುಗಳು ಒಳಗಿರುವರೆಂಬುದನ್ನು ಚೇಟಿ ಅರಿಯಳು. ಅಲ್ಲಿಯೆ ಕುಳಿತಿದ್ದ ಪ್ರಭುಗಳನ್ನು ಕಂಡು ಚೇಟಿ ನಡುಗಿದಳು. ಪ್ರಭುಗಳಿಗೆ ನಮಸ್ಕರಿಸಿ, ಕಂಪಿಸುತ್ತಿದ್ದ ಧ್ವನಿಯಲ್ಲಿ ಮಹಾರಾಣಿಯನ್ನು ಸಂಬೋಧಿಸಿ, "ದೇವಿಯರು ಬೇಗ ಬಂದು ತಿಳಿಸು ಎಂದು ಹೇಳಿದ್ದಿರಿ, ಅದರಿಂದ ಹೀಗೆ ಓಡಿಬಂದೆ. ಸಹಸ್ರ ಅಪರಾಧ ಮಾಡಿದೆ, ಕ್ಷಮಿಸಬೇಕು ತಾಯಿ. ಸವಾರನೊಬ್ಬ ಯುದ್ಧಭೂಮಿಯಿಂದ ಸಮಾಚಾರವನ್ನು ಹೊತ್ತುಬಂದ. ಬಂದವನು ನೆಟ್ಟಗೆ ಮಾತೆಯವರನ್ನು ಕಾಣಲು ಓಡಿದ" ಎಂದಳು.

ಪ್ರಭುಗಳು ಅವಸರದಿಂದೆದ್ದು ತಾಯಿ ಇದ್ದಲ್ಲಿಗೆ ಶೀಘ್ರವಾಗಿ ನಡೆದರು. ಶಾಂತಲೆಯೂ ಹಿಂಬಾಲಿಸಿದಳು.

ರಾಜಮಾತೆ ಆಗ ತಮ್ಮ ಪೂಜಾಗೃಹದಲ್ಲಿದ್ದರು. ಅರಮನೆಯ ಪುರೋಹಿತರು, ಸಂಜೆಯ ಪೂಜೆಗೆ ಸಾಮಗ್ರಿಗಳನ್ನೂ ಪುಷ್ಪಗಳನ್ನೂ ಆಗ ತಾನೆ ತಂದಿಟ್ಟರು. ಪ್ರಭುಗಳು ರಾಜಧಾನಿಗೆ ಬಂದರೆಂದೂ, ಆ ರಾತ್ರಿ ಊರಿನ ದೇವಾಲಯಗಳಲ್ಲೆಲ್ಲ ಹೆಚ್ಚಿನ ಪೂಜೆ ಉತ್ಸವಾದಿಗಳು ನಡೆಯುವಂತೆ ಏರ್ಪಾಡು ಮಾಡಬೇಕೆಂದೂ ರಾಜಮಾತೆಯವರು ಪುರೋಹಿತರಿಗೆ ಹೇಳುತ್ತಿದ್ದರು. ಆಗ ಚೇಟಿಯೊಬ್ಬಳು ಅವಸರವಾಗಿ ಪ್ರವೇಶಿಸಿ, ಸಮಾಚಾರದ ಸವಾರನೊಬ್ಬ ಯುದ್ಧಭೂಮಿಯಿಂದ ಬಂದಿರುವನೆಂದೂ ಮಾತೆಯವರನ್ನು ಕಾಣಲು ನಿಂತಿರುವನೆಂದೂ ತಿಳಿಸಿದಳು. ರಾಜಮಾತೆ ಹೊರಬಾಗಿಲನ್ನು ತೆಗೆಯಿಸಿ, 'ಅವನನ್ನು ಚೌಕಟ್ಟಿನ ಬಳಿಗೆ ಬರುವಂತೆ ಹೇಳು' ಎಂದು ಆಜ್ಞೆ ಮಾಡುತ್ತಿದ್ದಾಗಲೆ, ಪ್ರಭುಗಳೂ ಅಲ್ಲಿಗೆ ಬಂದರು. ಸವಾರನೂ ಬಾಗಿಲ ಹೊರಗೆ ಬಂದು ನಿಂತ. ಪ್ರಭುಗಳನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ವೀರಮಂಡಿಯನ್ನು ಊರಿ ನಮಸ್ಕಾರ ಮಾಡಿ ಎದ್ದ. ಹೇಳಬೇಕಾಗಿದ್ದ

ಸಮಾಚಾರ ಅವನ ಗಂಟಲಿನಿಂದ ಹೊರಡಲಿಲ್ಲ. ಅವನ ಅವಸ್ಥೆಯನ್ನು ಕಂಡು ಪ್ರಭುಗಳು 'ಭಯಪಡಬೇಡ, ಏನು ಸಮಾಚಾರ? ನಿಧಾನವಾಗಿ ಹೇಳು' ಎಂದರು. ಕಂಪಿಸುತ್ತಿದ್ದ ಧ್ವನಿಯಲ್ಲಿ ಆ ಸವಾರ 'ಶತ್ರುಗಳ ಆನೆಗಳೂ ಕುದುರೆ ದಳವೂ ಸೈನ್ಯಗಳೂ ರಾಜಧಾನಿಯ ಕಡೆ ಹೊರಟಿವೆ. ಈ ಒಂಬತ್ತು ದಿನಗಳೂ ಇದ್ದ ಸ್ಥಳದಲ್ಲಿಯೇ ತಡೆಯಲ್ಪಟ್ಟಿದ್ದ ಶತ್ರುಸೇನೆ, ಈ ಬೆಳಗ್ಗೆ ಅಲ್ಲಿಂದ ಕದಲಿ ರಾಜಧಾನಿಯ ಮೇಲೆ ಬರುತ್ತಿದೆ. ಅದನ್ನು ದೂರದಿಂದ ಕಂಡು ಒಡನೆಯೆ ಬಂದು ಅರಿಕೆ ಮಾಡಿಕೊಂಡಿದ್ದೇನೆ. ನಾನು ಕಂಡಾಗ ಶತ್ರುಸೇನೆ ಮೂರು ಗಾವುದಗಳ ದೂರದಲ್ಲಿತ್ತು' ಎಂದ.

ಆ ಮಾತುಗಳನ್ನು ಕೇಳಿ ರಾಜಮಾತೆ ಹೃದಯ ತಲ್ಲಣಿಸಿ ಹೋಯಿತು. 'ಏನು! ಶತ್ರುಗಳ ದಂಡು ಮುಂದುವರಿಯಿತೆ! ಅಯ್ಯೋ, ಕುವರಾ!' ಎನ್ನುತ್ತ, ರಾಜಮಾತೆ ತಮ್ಮ ಎಡಗೈಯನ್ನು ಹೃದಯದ ಮೇಲೆ ತಂದು ಎದೆಯನ್ನು ಅದುಮಿ ಹಿಡಿದರು. ಆ ಕ್ಷಣದಲ್ಲಿಯೆ ಅವರ ಜೀವ ದೇಹದಿಂದ ಮುಕ್ತವಾಯಿತು. 'ಅವ್ವೆ' ಎನ್ನುತ್ತ ಪ್ರಭುಗಳು ಕುಳಿತಿದ್ದ ತಾಯನ್ನು ಬೀಳದಂತೆ ಹಿಡಿದುಕೊಳ್ಳಲು ಬಂದರು. ಹಿಡಿದು ಕೂಡಿಸಿದರು. ಎಚ್ಚರಗೊಳಿಸಿದರು. ರಾಜಮಾತೆಯ ಕಣ್ಣುಗಳು ಮುಚ್ಚಿಹೋದವು. ತಲೆ ಒಂದು ಕಡೆ ಜೋತುಬಿತ್ತು. ಪ್ರಭುಗಳು ತಾಯಿಯ ನೆತ್ತಿಗೆ ತಣ್ಣೀರು ತಟ್ಟಿ, ಮೈಯನ್ನು ಅಲುಗಿಸುತ್ತ 'ಅವ್ವೆ, ಅವ್ವೆ' ಎಂದರು. ಶಾಂತಲೆ ಗಾಳಿ ಹಾಕಿದಳು; 'ಅವ್ವೆ, ಅವ್ವೆ' ಎನ್ನುತ್ತ ಜೋತುಬಿದ್ದಿದ್ದ ಆಕೆಯ ತಲೆಯನ್ನು ಮೇಲಕ್ಕೆತ್ತಿ, ಮುಚ್ಚಿದ ಕಣ್ಣುಗಳನ್ನೂ ನಿರ್ಜೀವ ಮುಖಮುದ್ರೆಯನ್ನೂ ಕಂಡು, ಭೀತಳಾಗಿ ಪ್ರಭುಗಳ ಮುಖವನ್ನು ನೋಡಿದಳು. ಪ್ರಭುಗಳಿಗೆ ಶಾಂತಲೆಯ ಕಣ್ಣುಗಳಲ್ಲಿ ಉತ್ಪನ್ನವಾದ ನಿರಾಶಾಭಾವನೆ ಅರ್ಥವಾಯಿತು. ಪ್ರಭುಗಳು ಆಗ ತಾಯಿಯ ಮೂಗಿನ ಬಳಿ ಬೆರಳಿಟ್ಟು 'ಉಸಿರಿದೆಯೆ' ಎಂದು ನೋಡಿದರು. ಕಣ್ಣುರೆಪ್ಪೆಯನ್ನು ಬಿಡಿಸಿ ನೋಡಿದರು, ತಾಯಿ ದೈವಾಧೀನರಾದರೆಂದು ಪ್ರಭುಗಳಿಗೆ ಈಗ ಖಂಡಿತವಾಯ್ತು. ಹತ್ತಿರ ನಿಂತಿದ್ದ ಶಾಂತಲೆಯನ್ನೂ ಪುರೋಹಿತರನ್ನೂ ಕಂಡು ಪ್ರಭುಗಳು ನಿರಾಶೆಯಿಂದ ಕತ್ತನ್ನು ಆಡಿಸಿಬಿಟ್ಟರು. ಪುರೋಹಿತರ ಕಣ್ಣುಗಳಲ್ಲಿ ನೀರು ಗಳಗಳನೆ ಹರಿಯಿತು. ಶಾಂತಲೆ ಸೆರಗಿನಿಂದ ಮುಖಮುಚ್ಚಿಕೊಂಡು 'ಅವ್ವೆ, ಅವ್ವೆ, ಅವ್ವೇ' ಎನ್ನುತ್ತ

ಗದ್ಗದಿಸಿ ಬರುತ್ತಿರುವ ಸಂಕಟವನ್ನು ತಡೆಯಲಾರದೆಹೋದಳು. ಬಾಗಿಲ ಬಳಿ ನಿಂತು ಇದೆಲ್ಲವನ್ನು ನೋಡುತ್ತಿದ್ದ ಸವಾರ 'ನಾನು ತಂದ ಕೆಟ್ಟಸುದ್ದಿಯಲ್ಲವೆ ಈ ಅನಾಹುತಕ್ಕೆ ಕಾರಣ' ಎಂದು ಬಹು ಮನನೊಂದವನಾಗಿ ಅಲ್ಲಿಂದ ಓಡಿ ಹೋಗಿ ಆಕ್ಷಣವೆ ಆತ್ಮಹತ್ಯೆಮಾಡಿಕೊಂಡ.

ಪ್ರಭುಗಳ ಕಣ್ಣುಗಳಲ್ಲೂ ನಾಲ್ಕು ತೊಟ್ಟು ನೀರು ಬಂದಿತು. ಇತ್ತ ಹೆತ್ತ ತಾಯಿ ದುಸ್ಸಹ ಸಮಾಚಾರವನ್ನು ಕೇಳಿ ಪ್ರಾಣಬಿಟ್ಟರು. ಅತ್ತ, ಜೀವದಷ್ಟೆ ಪ್ರಿಯನಾದ ಕುವರವಿಷ್ಣು ಶತ್ರುಗಳ ಕೈಗೆ ಸಿಕ್ಕಿ ಬದುಕಿರುವನೊ, ಇಲ್ಲವೊ, ಎಂಬ ಸಂಶಯ. ತಮಗೆ ಈ ವಿಪತ್ತುಗಳನ್ನು ತಂದುದು ಈ ಶತ್ರುಸೇನೆ. ಇದನ್ನು ನಿರ್ಮೂಲ ಮಾಡಿದಲ್ಲದೆ, ತಾಯಿಗೆ ವಾಸೋದಕ, ತಿಲೋದಕ ಗಳನ್ನು ಕೊಡಲು ತಾವು ಅನರ್ಹರೆಂದು ಪ್ರಭುವು ನಿಶ್ಚಯಿಸಿಬಿಟ್ಟರು. ಪುರೋಹಿತರು ದೇವರ ಪೂಜೆಗೆಂದು ತಂದಿಟ್ಟಿದ್ದ ಹೂಗಳನ್ನು ತಮ್ಮೆರಡು ಕೈಗಳಿಂದಲೂ ತೆಗೆದುಕೊಂಡು, ತಾಯ ಪಾದಗಳ ಮೇಲಿಟ್ಟು ತಮ್ಮ ಅಂತ್ಯ ಪ್ರಣಾಮಗಳನ್ನು ಸಲ್ಲಿಸಿದರು. ಶಾಂತಲೆಯೂ ಪ್ರಭುಗಳನ್ನು ಅನುಸರಿಸಿದಳು. ಪ್ರಭುವು ವಿಜಯನಾರಾಯಣನ ಎದುರಿಗೆ ಉರಿಯುತ್ತಿದ್ದ ಅಖಂಡ ಜ್ಯೋತಿ ಯನ್ನು ಕೈಗೆ ತೆಗೆದುಕೊಂಡು, ತಾಯಿಯ ಪಾದಾಂಗುಷ್ಟಕ್ಕೆ ಸೋಕಿಸಿ, ಅನಂತರ ಜ್ಯೋತಿಯನ್ನು ದೇವರ ಪಾದಗಳ ಬಳಿಯೆ ಇಟ್ಟು, ಪುರೋಹಿತರನ್ನು ನೋಡಿ 'ಮುಂದಿನ ಕಾರ್ಯಗಳು ಸಾಂಗವಾಗಿ ನಡಸಿಬಿಡಿ. ಚಿತಾಗ್ನಿಯನ್ನು ಮಾತ್ರ, ಎಷ್ಟೇ ದಿನಗಳಾಗಲಿ, ನಾನಾಗಲಿ ನನ್ನ ಕಳೇಬರವಾಗಲಿ ಬರುವ ವರೆಗೂ ರಕ್ಷಿಸಿಟ್ಟಿರಿ. ಜೀವದೊಡನೆ ಬಂದರೆ ಅವ್ವೆಯ ಉತ್ತರಕ್ರಿಯೆಗಳನ್ನು ನಾವೇ ಮಾಡುತ್ತೇವೆ. ಇಲ್ಲದಿದ್ದರೆ ಅದೇ ಚಿತಾಗ್ನಿಗೆ ನಮ್ಮ ದೇಹವನ್ನೂ ಅರ್ಪಿಸಿಬಿಡಿ. ಇದು ನಿಮ್ಮ ಕರ್ತವ್ಯ' ಎಂದರು. ತತ್‌ಕ್ಷಣವೇ ಶಾಂತಲೆ ಪ್ರಭುಗಳ ಪಾದಗಳನ್ನು ಹಿಡಿದುಕೊಂಡು 'ದೇವ, ಇಹಜೀವನದಲ್ಲಿಯೂ ಅನಂತರದಲ್ಲಿಯೂ ನಾನೂ ಲಕ್ಷ್ಮಿಯೂ ತಮ್ಮೊಡನೆ ಇರತಕ್ಕವರೆ, ನಮಗೆ ಬೇರೆ ಚಿತೆ ಕೂಡದು' ಎಂದಳು.

ಕಾಲ್ಪಿಡಿದಿದ್ದ ದೇವಿಯನ್ನು ಕೈಗಳಿಂದ ಮೇಲಕ್ಕೆ ನೆಗಪಿ ಪ್ರಭುಗಳು ಆಕೆಯ ಕಣ್ಣುಗಳಲ್ಲಿ ತಮ್ಮ ಕಣ್ಣುಗಳನ್ನು ನಟ್ಟು ನೋಡಿ 'ಚೆನ್ನೆ, ನಿಮ್ಮ ಸ್ನೇಹ ನನಗೆ ಅಮರವಾಗಿ ಜನ್ಮಜನ್ಮಗಳಿಗೂ ಇರಲಿ, ಅಮೃತವಾಗಲಿ. ಈಗ

ನಡೆಯಬೇಕಾದ ಕಾರ್ಯಗಳು ನಡೆಯಲಿ' ಎನ್ನುತ್ತ ತಮ್ಮ ಎದೆಯಲ್ಲಿದ್ದ ಹೊಯಿಸಳ ರಾಜ್ಯಾಂಕಿತ ಪದಕವಿದ್ದ ರತ್ನಹಾರವನ್ನು ಕಿತ್ತು ಅದನ್ನು ವಿಜಯ ನಾರಾಯಣಮೂರ್ತಿಯ ಪಾದಗಳ ಬಳಿ ಇಟ್ಟು, 'ಪ್ರಭು, ನೀನು ಕೊಟ್ಟ ದನ್ನು ನಿನಗೆ ಸಮರ್ಪಿಸುತ್ತಿದ್ದೇನೆ. ಇದು ನಿನ್ನೊಡವೆ. ಇದನ್ನು ನಾನು ಚೆನ್ನಾಗಿ ಕಾಪಾಡಿದೆನೊ ನಿರರ್ಥಕವಮಾಡಿದೆನೊ ಅದನ್ನು ನೀನೇ ಬಲ್ಲೆ, ನಾನರಿಯೆ. ಭಗವನ್, ನಿನ್ನ ಸಂಕಲ್ಪವೇನಿರುವುದೊ ಹಾಗೆಯೆ ನಡೆಯಲಿ. ತಾಯಿಯ ಮರಣಕ್ಕೆ ಮೊದಲು ನನಗೆ ಆಕೆಯ ದರ್ಶನವನ್ನು ಒದಗಿಸಿದೆ, ಕರುಣಾನಿಧೇ' ಎಂದು ಹೇಳಿ ನಮಸ್ಕರಿಸಿ, ಸರಸರನೆ ಹೋಗಿ ಕಾಂಭೋಜಿ ಯನ್ನೇರಿ ತಮ್ಮ ಸೈನ್ಯವಿದ್ದೆಡೆಗೆ ವೇಗದಿಂದ ಹೋದರು.

ಸೈನ್ಯವೆಲ್ಲ ಊಟಮಾಡಿ, ಕುದುರೆಗಳಿಗೆ ಮೇವಿಟ್ಟು, ನೀರಿಟ್ಟು, ಪ್ರಯಾಣಕ್ಕೆ ಸಿದ್ಧವಾಗಿತ್ತು. ಪ್ರಭುಗಳು ಸೇನೆಯನ್ನು ಕುರಿತು 'ಸುಭಟರೆ, ಕೊಂಗರ ಸೈನ್ಯವೊಂದು ನಾವಿಲ್ಲದ ವೇಳೆಯನ್ನು ಸಾಧಿಸಿ ರಾಜಧಾನಿಯ ಮೇಲೆ ಬಂದುದನ್ನು ನಮ್ಮ ಕುವರ ಎರಡೇ ಸಾವಿರ ಸೈನ್ಯದೊಂದಿಗೆ ಈ ಒಂಬತ್ತು ದಿನಗಳೂ ತಡೆದು ನಿಲ್ಲಿಸಿದ್ದನಂತೆ. ಆ ಶತ್ರುಸೈನ್ಯಗಳು ಅಲ್ಲಿಂದ ರಾಜಧಾನಿಯ ಮೇಲೆ ಮುಂದುವರಿಯುತ್ತಿವೆಯೆಂದು ಇಂದಿನ ಸುದ್ದಿ. ನಮ್ಮ ಕುವರ ಸೆರೆಸಿಕ್ಕಿ ಜೀವಿಸಿರುವವನಲ್ಲ. ಬಹುಶಃ ಮರಣಹೊಂದಿರುವನೆಂದೇ ಶಂಕಿಸುತ್ತೇನೆ. ಈ ಶಂಕೆಯಿಂದಲೇ, ಈ ಸಂಕಟದಿಂದಲೇ ನಮ್ಮ ಪೂಜ್ಯ ತಾಯಿಯರ ಹೃದಯ ಸ್ತಂಭವಾಗಿ ಆಕೆ ಇದೀಗ ಪರಲೋಕವಾಸಿಗಳಾದರು. ಈ ವಿಷಯಗಳನ್ನು ನಿಮಗೆ ತಿಳಿಸಲು ನಮಗೆ ಬಹು ನೋವಾಗುತ್ತಿದೆ. ದೈವೇಚ್ಛೆ ಹೇಗಿರುವುದೊ? ಏನಿರುವುದೊ? ನಾವು ಶಪಥಗೈದಿದ್ದೇವೆ, ಶತ್ರುಗಳನ್ನು ನಿರ್ಮೂಲವಮಾಡಿದಲ್ಲದೆ ಹಿಂದಿರುಗೆವು ಎಂದು' ಎನ್ನುತ್ತಿರುವಾಗಲೆ ನಾಲ್ಕು ಸಾವಿರ ಕಂಠಗಳು ಒಂದೇ ಧ್ವನಿಯಲ್ಲಿ 'ಪ್ರಭುವೆ, ನಾವೆಲ್ಲ ನಿಮ್ಮೊಡನೆಯೇ!' ಎಂದರು.

ಪ್ರಭುಗಳು ಕುದುರೆಯನ್ನು ನಡಸಿದರು. ಸೂರ್ಯನು ಅಸ್ತಮಿಸುತ್ತಿದ್ದ ವೇಳೆ. ಜೀವದ ಹಂಗನ್ನು ತೊರೆದ ಸೈನ್ಯ ಸ್ವಾಮಿಯೊಡನೆ ಉಳಿಯಲು ಅಥವಾ ಅಳಿಯಲು ಅವರನ್ನು ಹಿಂಬಾಲಿಸಿತು. ಬೆಳಗಿನಿಂದಲೂ ದಣಿದಿದ್ದ ಕುದುರೆಗಳ ವೇಗ ಕಡಿಮೆಯಾಗುತ್ತಾ ಬಂದಿತ್ತು; ಪ್ರಭುಗಳ ಆತುರ ಹೆಚ್ಚಾಗುತ್ತ ಬಂದಿತ್ತು. ಅತಿಪ್ರಯಾಸದಿಂದ ಎರಡು ಗಾವುದ ದೂರ ಬಂದ ಮೇಲೆ ಸೈನ್ಯದ ಬಹುಭಾಗದ

ಕುದುರೆಗಳು ಮುಂದೆ ಅಡಿ ಇಡಲಾರದೆ ನಿಂತವು. ಪ್ರಭುಗಳೆಂದರು: 'ದಣಿದಿರುವ ಕುದುರೆಗಳನ್ನು ಇಲ್ಲಿಯೆ ನಿಲ್ಲಿಸಿಕೊಳ್ಳಿ. ಇನ್ನೂ ಸ್ವಲ್ಪ ದೂರ ನಡೆಯಬಹುದಾದ ಅಶ್ವಗಳು ಮಾತ್ರ ನಮ್ಮೊಡನೆ ಬರಲಿ. ಇಲ್ಲಿ ನಿಲ್ಲುವವರು ನಾಳೆಯ ಪ್ರಾತಃಕಾಲ ಬಂದು ನಮ್ಮನ್ನು ಕಲೆಯಲಿ' ಎಂದು. ಮೂರುಸಾವಿರ ಸೈನ್ಯ ಅಲ್ಲಿಯೆ ನಿಂತಿತು. ಸಾವಿರ ಅಶ್ವಸೈನ್ಯ ಮಾತ್ರ ಪ್ರಭುಗಳೊಡನೆ ಮುಂದುವರಿಯಿತು.

ಇನ್ನೊಂದು ಹರಿದಾರಿ ಹೋದಮೇಲೆ, ಬೆಳಗಿನ ಮುಂಜಾವದಲ್ಲಿ ರಾಜಮಾರ್ಗದ ಪಕ್ಕದಲ್ಲೆ ಪಾಳೆಯ ಬಿಟ್ಟಿದ್ದ ಶತ್ರುಶಿಬಿರದಲ್ಲಿ ಉರಿಯುತ್ತಿದ್ದ ಪಂಜುಗಳನ್ನು ಪ್ರಭುಗಳು ಸುಮಾರು ಅರ್ಧ ಹರಿದಾರಿಯಷ್ಟು ದೂರದಿಂದಲೆ ಕಂಡರು. ಕಾಲು ಸೋತಿದ್ದ ಕುದುರೆಗಳನ್ನೂ ದಣಿದಿದ್ದ ಸೈನಿಕರನ್ನೂ ಆ ವೇಳೆಯಲ್ಲಿ ಅಪಾಯಕ್ಕೀಡುಮಾಡುವುದು ನ್ಯಾಯವಲ್ಲವೆಂದು ಪ್ರಭುಗಳು ಅರಿತಿದ್ದರು. ಒಂದೆರಡು ತಾಸುಗಳನ್ನು ಪಕ್ಕದ ತೋಪಿನಲ್ಲಿ ಕಳೆದು, ಬೆಳಗಾದ ಮೇಲೆ ಹಿಂದಿದ್ದ ಸೈನ್ಯವನ್ನೂ ಕೂಡಿಸಿಕೊಂಡು, ಬಳಿಕ ಕರ್ತವ್ಯೋನ್ಮುಖರಾಗುವುದೆಂದು ನಿಶ್ಚಯಿಸಿ, ಮರಗಳ ಮರೆಯಿಂದ ಕೂಡಿದ್ದ ಒಂದು ತೋಪಿನಲ್ಲಿ ಆಗ ಸದ್ದಿಲ್ಲದೆ ತಂಗಿದರು.

ಪ್ರಭುಗಳು ಮಧ್ಯಾಹ್ನಾತ್ಪರ ಶಾಂತಲೆ ಶಾರದೆಗೆ ನೈವೇದ್ಯ ಮಾಡಿಕೊಟ್ಟಿದ್ದ ಹಾಲನ್ನು ಮಾತ್ರ ತೆಗೆದುಕೊಂಡಿದ್ದರೇ ವಿನಾ ಬೇರಾವ ಆಹಾರವನ್ನಾಗಲಿ ಪಾನೀಯವನ್ನಾಗಲಿ ತೆಗೆದುಕೊಂಡಿರಲಿಲ್ಲ. ಅಷ್ಟು ಹೊತ್ತಿಗೆ ರಾಜಧಾನಿಯಿಂದ ಸೈನಕ್ಕೆ ಆಹಾರವೂ ಕುದುರೆಗಳಿಗೆ ಮೇವೂ ಬಂದೊದಗಿತು. ಪ್ರಭುಗಳ ಆರೋಗಣೆಗೆ ಉತ್ತಮ ಫಲಗಳೂ ಬಂದಿದ್ದವು. ಪ್ರಭುಗಳಿಗೆ ಹಸಿವು ಅಡಗಿಹೋಗಿತ್ತು; ಏನೂ, ಯಾವುದೂ ಬೇಕಿರಲಿಲ್ಲ. ಒಂದು ಮರದ ಬುಡಕ್ಕೆ ಬೆನ್ನನ್ನು ಒರಗಿಸಿ, ಶೂನ್ಯದೃಷ್ಟಿಯಿಂದ ಪೂರ್ವಾಕಾಶವನ್ನು ನೋಡುತ್ತ, ಹೃದಯದ ಅಂತರಾಳದಲ್ಲಿ ದುಃಖ ಸುಡುತ್ತಿದ್ದರೂ ಕರ್ತವ್ಯ ವಿಮುಖರಾಗದೆ ಸೂರ್ಯೋದಯವನ್ನು ಕಾಯುತ್ತ ಕುಳಿತರು. ಸೈನಿಕರು ಕುದುರೆಗಳಿಗೆ ಮೇವು ನೀರು ಇಟ್ಟರು. ಪ್ರಭುಗಳಂತೆಯೆ ಅವರು ಯಾರೂ ಒಂದು ತೊಟ್ಟು ನೀರನ್ನು ಸಹ ಮುಟ್ಟಲಿಲ್ಲ.

ಕಾಲ ಆಗ ಬಹು ದೀರ್ಘವಾಗಿ ಕಂಡಿತು. ನಿದ್ದೆ ಯಾರಿಗೆ ಬೇಕು?

ಯಾರಿಗೆ ಬಂದೀತು? ಕಡೆಗೆ ಪೂರ್ವದಲ್ಲಿ ಅರುಣಚ್ಛಾಯೆ ಮೂಡಿತು. ಪ್ರಭುಗಳು ಎದ್ದು ಪ್ರಾತರ್ವಿಧಿಗಳನ್ನು ಪೂರೈಸಿ, ಹತ್ತಿರದ ತಟಾಕ ಒಂದರಿಂದ ಶೇಖರಿಸಿಟ್ಟಿದ್ದ ನೀರಿನಲ್ಲಿ ಸ್ನಾನಮಾಡಿ, ಶುಭ್ರವಸ್ತ್ರಗಳನ್ನುಟ್ಟು, ತಾಯಿಯನ್ನು ನೆನೆಸಿಕೊಂಡು ಅವರ ಆತ್ಮಕ್ಕೆ ನಮಸ್ಕರಿಸಿ, ತರುವಾಯ ಆ ತಟಾಕದಲ್ಲಿಳಿದು, ಸೂರ್ಯಬಿಂಬ ಪೂರ್ವಕ್ಷಿತಿಜದಿಂದ ಮೇಲಕ್ಕೇಳುತ್ತಿದ್ದಾಗ, ' ಭಗವನ್ ನಾರಾಯಣ, ಮಾತೆಯ ಅಂತ್ಯಕ್ರಿಯೆಗಳನ್ನು ಮಾಡದೆ ಇರುವ ಈ ಅಭಾಗಿಗೆ, ನಿನಗೆ ಅರ್ಘ್ಯವನ್ನರ್ಪಿಸುವ ಹಕ್ಕು ಇದೆಯೊ? ಇಲ್ಲವೊ? ಎಂತೂ ಅರ್ಪಿಸುತ್ತಿದ್ದೇನೆ. ಈ ಅರ್ಘ್ಯದೊಡನೆ ಇಂದು ನನ್ನ ಶರೀರ, ಆತ್ಮ ಎರಡನ್ನೂ ನಿನ್ನ ಕೈಗೆ ಒಪ್ಪಿಸಿಕೊಳ್ಳುತ್ತಿದ್ದೇನೆ' ಎಂದು ಮೂರು ಸಾರಿ ಅರ್ಘ್ಯವಿತ್ತು, ಮೂರು ಆಚಮನ ನೀರನ್ನು ಕುಡಿದು, ಅನಂತರ ತಮ್ಮ ಯುದ್ಧ ಪೋಷಾಕುಗಳನ್ನೂ ತ್ರಾಣಗಳನ್ನೂ ತೊಟ್ಟು ಕಾಂಭೋಜಿಯನ್ನು ಹತ್ತಿ ಸಿದ್ಧರಾದರು. ಅಷ್ಟು ಹೊತ್ತಿಗೆ ರಾತ್ರಿ ಹಿಂದೆ ಉಳಿದಿದ್ದ ಸೇನೆಯೂ ಬಂದು ಕೂಡಿಕೊಂಡಿತು. ಮಲೆಪರೊಡನೆ ಯುದ್ಧಕ್ಕೆ ಹೋಗಿದ್ದ ಸೇನೆ, ವಿಜಯೋತ್ಸವದೊಡನೆ ನಿನ್ನೆ ಮಧ್ಯರಾತ್ರಿಗೆ ರಾಜಧಾನಿಗೆ ಬಂದಿತೆಂದೂ, ಬೊಪ್ಪಣ ಆ ಸೇನೆಯೊಡನೆ ಮರುದಿನ ಸಂಜೆಗೆ ಬಂದು ಪ್ರಭುಗಳನ್ನು ಕೂಡಿಕೊಳ್ಳುತ್ತೇನೆಂದೂ ಹೇಳಿ ಕಳಿಸಿದ್ದ ಸಮಾಚಾರವನ್ನು ಈ ಸೇನೆ ಪ್ರಭುಗಳಲ್ಲಿ ಅರಿಕೆಮಾಡಿಕೊಂಡಿತು. ಪ್ರಭುಗಳಿಗೆ ಆಗ ಇನ್ನಷ್ಟು ಧೈರ್ಯವಾಯಿತು. ಆಗ ಅವರು ತಮ್ಮ ನಾಲ್ಕು ಸಾವಿರ ಭಟರನ್ನು ಕುರಿತು ಹೇಳಿದರು: ' ಸುಭಟರೆ, ಈ ದಿನ ನಾವು ನಮ್ಮ ಪಿತ್ರಾರ್ಜಿತ ಭೂಮಿಗಾಗಿಯೂ ನಮ್ಮ ನಮ್ಮ ಮಡದಿ ಮಕ್ಕಳ ಸಂರಕ್ಷಣಾರ್ಥವಾಗಿಯೂ ಪ್ರಾಣಗಳನ್ನು ಮುಡುಪಿಟ್ಟು ಯುದ್ಧಕ್ಕೆ ಹೋಗುತ್ತಿರುವೆವು. ಇದೇ ನಮ್ಮೆಲ್ಲರ ಅಂತಿಮಯುದ್ಧವೂ ಆಗಬಹುದು. ಧರ್ಮ ನಮ್ಮ ಸಹಾಯಕ್ಕಿರಲಿ. ವಿಜಯ ನಾರಾಯಣ, ವಿಜಯಲಕ್ಷ್ಮಿ ಇಂದು ನಮ್ಮೊಡನೆ ಇರಲಿ' ಎನ್ನುತ್ತ ಕಾಂಭೋಜಿಯನ್ನು ವೇಗವಾಗಿ ಶತ್ರುಶಿಬಿರಾಭಿಮುಖವಾಗಿ ನಡಸಿದರು. ಪ್ರಭುಗಳಂತೆಯೆ ಮನೋದಾರ್ಢ್ಯವುಳ್ಳವರಾಗಿ ಸೈನಿಕರೆಲ್ಲರೂ ಅವರನ್ನು ಹಿಂಬಾಲಿಸಿದರು.

ಪ್ರಭುಗಳು ಹಿಂದಿನ ರಾತ್ರಿ ಯಾವ ಸ್ಥಳದಲ್ಲಿ ನಿಂತು ಶತ್ರುಶಿಬಿರವನ್ನು ನೋಡಿದ್ದರೋ ಅದೇ ಸ್ಥಳಕ್ಕೆ ಬಂದರು. ಶತ್ರುಸೇನೆಯೂ ಅದೇ ಹೊತ್ತಿಗೆ ತನ್ನ ಮುಂದಿನ ಪ್ರಯಾಣಕ್ಕೆ ಸಜ್ಜುಗೊಳಿಸಿಕೊಂಡು ಹೊರಟದ್ದಿತು. ಮುಂದೆ

ಕಾಣುತ್ತಿದ್ದ ಬಯಲುಪ್ರದೇಶದಲ್ಲಿ ಶತ್ರುಗಳನ್ನು ಇದಿರಿಸುವುದೆಂದು ನಿಶ್ಚಯಿಸಿ ಪ್ರಭುಗಳು ಕತ್ತಿಯನ್ನು ಒರೆಯಿಂದ ಎಳೆದು ಸಿದ್ಧರಾದರು. ಸೈನಿಕರೂ ತಮ್ಮ ಕತ್ತಿಗಳನ್ನು ಹಿರಿದು ಹುಯ್ಲಿಗೆ ಸಿದ್ಧರಾದರು.

ಪ್ರಭುಗಳು 'ಮುಂದಕ್ಕೆ' ಎಂದು ಅಪ್ಪಣೆ ಕೊಡುವುದರಲ್ಲಿದ್ದರು. ಅಷ್ಟ ರಲ್ಲಿ ಶತ್ರುಸೈನದ ಸವಾರನೊಬ್ಬ ಪಟ್ಟಣಾಭಿಮುಖನಾಗಿ ಕುದುರೆಯನ್ನು ವೇಗವಾಗಿ ಓಡಿಸಿಕೊಂಡು ಬರುತ್ತಿರುವುದನ್ನು ಕಂಡರು. 'ಪ್ರಾಯಶಃ ಶತ್ರು ಗಳು ನಮ್ಮ ಸೈನ್ಯವನ್ನು ಕಂಡಿರಬೇಕು. ನೀವು ಶರಣಾಗತರಾಗುವುದು ಮೇಲು ಎಂದು ಈ ಸವಾರನ ಕೈಯಲ್ಲಿ ಹೇಳಿಕಳಿಸಿರಬಹುದು. ದೂತನಾದ ಇವನನ್ನು ಕೊಲ್ಲಬಾರದು' ಎಂದು ಪ್ರಭುಗಳು ಕುದುರೆಯನ್ನು ಎಳೆದು ನಿಲ್ಲಿಸಿ, ತಮ್ಮ ಕತ್ತಿಯನ್ನು ಒರೆಯೊಳಕ್ಕೆ ಹಾಕಿದರು. ವೇಗವಾಗಿ ಬರುತ್ತಿದ್ದ ಅಶ್ವಾರೋಹಿಗೆ ಸಮೂಹಿಸಿ ನಿಂತಿರುವ ಈ ಹೊಯಿಸಳ ಸೇನೆ ಈಗ ಚೆನ್ನಾಗಿ ಕಾಣಬರುವಷ್ಟು ಸಮೀಪವಾಯಿತು. ಆದರೂ ಆ ಸೈನಿಕನು ಬರುತ್ತಿದ್ದ ವೇಗ ಕುಗ್ಗಲಿಲ್ಲ. ಭಯವನ್ನಾಗಲಿ, ಆಶ್ಚರ್ಯವನ್ನಾಗಲಿ ವ್ಯಕ್ತಪಡಿಸದೆ ಕುದುರೆಯ ವೇಗವನ್ನೂ ನಿರೋಧಿಸದೆ ಅಶ್ವಾರೋಹಿ ನೆಟ್ಟಗೆ ಇವರ ಎದುರಿಗೇ ಬಂದ. ಹತ್ತಿರಕ್ಕೆ ಬಂದ. ಪ್ರಭುಗಳು ನೋಡಿದರು. ಈ ಅಶ್ವಾರೋಹಿ ಹೊಯಿಸಳ ರಾಹುತರ ವಸ್ತ್ರತ್ರಾಣಗಳನ್ನು ಧರಿಸಿದ್ದ. ಇದೂ ಒಂದು ಕೃತ್ರಿಮವೆಂತಲೇ ಪ್ರಭುಗಳು ಬಗೆದರು. ಅಶ್ವಾರೋಹಿಗೆ ಈಗ ಹೊಯಿಸಳರಾಜಪತಾಕೆ, ಶ್ವೇತಚ್ಛತ್ರ ಕಂಡುಬಂದಿತು. ಆಗ ಅವನು 'ಇದೇನು ಆಶ್ಚರ್ಯ!' ಎಂದುಕೊಂಡು ಕುದುರೆ ಯಿಂದಿಳಿದು, ಕುದುರೆಯನ್ನು ನಡಸಿಕೊಂಡು ಬಂದ. ಹತ್ತು ಇಪ್ಪತ್ತು ಹೆಜ್ಜೆ ಮುಂದೆ ಬಂದಾಗ ಪ್ರಭುಗಳನ್ನೇ ಕಂಡ. ಆನಂದ, ಆಶ್ಚರ್ಯ, ಭಕ್ತಿ, ಮರ್ಯಾದೆ ಗಳೊಡನೆ ಅಲ್ಲಿಯೆ ಮಂಡಿಯೂರಿ, ತಲೆಬಾಗಿಸಿ ಪ್ರಭುಗಳಿಗೆ ನಮಸ್ಕರಿದ. ಪ್ರಭುಗಳಿಗೆ ಇದು ಇನ್ನಷ್ಟು ಆಶ್ಚರ್ಯವಾಗಿ ಕಂಡಿತು. ಪ್ರಭುಗಳು ತಮ್ಮ ಸೈನಿಕ ನೊಬ್ಬನನ್ನು ಅವನಲ್ಲಿಗೆ ಕಳಿಸಿ ಅವನನ್ನು ಬಳಿಗೆ ಬರಮಾಡಿಕೊಂಡರು. ಹತ್ತಿ ರಕ್ಕೆ ಬಂದ ಸವಾರ 'ಹೊಯಿಸಳೇಶ್ವರರಿಗೆ ಜಯವಾಗಲಿ' ಎಂದ. ಆಗ ಪ್ರಭು ಗಳಿಗೆ ಅವನು ತಮ್ಮ ಸೈನಿಕನೆಂದು ನಂಬಿಕೆಯಾಯಿತು. ಪ್ರಭುಗಳು ಕೇಳಿ ದರು: 'ಈ ಸೇನೆ ಯಾರದು? ನೀನು ಅಲ್ಲಿಂದ ಹೇಗೆ ಬಂದೆ? ಎಲ್ಲಿಗೆ?' ಎಂದು.

ಸೈನಿಕ: 'ಪ್ರಭುಗಳು ಅವಧರಿಸಬೇಕು. ಆ ಮಹಾಸೇನೆ ನಮ್ಮ

ಇಮ್ಮಡಿ ದಂಡನಾಯಕ ಕುವರವಿಷ್ಣುಗಳಿಗೆ ಶರಣಾಗತವಾದ ಕೊಂಗುದೇಶದ ಸೇನೆ. ನಮ್ಮ ಈ ಮಹಾವಿಜಯವಾರ್ತೆಯನ್ನು ರಾಜಮಾತೆಯವರಿಗೆ ತಿಳಿಸಲು ನಾನು ಹೊರಟಿದ್ದೇನೆ. ಇಮ್ಮಡಿ ದಂಡನಾಯಕರ ಅಪ್ಪಣೆಯಾಗಿದೆ.'

ಪ್ರಭುಗಳಿಗೆ ಮೂರ್ಛೆಬರುವಂತಾಯಿತು, ಗುಕ್ಕು ಕಟ್ಟಿತು, ಅವಾಕ್ಕಾದರು. ಕಾಂಭೋಜಿಯನ್ನು ಒರಗಿಕೊಂಡು ಹಾಗೆಯೆ ಒಂದು ಕ್ಷಣಕಾಲ ನಿಂತುಬಿಟ್ಟರು. 'ಇದು ನಿಜವೆ! ಇದು ಸಾಧ್ಯವೆ! ನಿನ್ನೆಯ ದಿನ ಅರಮನೆಗೆ ಬಂದ ಸಮಾಚಾರದ ಸವಾರ, ಶತ್ರುಗಳ ಮಹಾಸೇನೆ ಆನೆಗಳನ್ನು ಮುಂದಿಟ್ಟುಕೊಂಡು ರಾಜಧಾನಿಯ ಮೇಲೆ ಬರುತ್ತಿದೆಯೆಂದು ಹೇಳಿದನಲ್ಲಾ! ಅವನು ಹೇಗೆ ಆ ಸುಳ್ಳು ಸುದ್ದಿಯನ್ನು ತಂದ? ಆ ಸಮಾಚಾರವನ್ನು ಕೇಳಿಯೇ ಕುವರನು ಹತನಾಗಿರಬೇಕೆಂದೆಣಿಸಿ ನಮ್ಮ ತಾಯಿಯ ಹೃದಯಕ್ರಿಯೆ ನಿಂತುಹೋಯಿತು. ನಾನು ತಾಯನ್ನು ಕಳೆದುಕೊಂಡೆ. ನಿನ್ನೆಯ ದಿನ ಬಂದ ಆ ಸವಾರ ಸುಳ್ಳಾಡಿದನೆ! ಸುಳ್ಳಾಡಿ ನನ್ನ ತಾಯಿಯ ಅಂತ್ಯಕ್ಕೆ ಕಾರಣನಾದನೆ! ಅಂತಿದ್ದರೆ ಅವನು ಆತ್ಮಹತ್ಯೆಮಾಡಿಕೊಂಡನೇಕೆ! ಅಯ್ಯೋ ದೈವವೇ? ಇಂತಹ ಅಮೃತಸಮಯವನ್ನೆ ವಿಷವನ್ನಾಗಿಮಾಡಿ ತೋರಿದೆಯಾ! ನನ್ನ ದುರ್ವಿಧಿಯೆ! ತಾಯಿಯ ಈ ಅನ್ಯಾಯ ಮರಣಕ್ಕೆ ದುಃಖಿಸಲೆ? ಕುವರನ ಈ ಅದ್ಭುತವಾದ ವಿಜಯಕ್ಕೆ ಸಂತೋಷಪಡಲೆ? ದೈವವೆ, ಮಾನವಹೃದಯ ಕಲ್ಲಿನಂತಿರಬೇಕೆಂದು ನಿನ್ನ ನಿಯಮವೆ! ಮಾನವನು ಮಮತೆ, ಅನುಕಂಪ ಎರಡನ್ನೂ ತ್ಯಜಿಸಿ ಕಲ್ಲಿನಂತೆ ಇರಬೇಕೆ! ಕಲ್ಲಿನಂತೆ ಆಗಬೇಕೆ? ಸುಖ ದುಃಖ ಎರಡಕ್ಕೂ ಮನಸ್ಸು ಕಲ್ಲಾಗಬೇಕೆ? ಮಾನವನಿಗೆ ಕಣ್ಣೇಕೆಬೇಕು? ಮನಸ್ಸಿನ ಕೋಮಲತ್ವವೇಕೆಬೇಕು? ಸಂತೋಷವೂ ದುಃಖವೆಂದೇ ಎಣಿಸಿ ಅದಕ್ಕೆ ದುಃಖಿಸಬೇಕೆ? ದುಃಖವನ್ನೇ ಸಂತೋಷವೆಂದೆಣಿಸಿ ಅದಕ್ಕೆ ಹಿಗ್ಗಬೇಕೆ? ಮಂಗಳವೇ ಅಮಂಗಳವೇ? ಈಗ ನನಗೆ ಅಮೃತವೇ ವಿಷವೆಂದು ವ್ಯಕ್ತವಾಯಿತು, ಆದರೆ ವಿಷದಲ್ಲಿ ಅಮೃತವಿಲ್ಲವಲ್ಲ! ಅಥವಾ ಈ ಅಮೃತ, ವಿಷ ಎರಡೂ ಒಂದೇ ವಸ್ತು, ರೂಪಭೇದಮಾತ್ರವೊ!' ಎಂದು ಪ್ರಭುಗಳ ಚಿತ್ತ ಕ್ಷಣಕಾಲ ವಿಕಲ್ಪವಾಗಿಹೋಯಿತು. ಪುನಃ ಸಂಯಮಸ್ಥಿತಿಗೆ ಬರಲು ಸ್ವಲ್ಪ ಕಾಲವಾಯಿತು. 'ನಿನ್ನೆಯ ದಿನ ಸುದ್ದಿಯನ್ನು ತಂದ ಕಾವಲುಸವಾರ, ಬಹುಶಃ ನಾವು ಕಂಡಂತೆಯೆ ದೂರದಿಂದ ಶತ್ರುಸೇನೆಯನ್ನು ಕಂಡು, ಸಮಾಚಾರವನ್ನು ಓಡಿಬಂದು ತಿಳಿಸಿರಬೇಕು.

ಅದರಲ್ಲಿ ಅವನ ತಪ್ಪೇನೂ ಇಲ್ಲ. ಇದೆಲ್ಲವೂ ನಮ್ಮ ಕರ್ಮವಿಪಾಕ'ವೆಂದು ಕೊಂಡು, ಆ ಸವಾರನನ್ನು ಕುರಿತು ಒಳ್ಳೆಯದು, ಈ ಸುದ್ದಿಯನ್ನು ಆದಷ್ಟು ಬೇಗ ಅರಮನೆಗೆ ಮುಟ್ಟಿಸು. ಬೊಪ್ಪಣ ಡಣಾಯಕರಿಗೂ ತಿಳಿಸು. ಈ ಸುದ್ದಿಯನ್ನು ನಾವು ತಿಳಿದೆನೆಂತಲೂ ಹೇಳು' ಎಂದು ಅವನನ್ನು ಕಳಿಸಿ, ತಮ್ಮ ಸೈನಿಕರನ್ನು ಕುರಿತು 'ದೈವವು ನಮ್ಮ ಜೀವನದಲ್ಲಿ ಇಂದು ಕಣ್ಣುಮುಚ್ಚಾಲೆ ಆಟವಾಡುತ್ತಿದೆ. ಯಾವ ಉದ್ದೇಶಕ್ಕಾಗಿ ಹೊರಟಿದ್ದೆವೋ ಅದನ್ನು ದೈವವೆ ಪೂರೈಸಿಕೊಳ್ಳುತ್ತಿದೆ. ದುಃಖಗಳನ್ನು ಆದಷ್ಟು ಸಂತೋಷವೆಂದೇ ಅರಿಯಲು ಮನುಷ್ಯನು ಯತ್ನಿಸಬೇಕು, ಇಲ್ಲದಿದ್ದರೆ ಅವನು ಕಾರ್ಯಭ್ರಷ್ಟನೂ ಕರ್ತವ್ಯ ಭ್ರಷ್ಟನೂ ಆಗುವನೆಂದು ಪಂಡಿತರು ಹೇಳುತ್ತಾರೆ. ಕುವರರ ಈ ಮಹಾ ವಿಜ ಯಕ್ಕೆ ನಾವೆಲ್ಲರೂ ಅತಿಶಯ ಸಂತೋಷಪಡಬೇಕಾದುದೆ ನ್ಯಾಯವೆಂದು ನಮಗೆ ತೋರುತ್ತದೆ. ಆದ್ದರಿಂದ ಈ ಸಮಯದಲ್ಲಿ ನಮ್ಮ ತಾಯಿಯ ಮರಣವಾರ್ತೆ ಯನ್ನು ಯಾರೂ ನಮ್ಮ ಕುವರರ ಕಿವಿಯಲ್ಲಿ ಹಾಕಬಾರದು. ಯಥಾಕಾಲ ದಲ್ಲಿ ಅದು ಅವರಿಗೆ ತಿಳಿದೇ ತಿಳಿಯುವುದು' ಎಂದರು.

ಕುವರವಿಷ್ಣುವಿನ ಈ ಮಹಾ ಅದ್ಭುತವೂ ಮಹಾ ಆಶ್ಚರ್ಯವೂ ಆದ ವಿಜಯವನ್ನು ಕೇಳಿ ಸೈನಿಕರಿಗಿದ್ದ ಸಮಸ್ತ ಆಯಾಸವೂ ಮಾಯವಾಗಿ ಹೋಯಿತು. ಸೈನಿಕರೆಲ್ಲರೂ ಕುವರವಿಷ್ಣುವಿಗೆ ಜಯಜಯಕಾರ ಮಾಡಿದರು. ಅಷ್ಟು ಹೊತ್ತಿಗೆ ಕುವರವಿಷ್ಣುವಿನ ವಿಜಯಸೈನ್ಯ ಹತ್ತಿರ ಬಂದಿತು. ಆನೆಯ ಮೇಲಿದ್ದ ಆ ಸೈನ್ಯದಲ್ಲಿ ಕೆಲವರು, ಮುಂದಿದ್ದ ಸೇನೆ ತಮ್ಮ ವಿಜಯಕ್ಕೆ ಸ್ವಾಗತ ನೀಡಲು ಬಂದಿರುವ ಹೊಯಿಸಳ ಸೇನೆಯೆಂದೇ ನಿಕೇತನವನ್ನು ನೋಡಿ ತಿಳಿದುಕೊಂಡರು.

ಮುಂದಿದ್ದ ಮಹಾದಂತಿಯೊಂದರ ಮೇಲೆ ಕುಳಿತಿದ್ದ ಕುವರ, ಎದುರು ಸೇನೆಯ ಮುಂಭಾಗದಲ್ಲಿ, ಶ್ವೇತಛತ್ರದ ಕೆಳಗೆ ಕಾಂಭೋಜಿಯ ಬಳಿ ನಿಂತಿದ್ದ ಪ್ರಭುಗಳನ್ನು ಕಂಡ. ಆಶ್ಚರ್ಯ ಆನಂದಗಳಿಂದ, 'ಅಪ್ಪಾಜಿಗಳೇ ಬಂದಿದ್ದಾರೆ!' ಎನ್ನುತ್ತ ಆನೆಯಿಂದ ದುಮುಕಿ ಪ್ರಭುಗಳಿದ್ದೆಡೆಗೆ ಓಡಿಓಡಿ ಬಂದ. ಪ್ರಭುಗಳು ಕುವರನನ್ನು ನೋಡಿ ಮೂರು ವರ್ಷಗಳ ಮೇಲಾಗಿತ್ತು. ಕೇವಲ ಹದಿನೇಳು ವರ್ಷಗಳ ಬಾಲಕ, ಶತ್ರುಗಳ ಈ ಮಹಾಸೇನೆಯನ್ನು ಸೋಲಿಸಿ, ಅದ್ಭುತ ಜಯಗಳಿಸಿದ್ದು ಪ್ರಭುಗಳಿಗೆ ಮಹಾಭಾರತದ ವೀರ ಅಭಿಮನ್ಯುವನ್ನು ಜ್ಞಾಪ

ಕಕ್ಕೆ ತಂದಿತು. ತಮ್ಮ ಕುವರ ಆ ಅಭಿಮನ್ಯುವಿಗೆ ಯಾವ ವಿಧದಲ್ಲೂ ಕಡಮೆ ಯಿಲ್ಲವೆಂದುಕೊಂಡು ಪ್ರಭುಗಳು ಪುತ್ರನನ್ನು ಸ್ವಾಗತಿಸಿ ತಮ್ಮೆರಡು ತೋಳು ಗಳನ್ನೂ ನೀಡಿದರು. ಕುವರನು 'ಅಪ್ಪಾಜಿ, ಅಪ್ಪಾಜಿ!' ಎಂದು ಕೂಗುತ್ತ, ಆ ಎರಡು ತೋಳುಗಳ ನಡುವೆ ಬಂದಿಯಾದ. ಪ್ರಭುಗಳು ಕುವರನನ್ನು ಬಿಗಿದಪ್ಪಿಕೊಂಡು, ತಲೆ ತಡವಿದರು. ತಾಯಿಯ ಮರಣಕ್ಕೆ ಸಹ ಪ್ರವಿಸದಿದ್ದ ಅವರ ಕಣ್ಣೀರು ಈಗ ಧಾರೆಧಾರೆಯಾಗಿ ಸುರಿಯಿತು. ಈ ಆನಂದದೃಶ್ಯವನ್ನು ಕಂಡು ಸೈನ್ಯವೆಲ್ಲ ಸಂತೋಷದಿಂದ ಕುವರನಿಗೆ ಜಯಜಯಕಾರವನ್ನು ಮೇಲಿಂದ ಮೇಲೆ ಮಾಡಿತು.

ಆನಂದಬಾಷ್ಪಗಳು ತುಳುಕುತ್ತಿದ್ದ ಕಣ್ಣುಗಳಿಂದ ಕುವರವಿಷ್ಣು ಮುಖ ವೆತ್ತಿ ಪ್ರಭುಗಳನ್ನು ನೋಡಿ, 'ಅಪ್ಪಾಜಿ, ಬಹಳ ಸೊರಗಿದ್ದೀರಿ. ಬಂದುದು ಯಾವಾಗ?' ಎಂದು ಕೇಳಿದ.

'ನೀನು ನೆಮ್ಮದಿಯೆ? ಮೈಯಲ್ಲಿ ಗಾಯಗಳೇನಾದರೂ ಆದುವೆ? ನಿನ್ನ ಈ ಸಾಹಸ ಹೊಯಿಸಳ ರಾಜ್ಯಕ್ಕೇ ಕೀರ್ತಿ. ಈ ಅತಿ ಅಸಾಧ್ಯ ನಿನಗೆ ಹೇಗೆ ಸಾಧ್ಯವಾಯಿತು?'

'ಅಪ್ಪಾಜಿಯವರ ಒಲುಮೆ, ಅವ್ವೆಯ, ಅಕ್ಕದಿರ ಆಶೀರ್ವಾದ, ಸೈನಿಕರ ವಿಶ್ವಾಸ, ಎಲ್ಲಕ್ಕೂ ಹೆಚ್ಚಾಗಿ ದೈವಕೃಪೆ. ಈ ಜಯ ವಿಜಯನಾರಾಯಣ ನದು ಅಪ್ಪಾಜಿ. ನನ್ನ ಕೈಯಲ್ಲಿ ಕತ್ತಿ ನಡೆಯಿಸಿದವನು ಆತನೇ. ಆತನ ಖಡ್ಗವೆ ಶತ್ರುಸೈನ್ಯವನ್ನು ಕೊಚ್ಚಿತು. ಕಾರಣನೂ ಕರ್ತೃವೂ ಆತನೇ ಅಲ್ಲವೆ!'

'ಉನ್ನತವಾದ ಮಾತುಗಳನ್ನಾಡಿದೆ. ದೈವಸಂಕಲ್ಪವಿಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲ. ಅದು ಸರಿ; ನಾವು ಕರ್ತ್ರರೂ ಅಲ್ಲ, ಭೋಕ್ತ್ರರೂ ಅಲ್ಲ. ಕೇವಲ ಆತನ ಆಜ್ಞಾನುವರ್ತಿಗಳು. ಸುಖಸಂತೋಷಗಳೂ, ಲಾಭ ನಷ್ಟಗಳೂ ಆತನವು. ನಮ್ಮ ಅಂತರಾತ್ಮನಾಗಿದ್ದುಕೊಂಡು ಪ್ರೇರಣೆ ಮಾಡುವುದೂ ಆತನೇ. ವಿವೇಚನೆಯಿಂದ ತಾಳ್ಮೆಯಿಂದ ಅಂತರಾತ್ಮನ ಸಲಹೆ ಕೇಳಿದಾಗ ಆತನೇ ನಡ ಸುವನು. ಹಾಗಲ್ಲದೆ ಆತುರದಿಂದ ಅವಿವೇಚನೆಯಿಂದ ಮಾಡುವುದೂ ಮಾಡಿ ಸುವುದೂ ನಮ್ಮ ದುಷ್ಕರ್ಮಪರಿಪಾಕ, ಪ್ರಾರಬ್ಧ . . . ಇರಲಿ, ಈ ಆನೆಗಳು ಯಾರವು? ಈ ಅಶ್ವ ಅಕ್ಷೋಹಿಣಿ ಯಾರದು? ಈ ಮಹಾಸೈನ್ಯ ಯಾರದು?'

'ಆನೆಗಳು ಇಪ್ಪತ್ತು, ಕುದುರೆಗಳು ಮೂರುಸಾವಿರ, ಕೊಂಗುಸೇನೆ ಆರು ಸಾವಿರ. ಇವೆಲ್ಲವೂ ಈಗ ತಮ್ಮದು. ತಮಗೆ ಒಪ್ಪಿಸುತ್ತಿದ್ದೇನೆ.'

ಪ್ರಭುಗಳ ಆನಂದಕ್ಕೆ ಮೇರೆಯಿಲ್ಲವಾಯಿತು. ಹಿಂದಿನ ರಾತ್ರಿ ದುಃಖ ದಿಂದ ಚಿಂತೆಯಿಂದ ಕದಡಿಹೋಗಿದ್ದ ಅವರ ಹೃದಯ ಈಗ ಸ್ವಲ್ಪ ಸಮಾಧಾನ ಸ್ಥಿತಿಗೆ ಬಂದಿತು. ಇಷ್ಟಾದರೂ ತಾಯಿಯ ಮರಣದಿಂದುಂಟಾದ ಸಂಕಟ ಒಂದೆಡೆಯಲ್ಲಿ ಇದ್ದೇ ಇದ್ದಿತು. ಪ್ರಭುಗಳು, ಸೆರೆಸಿಕ್ಕಿ ಕರಗತವಾದುದೆಲ್ಲವನ್ನೂ ಪರಾಂಬರಿಸಿದರು. ಕುವರನು ನಡಸಿದ ಯುದ್ಧನೀತಿ ಚಾತುರ್ಯಗಳನ್ನೂ, ಶತ್ರು ಗಳಿಗೆ ಒಂದು ತೊಟ್ಟು ನೀರೂ, ಒಂದೇ ಕಾಳು ಧಾನ್ಯವೂ ಸಿಗದಂತೆ ಮಾಡಿದ ಮೇಲೆ, ಬೇರಾವ ದಾರಿಯನ್ನೂ ಕಾಣದೆ ಅವರು ಶರಣಾಗತರಾದ ಬಗೆಯನ್ನೂ ಕೇಳಿ ಪ್ರಭುಗಳು ಬೆಪ್ಪಾದರು. 'ಮಗನೆ! ಈ ಚಾತುರ್ಯ ಹೊಸತು, ಮೆಚ್ಚಿದೆ!' ಎಂದರು ಪ್ರಭುಗಳು.

ಶತ್ರು ಸೈನ್ಯಕ್ಕೆಲ್ಲ, ತಮ್ಮ ಸೈನ್ಯಕ್ಕೆಲ್ಲ, ಆ ಮಧ್ಯಾಹ್ನ ವನಭೋಜನವನ್ನು ಮಾಡಿಸಿದರು ಪ್ರಭುಗಳು. ತಾವು ಮಾತ್ರ ಉಪಾಯದಿಂದ ಏನನ್ನೂ ತೆಗೆದು ಕೊಳ್ಳದೆ, ಸ್ನಾನಕ್ಕೆಂದು ನೀರಿಗಿಳಿದು ನಡುನೆತ್ತಿಯ ಮೇಲಿದ್ದ ಸೂರ್ಯ ನಾರಾಯಣನಿಗೆ ಮೂರು ಅರ್ಘ್ಯವನ್ನಿತ್ತು, ತಾವೂ ಮೂರು ಬೊಗಸೆ ಜಲ ವನ್ನು ಕುಡಿದು, ವಿಶ್ರಾಂತಿ ಹೊಂದಿದರು. ರಾಜಧಾನಿಯನ್ನು ಕುರಿತು ಎಲ್ಲರೂ ಆ ಬಳಿಕ ಪ್ರಯಾಣ ಮಾಡಿದರು.

§

ಮಲೆಪರ ಮೇಲೆ ಯುದ್ಧಕ್ಕೆ ಹೋಗಿದ್ದ ಬೊಪ್ಪಣ ಅವರ ಮೂಲೋ ತ್ಪಾಟ ಮಾಡಿ, ದಂಡಿನೊಡನೆ ಹಿಂದಿನ ರಾತ್ರಿಯೆ ಸ್ವಲ್ಪ ಹೊತ್ತಾದ ಮೇಲೆ ರಾಜಧಾನಿಯನ್ನು ಬಂದು ಸೇರಿದ್ದ. ಪ್ರಭುಗಳು ರಾಜಧಾನಿಗೆ ಬಂದುದೂ, ರಾಜಮಾತೆಯವರ ನಿಧನ ವೃತ್ತಾಂತವೂ, ಪ್ರಭುಗಳು ತಾಯಿಯ ದಹನಕ್ರಿಯೆ ಯನ್ನು ಪುರೋಹಿತರಿಗೇ ವಹಿಸಿ, ಶತ್ರುಸೈನ್ಯವನ್ನು ನಿಗ್ರಹಿಸಲು ಅದೇ ಸಂಜೆ ಸೈನ್ಯದೊಡನೆ ರಾಜಧಾನಿಯಿಂದ ಶತ್ರುಗಳ ಮೇಲೆ ಹೊರಟದ್ದೂ ಬೊಪ್ಪಣನಿಗೆ ತಿಳಿದುಬಂದುವು. 'ಕುವರ ಏನಾದನೊ!' ಎಂಬ ಭಯದಿಂದ, ರಾಜಮಾತೆಯವರ ಈ ಅನ್ಯಾಯ ಮರಣದಿಂದ, ಬೊಪ್ಪಣನಿಗೆ ತನ್ನ ದಿಗ್ವಿಜಯದ ಸಂತೋಷ ತೊಡೆದುಹೋಯಿತು. 'ದೈವ ಹೀಗೂ ಮೋಸಮಾಡುತ್ತದೆಯೆ!' ಎಂದು

ಅವನು ಕುಸಿದ. 'ರಾಜ್ಯವೇಕೆ! ಕೋಶವೇಕೆ! ಧರ್ಮವೇಕೆ! ನೀತಿರೀತಿಗಳೇಕೆ? ಯಾರು ಬಾಳಿದರೇನು? ಯಾರು ಆಳಿದರೇನು! ಹೇಗೆ ಹೋದರೆ ಏನು?' ಎಂದು ಅವನಿಗೆ ಜೀವ, ಜೀವನಗಳಲ್ಲಿ ಜುಗುಪ್ಸೆ ಹುಟ್ಟಿತು. ಒಡನೆಯೆ, ತಾನು ಪ್ರಭು ಗಳ ರಕ್ಷಣೆಗೆ ಹೋಗದಿದ್ದರೆ ಕರ್ತವ್ಯಭ್ರಷ್ಟನಾಗುವೆನೆಂದೂ ಹೊಳೆಯಿತು. 'ಈ ಲೋಕಕ್ಕೆ ಬರುವುದೇ ತಪ್ಪು, ಬಂದ ಮೇಲೆ ಆದಷ್ಟು ಬೇಗ ತೊಲಗು ವುದೇ ಲೇಸು' ಎಂದುಕೊಂಡು, ಒಂದು ವೇಳೆ ಕುವರನು ಯುದ್ಧದಲ್ಲಿ ಮಡಿದಿ ದ್ದರೆ, ತಾನೂ ಅಲ್ಲಿಯೆ ಮಡಿಯುವುದೆಂದೇ ನಿರ್ಧರಿಸಿ, ಬೆಳಗಾಗುವುದರೊಳಗಾಗಿ ಸಕಲಸೈನ್ಯಗಳೂ ಪ್ರಭುಗಳ ಸಹಾಯಕ್ಕೆ ಹೊರಡಬೇಕೆಂದು ಸೈನ್ಯಕ್ಕೆ ಕಟ್ಟಾಜ್ಞೆ ಮಾಡಿ, ಪೋಷಾಕು ಯುದ್ಧತ್ರಾಣಗಳನ್ನುಳಿದು, ಸಾಮಾನ್ಯ ವಸ್ತ್ರವನ್ನು ಧರಿಸಿ, ಆ ನಡುರಾತ್ರಿಯಲ್ಲಿ ರಾಜಮಾತೆಯ ಚಿತಾದರ್ಶನಕ್ಕೆಂದು ರಾಜಕುಲದ ಪಿತೃಭೂಮಿಗೆ ನಡೆದುಹೋದನು.

ಮಹಾರಾಣಿ ಶಾಂತಲೆ, ಅತ್ತೆಯವರ ನಿಧನವಾರ್ತೆಯನ್ನು ಆ ಸಂಜೆಯೇ ವೇಲಾಪುರಕ್ಕೆ ಹೇಳಿಕಳಿಸಿ, ರಥವನ್ನು ಕೊಟ್ಟು ಕಳಿಸಿ, ಲಕ್ಷ್ಮಿಯನ್ನೂ ಪಂಡಿತ ರನ್ನೂ ಬರಮಾಡಿಕೊಂಡಳು. ಆ ರಾತ್ರಿಯೇ ರಾಜಮಾತೆಯವರ ಕಳೇಬರಕ್ಕೆ ದಹನಕ್ರಿಯೆ ನಡೆಯಲು ಏರ್ಪಾಡಾಯಿತು. ಊರಿಗೆ ಊರೆ ಬಂದು ರಾಜ ಮಾತೆಯವರ ಈ ಅನಿರೀಕ್ಷಿತ ಮರಣಕ್ಕೆ ದುಃಖಾಂಜಲಿಯನ್ನು ಅರ್ಪಿಸಿ, ಪರ ದೈವದಂತಿದ್ದ ಮಾತೆಯನ್ನು ಕಳೆದುಕೊಂಡ ತಬ್ಬಲಿಗಳಂತೆ ಗೋಳಾಡಿಹೋದರು.

ಕ್ಷಿಪ್ರದಲ್ಲಿ ಚಂದನಕಾಷ್ಠದ ಚಿತೆ ರಾಜಪಿತೃಭೂಮಿಯಲ್ಲಿ ಸಿದ್ಧವಾಯಿತು. ಶಾಂತಲೆ, ಲಕ್ಷ್ಮಿ, ಇತರ ರಾಣಿಯರು ಸ್ನಾನಮಾಡಿ, ಅಲಂಕಾರ ಮಂಗಳದ್ರವ್ಯ ಗಳನ್ನುಳಿದು, ಕಳೇಬರವನ್ನು ಹೊತ್ತಿದ್ದ ವಾಹಕರ ಹಿಂದೆ ಬಹು ದುಃಖದಿಂದ ನಡೆದರು. ಆ ಗುಂಪಿನಲ್ಲಿ ಮಾಚಿಕಬ್ಬೆ, ಲಕ್ಷ್ಮೀಮತಿ ದಂಡನಾಯಕಿತಿ, ಜಕ್ಕಿ ಯಬ್ಬೆ ಇನ್ನೂ ಇತರರೂ ಇದ್ದರು. ರಾಜಮಾತೆಯ ಪಾದಾಂಗುಷ್ಟವನ್ನು ಸೋಕಿದ್ದ ಜ್ಯೋತಿಜ್ವಾಲೆಯೆ ದಕ್ಷಿಣಾಗ್ನಿಯಾಗಿ ವಾಹಕರ ಮುಂಭಾಗದ ಘಟ ಒಂದರಲ್ಲಿ ಜಿನಧರ್ಮಿಕರೊಬ್ಬರ ಕೈಯಲ್ಲಿತ್ತು. ರಾಜಪಿತೃಭೂಮಿಯನ್ನು ಸೇರಿ, ಕಳೇಬರಕ್ಕೆ ಚಿತಾರೋಹಣವಾಯಿತು. ಅಂತ್ಯಕ್ರಿಯೆಗಳು ವಿಧ್ಯುಕ್ತವಾಗಿ ನಡೆ ದವು. ಚಿತೆಗೆ ಅಗ್ನಿಸ್ಪರ್ಶವನ್ನು ಮಗನೂ ಮಗಳೂ ಸೊಸೆಯೂ ಆಗಿದ್ದ ಮಹಾ ರಾಣಿಯವರೇ ಮಾಡಬೇಕೆಂದು ಜಿನಧರ್ಮಭ್ರಾತೃಗಳು ನಿರ್ಧರಿಸಿದರು. ಹೃದ

ಯದಲ್ಲಿ ಒಂದು ಜ್ವಾಲೆಯನ್ನಿಟ್ಟುಕೊಂಡು, ಕೈಯಲ್ಲಿ ಪ್ರತ್ಯಕ್ಷಜ್ವಾಲೆಯೊಂದನ್ನು ಹಿಡಿದು ಶಾಂತಲದೇವಿ ಚಿತೆಗೆ ಮೂರುಸಲ ಬಲವಂದು, ನಮಸ್ಕರಿಸಿ, 'ಅತ್ತೆಯವರೆ, ನಮ್ಮೆಲ್ಲರಿಗಾಗಿ ಪ್ರೇಮವನ್ನು ತುಂಬಿಟ್ಟುಕೊಂಡಿದ್ದ ನಿಮ್ಮ ಎದೆಗೆ ನಾನಿಡುವ ಈ ಜ್ವಾಲೆ ನನ್ನೆದೆಗೂ ತಾಗದೆಬಿಟ್ಟೀತೆ?' ಎಂದು ದುಃಖದಿಂದ ಶಪಿಸಿಕೊಳ್ಳುತ್ತ ಅಗ್ನಿಯನ್ನು ಚಿತೆಯಲ್ಲಿ ಪ್ರತಿಷ್ಠಿಸಿದಳು. ಲಕ್ಷ್ಮೀಯೊಡನೆ ಇತರ ರಾಣಿಯರೂ ಚಿತೆಗೆ ಬಲವಂದು 'ಹೋಗಿಬರುತ್ತೀರಾ ಅತ್ತೆ' ಎಂದು ಗೋಳಾಡಿದರು. ಮಂಗಳದ್ರವ್ಯಗಳನ್ನಿಟ್ಟರು. ಅಂತ್ಯ ನಮಸ್ಕಾರಗಳನ್ನು ಅರ್ಪಿಸಿದರು. ಮಾಚಿಕಬ್ಬೆ, ಜಕ್ಕಿಯಬ್ಬೆ, ಲಕ್ಷ್ಮೀಮತಿ ಇವರುಗಳು ಮಕ್ಕಳ ದುಃಖಗಳನ್ನು ಸಮಾಧಾನಪಡಿಸಲು ಯತ್ನಿಸಿದರು. ಆಗ ರಾತ್ರಿ ಬಹು ಹೊತ್ತಾಗಿದ್ದಿತು.

ಬೊಪ್ಪಣ ರುದ್ರಭೂಮಿಗೆ ಬಂದಾಗ ಚಿತೆ ಪ್ರಜ್ವಲಿಸುತ್ತಿತ್ತು. ಕಪಾಲದ ಆಸ್ಫೋಟನವನ್ನು ಕೇಳಿದ ಮೇಲೆಯೇ ರಾಜಕುಲದವರೆಲ್ಲ ಶುದ್ಧಸ್ನಾನ ಮಾಡಿ ತಮ್ಮ ತಮ್ಮ ಗೃಹಗಳಿಗೆ ತೆರಳಬೇಕಾಗಿತ್ತು. ಆದಕ್ಕಾಗಿಯೆ ಎಲ್ಲರೂ ಕಾದಿದ್ದರು. ಬೊಪ್ಪಣ ಚಿತೆಗೆ ಬಲವಂದು, 'ಎಲೌ ಅಗ್ನಿಯೆ, ನೀನು ಜಗತ್ತಿನಲ್ಲಿಯ ಉತ್ತಮ ವಸ್ತುಗಳನ್ನೆ ಆಯ್ದು ಆಯ್ದು ಒಯ್ಯುತ್ತೀಯೆ. ಹತವಹನೆ, ನೀನು ನಿತ್ಯ ಅತೃಪ್ತನು, ಹಸಿವಡಗದವನು. ಒಬ್ಬರನ್ನುಳಿಸಿ ಒಬ್ಬರನ್ನು ಕೊಂಡೊಯ್ಯಬೇಡ. ಎಲ್ಲರನ್ನೂ ಒಮ್ಮೆಗೇ ಕೊಂಡೊಯ್ಯಿ, ನಿನಗೆ ಶಾಶ್ವತ ಅಜೀರ್ಣರೋಗ ಉಂಟಾಗಲಿ' ಎಂದು ಹೃದಯದ ಸಂಕಟದಿಂದ ಬಾಯಿಗೆ ಬಂದಂತೆ ಮಾತನಾಡುತ್ತ, ಸಂಯಮ ಕೆಟ್ಟು, ತಾಯಿಯವರು ನಿಂತಿದ್ದ ಸ್ಥಳಕ್ಕೆ ಬಂದು, ಅವರಿಗೆ ವಂದಿಸಿದ. ಲಕ್ಷ್ಮೀಮತಿಯವರು ಮಗನ ನಮಸ್ಕಾರವನ್ನು ಸ್ವೀಕರಿಸಿ, 'ಏಚಣ್ಣ, ನೀನು ವಿವೇಕಿ, ಹೀಗೆ ಮಾತನಾಡಬಾರದು. ಪ್ರಾಜ್ಞರು ದುಃಖದಲ್ಲಿಯೂ ಧೃತಿಗೆಡರು. ರಾಜಮಾತೆಯವರು ಚೆನ್ನಾಗಿ ಬದುಕಿದವರು. ಅವರು ಯಾವ ಲೋಪವೂ ಇಲ್ಲದಂತೆ ಕರ್ತವ್ಯವನ್ನು ಮಾಡಿ ಮುಗಿಸಿ, ಸುಖಪಯಣ ಮಾಡಿದರು. ಅಂತ್ಯದಲ್ಲಿ ರುಗ್ಣಶಯ್ಯೆ ಇಲ್ಲದಿರುವುದು ಮಾನವಜನ್ಮಕ್ಕೆ ಒಂದು ಪೂರ್ವಪುಣ್ಯ. ಇಂತಹ ಅಂತ್ಯ ಯಾರಿಗೆ ಬೇಡ? ಇಲ್ಲಿಗೆ ಅವರ ಕರ್ಮಗಳು ಕೊನೆಗಂಡವು. ಅವರಿಗೆ ಶಾಶ್ವತ ಪುಣ್ಯಲೋಕ ಪ್ರಾಪ್ತಿಯಾಯಿತು. ಅವರ ಹೆಸರಿನಲ್ಲಿ ಶಾಶ್ವತ ದಾನಧರ್ಮಗಳನ್ನು ನಡಸಬೇಕು' ಎಂದರು.

ಬೊಪ್ಪಣ ಬಳಿಕ ಮಹಾರಾಣಿಗೆ ನಮಸ್ಕರಿಸಿ, 'ಇಲ್ಲಿ ನೆರೆದಿರುವವರ ದುಃಖವೆಲ್ಲ ಒಂದುಪಾಲಾದರೆ ಅದರ ಶತಪಾಲು ದುಃಖವನ್ನು ಅಕ್ಕನವರ ಹೃದಯ ಹೊತ್ತಿದೆ. ನನ್ನ ಕರ್ತವ್ಯವೇನೆಂದು ಈಗ ಅಕ್ಕನವರು ಅರುಹ ಬೇಕು' ಎಂದ. ಶಾಂತಲದೇವಿ ಉಕ್ಕುಕ್ಕಿ ಬರುತ್ತಿರುವ ದುಃಖವನ್ನು ನುಂಗಿ ಕೊಳ್ಳುತ್ತ, ದೀನತೆಯಿಂದ ಕೂಡಿದ ತನ್ನ ಮುಖವನ್ನು ಸೆರಗಿನಿಂದ ಮುಚ್ಚಿ ಕೊಂಡು 'ಬೊಪ್ಪಣ, ಪ್ರಭುಗಳ ಸಹಾಯಕ್ಕೆ ಬೇಗ ಹೋಗು. ಇನ್ನೂ ಏನೇನುಳಿದಿದೆಯೊ ಎಂದು ಭಯವಾಗುತ್ತಿದೆ. 'ಜಯವಾದರೆ ಬರುತ್ತೇನೆ, ಇಲ್ಲದಿದ್ದರೆ ಬದುಕಿ ಬರುವುದಿಲ್ಲ'ವೆಂದು ಪ್ರತಿಜ್ಞೆಮಾಡಿ ಹೋಗಿದ್ದಾರೆ. ಇಂತಹ ಸಂದರ್ಭಗಳಲ್ಲಿ ಅವರು ಅನ್ನನೀರುಗಳನ್ನೂ ಮುಟ್ಟರು. ಕುವರನೇ ನಾದರೂ ಅಪಾಯಕ್ಕೊಳಗಾಗಿದ್ದರೆ, ಅವರು ಜೀವದೊಡನೆ ಖಂಡಿತ ಹಿಂದಿರು ಗರು. ಈ ಚಿತೆ ಹೀಗೆಯೆ ಉರಿಯುತ್ತಿರುತ್ತದೆ. ಅವರಿಗೂ, ನನಗೂ, ಲಕ್ಷ್ಮಿಗೂ, ಇನ್ಯಾರಾರಿಗೊ! ನಾನು ಇನ್ನು ಈ ಸ್ಥಳದಿಂದ ಕದಲುವವಳಲ್ಲ. ಕುವರನು ಬದುಕ್ಕಿದ್ದರೆ, ಪ್ರಭುಗಳೂ ಬದುಕುತ್ತಾರೆ, ನಾನೂ ಬದುಕುತ್ತೇನೆ, ಅರಮನೆಗೆ ಹಿಂದಿರುಗುತ್ತೇನೆ. ಯಾರ ಪುಣ್ಯವಾದರೂ ನಮಗೆ ಈ ವೇಳೆಯಲ್ಲಿ ಎರವು ಬರಲಿ, ಯಾರ ಧರ್ಮವಾದರೂ ನಮಗೆ ಎರವು ಬರಲಿ. ಈ ಕತ್ತಲೆ ಕಳೆದು ಬೆಳುಕು ಬರಲಿ. ಹೋಗು ಬೊಪ್ಪಣ, ನಿನ್ನ ತಮ್ಮನನ್ನು ಉಳಿಸಿಕೊ, ನಿನ್ನ ಪ್ರಭುಗಳನ್ನು ಉಳಿಸಿಕೊ. ನಾನು ಈ ವೇಳೆ ಅಭಾಗಿನಿಯಾಗಿದ್ದೇನೆ, ಹರಸಲು ಯೋಗ್ಯತೆಯಿಲ್ಲದವಳಾಗಿದ್ದೇನೆ' ಎಂದಳು. ಬೊಪ್ಪಣ ಅಕ್ಕನವರ ನುಡಿಗಳನ್ನು ಕೇಳಿ ನಡುಗಿಹೋದ. ಅವನೇ ಏಕೆ! ಪಿತೃಭೂಮಿಯಲ್ಲಿದ್ದವರೆಲ್ಲ, ಪೌರರೂ ಸೇರಿ, ನಡುಗಿಹೋದರು. ಪುರೋಹಿತರೂ ಪಂಡಿತ ಪೆರುಮಲೆ ಯವರೂ ಅವಾಕ್ಕಾದರು, ಸ್ತಂಭೀಭೂತರಾದರು. ಅಲ್ಲಿ ಸೇರಿದ್ದ ಪೌರವೃಂದ ವೆಲ್ಲ ಏಕಕಂಠದಿಂದ 'ತಾಯೆ, ನಾವೂ ನಿಮ್ಮೊಡನೆಯೆ' ಎಂದು ಕುಳಿತರು. ಎಲ್ಲರೂ ತಮ್ಮ ತಮ್ಮ ದೈವವನ್ನು ನೆನೆಯುತ್ತ ಈ ಮಹಾಭಯವನ್ನು ಪರಿಹರಿಸ ಬೇಕೆಂದು ಭಗವಂತನನ್ನು ಬೇಡುತ್ತ ಒಂದೇಧ್ಯಾನದಲ್ಲಿ ಕುಳಿತರು.

ಬೊಪ್ಪಣ ಆ ನಡುರಾತ್ರಿಯಲ್ಲಿ ರಾಜಪಿತೃಭೂಮಿಯ ಹೊರಗಿದ್ದ ತಟಾಕದಲ್ಲಿ ಸ್ನಾನಮಾಡಿ, ಮನೆಗೆ ಬಂದು, ತನ್ನ ಯುದ್ಧ ಪೋಷಾಕುಗಳನ್ನು ತೊಟ್ಟು, ಅಶ್ವಾರೂಢನಾಗಿ, ತನ್ನ ಸೈನ್ಯವಿದ್ದ ಶಿಬಿರಕ್ಕೆ ನೇರವಾಗಿ ಹೋಗಿ,

ಮಾರ್ಗಾಯಾಸದಿಂದ ದಣಿದು ನಿದ್ದೆಮಾಡುತ್ತಿದ್ದ ನಾಯಕರುಗಳನ್ನು ಅಷ್ಟು ಹೊತ್ತಿನಲ್ಲಿ ಎಬ್ಬಿಸಿ, ಸೈನಿಕರುಗಳನ್ನೂ ಎಬ್ಬಿಸಿ, ಇರುವ ಕಠಿಣ ಸನ್ನಿವೇಶವನ್ನು ಅವರಿಗೆ ವಿಸ್ತರಿಸಿದ. ಎಲ್ಲರೂ ಏಕಚಿತ್ತದಿಂದ ಈ ಕ್ಷಣವೆ ಹೊರಡುವುದೆಂದು ನಿರ್ಧರಿಸಿದರು. ಎಷ್ಟೇ ಜಾಗ್ರತೆಯೆಂದರೂ ಸೈನ್ಯವೆಲ್ಲ ಸಜ್ಜುಗೊಂಡು ಕದಲಲು ಬೆಳಗಿನ ಜಾವ ನಾಲ್ಕು ಗಂಟೆಯಾಯಿತು. ಸುಮಾರು ಎರಡನೆಯ ಗಾವುದ ವನ್ನು ಸಮೀಪಿಸುತ್ತಿದ್ದಾಗ, ಹೊಯಿಸಳ ಸೇನೆಯ ಸಮಾಚಾರದ ಸವಾರನು ಇವರ ಎದುರಿಗೆ ಬಂದ. ಅವನನ್ನು ದೂರದಿಂದ ಕಂಡೊಡನೆಯೆ ಬೊಪ್ಪಣನ ಹೃದಯಗತಿ ಇಮ್ಮಡಿಸಿತು, ಮುಮ್ಮಡಿಸಿತು. ಹತ್ತಿರಕ್ಕೆ ಬಂದ ಸವಾರ ಕುದುರೆಯ ಕಡಿವಾಣವನ್ನು ಹಿಡಿದೆಳೆದು ನಿಲ್ಲಿಸಿ ಕುದುರೆಯಿಂದಿಳಿದು ಬೊಪ್ಪಣ ನಿಗೆ ನಮಸ್ಕರಿಸಿ, 'ಹೊಯಿಸಳೇಶ್ವರರಿಗೆ ಜಯವಾಯಿತು' ಎಂದ. ಬೊಪ್ಪಣ 'ಕುವರ ವಿಷ್ಣು?' ಎಂದ. 'ಅವರಿಗೇ ಜಯವಾದುದು' ಎಂದು ಸವಾರ ಉತ್ತರ ವಿತ್ತ. ಬೊಪ್ಪಣನಿಗೆ ಭರಿಸಲಾರದಷ್ಟು ಆನಂದವಾಯಿತು, ಅತ್ಯಾಶ್ಚರ್ಯವಾ ಯಿತು, ನಂಬಲಾಗದಷ್ಟು ಆಶ್ಚರ್ಯವಾಯಿತು. ಸವಾರನನ್ನು 'ಇಬ್ಬರೂ ಸೌಖ್ಯವೆ? ಸತ್ಯವಾಗಿ ಹೇಳು' ಎಂದು ಮತ್ತೆ ಮತ್ತೆ ಪ್ರಶ್ನೆಮಾಡಿದ. 'ಇಮ್ಮಡಿ ದಂಡನಾಯಕರ ಪಾದದಾಣೆ, ಪ್ರಭುಗಳೂ ಸುಖವಾಗಿದ್ದಾರೆ, ಕುವರವಿಷ್ಣು ಗಳೂ ಸೌಖ್ಯವಾಗಿದ್ದಾರೆ. ಹೊರಟು ಬರುತ್ತಿದ್ದಾರೆ. ನಾನೀ ಸಂತೋಷದ ಸುದ್ದಿಯನ್ನು ಮುಂದಾಗಿ ರಾಜಧಾನಿಗೆ ತಿಳಿಸಲು ರಾಜಧಾನಿಗೆ ಹೊರಟವನು' ಎಂದು ಉತ್ತರವಿತ್ತ.

ಬೊಪ್ಪಣ ಕುದುರೆಯಿಂದ ದುಮುಕಿ ಓಡಿ ಆ ಸಮಾಚಾರ ಸವಾರನನ್ನು ಆಲಿಂಗಿಸಿಕೊಂಡು, 'ನೀನು ನೂರುವರ್ಷ ಸುಖವಾಗಿ ಬಾಳು. ಈ ಸಂತೋಷದ ಸುದ್ದಿಯನ್ನು ತಿಳಿಸಿದ್ದಕ್ಕಾಗಿ ನಿನಗೆ ಈಗಲೆ ನಮ್ಮ ಸೈನ್ಯದಲ್ಲಿ ನಾಯಕ ಪದವಿ ಯನ್ನು ಕೊಟ್ಟದ್ದೇವೆ. ನಿನ್ನ ಸಂತೋಷದ ಸಮಾಚಾರವನ್ನು ನಾವು ಅರಮನೆಗೆ ಮುಟ್ಟಿಸುತ್ತೇವೆ. ನೀನು ಈ ಸೈನ್ಯದೊಡನೆ ರಾಜಧಾನಿಗೆ ಬಾ' ಎಂದು ಹೇಳಿ, ತನ್ನ ಎಲ್ಲ ಸೈನ್ಯಕ್ಕೂ ಕೂಡಲೆ ರಾಜಧಾನಿಗೆ ಹಿಂದಿರುಗುವಂತೆ ಆಜ್ಞೆಮಾಡಿ, ತನ್ನ ಕುದುರೆಯನ್ನು ವಾಯುವೇಗದಲ್ಲಿ ಓಡಿಸಿಕೊಂಡು ರಾಜಧಾನಿಗೆ ಹೊರಟ. ಕುದುರೆ ಅಷ್ಟು ವೇಗವಾಗಿ ಹೋಗುತ್ತಿದ್ದರೂ ಬೊಪ್ಪಣನಿಗೆ ಅದು ಬಲು ಮೆಲ್ಲಗೆ ಹೋಗುತ್ತಿದ್ದಂತೆ ಭಾಸವಾಯಿತು. ಪ್ರತಿ ಐದು ಐದು ಮೈಲಿಗೂ ಕುದುರೆ

ಯನ್ನು ಬದಲಾಯಿಸುತ್ತಿದ್ದರೂ ಕುದುರೆ ಶಕ್ತಿಮೀರಿದ ವೇಗದಿಂದ ಹೋಗುತ್ತಿದ್ದರೂ ದಾರಿ ಸವೆಯಲೇ ಇಲ್ಲವೆಂದು ಬೊಪ್ಪಣ ಎಣಿಸಿದ. ಅವನಿಗೆ ಆಗ ಗರುಡನ ರೆಕ್ಕೆಗಳು ಬಂದಿದ್ದರೂ ಅದರ ವೇಗವೂ ತೃಪ್ತಿಯಾಗುತ್ತಿರಲಿಲ್ಲ. ಪ್ರಭುಗಳೂ ಕುವರನೂ ರಾಜಧಾನಿಯ ಬಳಿಗೆ ಬರುವ ಮುನ್ನ ಶಾಂತಲದೇವಿಯರಿಗೆ ಸಂತೋಷದ ಸುದ್ದಿಯನ್ನು ಅರುಹಿ, ಮನಸ್ಸು ಸಮಾಧಾನಗೊಳಿಸಿ, ಅವರನ್ನು ಅರಮನೆಗೆ ಕರೆತಂದು, ಪುರಜನರೂ ಆಕೆಯೂ ಪ್ರಭುಗಳನ್ನೂ ಕುವರನನ್ನೂ ಆನಂದದಿಂದ ಇದಿರುಗೊಳ್ಳುವಂತೆ ಮಾಡಬೇಕೆಂಬ ಆಸೆ ಉಕ್ಕಿ ಹರಿಯುತ್ತಿತ್ತು ಆಗ ಬೊಪ್ಪಣನಿಗೆ.

ಹೀಗೆ ಮಿತಿಮೀರಿದ ವೇಗದಲ್ಲಿ ಪಿತೃಭೂಮಿಗೇ ನೇರವಾಗಿ ಬರುತ್ತಿರುವ ಸವಾರನನ್ನು ದೂರದಿಂದಲೆ ಕಂಡು ಶಾಂತಲದೇವಿ 'ಸರ್ವವೂ ಮುಗಿಯಿತು' ಎಂದುಕೊಂಡಳು. ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ, ಕುದುರೆಯ ಸವಾರ ಬೊಪ್ಪಣನೆಂದೇ ಮಹಾರಾಣಿ ತಿಳಿದಳು. ಇಪ್ಪತ್ತು ಹೆಜ್ಜೆ ದೂರದಲ್ಲಿ ಕುದುರೆಯ ಕಡಿವಾಣಗಳನ್ನು ಬೊಪ್ಪಣ ಹಿಡಿದೆಳೆದ. ಎಳೆದ ಆತುರದಲ್ಲಿ ರಭಸದಲ್ಲಿ ಕುದುರೆ ಹಿಂದಿನ ಎರಡು ಕಾಲ ಮೇಲೆ ನಿಂತು ಜಾರಿ ಮುಗ್ಗುರಿಸಿತು. ಬೊಪ್ಪಣ ಕೆಳಕ್ಕೆ ದುಮುಕಿ ಒಂದೇ ಉಸುರಿಗೆ ಅಲ್ಲಿಂದ ಓಡಿಬಂದು ಮಹಾರಾಣಿಯ ಕಾಲುಗಳನ್ನು ಬಿಮ್ಮಗೆ ಹಿಡಿದು, ಅದರ ಮೇಲೆ ತನ್ನ ತಲೆಯನ್ನಿಟ್ಟ. ಬೊಪ್ಪಣನ ರೀತಿ, ಆತುರಗಳನ್ನು ಕಂಡು ದೇವಿಯರ ಹೃದಯ ಇನ್ನಷ್ಟು ಕಂಪಿಸಿ ಹೋಯಿತು. ಬೊಪ್ಪಣ ಗಾವುದ ದೂರ ಓಡಿಬಂದವನಂತೆ ಬಹಳ ಆಯಾಸದಿಂದ 'ನನ್ನ ಅವ್ವೆಯ ಪುಣ್ಯ, ನನ್ನ ಅಕ್ಕದಿರ ಪುಣ್ಯ, ದೈವಕೃಪೆ, ನನ್ನ ತಮ್ಮ ಬದುಕಿದ್ದಾನೆ, ಶತ್ರುಸೈನ್ಯಸಕಲವನ್ನೂ ಸೆರೆಹಿಡಿದು ತರುತ್ತಿದ್ದಾನೆ. ಅಪ್ಪಾಜಿಯವರನ್ನು ಕಂಡ, ಇಬ್ಬರೂ ಆನಂದದಿಂದ ಬರುತ್ತಿದ್ದಾರೆ. ಅಕ್ಕದಿರು ಇನ್ನು ಅರಮನೆಗೆ ನಡೆಯಬೇಕು. ತಮ್ಮನನ್ನು ಆದರದಿಂದ, ಉತ್ಸವದಿಂದ, ಆನಂದದಿಂದ ಎದುರುಗೊಳ್ಳೋಣ. ಪ್ರಭುಗಳನ್ನು ಮಹಾ ಆನಂದದಿಂದ ಎದುರುಗೊಳ್ಳೋಣ' ಎಂದ.

ಮಹಾರಾಣಿಯರ ಕಣ್ಣುಗಳಲ್ಲಿ ಆಗ ಆದ ಆನಂದಧಾರೆಗಳನ್ನು ಬೊಪ್ಪಣ ಕಂಡ. ದೇವಿಯರು ಬೊಪ್ಪಣನನ್ನು ಎರಡು ಕೈಗಳಿಂದಲೂ ಬಳಿಗೆ ಕರೆದುಕೊಂಡು ಅತಿಶಯ ವಾತ್ಸಲ್ಯದಿಂದ ತಲೆತಡವಿ, 'ನೀನು ಕುವರನಿಗೆ ಅಣ್ಣನೂ

ಹೌದು, ನನಗೆ ನೀನು ತಮ್ಮನೂ ಹೌದು, ಪ್ರಭುಗಳಿಗೆ ನೀನು ಮಗನೂ ಹೌದು. ಇಂತಹ ಸಂತೋಷದ ಸುದ್ದಿಯನ್ನು ತಂದ ನೀನು ನೂರು ವರುಷಗಳು ಚೆನ್ನಾಗಿ ಬದುಕು. ನನ್ನ ಹೃದಯಕ್ಕೆ ಎಷ್ಟು ಆನಂದವನ್ನು ತಂದೆಯೊ, ಅಷ್ಟು ಆನಂದ ನಿನ್ನವ್ವೆಯ ಹೃದಯಕ್ಕೂ ಈಗ ಆಯಿತು. ಇನ್ನು ಎಲ್ಲರೂ ಅರಮನೆಗೆ ಹೋಗೋಣ. ವಿಜಯ ನಾರಾಯಣನೆ ಬಂದು ನಮ್ಮೆಲ್ಲರ ಕಣ್ಣೀರನ್ನೂ ಒರಸಿದ. ನಮ್ಮ ಅತ್ತೆಯರು ಸ್ವರ್ಗಕ್ಕೆ ಸಂದರು. ಇನ್ನು ಬೆಳಕೆಲ್ಲಿಯದು! ಎಂದಿದ್ದ ನಮಗೆ ಈ ಕತ್ತಲು ಹೋಯಿತು' ಎನ್ನುತ್ತ, ಎಲ್ಲರೂ ಲಘು ಹೃದಯದಿಂದ ಅರಮನೆಗೆ ನಡೆದರು. ಪುರಜನರ ಆನಂದ, ರಾಜಮಾತೆ ಅಳಿದ ದುಃಖವನ್ನು ಮರಸಿತು. ಆಗ ಬೆಳಗ್ಗೆ ಒಂಬತ್ತು ಗಂಟೆಯಾಗಿತ್ತು.

ಎಷ್ಟೇ ಸಂತೋಷವಾದರೂ, ಹೆಚ್ಚು ಆಡಂಬರಕ್ಕೆ ಅದು ಸಮಯವಲ್ಲವಾಗಿತ್ತು. ಇದನ್ನು ಮಹಾರಾಣಿಯವರು ಹೇಳಬೇಕಾಗಿರಲಿಲ್ಲ. ಪೌರರೇ ಅರಿತರು. ಸಂಧ್ಯಾಸಮಯಕ್ಕೆ ಪೂರ್ವವೇ ಪ್ರಭುಗಳೂ ಕುವರನೂ ಸೈನ್ಯಗಳೆಲ್ಲವನ್ನೂ ಊರಹೊರಗೆ ನಿಲ್ಲಿಸಿ, ತಾವು ಮಾತ್ರ ನಾಯಕರೊಂದಿಗೆ ರಾಜಧಾನಿಯ ಪ್ರವೇಶಮಾಡಿದರು. ಬೊಪ್ಪಣ ಊರ ಬಾಗಿಲಲ್ಲಿಯೇ ಪ್ರಭುಗಳನ್ನು ಕಂಡು ಪಾದಗಳಿಗೆ ನಮಸ್ಕರಿಸಿ, ಕುವರನನ್ನು ಆಲಿಂಗಿಸಿ, ಉತ್ಸಾಹದೊಡನೆ ಉತ್ಸವದೊಡನೆ ಪಟ್ಟಣದೊಳಕ್ಕೆ ಕರೆತಂದ. ಅರಮನೆಯ ಬಾಗಿಲಲ್ಲಿ ಶಾಂತಲೆ ಲಕ್ಷ್ಮಿಯರೂ ಬಮ್ಮಲೆ, ರಾಜಲೆ, ದೇವಕಿ ಮುಂತಾದ ಕಿರಿಯ ರಾಣಿಯರೂ ಪ್ರಭುಗಳನ್ನೂ ಕುವರನನ್ನೂ ಸ್ವಾಗತಿಸಿದರು. ಶಾಂತಲೆ ಲಕ್ಷ್ಮಿಯರು ಕುವರನನ್ನು ಅತಿಶಯ ಪ್ರೀತಿಯಿಂದ ಮತ್ತೆ ಮತ್ತೆ ಅಪ್ಪಿಕೊಂಡರು. ಪ್ರಭುಗಳು ಮುಂದೆ, ಅವರ ಹಿಂದೆ ಎಲ್ಲರೂ ಅರಮನೆಯನ್ನು ಹೊಕ್ಕರು. ಅಕ್ಕದಿರೂ ಇತರ ರಾಣಿಯರೂ ಆಭರಣ ಅಲಂಕಾರ ರಹಿತರಾಗಿರುವುದನ್ನು ಕಂಡು ಕುವರನಿಗೆ ಆಶ್ಚರ್ಯವಾಯಿತು. ದಾಸದಾಸಿಯರ ಮುಖದಲ್ಲೂ ಅಷ್ಟೊಂದು ಗೆಲವು ಕಾಣಬರಲಿಲ್ಲ. ಪ್ರಭುಗಳು ತಮ್ಮ ಸ್ಥಾನಕ್ಕೆ ಹೋದರು. ಕುವರ ಅಕ್ಕದಿರನ್ನು ನೋಡಿ, 'ಅವ್ವೆ ಎಲ್ಲಿದ್ದಾರೆ? ಅವ್ವೆಯನ್ನು ಕಾಣಲು ಹೋಗುವ' ಎಂದಾಗ ಶಾಂತಲೆ ಸೆರಗಿನಿಂದ ಮುಖ ಮುಚ್ಚಿಕೊಂಡಳು. ಲಕ್ಷ್ಮಿಯ ಕಣ್ಣುಗಳಲ್ಲಿ ನೀರಿಟ್ಟಿತು. ಇದನ್ನು ಕಂಡು ಕುವರನು ಭಯಪಟ್ಟು, 'ಅವ್ವೆಗೆ ಏನಾಗಿದೆ, ಅಕ್ಕ?' ಎಂದು ಕೇಳಿದ.

ಪ್ರಭುಗಳು ಪುರೋಹಿತರ ಸಲಹೆಯಂತೆ ಸ್ನಾನಮಾಡಿ, ವಾಸವಸ್ತ್ರಶೇಷ

ವನ್ನುಟ್ಟು ಉತ್ತರಕ್ರಿಯಾಧಿಕಾರತ್ವದ ದರ್ಭೆಗಳನ್ನು ಸ್ವೀಕರಿಸಿ, ವಾಸೋದಕ ಕುಂಭವನ್ನು ಕೈಯಲ್ಲಿ ಹಿಡಿದು, ದಹನಶಾಂತಿ ಅಸ್ತಿಸಂಗ್ರಹಣಾರ್ಥವಾಗಿ, ರಾಜ ಧಾನಿಯ ದಕ್ಷಿಣ ದಿಕ್ಕಿನಲ್ಲಿದ್ದ ಪಿತೃಭೂಮಿಗೆ ಬರಿಗಾಲಿನಲ್ಲಿ ಹೊರಟರು. ಬೊಪ್ಪಣ, ಪುರೋಹಿತರು, ಪಂಡಿತರು, ಸಚಿವರುಗಳು, ಸೌಮ್ಯವಸ್ತ್ರಧಾರಿಗಳೂ ನಶಿರೋವೇಷ್ಟಿತರೂ ಆಗಿ, ಬರಿಗಾಲಿನಲ್ಲಿ ಪ್ರಭುಗಳನ್ನು ಹಿಂಬಾಲಿಸಿದರು. ದಾರಿಯುದ್ದಕೂ ಪುರಜನರೂ ಪುರಸ್ತ್ರೀಯರೂ ಈ ದೃಶ್ಯವನ್ನು ನೋಡಿ ದುಃಖಪೂರಿತರಾಗಿ 'ಈ ಕರ್ಮಬಂಧ ಯಾವ ಮಹಾಭಾಗನಿಗೂ ತಪ್ಪಿದುದಲ್ಲ' ಎಂದುಕೊಂಡರು.

ಕುವರನಿಗೆ ಸಮಾಧಾನ ಹೇಳಲು ಅಕ್ಕದಿರು ವಿಶ್ವಪ್ರಯತ್ನ ಮಾಡಿದರು; ಸಾಧ್ಯವಾಗಲಿಲ್ಲ. ದುಃಖದ ಬೇಗೆಯಿಂದ ಅತಿಯಾಗಿ ಬೆಂದ ಹೃದಯವೆಂದರೆ ಅವನದೆ ಆಯಿತು. ಈ ದುಃಖವನ್ನು ತಡೆಯಲಾರದೆ ಅವನು ತನಗೇ ಏನಾ ದರೂ ಆಪತ್ತನ್ನು ತಂದುಕೊಳ್ಳುವನೊ ಎಂಬ ಶಂಕೆಯಿಂದ ಅಕ್ಕದಿರು ಅವನ ಪಕ್ಕವನ್ನು ಬಿಟ್ಟು ಕದಲಲಿಲ್ಲ. ಸ್ವಲ್ಪ ಸಮಾಧಾನಕ್ಕೆ ಬಂದಿದ್ದ ಅವನ ಅಕ್ಕದಿರ ದುಃಖ ಅವನ ಅತೀವ ದುಃಖವನ್ನು ಕಂಡು, ಮತ್ತೆ ಮರುಕಳಿಸಿತು. ಮರಣವೂ ಜೀವನದ, ಜೀವಿತದ ಒಂದು ಹಂತ ಎಂದು ಅರಿತಿದ್ದರು ಶಾಂತಲೆ ಲಕ್ಷ್ಮಿಯರು. ಆದರೆ ಕುವರನದು ಇನ್ನೂ ಎಳೆಯ ಹೃದಯವಲ್ಲವೆ? ಕುವರನ ಹೆಚ್ಚಿನ ದುಃಖ ವೆಂದರೆ: 'ಅವ್ವೆ ಇನ್ನೂ ಬದುಕಿರುತ್ತಿದ್ದರು. ನಾನು ಸತ್ತೆನೆಂಬ ದುಃಖದಿಂದ ಅವ್ವೆ ಸತ್ತರು. ನನಗಾಗಿ ಸತ್ತರು, ನಾನೇ ಅವರ ಮರಣಕ್ಕೆ ಕಾರಣನಾದೆ' ಎಂಬ ಮಾತು. ಇದಕ್ಕೆ ಸಮಾಧಾನ ಹೇಳಲು ಯಾರಿಗೆ ಸಾಧ್ಯ? ಬಹಳ ಹೊತ್ತು ದುಃಖಿಸಿ, ಒಂದು ಸಲ ಕತ್ತೆತ್ತಿ ಅಕ್ಕನನ್ನು ನೋಡಿ 'ಅಪ್ಪಾಜಿಯವ ರೆಲ್ಲಿ?' ಎಂದು ಕೇಳಿದ. 'ಪಿತೃಭೂಮಿಗೆ ನಡೆದುಹೋದರು' ಎಂದು ಯಾರೊ ಅಂದರು. 'ಏನು? ಅವ್ವೆಯ ಮುಖದರ್ಶನವೂ ನನಗೆ ಇಲ್ಲವೆ!' ಎಂದು ತನ್ನ ವಸ್ತ್ರಗಳನ್ನು ಕಿತ್ತೆಸೆದು ಆ ವಿಕಾರಸ್ಥಿತಿಯಲ್ಲಿ ಎದ್ದು ಓಡಲು ಹೋದ. ಅಕ್ಕದಿರಿ ಬ್ಬರೂ ಅವನ ರಟ್ಟೆ ಹಿಡಿದು ಹಿಂದಕ್ಕೆ ಎಳೆದರು. ದುಃಖದ ಭರದಲ್ಲಿ ಅದು ಅವನಿ ಗೇನು ಲಕ್ಷ್ಯ? ಒಂದು ಸಲ ಕೊಡವಿಕೊಂಡು ಅರಮನೆಯಿಂದ ಓಡಿದ. ದಾರಿ ಯುದ್ದಕ್ಕೂ 'ಅವ್ವೆ! ಅವ್ವೆ! ಅಯ್ಯೊ ಅವ್ವೇ!' ಎಂದು ದುಃಖದಿಂದ ಅರಚುತ್ತ, ದಿಕ್ಕೆಟ್ಟು ಗೋಳಿಡುತ್ತ ದಕ್ಷಿಣ ಶ್ಮಶಾನಕ್ಕೆ ಓಡಿದ. ಪುರಜನರು ಓಡಿಬಂದು ಕುವರ

ನನ್ನೂ ಅವನ ಆ ಘೋರ ದುಃಖವನ್ನೂ ಕಂಡು 'ಅಯ್ಯೋ, ಇಂತಹ ಮಹಾ ದುಃಖದಲ್ಲಿ ಬುದ್ಧಿ ವಿಕಲ್ಪವಾಗುವುದೂ ಉಂಟು. ಇವನ ದುಃಖ ದೇವನಿಗೆ ಮುಟ್ಟಲಿ' ಎಂದು ತಾವೂ ದುಃಖಿಗಳಾದರು. ಕುವರನಿಗೆ ಏನೂ ತಿಳಿಯ ಲೊಲ್ಲದು, ಕಾಣಲೊಲ್ಲದು, ಪುರಜನರು ತನ್ನನ್ನು ಈ ವಿಕಾರಸ್ಥಿತಿಯಲ್ಲಿ, ವಿಕಾರ ವೇಷದಲ್ಲಿ ನೋಡುತ್ತಿರುವರೆಂಬ ಅರಿವು ಅವನಿಗಾಗಲಿಲ್ಲ. ಅವನನ್ನು ಹಿಡಿದು, ತಡೆದು ನಿಲ್ಲಿಸುವ ಧೈರ್ಯ, ಶಕ್ತಿ ಒಬ್ಬರಿಗಾದರೂ ಇರಲಿಲ್ಲ. ಸ್ವಲ್ಪಹೊತ್ತಿಗೆ ಹಿಂದೆ, ವಿಜಯಶಾಲಿಯಾಗಿ, ಮಹಾ ಸಂತೋಷದಿಂದ, ನಗುಮುಖದಿಂದ, ಪುರಪ್ರವೇಶ ಮಾಡಿದ ಪುರುಷ, ಇಷ್ಟರೊಳಗೆ, ಈ ಘೋರ ದುಃಖದಲ್ಲಿ ಬೇಯುತ್ತಿರುವುದನ್ನು ಕಂಡು 'ಅಯ್ಯೋ, ಈ ಭೂಮಿಯಲ್ಲಿ ಯಾವುದೂ ಒಂದು ನಿಮಿಷ ಸ್ಥಿರವಿರುವುದಿಲ್ಲ. ಸುಖವೆಷ್ಟು! ದುಃಖವೆಷ್ಟು! ವಿಧಿಯೇಕೆ ಹೀಗಾಡಿ ಸುತ್ತದೆ? ಹೀಗೆ ಕಾಡಿಸುತ್ತದೆ?' ಎಂದು ಪುರಜನರು ಮರುಗಿದರು.

ಪಿತೃಭೂಮಿಯಲ್ಲಿ ಪುರೋಹಿತರೊಡನೆ ಇದ್ದ ಪ್ರಭುಗಳು ಆಗತಾನೆ ಚಿತಾಶಾಂತಿಗೆ ಪ್ರಥಮ ಘಟೋದಕವನ್ನು ಸುರಿದಿದ್ದರು. ನೂರಾರು ಮಂಡೂಕ ಗಳು ಒಂದೇ ಸಲ ಕೂಗುತ್ತಿರುವಂತೆ ಶಬ್ದವಾಯಿತು. ಚಿತೆಯಲ್ಲಿ ಅಗ್ನಿ ಇನ್ನೂ ಭೀಷಣನಾಗಿಯೇ ಇದ್ದನು. ಕುವರನು ವಿಕಾರವಾಗಿ ರೋದಿಸುತ್ತ ಧೃತಿತಪ್ಪಿ ಬರುತ್ತಿರುವುದನ್ನು ಪ್ರಭುಗಳು ಕಂಡರು. ಪಕ್ಕಕ್ಕೆ ತಿರುಗಿ ಇನ್ನೂ ಆರದಿದ್ದ ಚಿತಾಗ್ನಿಯನ್ನೂ ಕಂಡರು. ಕುವರನ ಹೃದಯವನ್ನರಿತಿದ್ದ ಪ್ರಭುಗಳು, ಮುಂದಾಗಬಹುದಾದ ಘೋರವನ್ನು ಶಂಕಿಸಿ, ಜಲಕುಂಭವನ್ನು ಕೆಳಗಿಟ್ಟು ಕುವರನ ಎದುರಿಗೆ ಬಂದು, ತಮ್ಮ ಮಹಾ ತೋಳ್ಬಲದಿಂದ, ಪರ್ವತವು ಪ್ರವಾಹ ವನ್ನು ತಡೆದು ನಿಲ್ಲಿಸುವಂತೆ, ಕುವರನನ್ನು ತಡೆದು ತಮ್ಮೆದೆಗೆ ತಂದುಕೊಂಡರು.

ಅಪ್ಪಾಜಿಯವರನ್ನು ಕಂಡೊಡನೆಯೆ, ಅವರ ದೇಹ ಸ್ಪರ್ಶವಾದೊಡ ನೆಯೆ, ತಾಯಿ ಎತ್ತಿಕೊಂಡು ಸಂತೈಸಿದ ಮಗುವಿನಂತೆ ಕುವರನ ದುಃಖ ಊರ್ಧ್ವಗಉನ್ಮಾದಾವಸ್ಥೆಯಿಂದ ಅಧೋಮುಖವಾಯಿತು. ಹತ್ತಿರದ ಒಂದು ಮರದ ಬುಡದ ಬಳಿಗೆ ಹೋಗಿ ಅಧೋವದನನಾಗಿ ಕುಳಿತುಬಿಟ್ಟ. ಆ ದಿನದ ಕ್ರಿಯೆಗಳೆಲ್ಲವನ್ನೂ ಮುಗಿಸಿ ಪ್ರಭುಗಳು ಕುವರನನ್ನು ತಮ್ಮೊಡನೆಯೆ ಕರೆದು ಕೊಂಡುಹೋದರು. ಕುವರನು ಕೆಲವು ದಿನ ಆಹಾರ ನಿದ್ರೆಗಳನ್ನು ತೊರೆದು ಯಾವಾಗಲೂ ಖಿನ್ನನಾಗಿ ಮೌನದಿಂದ ಕಳೆದನು. 'ನಾನೂ ಆಹಾರ ಮುಟ್ಟೆ'

ಎಂದು ಅಕ್ಕ, ಎರಡು ದಿನವೆಲ್ಲ ಅವನೊಡನೆ ಉಪವಾಸವಿದ್ದ ಮೇಲೆ, ಬೇರಾವ ದಾರಿಯನ್ನೂ ಕಾಣದೆ ಆಹಾರವನ್ನು ಮುಟ್ಟಿದ. ಅವ್ವೆ ಸತ್ತ ದುಃಖವನ್ನು ಮರೆಯಲು ಕುವರನಿಗೆ ತಿಂಗಳುಗಳು ಬೇಕಾದವು. ದೈವ ಅವನ ಕಣ್ಣೀರನ್ನು ಒರಸಿತು, ಮತ್ತೆ ನಗಿಸುವುದಕ್ಕೆ, ಮತ್ತೆ ಅಳಿಸುವುದಕ್ಕೆ.

ರಾಜಮಾತೆಯರು ಅಳಿದ ಸಂಗತಿ, ಕಾರಣ, ಎಲ್ಲವೂ ಗಂಗರಾಜರಿಗೂ ಮಾರಸಿಂಗಮಯ್ಯ, ಪುನೀಸ, ಕೇತಮಲ್ಲನಾಯಕ ಇವರುಗಳಿಗೂ ನಾಲ್ಕು ದಿನ ಗಳ ಅನಂತರ ತಿಳಿಯಿತು. ಎಲ್ಲ ಸೈನ್ಯಗಳನ್ನು ಒಟ್ಟುಗೂಡಿಸಿಕೊಂಡು, ಅತಿ ಕ್ಷಿಪ್ರದಿಂದ ರಾಜಧಾನಿಗೆ ಹೊರಟರೂ, ಅವರು ಬಂದು ಸೇರಿದುದು ಹತ್ತನೆಯ ದಿನವೆ. ರಾಜಮಾತೆಯರ ಕರ್ಮಾಂತರಗಳೆಲ್ಲ ವಿಶೇಷ ರೀತಿಯಲ್ಲಿ ಜರುಗಿದವು. ದಾನಧರ್ಮಗಳು ಗಂಗರಾಜರ ನೇತೃತ್ವದಲ್ಲಿ ಅಪಾರವಾಗಿ ನಡೆದವು. ಆದರಿಂದ ರಾಜಮನೆತನದವರಿಗೆಲ್ಲ ಒಂದು ವಿಧವಾದ ಮನಸ್ತೃಪ್ತಿಯಾಯಿತು.

ಯುದ್ಧಭೂಮಿಯಿಂದ ಹಿಂದಿರುಗಿದಮೇಲೆ ಗಂಗರಾಜರ ಆರೋಗ್ಯವೂ ಹದಗೆಟ್ಟಿತು. ಜಯಿಸಿದ ರಾಜ್ಯಗಳನ್ನು ಕ್ರಮಪಡಿಸಿ, ಮೇಲ್ವಿಚಾರಣೆಗಳಿಗೆ ಸರಿಯಾದವರನ್ನು ನಿಯಮಿಸಿ, ರಾಜಾದಾಯಗಳನ್ನು ಮೋಸವಿಲ್ಲದಂತೆ, ಪ್ರಜೆ ಗಳ ಮನನೋಯದಂತೆ, ಕ್ರಮವಾಗಿ ಬರುವಂತೆ, ಹೀಗೆ ಒಂದೊಂದು ಏರ್ಪಾ ಡುಗಳನ್ನೂ ಮಾಡುವಾಗ್ಗೆ, ಅವರಿಗೆ ಯುದ್ಧದಲ್ಲಿ ಆಗುವ ಶ್ರಮಕ್ಕಿಂತ ಹೆಚ್ಚಾದ ದೇಹಶ್ರಮ, ಬುದ್ಧಿಶ್ರಮಗಳಾದವು. ರಾಜಮಾತೆಯರ ಕರ್ಮಾಂತರ ಗಳು ಮುಗಿಯುತ್ತಿದ್ದಂತೆಯೆ ಭೀಷ್ಮರ ಆರೋಗ್ಯ ಕೆಟ್ಟಿತು. ಹಾಸಿಗೆ ಹಿಡಿದು ಮಲಗಿಬಿಟ್ಟರು. ಎರಡು ತಿಂಗಳಕಾಲ ಬಿಚ್ಚಿದ ಹಾಸಿಗೆ ಬಿಚ್ಚಿಯೆ ಇದ್ದಿತು. ಉತ್ತಮ ಭಿಷಗ್ಮಣಿಗಳೆಂದರು: 'ಭೀಷ್ಮರಿಗೆ ಇನ್ನು ಉಳಿಯಬೇಕೆಂಬ ಆಶೆ ಇಲ್ಲ, ಆದ್ದರಿಂದ ಅಮೃತವೂ ಕೆಲಸಮಾಡದು' ಎಂದು. ಪ್ರಭುಗಳು 'ಇನ್ನು ತಮಗೆ ಗಂಗರಾಜರು ದಕ್ಕರು' ಎಂದರಿತರು. ಅವರ ಕಾಯಿಲೆಯ ವಿಷಮ ಸ್ಥಿತಿಯನ್ನು ಕಂಡು ಹೊಯಿಸಳ ರಾಜ್ಯವೆ ಭಯಾವೃತವಾಯಿತು.

ಗಂಗರಾಜರಿಗೆ ದಿನದಿನಕ್ಕೂ ಕಫದ ಬಾಧೆ ಹೆಚ್ಚುತ್ತಹೋಯಿತು. 'ಯಾವ ಚಿಕಿತ್ಸೆಯೂ ನನಗೆ ಬೇಡ' ಎಂದರು. ಕೊನೆಯ ದಿನಗಳು ಸಮೀಪಿ ಸಿದವು. ಗಂಗರಾಜರು ಸಲ್ಲೇಖನವನ್ನು ಕೈಗೊಂಡು, ಬಲಪಾರ್ಶ್ವಕ್ಕೆ ಮಲಗಿ, ಅನ್ನಪಾನಾದಿಗಳನ್ನು ತ್ಯಜಿಸಿ, ಪಂಚಪದಗಳನ್ನು ಧ್ಯಾನಿಸುತ್ತ ಇಹವನ್ನು

ಮರೆತರು. ಪ್ರಭುಗಳೂ, ಶಾಂತಲೆ ಲಕ್ಷ್ಮಿಯರೂ, ಮಾಚಿಕಬ್ಬೆ, ಮಾರಸಿಂಗ ಮಯ್ಯನವರೂ, ಕೊನೆಯ ದಿನಗಳಲ್ಲಿ ಅಹರ್ನಿಶಿ ಅವರ ಹಾಸಿಗೆಯ ಬಳಿಯೆ ಇದ್ದರು. ಒಂದೆರಡು ದಿನಗಳಿವೆಯೆನ್ನುವಾಗ ವೇಲಾಪುರಿಯಿಂದ ಪಂಡಿತರೂ ಬಂದರು.

ಸುದಿನ ಸುನಕ್ಷತ್ರದಲ್ಲಿ ಗಂಗರಾಜರು ಇಹವನ್ನು ತ್ಯಜಿಸಿ ಪರಮಪದವಿಗೆ ಸಂದರು. ಪ್ರಭುಗಳು ತಂದೆಯನ್ನು ಕಳೆದುಕೊಂಡವರಂತೆ ಸಂಕಟಪಟ್ಟರು. ಹೊಯಿಸಳ ರಾಜ್ಯದ ಪ್ರತಿಮನೆಯಲ್ಲಿಯೂ ಅಂದು ಮೃತ್ಯುಹೊಕ್ಕು ಹೊರ ಟಂತಾಯಿತು. ರಾಜಧಾನಿಯಲ್ಲಿ ಉತ್ಸವಕ್ಕೆ ಸೇರಿದಂತೆ ಜನರು ಸೇರಿ ಆ ಮಹಾತ್ಮನಿಗೆ ದುಃಖಾಂಜಲಿಯನ್ನು ಸಮರ್ಪಿಸಿದರು. ಗಂಗರಾಜರ ಕಳೇಬರ ವನ್ನು ಸಮಸ್ತ ರಾಜಮರ್ಯಾದೆಗಳಿಂದ ರಾಜವೀಧಿಗಳ ಮೂಲಕವಾಗಿ ಪಿತೃ ಭೂಮಿಗೆ ಕೊಂಡೊಯ್ಯಲಾಯಿತು. ಪ್ರಭುಗಳೂ, ವಿಷ್ಣುವೂ, ಸಮಸ್ತ ಸಚಿ ವರೂ, ಚಮೂಪತಿಗಳೂ, ರಾಜ್ಯಾಧಿಕಾರಿ ಕೋಶಾಧಿಕಾರಿಗಳೂ ಹಿರಿಯ ಪ್ರಜೆಗಳೂ, ಭಕ್ತಿಯಿಂದ, ದುಃಖದಿಂದ, ಬರಿತಲೆಯಲ್ಲಿ, ಬರಿಗಾಲಿನಲ್ಲಿ, ಶವದ ಹಿಂದೆ ನಡೆದುಹೋದರು. ಕಳೇಬರವನ್ನು ಪಿತೃಭೂಮಿಯಲ್ಲಿಳಿಸಿದಾಗ ಅದರ ಮೇಲೆ ಬಿದ್ದ ಪುಷ್ಪಾಂಜಲಿ ಬೆಟ್ಟದಷ್ಟು ಎತ್ತರವಾಯಿತು.

ಎಲೆಯ ಮರೆಯಲ್ಲಿ ಅಡಗಿರುವ ಸುಗಂಧಪುಷ್ಪದಂತೆ, ಹೊಯಿಸಳ ರಾಜ್ಯವನ್ನು ತಾವೇ ಕಟ್ಟಿ ಬೆಳಸಿ, ಸಿಂಹಾಸನದ ಮೇಲೆ ಕುಳಿತುಕೊಳ್ಳದೆ ರಾಜ್ಯವನ್ನು ಸರ್ವತೋಮುಖವಾಗಿ ಆಳಿ, ತಮ್ಮ ಯಶವನ್ನೇ ಹೊಯಿಸಳ ರಾಜರಿಗೆ ಧಾರೆಯೆರೆದು ಕೊಟ್ಟುಹೋದ ನಿಷ್ಕಾಮರಾಜಕರ್ಮಿ ಗಂಗರಾಜರು ಪರಮಪದವನ್ನಡರಿದರು. ರಾಜಮಾತೆಯು ಅಳಿದ ಶೋಕ ಇನ್ನೂ ಆರಿರಲಿಲ್ಲ, ಅಷ್ಟರಲ್ಲೆ ರಾಜ್ಯಕ್ಕೆ ಈ ಇನ್ನೊಂದು ಶೋಕವು ಪ್ರಾಪ್ತವಾಯಿತು. ಬೊಪ್ಪಣ ತಂದೆಯ ಉತ್ತರಕ್ರಿಯಾದಿಗಳನ್ನು ಬಹು ಭಕ್ತಿ ಶ್ರದ್ಧೆಗಳಿಂದ ಮಾಡಿದ. ದಾನಧರ್ಮಗಳೆಲ್ಲವನ್ನೂ ವಿಷ್ಣುವರ್ಧನ ಪ್ರಭುವೇ ಅರಮನೆಯಿಂದ ನಡಸಿದರು. ದೇಶಾದ್ಯಂತ ಸರ್ವ ಚೈತ್ಯಾಲಯಗಳಲ್ಲಿಯೂ ಗಂಗರಾಜರ ಆತ್ಮಶಾಂತಿಯನ್ನು ಕೋರಿ ವಿಶೇಷ ಪೂಜೆಗಳೂ ಅನ್ನದಾನಗಳೂ ನಡೆದವು.

§

ಹಟಗಾರ ಕೇತಮಲ್ಲ ನಾಯಕನಿಗೆ, ದಾಮೋದರನ ತಲೆಯನ್ನು ಉರು

ಳಿಸಿದ ಮೇಲೆ ಮನಸ್ಸಿಗೆ ಬಹುಮಟ್ಟಿಗೆ ಸಮಾಧಾನವಾಯಿತು. ಅವನಂತೆಯೇ ಕಿರುಕುಳಪಟ್ಟಿದ್ದ ಇತರ ಪೌರವಣಿಕರೂ, ಶ್ರೀಮಂತರೂ ಕೇತಮಲ್ಲನಾಯಕ ತಲವನಪುರದಲ್ಲಿ ಇದ್ದ ವೇಳೆ ಅವನಲ್ಲಿಗೆ ಬಂದು 'ದೈವನೇ ಈ ಕಾರ್ಯವನ್ನು ನಿಮ್ಮಿಂದ ಮಾಡಿಸಿತು, ನಾವೆಲ್ಲರೂ ನಿಮ್ಮ ಉಪಕಾರವನ್ನು ಜೀವಾವಧಿ ಸ್ಮರಿಸಿಕೊಳ್ಳುತ್ತಿರುವಂತೆ ಮಾಡಿದಿರಿ, ಇನ್ನು ಈ ದೇಶಾದ್ಯಂತ ಕ್ಷೇಮವಾಯಿತು' ಎಂದು ಕೇತಮಲ್ಲನಾಯಕನನ್ನು ಹೊಗಳಿ 'ವಣಿಕನು ಡಣಾಯಕನಾದ'ನೆಂದು ಹೇಳುತ್ತಹೋದರು.

ಕೇತಮಲ್ಲನಾಯಕನು ದ್ವಾರವತಿಗೆ ಹಿಂದಿರುಗಿದ ಮೇಲೆ, ದೇವಾಲಯ ಗಳ ಕಟ್ಟಡದ ಕೆಲಸ ಬೇಗ ಬೇಗ ಮುಂದುವರಿಯಿತು.

ಕರ್ಮಬಾಧ್ಯರಾದ ಪ್ರಭುವು ಆ ಸಂವತ್ಸರ ಪೂರ್ತಿ ರಾಜಧಾನಿಯನ್ನು ಬಿಟ್ಟು ಆಚೆ ಈಚೆ ಹೋಗಲು ಆಗಲಿಲ್ಲ. ಆಗಾಗ್ಗೆ ವೇಲಾಪುರಕ್ಕೆ ಹೋಗಿ ಪಂಡಿತ ಮಾವಯ್ಯನವರನ್ನು ನೋಡಿಬರುತ್ತಿದ್ದರು. ಲಕ್ಷ್ಮಿಯೂ, ಒಂದೊಂದು ವೇಳೆ ಶಾಂತಲೆಯೂ ಪ್ರಭುಗಳೊಡನೆ ಅಯ್ಯನನ್ನು ನೋಡಿ ಬರಲು ಹೋಗುತ್ತಿದ್ದರು. ಪುನೀಸ, ಮಾರಸಿಂಗಮಯ್ಯ ಇವರುಗಳು, 'ಯುದ್ಧಾನಂತರ ಲಭಿಸಿದ ರಾಜ್ಯ ಗಳಲ್ಲಿ ಸಾಮಂತರು, ನಾಯಕರುಗಳು, ಹೆಗ್ಗಡೆಗಳು, ಗಂಗರಾಜರು ಇವರನ್ನು ಇರಿಸಿಹೋದ ರೀತಿಯಲ್ಲಿಯೇ ನಡೆದುಕೊಳ್ಳುತ್ತಿದ್ದಾರೆಯೆ, ವಿಚಕ್ಷಣೆಯೇನಾ ದರೂ ಸಡಿಲವಾಯಿತೆ?' ಎಂಬುದನ್ನು ಆಗಾಗ್ಗೆ ಹೋಗಿ ನೋಡಿಬರುತ್ತಿ ದ್ದರು. ಇದರಿಂದ ದೇಶದಲ್ಲೆಲ್ಲ ರಾಜ್ಯಾಡಳಿತ ಧರ್ಮದಿಂದ ನಡೆದುಬರು ವಂತಾಯಿತು.

ಗಂಗರಾಜರನಂತರ ಹೇಮಾದ್ರಿಗಳಿಗೆ ಪ್ರಭುಗಳು ಮಹಾ ಅಮಾತ್ಯ ಪದವಿಯನ್ನು ಕರುಣಿಸಿದರು. ಗಂಗರಾಜರು ರಾಜಕಾರ್ಯಗಳನ್ನು ನಿರ್ವಹಿ ಸುತ್ತಿದ್ದ ರೀತಿ ನೀತಿಗಳನ್ನು ಹೇಮಾದ್ರಿಗಳು ಚೆನ್ನಾಗಿ ಬಲ್ಲವರಾಗಿದ್ದರು. ಇದರಿಂದ ದೇಶಾದ್ಯಂತ ಶಾಂತಿ ಸುಭಿಕ್ಷಗಳು ನೆಲಸಿದವು. ಧಾರ್ಮಿಕನಾದ ಪ್ರಭುವೂ, ಸತ್ಯಸಂಧರುಗಳಾದ ಸಚಿವರೂ ಅಧಿಕಾರಿಗಳೂ ದೈವಭಕ್ತಿಯುಳ್ಳ ಪ್ರಜೆಗಳೂ ಇದ್ದಲ್ಲಿ ಭೂಲೋಕ ಸ್ವರ್ಗವಾಗದೆ!

ಸುಖದಲ್ಲಿರುತ್ತ ಒಂದು ದಿನ, ಪ್ರಭುಗಳು ಕುವರನಿಗೆ ಮದುವೆಮಾಡಿ ಬಿಡಬೇಕೆಂದು ಆಲೋಚಿಸಿದರು. ತಮ್ಮ ಆಲೋಚನೆಯನ್ನು ಶಾಂತಲೆಗೂ

ತಿಳಿಸಿದರು. 'ಇನ್ನೂ ಚಿಕ್ಕವನಲ್ಲವೆ? ಒಂದೆರಡು ವರ್ಷಗಳು ತಡೆದರೆ ಆಗದೆ?' ಎಂದಳು ಶಾಂತಲೆ.

'ಹದಿನೆಂಟು ಹತ್ತೊಂಬತ್ತಕ್ಕೆ ಬಂದಿತು. ನಿನ್ನ ತಮ್ಮ ಹೀಚೇನೂ ಅಲ್ಲ. ನೋಡುವುದಕ್ಕೆ ಇಪ್ಪತ್ತೈದು ವರ್ಷದ ಆಳು. ಅಲ್ಲದೆ ನಮ್ಮ ಬದುಕೂ ಏನು ನಿತ್ಯ? ಈ ಯುದ್ಧಗಳಲ್ಲಿ ನಾವು ಇದುವರೆಗೂ ಉಳಿದಿರುವುದೇ ಒಂದಾಶ್ಚರ್ಯ! ನಿನ್ನ ಅತ್ತೆಯವರ ವರ್ಷಾಬ್ದಿಕವಾದಮೇಲೆ ಮಾಡುವುದೇ ಸರಿ. ನಿನ್ನ ತಮ್ಮನಿಗೆ ನೀನೆ ಸರಿಯಾದ ಹೆಣ್ಣನ್ನು ಹುಡುಕು' ಎಂದರು ಪ್ರಭು.

ಶಾಂತಲೆಯ ಮುಖದಲ್ಲಿ ಸ್ವಲ್ಪವೂ ಅವಸರಭಾವವಿಲ್ಲದ್ದನ್ನು ಕಂಡು ಪ್ರಭುಗಳು ಮಾತನ್ನು ಮುಂದುವರಿಸಿದರು: 'ನೋಡು, ಈಗಿಲ್ಲದಿದ್ದರೆ ಇನ್ನೆರಡು ವರ್ಷಗಳ ಕಾಲ ನಮಗೆ ಬಿಡುವಾಗದು' ಎಂದರು.

'ಏಕೆ ಬಿಡುವಾಗುವುದಿಲ್ಲವೆನ್ನುತ್ತೀರಿ! ಏಕೆ?' ಎಂದು ಕೇಳುವ ಸ್ವಭಾವದವಳಲ್ಲ ಶಾಂತಲೆ. 'ಸಲ್ಲದ ಆಲೋಚನೆಗಳು ನನ್ನ ನಲ್ಲನ ಮನದಲ್ಲಿ ಎಂದಿಗೂ ಬರಲೊಲ್ಲವು' ಎಂದು ಶಾಂತಲೆ ಬಲ್ಲವಳಾಗಿದ್ದಳು. ಅರಸನ ಮನಸ್ಸನ್ನು ನೆರಳಿನಂತೆ ಅನುಸರಿಸುತ್ತಿದ್ದ ಆಕೆ 'ಹಾಗಿದ್ದರೆ ಈ ಮದುವೆಯ ಯೋಚನೆ ಸೂಕ್ತವಾದುದೆ' ಎಂದರಿತಳು. ಗುಣ, ಆರೋಗ್ಯಗಳಿಂದ ಕೂಡಿದ ಮನೆತನ, ರೂಪು, ಶೀಲ, ವಿದ್ಯೆ, ವಿನಯ ಇವುಗಳಿಂದ ಒಪ್ಪಿದ ಕನ್ಯೆಯನ್ನು ಆರಿಸುವ ಭಾರ, ಆ ಕನ್ಯೆಯನ್ನು ಕುವರನಿಗೆ ಒಪ್ಪಿಸುವ ಭಾರ, ಎರಡೂ ಶಾಂತಲೆಯ ಪಾಲಿಗೇ ಬಂದಿತು.

'ನನಗೇಕೆ ಈಗಿನಿಂದ ಈ ಕೋಳ? ಇಷ್ಟು ಅವಸರವೇಕೆ?' ಎಂದ ಕುವರವಿಷ್ಣುವಿನ ಪ್ರಶ್ನೆಗೆ, 'ನಿನ್ನ ಅಪ್ಪಾಜಿಯವರು ಅವಸರಪಡುತ್ತಾರೆ, ಆಗಬೇಕೆನ್ನುತ್ತಾರೆ, ನಾನೇನು ಮಾಡಲಿ?' ಎಂದಳು ಅಕ್ಕ. ಅಪ್ಪಾಜಿಗಳನ್ನು ಕೇಳುವಷ್ಟು ಧೈರ್ಯ ಅವನಿಗಿಲ್ಲ, ಅವನ ಪಾಡು ಬಹು ಇಕ್ಕಟ್ಟಾಯಿತು. ಚಿಕ್ಕಕ್ಕನೊಡನೆ, ಪಂಡಿತರೊಡನೆ, ಹೇಮಾದ್ರಿಗಳೊಡನೆ, ಅಚ್ಯುತ ಗೋವಿಂದರುಗಳೊಡನೆ, ಎಲ್ಲರಲ್ಲೂ ಅಂಗಲಾಚಿದ. ಪ್ರಭುಗಳಿಗೆ ಹೇಳುವಷ್ಟು ಧೈರ್ಯ ಅವರ್ಯಾರಿಗೂ ಬರಲಿಲ್ಲ. ಕಾರಣವಿಷ್ಟೆ: 'ಇವನಿಗೆ ಮದುವೆಯಾಗಲಿ' ಎಂಬುದು ಅವರ ಆಕಾಂಕ್ಷೆಯೂ ಆಗಿತ್ತು. ಇವನನ್ನು ಕಂಡಾಗ ಮಾತ್ರ 'ಅಯ್ಯೋ ಪಾಪ! ಯಾರಾದರೂ ಅಪ್ಪಾಜಿಯವರಿಗೆ ಹೇಳ

ಬೇಕು' ಎಂಬ ವ್ಯಂಗ್ಯೋಕ್ತಿಯಿಂದ ಅವನನ್ನು ಕಳಿಸಿಬಿಡುತ್ತಿದ್ದರು.

ಬ್ರಹ್ಮಚರ್ಯದ ಯಮನಿಯಮಗಳಲ್ಲಿಯೂ ಶಸ್ತ್ರಶಾಸ್ತ್ರಾಭ್ಯಾಸಗಳಲ್ಲಿಯೂ ಗರಡಿಮನೆಗಳಲ್ಲಿಯೂ ಸದಾ ನಿರತನಾಗಿದ್ದ ಇವನಿಗೆ ಮದುವೆ— 'ಕುಂಟೆತ್ತಿನ ಕುತ್ತಿಗೆಗೆ ಗಂಟುಬಿದ್ದ ಕೊರಡಿನಂತೆ' ಕಂಡುಬಂತು. ಕಡೆಕಡೆಗೆ ಅವನಿಗೆ ಸಿಟ್ಟುಬಂದು, ದೊಡ್ಡ ಅಕ್ಕನ ಬಳಿಯಲ್ಲಿ 'ನೀವೆಲ್ಲ ಒಂದೇ ಗುಂಪಿಗೆ ಸೇರಿದ ಕಳ್ಳರು. ನನ್ನ ಅವ್ವೆ ಇದ್ದಿದ್ದರೆ ನಿಮ್ಮನ್ನೆಲ್ಲ ನಾನು ಹೀಗೆ ಕೈಕಾಲು ಕಟ್ಟಬೇಕಾಗಿತ್ತೆ? ಹಾರಾಡುವ ಹಕ್ಕಿಯನ್ನು ಪಂಜರದಲ್ಲಿ ಕೂಡಿಟ್ಟು ನೋಡುವ ಕಠಿಣಾತ್ಮರು ನೀವು. ನೀನೂ ಅಷ್ಟೆ, ಬಾಯಲ್ಲಿ ಮಾತ್ರ ಬಣ್ಣಬಣ್ಣದ ಮಾತುಗಳನ್ನಾಡುತ್ತೀಯೆ. ಅಪ್ಪಾಜಿಯವರಂತೂ ನನ್ನನ್ನು ಕಂಡ ತತ್‌ಕ್ಷಣವೇ 'ಏನು ಕೇಳಿಬಿಡುತ್ತಾನೊ! ಏನು ಹೇಳಿಬಿಡುತ್ತಾನೊ!' ಎಂದು ಮುಂದಾಗಿಯೆ ಮುಖ ಮೂರಡಿ ಮಾಡಿಕೊಂಡುಬಿಡುತ್ತಾರೆ. ನಾ ಬಲ್ಲೆ, ಇದೆಲ್ಲ ಒಂದು ಸೋಗು. ನಿಮಗೆಲ್ಲ ಆಟವಾಡುವುದಕ್ಕೆ ಒಂದು ನೆಪ ಬೇಕು. ಅಯ್ಯೋ! ಈ ಯಜ್ಞಕ್ಕೆ ಪಶು ನಾನು. ಆಗ ಬಂದ ಕೊಂಗರೊ, ವೆಂಗರೊ, ಚೋಳರೊ, ಚೇರರೊ, ಯಾರಾದರೂ ದಂಡೆತ್ತಿ ಈಗ ರಾಜಧಾನಿಯ ಮೇಲೆ ಬರಬಾರದೆ? ಹಾಗಾದರೂ ಒಂದಿಷ್ಟು ಕಾಲಾವಕಾಶ ದೊರಕೀತು. ಅಥವಾ ಯಾರಾದರೂ ದ್ರೋಹಿಗಳು ಈಗ ಎದ್ದು ಕುಳಿತುಕೊಳ್ಳಬಾರದೆ? ನಾನೇ ಸೈನ್ಯ ತೆಗೆದುಕೊಂಡು ಹೋಗಿ ಮೂರೇ ದಿನಗಳಲ್ಲಿ ಮಸೆದುಬರುತ್ತೇನೆಂದು ಅಪ್ಪಾಜಿಯವರ ಅಪ್ಪಣೆಯನ್ನು ಪಡೆದು ಹೋಗಿ, ಒಂದು ವರ್ಷವೆಲ್ಲ ಹೊಸೆಯುತ್ತ ಕುಳಿತೇನು' ಎಂದು ಗೋಳುಕರೆದ.

'ನೀನೇ ಯಾರನ್ನಾದರೂ ಎತ್ತಿಕಟ್ಟು' ಎಂದಳು, ಶಾಂತಲೆ.

'ಆಮೇಲೆ ಅಪ್ಪಾಜಿಯವರಿಗೆ ತಿಳಿಯಲಿ. ಒಂದು ವೇಳೆ ನೀನೆ ಹೇಳಿಬಿಡುತ್ತೀಯೋ ಏನೊ! ಯಾರು ನಂಬಿದವರು?'

'ಮತ್ತೆ, ಏನೋ ಪರ್ವತವೇ ಬಂದು ತಲೆಯ ಮೇಲೆ ಕುಳಿತಂತೆ ಪೇಚಾಡುತ್ತಿರುವೆಯಲ್ಲ!'

'ಅಯ್ಯೋ ಅಕ್ಕ, ನಿನಗೆ ಹೇಗೆ ಗೊತ್ತಾಗಬೇಕು ನನ್ನ ಸಂಕಟ? ನೋಡು, ಈಗ ನನಗೆ ಮೈಯಲ್ಲಿ ಚೆನ್ನಾಗಿಲ್ಲ, ಸ್ವಲ್ಪ ನಿಧಾನಿಸಿರೆಂದು ಅಪ್ಪಾಜಿಯವರಿಗೆ ಹೇಳಬಾರದೆ?'

'ಹಾಗೇನು! ಅಯ್ಯೋ ಪಾಪ! ಹೇಳುತ್ತೇನೆ. ಒಂದೆರಡು ತಿಂಗಳಾದರೂ ನಿಧಾನಿಸಿ ಎಂದು ಹೇಳುತ್ತೇನೆ.'

'ಒಂದೆರಡು ವರ್ಷಗಳೇ ಮೈಯ್ಯಲ್ಲಿ ಚೆನ್ನಾಗಿರುವುದಿಲ್ಲ!'

'ಹಾಗಿದ್ದ ಮೇಲೆ ನೀನೇ ಹೇಳಿಕೋ. ಹೇಳಿದರೆ ಯಾರಾದರೂ ಒಪ್ಪುವಂತಿರಬೇಕು.'

ಅಕ್ಕನ ಆ ಮಾತನ್ನು ಕೇಳಿ, ಪೆಚ್ಚುಮೋರೆ ಹಾಕಿಕೊಂಡು ಕುವರ ಎದ್ದುಹೋದ. ಅವನು ಬಾಗಿಲು ದಾಟಿದನೊ ಇಲ್ಲವೊ, ಇತ್ತ ಶಾಂತಲೆಯೂ ಲಕ್ಷ್ಮಿಯೂ ನಗಲು ಮೊದಲುಮಾಡಿದರು. ನಗುವು ಉಕ್ಕಿ ಉಕ್ಕಿ ಬಂದಿತು. ಸಿಟ್ಟಿನಿಂದ ಹೋಗುತ್ತಿದ್ದ ಕುವರನಿಗೆ ಇವರ ನಗು ಕೇಳಿಸಿತು. ಅಲ್ಲಿಯೆ ನಿಂತು ಆಲಿಸಿದ. ಲಕ್ಷ್ಮಿನಕ್ಕಳು, ಶಾಂತಲೆ ನಕ್ಕಳು, ಲಕ್ಷ್ಮಿ ಇನ್ನೂ ನಕ್ಕಳು, ಶಾಂತಲೆ ಮತ್ತೂ ನಕ್ಕಳು. ಕುವರನಿಗೆ ಸಿಟ್ಟು ಬಂದಿತು. ಅಲ್ಲಿಂದ ಮುಂದಕ್ಕೆ ಬಿರಬಿರನೆ ಹೊರಟುಹೋದ.

ಆ ರಾತ್ರಿ ಏಕಾಂತದಲ್ಲಿರುವ ವೇಳೆ ಶಾಂತಲೆ ಪ್ರಭುಗಳಿಗೆ ಈ ವಿಷಯ ಅರುಹಿದಳು. ಪ್ರಭುಗಳು ಹೊಟ್ಟೆ ಹುಣ್ಣಾಗುವವರೆಗೂ ನಕ್ಕರು.

ಯಾರು ಎಷ್ಟು ಹೇಳಿದರೂ ಪ್ರಭುಗಳ ನಿಶ್ಚಯವನ್ನು ಯಾರಿಂದಲೂ ಸಡಿಲಿಸಲಾಗಲಿಲ್ಲ. ಶಾಂತಲೆ ಇನ್ನಿಲ್ಲದಷ್ಟು ಸಾಹಸಪಟ್ಟಳು. ಸಾರ್ಥಕವೇನೂ ಆಗಲಿಲ್ಲ. 'ದೇವಿ, ಆಗದ ಹೋಗದ ಮಾತುಗಳಿಂದ ಏನು ಫಲ? ನಾನು ಚೆನ್ನಾಗಿ ಯೋಚನೆ ಮಾಡಿ ಈ ನಿರ್ಧಾರಕ್ಕೆ ಬಂದಿದ್ದೇನೆ. ಅವನಿಗೇನಂತೆ ಕಷ್ಟ? ನನ್ನ ಹಾಗೆ ನಾಲ್ಕಾರು ಕನ್ಯೆಯರನ್ನು ಅವನು ಕೈಹಿಡಿಯಬೇಕಾಗಿಲ್ಲ. ಅವನ ಮನಸ್ಸಿಗೆ ಒಪ್ಪಿದ ಒಬ್ಬ ಕನ್ಯೆಯನ್ನು ಮದುವೆಯಾಗಲಿ. ತಕ್ಕ ಹೆಣ್ಣನ್ನು ನೀನೆ ಹುಡುಕು. ನೀನು ಆರಿಸಿದುದನ್ನು ಅವನು ಮನಸಾ ಒಪ್ಪುತ್ತಾನೆ, ಒಪ್ಪಿಸು' ಎಂದರು ಪ್ರಭುಗಳು.

ಶಾಂತಲೆಗೆ ಈ ವಿಷಯ ಬಹು ಸಂಕಟಕ್ಕಿಟ್ಟಿತು. ಮನದ ಇಕ್ಕಟ್ಟು ಇನಿಯಳ ಮುಖದಲ್ಲಿ ಪ್ರತಿಬಿಂಬಿಸಿದುದನ್ನು ಪ್ರಭುಗಳು ಕಂಡರು. ಆಗ ಶಾಂತಲೆಯ ಕೈ ಹಿಡಿದು ಬಳಿಯೆ ಕುಳ್ಳಿರಿಸಿಕೊಂಡು, ಪಿಸುಮಾತಿನಲ್ಲಿ ತಮ್ಮ ಮನಸ್ಸಿನಲ್ಲುಂಟಾಗಿರುವ ಎಲ್ಲ ವಿಚಾರಗಳನ್ನೂ ಪ್ರಭುಗಳು ಆಕೆಗೆ ತಿಳಿಸಿ ಬಿಟ್ಟರು. ಶಾಂತಲೆಯ ಮುಖ ಬೆವರಿತು, ಶರೀರವು ಭಯದಿಂದ ಕಂಪಿಸಿತು.

ಆಕೆ, ತನ್ನ ಹಣೆಯ ಕುಂಕುಮಸೌಭಾಗ್ಯವನ್ನೂ ಕುತ್ತಿಗೆಯೊಳಗಿನ ಮಾಂಗಲ್ಯ ಮಂಗಳವನ್ನೂ ಮುಟ್ಟಿಕೊಂಡು ಅಂತರಿಕ್ಷದ ಕಡೆ ಮುಖಮಾಡಿ, 'ವಿಜಯ ನಾರಾಯಣ!' ಎಂದಳು.

'ದೇವಿ, ಭಯಪಟ್ಟೆಯಾ?'

'ಇಲ್ಲ ಪ್ರಭೂ. ತಮಗೆ ಆ ಉದ್ಯಮದಲ್ಲಿ ಜಯವನ್ನು ಕೋರಿದೆ!'

'ನನ್ನ ಸೌಭಾಗ್ಯ ನೀವಿಬ್ಬರೂ. ನಿಮ್ಮ ಧರ್ಮ, ಶೀಲ, ರುಚಿ, ನೋಂಪಿಗಳು ನನಗೆ ಸರ್ವ ರಕ್ಷಣೆ.'

'ಪ್ರಭೂ, ಇದು ಪರಸ್ಪರ. ಇವುಗಳೆಲ್ಲ ಸೇರಿದರೂ ನಿಮ್ಮ ಪ್ರೀತಿ ಅನು ರಾಗಗಳಿಗೆ ಸಮನೆ? ನಮ್ಮ ಹೃದಯಕ್ಕೆ ಇದಕ್ಕಿಂತಲೂ ತಣ್ಪು ಏನುಂಟು?'

'ದೇವಿ, ನಿನ್ನ ಮಾತುಗಳು ನನಗೆ ಅಮೃತದಷ್ಟು ರುಚಿ. ನಿನ್ನ ಬಳಿ ಯಲ್ಲಿದ್ದರೆ ನನಗೆ ಸ್ವರ್ಗದಲ್ಲಿ ಇರುವಂತೆ ಭಾಸವಾಗುವುದು. ನನಗೆ ಇನ್ನೆಲ್ಲೂ ಇನ್ನಾರ ಬಳಿಯಲ್ಲಿಯೂ ಈ ಸುಖ, ಈ ಸಂತುಷ್ಟಿ, ಈ ಸಮಾಧಾನ ಇರುವು ದಿಲ್ಲ. ದೇವಿ, ಇದನ್ನು ಮುಖಸ್ತುತಿಯೆಂದು ಭಾವಿಸಬೇಡ.'

'ಪ್ರಭುಗಳು ನಮ್ಮೆಲ್ಲರ ವಿಷಯದಲ್ಲಿಯೂ ಯಾವಾಗಲೂ ಹೀಗೆಯೇ ಇರಬೇಕೆಂದು ಪ್ರಾರ್ಥಿಸುತ್ತೇನೆ.'

'ನೀನೂ ನನ್ನ ಪಾಲಿಗೆ ಹೀಗೆಯೆ ಅಮೃತವಾಗಿರೆಂದು ನಾನೂ ದೇವ ರನ್ನು ಪ್ರಾರ್ಥಿಸುತ್ತೇನೆ. ಈ ಎಲ್ಲ ವಿಜಯಗಳೂ, ಎಲ್ಲ ಸಂಪತ್ತೂ ನಿನ್ನವು, ನಿನ್ನಿಂದ, ನಿನ್ನ ಶಾರದೆಯಿಂದ, ನಿನ್ನ ಚೆನ್ನಕೇಶವನಿಂದ.'

'ಹೌದು, ನೀವು ಕೊನೆಗೆ ಹೇಳಿದ ಮಾತುಗಳು ಸತ್ಯವಾದವು. ಎಲ್ಲವೂ ಚೆನ್ನಕೇಶವನ ಕೃಪೆ. ನಮ್ಮಿಂದ ಆಗುವುದು ನಿಮ್ಮ ಶುಶ್ರೂಷೆ ಮಾತ್ರ . . . ಸ್ವಾಮಿ, ಒಂದು ಬೇಡಿಕೆ.'

'ಹೇಳು ದೇವಿ, ಹೇಳು. ಅಪೇಕ್ಷೆಪಡಬಾರದ ವಿಷಯದಲ್ಲಿ ನಿನ್ನ ಮನಸ್ಸು ಪ್ರವರ್ತಿಸುವುದಿಲ್ಲವೆಂಬುದನ್ನು ನಾನು ಬಲ್ಲೆ. ಆದ್ದರಿಂದ ಶಂಕೆ ಯಿಲ್ಲದೆ ಕೇಳು.'

'ದೇವನು ಎಲ್ಲವನ್ನೂ ಕರುಣಿಸಿರುವನು. ಸಂತತಿಸೌಭಾಗ್ಯ ಮಾತ್ರ ನನಗೆ ಇಲ್ಲವೆಂದು ಕಾಣುತ್ತದೆ.'

'ಅದು ನಮ್ಮ ನಮ್ಮ ಪೂರ್ವಕರ್ಮಗಳನ್ನು ಅನುಸರಿಸಿದುದು. ಮಕ್ಕಳು

ಸೌಭಾಗ್ಯಗಳೂ ಆಗಬಹುದು, ದೌರ್ಭಾಗ್ಯಗಳೂ ಆಗಬಹುದು. ದೈವ ಕೊಟ್ಟರೂ ಸಂತೋಷ, ಕೊಡದಿದ್ದರೂ ಸಂತೋಷ.'

'ಪ್ರಭುಗಳು ಅವಧರಿಸಬೇಕು. ಹಿಂದೆ ಒಂದು ದಿನ ಅತ್ತೆಯವರು ನನ್ನನ್ನು ಪ್ರೀತಿಯಿಂದ ಕರೆದು, ಹತ್ತಿರ ಕೂಡಿಸಿಕೊಂಡು ಹೀಗೆಂದರು: "ಮಗಳೆ, ಸಂತತಿ ಪಡೆ. ಈ ರಕ್ತವನ್ನು ಅಳಿಯಗೊಡಬೇಡ. ಸಂತತಿಯನ್ನು ಮುಂದುವರಿಸುವ ಭಾಗ್ಯ ನಿನ್ನದು. ಇದೊಂದೇ ನಮ್ಮ ಕೊನೆಯ ಆಶೆ. ನಾವು ಜೀವವನ್ನು ಹಿಡಿದು ನಿಲ್ಲಿಸಿಕೊಂಡಿರುವುದೂ ಇದಕ್ಕಾಗಿಯೆ, ಅಪ್ಪಾಜಿಗೆ ಒಂದು ಗಂಡುಮಗು ಆಗಲೆಂದು. ಆಸೆ ತೀರದೆ ನಾವು ಅಳಿದರೆ ನಮ್ಮ ಆತ್ಮಕ್ಕೆ ಖಂಡಿತ ಶಾಂತಿಯಿರದು" ಎಂದು ನನ್ನ ತಲೆಯಮೇಲೆ ಕೈಯಿಟ್ಟು ಹೇಳಿದರು.'

'ದೇವಿ, ಈಗ ಕಾಲ ಮಿಂಚಿ ಹೋದುದೇನು! ನಿನಗೆ ಮಕ್ಕಳಾಗುವುದಿಲ್ಲವೆಂದು ನೀನು ಹೇಗೆ ಬಲ್ಲೆ?'

'ಸ್ವಾಮಿ, ಎರಡು ವರ್ಷಗಳಿಗಿಂತ ಹೆಚ್ಚಾಗಿಯೆ ನಾವು ಕೂಡಿ ಇದ್ದೆವಲ್ಲವೆ!'

'ದೇವಿ, ಇದೇನು ನಿನ್ನ ಭೀತಿ ನನಗೆ ಆಶ್ಚರ್ಯವಾಗುತ್ತಿದೆ.'

'ಅದು ನನ್ನ ಹೃದಯಕ್ಕೆ ಮಾತ್ರ ವೇದ್ಯ.'

'ಭದ್ರೆ, ನೀನು ಭಯಾವೃತಳಾಗಿದ್ದೀಯೆ.'

'ಇರಬಹುದು. ಆ ಶಂಕೆ ದೂರವಾಗಲಿ. ನಿಮ್ಮ ಆಶೀರ್ವಾದವಿರಲಿ. ಭಗವಂತನ ಕರುಣೆಯಿರಲಿ. ಆದರೂ . . . .'

'ಆದರೂ ಏನು....ದೇವಿ? ಹೇಳು.'

'ಲಕ್ಷ್ಮಿಯೂ ನಿಮ್ಮ ಆದರ ಅಭಿಮಾನಗಳಿಗೆ ಪಾತ್ರಳಾಗಲಿ.'

'ಶಾಂತಲೆ, ಇದೇನು ನೀನು ಹೇಳುವ ಮಾತು! ಚೋದ್ಯವಾಗಿದೆಯಲ್ಲ! ನನಗೆ ಲಕ್ಷ್ಮಿಯಲ್ಲಿ ಪ್ರೇಮ ಅಭಿಮಾನಗಳಿಲ್ಲವೆ? ಆ ವಿಷಯದಲ್ಲಿ ನೀನು ಸಂಶಯಪಡಬೇಕಾಗಿಯೆ ಇಲ್ಲ. ಲಕ್ಷ್ಮಿ ನಿನ್ನಂತೆಯೆ ನನಗೆ ಪ್ರೇಯಸಿ, ಶ್ರೇಯಃಕಾಂಕ್ಷಿ. ಲಕ್ಷ್ಮಿ ನಿನ್ನೊಡನೆ ಹಾಗೆಂದಳೆ?'

'ಇಲ್ಲ ಪ್ರಭು. ಅವಳೆಂದೂ ನನ್ನೊಡನೆ ಹಾಗೆಂದವಳೆ ಅಲ್ಲ. ಅವಳು ನನ್ನ ತಂಗಿಯಲ್ಲವೆ? ನನಗೆ ಆಗದಿದ್ದರೆ, ಅವಳಿಗಾದರೂ ಒಂದು ಗಂಡುಮಗುವಾಗಲಿ. ಅದು ನನ್ನ ಮಗುವೆ ಆದೀತು.'

'ದೇವಿ ನಿಮ್ಮಿಬ್ಬರ ಅನ್ಯೋನ್ಯಗಳನ್ನು ಕಂಡಷ್ಟೂ, ಕೇಳಿದಷ್ಟೂ ನನಗೆ ಅಮೃತವನ್ನುಂಡಷ್ಟು ತೃಪ್ತಿಯಾಗುತ್ತದೆ. ಸಹೋದರಿಯರಲ್ಲದಿದ್ದರೂ, ಹಿಂದೆ ಯಾವುದೇ ಕಾಲದಲ್ಲಾದರೂ ಒಂದೇ ತಾಯ ಹೊಟ್ಟೆಯಲ್ಲಿ ಹುಟ್ಟಿದವರೇ ಆಗಲಿ ನಿಮ್ಮಷ್ಟು ಅನ್ಯೋನ್ಯದಿಂದಿದ್ದರೆ! ನನಗೆ ಆಶ್ಚರ್ಯವಾಗುತ್ತದೆ. ದೇವಿ, ನಿನ್ನ ಹೃದಯ ಅಮೃತಸಾಗರ. ಇದು ವಿಷ್ಣುವರ್ಧನನ ಪುಣ್ಯ.'

ಶಾಂತಲೆಯ ಮುಖ ನಾಚಿಕೆಯಿಂದ ತಟ್ಟನೆ ಕೆಂಪಡರಿತು. ತಲೆ ತಗ್ಗಿಸಿದಳು. ಪ್ರಭುವು ಶಾಂತಲೆಯ ಗಲ್ಲವನ್ನು ಮೃದುವಾಗಿ ಹಿಡಿದೆತ್ತಿ, ದೃಷ್ಟಿಯಲ್ಲಿ ದೃಷ್ಟಿಯನ್ನು ನಟ್ಟು, ಮಂದಹಾಸದಿಂದ 'ನಾನು ಬಲ್ಲೆ. ಲಕ್ಷ್ಮಿಯ ಮಗುವನ್ನು ನಿನ್ನ ಮಗುವೆಂದೇ ಭಾವಿಸುವ ಸುಹೃದಯ ನಿನ್ನದು. ಆದರೆ, ಅದರಿಂದ ನೀನೆಂದುಕೊಂಡಿರುವ ಸಮಸ್ಯೆ ಬಗೆ ಹರಿಯದು' ಎಂದರು.

'ಏಕೆ, ಪ್ರಭು?'

'ಹೊಯಿಸಳ ವಂಶದಲ್ಲಿ ಯುವರಾಜ ಪಟ್ಟವು ಯಾವಾಗಲೂ ಪಟ್ಟಮಹಿಷಿಯ ಪುತ್ರನಿಗೇ.'

ಶಾಂತಲೆ ಆ ಮಾತಿಗೆ ಅಂಜಿ 'ಪಟ್ಟಮಹಿಷಿಗೆ ಪುತ್ರನಾಗದಿದ್ದರೆ?' ಎಂದಳು. ಈ ಮಾತುಗಳನ್ನಾಡಿದಾಗ ಶಾಂತಲೆಯ ಹಣೆ ಬೆವರಿತು.

'ಆಗ ಪಟ್ಟಮಹಿಷಿಯ ಸ್ಥಾನಕ್ಕೆ ಇತರರನ್ನು ತಂದುಕೊಳ್ಳಲಾಗುವುದು. ಆದರೆ ಇದುವರೆಗೆ ಅಂತಹ ಸಂದರ್ಭವೇ ಬಂದಿಲ್ಲ.'

ಶಾಂತಲೆ ದೀರ್ಘವಾಗಿ ನಿಟ್ಟುಸಿರನ್ನು ಬಿಟ್ಟು, ಹೃದಯವನ್ನು ಸಂತೈಸಿಕೊಳ್ಳುವ ರೀತಿಯಲ್ಲಿ ಹೃದಯದ ಮೇಲೆ ಕೈಯಿಟ್ಟುಕೊಂಡು ತಟ್ಟನೆ ಪತಿಯ ಪಾದಗಳೆರಡನ್ನೂ ಬಿಗಿಯಾಗಿ ಹಿಡಿದುಕೊಂಡು 'ಸ್ವಾಮಿ, ನನ್ನನ್ನು ಮನ್ನಿಸಬೇಕು. ನಿಮ್ಮ ಮನಸ್ಸಿಗೆ ನೋವುಂಟಾಗುವಂತೆ ಮಾತನಾಡಿದೆ. ಸರ್ವಾಪರಾಧವಾಯಿತು. ಕ್ಷಮೆ ಬೇಡುತ್ತಿದ್ದೇನೆ' ಎಂದಳು.

ವಿಷ್ಣುವರ್ಧನ ಪ್ರಭುವು ಕೈಗಳಿಂದ ಶಾಂತಲೆಯನ್ನು ಹಿಡಿದು ಮೇಲಕ್ಕೆ ಎತ್ತಿದರು, ಹತ್ತಿರ ಕೂಡಿಸಿಕೊಂಡರು. 'ಅಪರಾಧವೇನು ಮಾಡಿದೆ, ಏನೇನೂ ಇಲ್ಲವಲ್ಲ!' ಎಂದರು.

'ಪಟ್ಟಮಹಿಷಿಗೆ ಪುತ್ರನಾಗದಿದ್ದರೆ, ಎಂದು ಕೇಳಿದೆನಲ್ಲವೆ? ಈ ದೋಷಕ್ಕೆ ಪ್ರಾಯಶ್ಚಿತ್ತವೇನು?' ಎಂದಳು ಶಾಂತಲೆ.

ಪ್ರಭುವು ಮಂದಹಾಸದಿಂದ 'ಇದುವೆ' ಎನ್ನುತ್ತ ಸತಿಯನ್ನು ಆತ್ಮಾನಂದದಿಂದ ಅಪ್ಪಿಕೊಂಡು, 'ದೇವಿ, ನಮ್ಮ ಇಬ್ಬರ ಶರೀರಗಳು ಏಕೆ ಬೇರೆ ಬೇರೆಯಾಗಿವೆ? ಒಂದೆ ಆಗಬಾರದೇಕೆ? ನೋಡು, ಪರಶಿವನು ಅರ್ಧನಾರೀಶ್ವರನಾದನು. ಮನುಷ್ಯರಿಗೆ ಈ ಯೋಗ್ಯತೆಯೇ ಇಲ್ಲವೆ? ದೇವತೆಗಳು ಮನುಷ್ಯರಿಗೆ ಬಹು ವಿಧಗಳಲ್ಲಿ ಮೋಸಮಾಡಿದ್ದಾರೆ' ಎಂದರು.

ಶಾಂತಲೆ ಪತಿಯ ಆಲಿಂಗನದಿಂದ ಪುಳಕಾಂಕಿತಳಾಗಿ, ಸುಖ ಮಂದಹಾಸದಿಂದ 'ಸ್ವಾಮಿ, ನನ್ನ ಪಟ್ಟವನ್ನು ನಾನೇ ಲಕ್ಷ್ಮಿಗೆ ಕೊಡುತ್ತೇನೆ. ಇದಕ್ಕೆ ನೀವು ಒಪ್ಪಿ ಅವಳನ್ನು ಪಟ್ಟಮಹಿಷಿಯನ್ನಾಗಿ ಮಾಡಿಕೊಳ್ಳಿ. ಲಕ್ಷ್ಮಿ ಪಟ್ಟದ ರಾಣಿಯಾಗುವುದನ್ನು ನೋಡುವ ಹಂಬಲು ನನಗಿದೆ' ಎಂದಳು.

ಪ್ರಭುಗಳು ಶಾಂತಲೆಯನ್ನು ನೋಡಿ, ತಮ್ಮ ಮುಖವನ್ನು ಎರಡು ಕೈಗಳಿಂದಲೂ ಮುಚ್ಚಿಕೊಂಡು 'ದೇವಿ, ಈಗ ನೀನು ನನ್ನನ್ನು ಕ್ಷಮಿಸಬೇಕು. ಈ ಕೋರಿಕೆ ನೀನು ಕೇಳತಕ್ಕದ್ದಲ್ಲ, ನಾನು ಒಪ್ಪತಕ್ಕದ್ದೂ ಅಲ್ಲ. ಲಕ್ಷ್ಮಿ ಆ ಸ್ಥಾನಕ್ಕೆ ಅನರ್ಹಳೆಂದಲ್ಲ . . . ದೇವಿ, ನಿನ್ನ ನಿರ್ಮಮಕ್ಕೆ ನಾನು ತಲೆ ಬಾಗುತ್ತೇನೆ' ಎಂದರು.

ಶಾಂತಲೆ ಕಿವಿಗಳನ್ನು ಮುಚ್ಚಿಕೊಂಡು 'ಶಾಂತಂ ಪಾಪಂ, ಶಾಂತಂ ಪಾಪಂ. ಇದೇನು ನೀವೆನ್ನುವ ಮಾತು! ನಾನು ಚಿಕ್ಕವಳಲ್ಲವೆ?' ಎಂದಳು.

'ದೇವಿ, ದೇಹಪ್ರಮಾಣದಲ್ಲಿ, ವಯೋಪ್ರಮಾಣದಲ್ಲಿ ನೀನು ನನಗೆ ಚಿಕ್ಕವಳು. ನಿನ್ನ ಆತ್ಮವು ಮಾತ್ರ ಬಹು ದೊಡ್ಡದು, ಬಹು ದೊಡ್ಡದು. ನನ್ನ ನಮನ ಅದಕ್ಕೆ.'

'ಪ್ರಭು, ಲಕ್ಷ್ಮಿಯನ್ನೂ ನೀವು ಅರಿಯಬೇಕು. ಅವಳ ಆತ್ಮವು ನನ್ನದಕ್ಕಿಂತ ಎಷ್ಟೋ ಹಿರಿದು. ಅಕ್ಕನು ಪ್ರಭುಗಳ ಕೈಹಿಡಿಯುವಳೆಂದು ಭಾವಿಸಿ, ಇನ್ನು ತನ್ನ ಅಯ್ಯನು ತನ್ನನ್ನು ಬೇರೆ ಯಾವ ಊರಿಗಾದರೂ ಮದುವೆಮಾಡಿ ಕೊಟ್ಟರೆ ಅಕ್ಕನ ಸಹವಾಸ ತನಗೆ ತಪ್ಪಿಹೋಗುವುದಲ್ಲಾ ಎಂಬ ವ್ಯಸನದಿಂದ ತಾನು ಮದುವೆಯಾಗೆನೆಂದೇ ನಿರ್ಧರಿಸಿಬಿಟ್ಟಳು. ಇಂತಹ ತಂಗಿಗೆ ನನ್ನ ಸುಕೃತವೆಲ್ಲವನ್ನು ಧಾರೆಯೆರೆದರೂ ಸ್ವಲ್ಪವೆ.'

'ಈ ಗ್ರಹಚಾರಕ್ಕೇ ನಾನು ನಿಮ್ಮಿಬ್ಬರನ್ನೂ ಮದುವೆಯಾದುದು.'

ಶಾಂತಲೆ ಮೋಹಕವಾಗಿ ನಕ್ಕು 'ಗ್ರಹಚಾರವಲ್ಲವದು, ಗ್ರಹಮೈತ್ರ. ಆದಕ್ಕೇ ನಾವಿಬ್ಬರೂ ಒಂದು.'

'ನಾವಿಬ್ಬರೂ ಅಂದರೆ, ನೀನೂ ನಾನೂ ಎಂತಲೆ? ಅಥವಾ ನೀನೂ ಲಕ್ಷ್ಮಿಯೂ ಎಂತಲೆ?'

'ಸ್ವಾಮಿ, ನಾನೂ ನೀವೂ, ನೀವೂ ಲಕ್ಷ್ಮಿಯೂ, ಆದ್ದರಿಂದ ನಾನೂ ಲಕ್ಷ್ಮಿಯೂ.'

'ತಥಾಸ್ತು, ತಥಾಸ್ತು.'

'ಆದ್ದರಿಂದ ಲಕ್ಷ್ಮಿಯೂ ನಿಮಗೆ ಪಟ್ಟಮಹಿಷಿ.'

'ದೇವಿ, ನೀನು ಮಾತಿನಲ್ಲಿ ಸರಸಿ, ಚತುರೆಯೂ ಹೌದು. ಆದರೂ ನಿನಗೆ ಹೇಳುತ್ತೇನೆ: ಯಾವ ಅರಸನಿಗೂ, ಯಾವ ಕಾಲದಲ್ಲೂ ಇಬ್ಬರು ಪಟ್ಟ ಮಹಿಷಿಯರು ಏಕಕಾಲದಲ್ಲಿ ಇದ್ದುದಿಲ್ಲ.'

'ಇಬ್ಬರು ಎಲ್ಲಿಂದ ಬಂದರು? ನಾವು ಮೂವರು ಒಂದೇ ಅಲ್ಲವೆ?'

'ಅಯ್ಯೋ! ನೀನು ನನ್ನನ್ನು ಮಾತಿನಲ್ಲಿ ಸಿಕ್ಕಿಸಿಕೊಂಡುಬಿಡುತ್ತೀಯೆ.'

'ಸ್ವಾಮಿ, ಅತ್ತೆಯವರು ನನ್ನ ತಲೆಯ ಮೇಲೆ ಕೈಯಿಟ್ಟು ಹೇಳಿದ ಮಾತು—ಹೊಯಿಸಳ ರಾಜರ ರಕ್ತವನ್ನು ಅಳಿಯಗೊಡಬೇಡ—ಎಂದು. ನಾನು ಅತ್ತೆಯವರಿಗೆ ಮಾತುಕೊಟ್ಟಂತೆಯೆ ಆಯಿತು. ಅವರ ಆತ್ಮಕ್ಕೆ ತೃಪ್ತಿಯಾಗಬೇಕು, ಪ್ರಭು. ಅತ್ತೆಯವರ ಮಾತುಗಳು ನನ್ನ ಎದೆಯ ಮೇಲೆ ಕೂತಿವೆ. ಅದೇ ನನಗೆ ದಿನ ರಾತ್ರಿ ಕೊರಗಾಗಿದೆ. ಒಂದು ವೇಳೆ ನಾನಳಿದರೂ ನನ್ನೆದೆ ಸುಡದು.'

ಪ್ರಭುಗಳು ತಟ್ಟನೆ ಶಾಂತಲೆಯ ಬಾಯನ್ನು ಮುಚ್ಚಿ ಹಿಡಿದು 'ಏನು ಮಾತು ಇದು ದೇವಿ! ನಿನ್ನ ಮಾತಿನ ಸುಧೆಯಲ್ಲಿ ಸ್ವರ್ಗಕ್ಕೆ ಏರಿದ ನನ್ನನ್ನು, ಅಲ್ಲಿಂದ ನರಕಕ್ಕೆ ತಲೆಕೆಳಗಾಗಿ ಬೀಳುವಂತೆ ಮಾಡಿದೆ. ಇದು ನ್ಯಾಯವಲ್ಲ ದೇವಿ, ನ್ಯಾಯವಲ್ಲ' ಎಂದರು.

'ನಾನು ಮಾತನಾಡಲರಿಯದವಳು, ದೇವ. ನಿಮ್ಮ ಮನಸ್ಸನ್ನು ನೋಯಿಸಬೇಕೆಂದು ಮಾತನಾಡಿದವಳಲ್ಲ. ಅತ್ತೆಯವರಿಗೆ ಕೊಟ್ಟ ಮಾತನ್ನು ಹೇಗೆ ಉಳಿಸಿಕೊಳ್ಳಲಿ ಎಂಬ ಕಾತರದಲ್ಲಿ ಔಚಿತ್ಯ ಮೀರಿದೆ. ಮನ್ನಿಸಬೇಕು.'

'ಯಾರು ಏನೇ ಕೋರಲಿ, ಅದಕ್ಕೆ ಪೂರ್ವಕರ್ಮಾನುಫಲವಿರಬೇಕು,

ದೈವಾನುಗ್ರಹವೂ ಇರಬೇಕು. ನೋಡು ದೇವಿ, ನಾನು ಹೇಳುವುದನ್ನೂ ಗಮನಿಸು: ನನ್ನ ಶಾಂತಲೆ ನನಗೆ ಇರುವ ವರೆಗೂ ಇನ್ನ್ಯಾರಿಗೂ, ಇನ್ನ್ಯಾರಿಗೂ ಏಕೆ, ಮೂರುಲೋಕಗಳಲ್ಲಿ ಅಸದೃಶಳಾದ ಸ್ತ್ರೀರತ್ನ ಬಂದರೂ, ನಿನ್ನ ಸ್ಥಾನಕ್ಕೆ ಅವಳನ್ನು ತೆಗೆದುಕೊಳ್ಳೆ. ಇದು ಖಂಡಿತ. ನನಗೆ ಸಂತತಿ ಇದ್ದರೆ ಇರಲಿ, ಇಲ್ಲದಿದ್ದರೆ ಹೋಗಲಿ. ನನ್ನ ಮಟ್ಟಿಗೆ ಇದು ಖಂಡಿತ. ಈಗ ನಿನ್ನನ್ನು ಕೇಳು ತ್ತೇನೆ: ಒಂದು ವೇಳೆ ಲಕ್ಷ್ಮಿ ಪಟ್ಟಮಹಿಷಿಯಾಗಿ ಅವಳಿಗೂ ಮಕ್ಕಳಾಗದೆ ಹೋದರೆ, ಆಗ ನಿನ್ನ ಅತ್ತೆಯವರ ಆಶಯವನ್ನು ಉಳಿಸಿಕೊಳ್ಳಲು ನನ್ನನ್ನು ಇನ್ನೇನು ಮಾಡಬೇಕೆನ್ನುವೆ? ಇನ್ನೂ ಒಬ್ಬ ಪಟ್ಟಮಹಿಷಿಯೆ! ಅವಳಿಗೂ ಆಗದಿದ್ದರೆ? ಇದಕ್ಕೆ ಕೊನೆಯೆಲ್ಲಿ?'

ಶಾಂತಲೆ ದಿಕ್ಕುತೋಚದವಳಾಗಿ 'ಅಂತಹ ಸಂದರ್ಭದಲ್ಲಿ ಏನು ಮಾಡುವುದು ಸ್ವಾಮಿ?' ಎಂದಳು.

'ರಕ್ತದ ಗುಣ ಎಲ್ಲಾ ಕಾಲಕ್ಕೂ ಒಂದೇ ಸಮನೆ ಇರುವುದೆನ್ನುವೆ ಯೇನು?'

'ನಾನರಿಯೆ, ದೇವ.'

'ಒಂದೆರಡು ತಲೆಮಾರುಗಳಲ್ಲೆ ವಂಶಾನುಗತವಾದ ಗುಣಗಳು ಬದಲಾ ಗುತ್ತ ಹೋಗುತ್ತವೆ—ಕಾಲ, ದೇಶ, ವರ್ತಮಾನಗಳು ಬದಲಾಗುವಂತೆ. ಧರ್ಮಿಯಾದ ರಾಜನು, ತನ್ನ ಪುತ್ರನೇ ಆಗಲಿ ಅವನು ಅವಿವೇಕಿಯಾಗಿದ್ದರೆ, ಗುಣಹೀನನಾಗಿದ್ದರೆ, ತಾನು ಕಾಪಾಡಿಕೊಂಡು ಬಂದ ರಾಜ್ಯವನ್ನು ಅವನ ಕೈಗೆ ಕೊಡಬಾರದು. ಅದು ವಂಶದ ಕೀರ್ತಿಗೆ ಕೊಡಲಿಯಾಗುವುದಿರಲಿ, ಮಕ್ಕಳಂತಿರುವ ಪ್ರಜೆಗಳೆಲ್ಲ ಆ ದುರ್ಮಾರ್ಗನ ಆಡಳಿತಕ್ಕೆ ಸಿಕ್ಕಿ, ದೇಶದಲ್ಲಿ ಕ್ಷೋಭೆ ದುರ್ಭಿಕ್ಷಗಳುಂಟಾಗಿ, ಪ್ರಜೆಗಳು ಧರ್ಮಬಾಹಿರರಾಗುತ್ತಾರೆ. ಅಂತಹ ಸಂಕಟಗಳಿಗೆ ಎಡೆ ಕೊಡದೆ, ಉತ್ತಮ ಗುಣಗಳುಳ್ಳವನನ್ನು, ಸತ್ತ್ವ ಶಕ್ತಿಯುಳ್ಳವನನ್ನು ದತ್ತು ತೆಗೆದುಕೊಂಡು ರಾಜ್ಯವನ್ನು ಅವನ ಕೈಲಿಡುವುದು ಲೇಸು.'

'ಆಗ ಆತ್ಮಜನಿಗೂ ದತ್ತಪುತ್ರನಿಗೂ ವೈಷಮ್ಯಗಳುಂಟಾಗಿ, ಆಗಲೂ ದೇಶಕ್ಕೆ ಅನರ್ಥವುಂಟಾಗಬಹುದಲ್ಲವೆ?'

'ಆಗಬಹುದು, ಆಗುವುದು. ಧರ್ಮಿಯಾದ ಅರಸನು ತನ್ನ ಕರ್ತವ್ಯ

ವನ್ನು ಮಾಡಿಬಿಡಬೇಕು. ಇದರ ಮೇಲೆ ದೈವಸಂಕಲ್ಪವಿದ್ದಂತೆ. ಯೋಚಿಸಿ ನೋಡು: ನಿನ್ನ ತಮ್ಮ ಯಾವ ಭಾಗದಲ್ಲಿ ಕಡಮೆ ಇದ್ದಾನೆ? ದೇಶವೇ ಅವನನ್ನು ಪ್ರೀತಿಸುತ್ತದೆ, ಗೌರವಿಸುತ್ತದೆ; ಧೈರ್ಯ, ಶಕ್ತಿ, ಸಾಹಸಗಳಲ್ಲಿ ಅವನು ಕಡಮೆಯೆ? ವಿದ್ಯೆ, ವಿನಯಗಳಲಿ ಕುಂದೆ? ಇಂತಹನಲ್ಲವೆ ರಾಜನಾಗಬೇಕಾದುದು? ನಮಗೆ ಮಕ್ಕಳಿಲ್ಲವೆಂದು, ನಿನ್ನ ಮನವಾಗಲಿ, ನನ್ನ ಮನವಾಗಲಿ ಏಕೆ ವ್ಯಥೆಪಡಬೇಕು?'

'ಅಹುದು, ಸ್ವಾಮಿ. ಕುವರನಂತಹ ಪುತ್ರ ಲಭಿಸುವುದಾದರೆ ಮೂರು ಜನ್ಮಗಳು ತಪಸ್ಸು ನಿಲ್ಲಬಹುದು.'

'ಶಾಂತಲೆ, ಇನ್ನು ನಿನ್ನ ಮನಸ್ಸು ತಳಮಳಿಸುವುದು ಬೇಡ. ಕುವರನಲ್ಲಿ ನಿನಗಿರುವ ಸೋದರವಾತ್ಸಲ್ಯವನ್ನು ನಾನು ನಿನ್ನ ಕೈಹಿಡಿದ ದಿನವೇ ಕಂಡುಕೊಂಡೆ. ಅದರಿಂದ ನನ್ನ ಮನಸ್ಸಿಗೆ ಬಹು ಸುಖವಾಯಿತು. ಲಕ್ಷ್ಮಿಯೂ ಕುವರನಲ್ಲಿ ನಿನ್ನಷ್ಟೇ ವಿಶ್ವಾಸಿಯಾಗಿರುವಳು. ನಿನ್ನ ಅತ್ತೆಯವರಿಗಂತೂ ಅವನು ಮೊಮ್ಮಗನೇ. ಇದರಿಂದ ಆಕೆಯ ಆತ್ಮಕ್ಕೆ ಖಂಡಿತ ಆತೃಪ್ತಿಯಾಗದು. ಲಕ್ಷ್ಮಿಯ ವಿಷಯದಲ್ಲಿ ನನಗೆ ಮಧುರ ಭಾವನೆ ಇಲ್ಲವೆಂದು ನೀನು ಭಾವಿಸಬೇಡ. ನೀನೆಷ್ಟು ಗುಣವತಿಯೋ, ನಿನ್ನ ತಂಗಿಯೂ ಅಷ್ಟೇ ಗುಣವತಿ. ನನಗೆ ಅಷ್ಟೇ ಪ್ರಿಯತಮೆ.'

'ಈಗ ನನಗೆ ಆನಂದವಾಯಿತು, ದೇವ.'

'ನಿಮ್ಮಿಬ್ಬರ ಪ್ರೇಮದಿಂದ, ಕುವರನ ಭಕ್ತಿಯಿಂದ, ಪಂಡಿತರ ಆದರ ವಿಶ್ವಾಸಗಳಿಂದ, ಪ್ರಜೆಗಳ ಪ್ರೀತಿ ಆಶೀರ್ವಾದಗಳಿಂದ ನಾವು ತುಷ್ಟರಾಗಿದ್ದೇವೆ, ಸಂತುಷ್ಟರಾಗಿದ್ದೇವೆ. ಇದಕ್ಕಿಂತ ಹೆಚ್ಚಿಗೆ ಏನು ಬೇಕು!'

ಪ್ರಭುಗಳು ಶಾಂತಲೆಯನ್ನು ಆನಂದದಿಂದ ಆಲಿಂಗಿಸಿಕೊಂಡು 'ಸಮಾಧಾನವಾಯಿತೆ?' ಎಂದು ಕೇಳಿ, ಲಕ್ಷ್ಮಿಯನ್ನು ನೋಡಲು ಹೋದರು.

§

ಪ್ರಭುಗಳ ಮನಸ್ಸಿನಲ್ಲಿ ದೊಡ್ಡ ಸಂಕಲ್ಪ ಒಂದು ಉದ್ಭವಿಸಿತು. ಅದು ಚಕ್ರಾಧಿಪತಿಗಳಿಗೆ ಮಾತ್ರವೆ ಸಾಧ್ಯವಾದ ಅಶ್ವಮೇಧಯಾಗ. ಅದಕ್ಕೆ ಮೊದಲು ಹೊಯಿಸಳ ರಾಜ್ಯವನ್ನು ದಕ್ಷಿಣ ಪಶ್ಚಿಮ ಸಮುದ್ರಗಳವರೆಗೆ ವಿಸ್ತರಿಸಬೇಕೆಂಬ

ಆಲೋಚನೆಯೂ ಪ್ರಭುಗಳಿಗೆ ಉಂಟಾಯಿತು. ವಿಷ್ಣುವರ್ಧನ ಪ್ರಭುವಿಗೆ ತಮ್ಮ ಭುಜಬಲದಲ್ಲಿ ಅಭಿಮಾನವಿತ್ತು. ಕುವರವಿಷ್ಣು ಈಗ ಅವರ ಬಲಭುಜವೆ ಆಗಿದ್ದ. ಬೊಪ್ಪಣ ಇನ್ನೊಂದು ಭುಜವಾದ. ಮಾವ ಮಾರಸಿಂಗಮಯ್ಯ, ಬೋಕಿಮಯ್ಯ, ಕೇತಮಲ್ಲನಾಯಕ, ಪುನೀಸ, ಚಿಕ್ಕಮರಿಯಾನೆ ಮೊದಲಾದ ಚಂಡ ಪ್ರಚಂಡ ದಂಡನಾಯಕರುಗಳ ಅಖಂಡ ಸಹಾಯ ಬಲವಿತ್ತು. ಅತುಳ ಪರಾಕ್ರಮಿಗಳೂ, ಅಮಿತ ಯುದ್ಧಾನುಭವಿಗಳೂ ಆದ ವೀರಾಳುಗಳ ಅಪಾರ ಸೇನೆಯಿತ್ತು. ಅಸಂಖ್ಯ ಗಜ, ತುರಗ, ರಥಸಮೂಹವಿತ್ತು. ಹೇರಳವಾದ ಧನ, ಕನಕ ಸಂಗ್ರಹವಿತ್ತು. ಇಷ್ಟೆಲ್ಲ ಒದಗಿರುವಾಗ ಈ ಮಹಾ ಕಾರ್ಯವನ್ನು ಸಾಧಿಸಲೇಬೇಕೆಂಬ ಅಭಿಮಾನ ಪ್ರಭುಗಳಲ್ಲಿ ಹುಟ್ಟಿದುದೇನಾಶ್ಚರ್ಯ!

ಈ ಕಾರ್ಯವನ್ನು ಕೈಗೊಳ್ಳುವ ಮೊದಲು ಹೊಯಿಸಳೇಶ್ವರ, ಶಾಂತಲೇಶ್ವರ ದೇವಾಲಯಗಳಲ್ಲಿ ಮಹಾದೇವನನ್ನು ಪ್ರತಿಷ್ಠೆಮಾಡಿ, ಕುವರನ ಮದುವೆಯನ್ನೂ ನಡೆಸಬೇಕೆಂದು ಪ್ರಭುಗಳು ನಿರ್ಧರಿಸಿದರು.

ರಾಜಮಾತೆಯವರ ವರ್ಷಾಬ್ದಿಕ ಮುಗಿಯಿತು. ಒಡನೆಯೆ ವಸಂತ ಋತುವೂ ಸನ್ನಿಹಿತವಾಯಿತು. ಕುವರವಿಷ್ಣುವಿಗೆ ಮದುವೆಯಾಗುವುದೆಂಬ ಸಂಗತಿ ಇಷ್ಟು ಹೊತ್ತಿಗೆ ದೇಶದ ಮೂಲೆಮೂಲೆಗೂ ಹರಡಿತ್ತು.

'ನೀನು ಒಪ್ಪಿದುದು ನನಗೆ ಸಮ್ಮತ, ಅಕ್ಕ' ಎಂದು ಕುವರವಿಷ್ಣು ಶಾಂತಲೆಗೆ ಮಾತುಕೊಟ್ಟ. ಆ ಮಾತನ್ನು ಅವನ ಬಾಯಿಂದ ಹೊರಡಿಸುವುದಕ್ಕೆ ಇಬ್ಬರು ಅಕ್ಕದಿರು ತಿಂಗಳುಗಟ್ಟಲೆ ಶ್ರಮಪಟ್ಟರು. 'ಕಡೆಗೆ ಒಪ್ಪಿದ' ನೆಂದು ಕೇಳಿ ಪ್ರಭುಗಳಿಗೂ ಸಂತೋಷವಾಯಿತು.

ಕನ್ಯಾನ್ವೇಷಣವೂ ಸುಲಭವಾಗಿ ಆಯಿತು. ರಾಜಮಾತೆ ಹಿಂದೆ ಮಾಡುತ್ತಿದ್ದಂತೆ, ಶಾಂತಲೆಯೂ ಒಂದೆರಡು ಬಾರಿ, ಅತ್ತೆಯವರ ವರ್ಷಾಬ್ದಿಕದ ನೆವದಲ್ಲಿ ಒಮ್ಮೆ, ಸುಮಂಗಲಿಯರ ಪೂಜಾನೆಪದಲ್ಲಿ ಇನ್ನೊಮ್ಮೆ, ಊರಲ್ಲಿರುವ ಎಲ್ಲಾ ಅಧಿಕಾರಿಗಳ, ಮಹಾಜನರ ಮಡದಿಯರನ್ನೂ, ಹೆಣ್ಣುಮಕ್ಕಳನ್ನೂ ಅರಮನೆಗೆ ಕರಸಿಕೊಂಡು, ಚೊಕ್ಕ ಭೋಜನ, ಹೂ ವೀಳೆಯ ಮಾಡಿಸಿದಳು. ಆಗ ಉತ್ತಮದಲ್ಲಿ ಉತ್ತಮವೆಂದು ಶಾಂತಲೆಗೆ ಕಂಡುಬಂದುದು ಒಂದು ಕನ್ಯೆ. ಹೆಸರು ಸೋವಲೆ. ರೂಪಿತ್ತು, ಗುಣವಿತ್ತು. ಮೇಲಾಗಿ ತಕ್ಕಷ್ಟು ವಿದ್ಯಾವತಿಯೂ ಹೌದು. ವಯಸ್ಸಿನ ಸಾಮ್ಯ ಚೆನ್ನಾಗಿತ್ತು. ಉತ್ತಮ ಬಾಂಧವ್ಯ.

ಅಮಾತ್ಯ ವೀರದೇವನ ಒಬ್ಬಳೆ ಮಗಳು ಈ ಸೋವಲೆ. ಆದ್ದರಿಂದ ರಾಜ ಕಾರಣಕ್ಕೂ ಒಳಿತಾಯಿತು.

ಶಾಂತಲೆ ತನ್ನ ಆಯ್ಕೆಯನ್ನು ಪ್ರಭುಗಳಿಗೆ ತಿಳಿಸಿದಳು. ಅವರು 'ಅವನು ನೋಡಬೇಡವೆ? ನಿನ್ನ ಆಯ್ಕೆ ಉತ್ತಮೋತ್ತಮವೆಂದು ನಾನು ಒಲ್ಲೆ ನಾದರೂ ಅವನೂ ಒಮ್ಮೆ ನೋಡಿ ಒಪ್ಪಿಬಿಡಲಿ' ಎಂದರು.

'ಅದೆಲ್ಲವನ್ನೂ ನನಗೇ ಬಿಟ್ಟಿದ್ದಾನೆ. 'ಅಕ್ಕ, ನೀನು ನನಗೆ ಕಣ್ಣು ಕಟ್ಟಿ ಮದುವೆಮಾಡಿಬಿಡು, ನಾನು ಒಪ್ಪಿಕೊಳ್ಳುತ್ತೇನೆ' ಎಂದಿದ್ದಾನೆ.'

'ನೀನು ಅವನಿಗೆ ಎಂಥಾ ಮಂಕುಬೂದಿ ಎರಚಿದ್ದೀಯೆ! ಅವನಿಗೆ ನಿನ್ನಲ್ಲಿರುವ ನಂಬುಗೆ ವಿಶ್ವಾಸಗಳನ್ನು ಕಂಡು ನಮಗೆ ಬಹು ಸಂತೋಷವಾಗು ತ್ತದೆ. ಆದರೂ ಅವನೂ ಒಮ್ಮೆ ನೋಡಿಬಿಡಲಿ.'

'ಅವನಿಗೆ ನಾಚಿಕೆಯೆಂದು ಕಾಣುತ್ತದೆ.'

'ಅದನ್ನು ನೀನೇ ಹೇಳುತ್ತೀಯೋ? ನಿನ್ನನ್ನು ಮೊದಲು ಸಲ ನೋಡಿ ದಾಗ ನನಗೂ ಹಾಗೆಯೇ ಎನಿಸಿತು. ಆದರೂ ನಿನ್ನ ಅತ್ತೆಯವರು ಮಾಡಿದ ಉಪಾಯದಿಂದ ನನ್ನ ಮನಸ್ಸಿಗೆ ಪೂರ್ಣ ಸಮ್ಮತಿಯಾಯಿತು. ಆಗ ಲಕ್ಷ್ಮಿ ಯನ್ನೆ ನೀನೆಂದು ಭ್ರಮಿಸಿದೆ.'

'ಅದೇನು ಸುಳ್ಳಲ್ಲ. ಇದ್ದ ಸಂಗತಿಯನ್ನು ದೈವವೇ ತಿಳಿಸಿತು.'

'ನೋಡು, ಏನೇನು ಆಗಬೇಕೆಂದು ದೈವನಿಯಾಮಕವಿದೆಯೊ ಅದು ಹಾಗೆ ಹಾಗೆ ಆಗಿಯೇ ಆಗುತ್ತದೆಯಲ್ಲವೆ! ಒಳ್ಳೆಯದು, ಈಗ ನೀನೂ ಅದೇ ಉಪಾಯವನ್ನು ಅನುಸರಿಸಬಹುದಲ್ಲವೆ?'

'ಸೋವಲೆಗೆ ನರ್ತನವಾಗಲಿ, ಗಾಯನವಾಗಲಿ ಬರುವುದೆಂದು ನಾನು ಅರಿಯೆ. ವಿಚಾರಮಾಡಿ ತಿಳಿದುಕೊಳ್ಳುತ್ತೇನೆ. ನೀವು ಅಂದು ತೆರೆಯ ಮರೆ ಯಲ್ಲಿ ಕುಳಿತು ನಮ್ಮನ್ನು ನೋಡುವಿರೆಂಬ ಸುಳಿವು ನಮಗೆ ತಿಳಿದಿದ್ದರೆ, ನಾವು ಅರಮನೆಯೊಳಕ್ಕೆ ಕಾಲಿಡುತ್ತಿರಲಿಲ್ಲ. ಲಕ್ಷ್ಮಿ ನನ್ನ ಜೊತೆಗಿಲ್ಲದಿದ್ದರೆ ಅಂದು ನಾನೂ ಬಾಯಿಬಿಡುತ್ತಲೂ ಇರಲಿಲ್ಲ.'

'ನಿನ್ನ ಅತ್ತೆಯವರು ಬಹು ಬುದ್ಧಿವಂತರು, ಶಾಂತಲೆ.'

'ಬುದ್ಧಿವಂತರಾದುದರಿಂದಲೆ ಇಷ್ಟು ದೊಡ್ಡ ರಾಜ್ಯಕ್ಕೆ ಮಹಾರಾಣಿ ಯಾಗಿ ರಾಜ್ಯವನ್ನು ಕಾಪಾಡಿಕೊಂಡು, ಅನಂತರ ನಿಮ್ಮ ಕೈಲಿಟ್ಟರು.'

'ಆ ಶಕ್ತಿ, ಯುಕ್ತಿ, ವಿವೇಚನೆ ಈಗ ನನ್ನ ರಾಣಿಗೂ ಇರುವುದು. ಯಾವುದಾದರೂ ಒಳ್ಳೆಯ ನೆಪ ಹೂಡಿ ಅರಮನೆಯಲ್ಲಿ ಉತ್ಸವ ನಡಸು. ಯಥಾಪ್ರಕಾರ ತೆರೆಯ ಹಿಂದೆ ಅವನನ್ನು ಕೂಡಿಸು, ತೋರಿಸು.'

ಶಾಂತಲೆ ಒಪ್ಪಿದಳು. ಅರಮನೆಯಲ್ಲಿ ಕೇರಳದ ನರ್ತಕಿಯರ, ಗಾಯಕಿಯರ ಮೇಳವನ್ನಿಟ್ಟು, ಊರಿನ ಪ್ರಮುಖ ಸ್ತ್ರೀವೃಂದಕ್ಕೆಲ್ಲ ಆಹ್ವಾನವಿತ್ತು ಶಾಂತಲೆ ಲಕ್ಷ್ಮಿಯರು ಸನ್ಮಾನಿಸಿದರು. ಕುವರವಿಷ್ಣು ತಾನು ನೋಡಬೇಕಾಗಿಯೆ ಇಲ್ಲವೆಂದು ಹಟಹಿಡಿದರೂ, ಅವನನ್ನು ತೆರೆಯ ಹಿಂದೆ ಬೊಪ್ಪಣನ ಜೊತೆಯಲ್ಲಿ ಕೂಡಿಸಿ, ಅವನಿಗೆ ಸೋವಲೆಯನ್ನು ತೋರಿಸಿಯೆ ತೋರಿಸಿದರು.

'ನೋಡು, ಬೊಪ್ಪಣ. ಹೆಂಗಸರು ಎಷ್ಟೇ ಒಳ್ಳೆಯವರಾದಾಗ್ಯೂ ಗಂಡಸು ಅವರ ಕೈಗೆ ಮಾತ್ರ ಸಿಕ್ಕಿಬೀಳಬಾರದು' ಎಂದ ಕುವರವಿಷ್ಣು.

'ಹಾಗೆ ಗಂಡಸು ಅವರ ಕೈಗೆ ಸಿಕ್ಕಿಬೀಳುವ ತನಕ ಅವರಿಗೆ ನೆಮ್ಮದಿಯೇ ಇರುವುದಿಲ್ಲ. ಹೋಗಲಿ, ಈ ವಿಷಯದಲ್ಲಿ ಅದು ಏನೂ ಇಲ್ಲ. ನಿನ್ನ ಸೌಖ್ಯವೆ ನಿನ್ನ ಅಕ್ಕದಿರ ಆತುರ. ಅವರ ಆಯ್ಕೆ ಬಹು ಶ್ಲಾಘ್ಯವಾಗಿದೆ' ಎಂದ ಬೊಪ್ಪಣ.

ಪ್ರಭುಗಳೂ ಭಾವೀಸೊಸೆಯನ್ನು ನೋಡಿ ಶಾಂತಲೆಯೊಡನೆ 'ದೇವಿ, ಸುವರ್ಣದ ಗುಣ, ಬಣ್ಣ ಅದರ ಪರೀಕ್ಷಕನಿಗೆ ತಿಳಿಯಬಂದಂತೆ ಇತರರಿಗೆ ತಿಳಿಯದು. ಒಳ್ಳೆಯ ವಸ್ತುವೇ ನಮ್ಮ ದೃಷ್ಟಿಗೆ ಬೀಳುವುದಿಲ್ಲವೇನೋ! ನಿನ್ನ ಆಯ್ಕೆ ನಮಗೆ ಮಿಗಿಲು ತೃಪ್ತಿ. ಅವನು ಏನಂದ?' ಎಂದು ಕೇಳಿದರು.

'ಕೇಳಿದುದಕ್ಕೆ ನನ್ನ ಮುಖ ನೋಡಿ ಸುಮ್ಮನಾಗಿಬಿಟ್ಟ. ಅವನ ಮೌನವೇ ಸಮ್ಮತಿಯೆಂದುಕೊಂಡೆ.'

'ಮಾತೇ ಆಡಲ್ಲಿಲ್ಲವೆ?'

'ಆಡಿದ. "ಈ ವಿಷಯದಲ್ಲಿ ಅಪ್ಪಾಜಿಗಳಿಗಿರುವುದಕ್ಕಿಂತ ನಿನಗೇ ಹೆಚ್ಚು ಆತುರವೆಂದು ಈಗ ಚೆನ್ನಾಗಿ ಕಂಡುಬರುತ್ತಿದೆ" ಎಂದ.'

'ಸದ್ಯ ಈ ಆರೋಪಣೆ ನನ್ನ ಮೇಲೆ ಓಲಲಿಲ್ಲವಲ್ಲ! ಒಳ್ಳೆಯದೆ ಆಯಿತು. ನಮ್ಮ ಕಾರಣ ಅವನಿಗೆ ತಿಳಿಯದೆಯೆ ಉಳಿಯುವುದು ಒಳಿತು. ಅಥವಾ ನೀನು ಹೇಳಿಬಿಟ್ಟೆಯೊ?'

'ಇಲ್ಲ, ಈ ಮದುವೆಯ ಅವಸರಕ್ಕೆ ಕಾರಣ ಅವನಿಗೆ ತಿಳಿಯದು. ಅದನ್ನು ನಾನು ಅವನಿಗೆ ಹೇಳಲಿಲ್ಲ.'

'ಒಳ್ಳೆಯದು. ನೋಡು ದೇವಿ, ಈ ಮದುವೆಯ ಪ್ರಸ್ತಾಪ ಬಂದ ಮೇಲೆ ಅವನು ನನ್ನ ಬಳಿಯೆ ಹೆಚ್ಚು ಸುಳಿದಾಡುವುದಿಲ್ಲ. ಹೇಳಿ ಕಳಿಸಿದರೆ ಮಾತ್ರ ಬರುತ್ತಾನೆ. ಎಷ್ಟೋ ಅಷ್ಟೆ ಮಾತು. ಮುಖಕೊಟ್ಟು ಮಾತನಾಡು ವುದಿಲ್ಲ. ಎಲ್ಲ ಕ್ರಮೇಣ ಸರಿಹೋಗುವುದು, ಅಲ್ಲವೆ?'

'ಅವನೆನ್ನುತಾನೆ: "ಅಪ್ಪಾಜಿಯವರು ನನ್ನನ್ನು ಕಂಡೊಡನೆಯೆ, ಏನು ಕೇಳಿಬಿಡುತ್ತೇನೆಯೊ? ಏನು ಹೇಳಿಬಿಡುತ್ತೇನೆಯೊ? ಎಂದು ಮುಖ ಮೊಳ ದುದ್ದ ಮಾಡಿಕೊಂಡುಬಿಡುತ್ತಾರೆ. ನಾನು ಮಾತನಾಡುವುದೇ ಇಲ್ಲ. ಭಯ ವಾಗುತ್ತದೆ. ಬಂದುಬಿಡುತ್ತೇನೆ" ಎಂದು.'

ವಿಷ್ಣುವರ್ಧನ: 'ನಾನು ಅಷ್ಟೂ ಬಿಗುಮಾನದಿಂದ ಇರದಿದ್ದರೆ, ನಿನ್ನನ್ನು ಹುರಿದು ಮುಕ್ಕಿಬಿಡುತ್ತಿದ್ದ. ಈ ಮದುವೆ ಆಗುತ್ತಲೆ ಇರಲಿಲ್ಲ.'

'ನೀವು ಹೇಗೆ ಮಾಡಿದರೂ ಆಗುತ್ತದೆ. ತಾಯಿ ಕಳೆದುಕೊಂಡ ಹುಡುಗ ನಿಗೆ ನಾನು ಹಾಗಿರುವುದಕ್ಕೆ ಆದೀತೆ? ಈಗಲೂ ಈ ಸಂದೇಹವೆಲ್ಲ ನನ್ನ ಮೇಲೆಯೆ: "ಅಪ್ಪಾಜಿಯವರಿಗೆ ಹೇಳಿ ಹೇಳಿ ನೀನೇ ಅವರ ಮನಸ್ಸನ್ನು ಕೆಡಿಸಿಟ್ಟಿದ್ದೀಯೆ" ಎಂದು ಅಂದೂ ಅಂದ.'

'ಸೋವಲೆಯ ಕೈ ತಾಗುವವರೆಗೂ ಅದು ಹಾಗೆಯೆ' ಎಂದು ಹೇಳಿ ಪ್ರಭುಗಳು ನಕ್ಕರು. ಶಾಂತಲೆಯೂ ನಕ್ಕಳು.

§

ವೀರದೇವ ಅಮಾತ್ಯರಿಗೆ ಸೋವಲೆ ಒಬ್ಬಳೆ ಮಗಳು. ಅವಳನ್ನು ಅಕ್ಕರೆ ಯಿಂದ ಬೆಳಸಿ, ಒಳ್ಳೆಯ ಗುರುಗಳ ಬಳಿ ವಿದ್ಯಾಭ್ಯಾಸ ಮಾಡಿಸಿದ್ದರು. ಸೋವಲೆಯ ತಾಯಿ ಚಂದವ್ವೆ ವಿದ್ಯಾವತಿ. ತಮ್ಮ ಮಗಳನ್ನು ಪ್ರಭುಗಳು ಸೊಸೆಯನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸಿದುದು ದಂಪತಿಗಳಿಬ್ಬರಿಗೂ ಬಹು ತೃಪ್ತಿ, ಬಹು ತೃಪ್ತಿ.

ವೈಶಾಖದ ಒಂದು ಶುಭ ದಿನ ಶುಭ ಮುಹೂರ್ತ ಲಗ್ನದ ದಿನವೆಂದು ನಿಶ್ಚಿತವಾಯಿತು. ಲಗ್ನದ ಕರೆಯೋಲೆಗಳು ಊರೂರಿಗೆ ಮುಟ್ಟಿದವು.

ಬೊಪ್ಪಣನಿಗಂತೂ ಬಿಡುವೇ ಇಲ್ಲದಷ್ಟು ಸಂಭ್ರಮ. ಮದುವೆಯ ಏರ್ಪಾಡೆಲ್ಲ ಬೊಪ್ಪಣನದೆ. ಕುವರವಿಷ್ಣು ಎಲ್ಲ ಹಿರಿಯ ಪ್ರಜೆಗಳ, ಅಧಿಕಾರಿಗಳ ಕುವರ; ಬೆಳೆದವರಿಗೆಲ್ಲ ತಮ್ಮ; ಕಿರಿಯರಿಗೆಲ್ಲ ಅಣ್ಣ. ಎಲ್ಲರ ಆದರ ಪ್ರೀತಿವಿಶ್ವಾಸ ಗಳನ್ನು ಸಂಪಾದಿಸಿದವನು ಕುವರವಿಷ್ಣು. ಮದುವೆಯಾಗುವ ಹೆಣ್ಣು ವೀರದೇವ ಅಮಾತ್ಯರ ಮಗಳು. ಆದ್ದರಿಂದ ಪುರಜನರಿಗೆ ಎಷ್ಟು ತೃಪ್ತಿ ಇರಬೇಡ?

ಕುವರನ ಉಪನಯನ ಎಷ್ಟು ವಿಜೃಂಭಣೆಯಿಂದ ನಡೆಯಿತೊ ಅಷ್ಟೇ ವಿಜೃಂಭಣೆಯಿಂದ ಮದುವೆಯ ಸಿದ್ಧತೆಗಳೂ ನಡೆದವು. ಅಗೊ, ಇಗೊ ಅನ್ನು ವುದರೊಳಗೆ ಮದುವೆಯ ದಿನವೂ ಬಂದಿತು.

ಮಹಾಸಾಮಂತ ಸಾಮಂತರುಗಳೂ, ರಾಜಾಂಗ ರಾಜ್ಯಾಂಗದವರೂ, ಪುರಪ್ರಮುಖರೂ, ಉದ್ಯೋಗಸ್ಥರೂ, ಅಧಿಕಾರಿಗಳೂ ಲಗ್ನಕ್ಕೆ ದಯಮಾಡಿಸಿ, ವಧೂವರರನ್ನು ಹರಸಿದರು, ಮರ್ಯಾದೆಗಳನ್ನು ಅರ್ಪಿಸಿದರು. ವಧೂವರರ ಸಾಮ್ಯ ಬಹು ಚೆನ್ನಾಗಿದೆಯೆಂದು ಪ್ರಶಂಸಿಸಿದರು. ಕುವರವಿಷ್ಣು ಮದುವೆಯ ದಿನ ಹಸನ್ಮುಖನಾಗಿಯೆ ಇದ್ದ. 'ನೀಳುಮುಖ ಹಾಕಿಕೊಂಡಿದ್ದರೆ ನಾವು ಮದುವೆಗೇ ಬರುವುದಿಲ್ಲ'ವೆಂದು ಅಕ್ಕಂದಿರಿಬ್ಬರೂ ಹೆದರಿಕೆ ಹಾಕಿದ್ದರು. ಹಿರಿ ಯಕ್ಕನ ಆಯ್ಕೆ ಅವನಿಗೆ ಪೂರ್ಣ ತೃಪ್ತಿಕರವಾಗಿ ಪರಿಣಮಿಸಿತು. ಮನ್ಮಥ ನಂತಹ ರೂಪವಂತನೂ, ಅಭಿಮನ್ಯುವಿನಂತಹ ವೀರನೂ, ಗುಣವಂತನೂ, ಉದಾರಿಯೂ ಆದವನು ತನ್ನ ಕೈಹಿಡಿದನೆಂದು ಸೋವಲೆಗೆ ಹಿರಿ ಹಿಗ್ಗು. ಅವಳ ಗೆಳತಿಯರೆಲ್ಲರಿಗೂ ಅತ್ಯಾನಂದದ ಸಡಗರ.

ಮದುವೆಯ ಸಂದರ್ಭದಲ್ಲಿ ಪ್ರಭುಗಳು, ಮುತ್ತಿನ ಜೊಂಪೆಗಳಿಂದ ಕೂಡಿದ, ನವರತ್ನಖಚಿತವಾದ ಗಂಡಪೆಂಡೇರವೆಂಬ ಚಿನ್ನದ ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು. ಆ ಹೊತ್ತಿನಿಂದಲೇ ಅವನನ್ನು ಅರಮನೆಯ ಸರ್ವಾಧಿಕಾರಿ ಸ್ಥಾನಕ್ಕೆ ತಂದುಕೊಂಡರು. ಸಮಸ್ತ ವಿಜೃಂಭಣೆ ಯಿಂದ ಕೂಡಿದ ವಿವಾಹಮಂಗಳವು ಯಥಾವಿಧಿಯಾಗಿ ಸಂಪೂರ್ಣವಾಯಿತು. ಗುರುಗಳ, ವಿಪ್ರೋತ್ತಮರ, ಬಂಧುಬಳಗದವರ ಮಹಾ ಆಶೀರ್ವಾದಗಳು ಆದವು. ಸರ್ವರಿಗೂ ಆನಂದ ಭೋಜನಾದಿಗಳು ನಡೆದವು. ಬಡವರಿಗೆ, ಅಂಗವಿಕಲರಿಗೆ ವಸ್ತ್ರದಾನ, ಅನ್ನದಾನ, ದ್ರವ್ಯದಾನಾದಿಗಳು ಯಥೇಚ್ಛವಾಗಿ ನಡೆದವು. ಆ ದಿನ ದೇಶಾದ್ಯಂತ ವಧೂವರರ ಅಭ್ಯುದಯಕ್ಕಾಗಿ ಸಮಸ್ತ ದೇವಾಲಯಗಳಲ್ಲೂ

ಚೈತ್ಯಾಲಯಗಳಲ್ಲೂ ವಿಶೇಷ ಉತ್ಸವಾದಿಗಳು ನಡೆದವು. ಲಗ್ನದ ರಾತ್ರಿ ಉತ್ಸವ ದಂಪತಿಗಳು ಎತ್ತರದ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು, ದೀಪೋತ್ಸವ ಸಮೇತ ಪುರದ ರಾಜವೀಧಿಗಳಲ್ಲಿ ಮೆರವಣಿಗೆ ಬಂದರು. ಪುರ ಜನರು ಮನೆಗಳ ಮೇಲೆ ನಿಂತು ನೋಡಿ ಆನಂದದಿಂದ ಹೂಮಳೆಗರೆದರು.

ಶಾಂತಲೆ ಲಕ್ಷ್ಮಿಯರು ವಿಜೃಂಭಣೆಯಿಂದ, ಮಹದಾನಂದದಿಂದ ಸೊಸೆ ಯನ್ನು ಮನೆ ತುಂಬಿಸಿಕೊಂಡರು. ಆಗ ಅರಮನೆ ಇನ್ನಷ್ಟು ತುಂಬಿ ದಂತಾಯ್ತು. ವೀರದೇವ, ಚಂದವ್ವೆ ಮಗಳನ್ನು ಒಪ್ಪಿಸಿಕೊಟ್ಟು ತಾವು ಧನ್ಯರೂ ಕೃತಾರ್ಥರೂ ಆದೆವೆಂದು ಭಾವಿಸಿದರು. ಇಷ್ಟು ಹೊತ್ತಿಗೆ ಕುವರವಿಷ್ಣುವಿಗೆ ಲಜ್ಜೆಯ ಸ್ಥಾನದಲ್ಲಿ ಪ್ರೇಮ ಅಂಕುರಿಸಿತ್ತು. ಸೋವಲೆ ಅತ್ತೆಯರನ್ನೂ ಮಾವ ದಿರನ್ನೂ ಮುತ್ತು ಮಾಣಿಕಗಳಂತೆ ಕಂಡು ನಡೆದುಕೊಂಡು ಎಲ್ಲರಿಗೂ ಮೆಚ್ಚಾ ದಳು. ಪತಿಯಲ್ಲಿ ಪ್ರೀತಿ, ಆದರ, ಭಕ್ತಿಗಳಿಂದ ನಡೆದುಕೊಂಡು ಆದರ್ಶ ಸತಿ ಯಾದಳು. ಪ್ರಭುಗಳಿಗೆ ಅಚ್ಚುಮೆಚ್ಚಿನ ಸೊಸೆ . . . ಸೊಸೆಯೇಕೆ! ಹೊಟ್ಟೆ ಯಲ್ಲಿ ಹುಟ್ಟಿದ ಮಗಳಷ್ಟು ಹಿತಳಾದಳು. ಸೋವಲೆಗೆ ಇತರ ಅತ್ತೆಯರ ಕಾಟ, ಕಿರುಕುಳ ಆಗಾಗ್ಗೆ ಕಂಡೂ ಕಾಣದಂತೆ ಇರುತ್ತಿದ್ದುದಾದರೂ ಸವತಿಗಂಧ ವಾರಣೆಗೆ ಹೆದರಿ ಅವರವರ ಎಲ್ಲೆಗಳಲ್ಲಿ ಅವರವರು ಇರುತ್ತಿದ್ದರು. ಅರಮನೆಗೆ ಸೇರಿದಂತೆ ಒಂದು ಭಾಗದಲ್ಲಿ ಕುವರವಿಷ್ಣು ಸೋವಲೆಯರ ಬಿಡಾರವಾಯಿತು.

ಜ್ಯೇಷ್ಠ ಆಷಾಢ ಮಾಸಗಳು ಅರಮನೆಗೆ ಅಮಿತ ಆನಂದವನ್ನು ಕೊಟ್ಟು ಹೋದವು. ಪ್ರಭುಗಳು ಶಾಂತಲೇಶ್ವರ ಹೊಯಿಸಳೇಶ್ವರ ದೇವಾಲಯಗಳು ಪೂರ್ಣವಾಗುವುದನ್ನೇ ಕಾಯುತ್ತ ಕುಳಿತರು. ಕೇತಮಲ್ಲನಾಯಕನ ಮೇಲ್ವಿ ಚಾರಣೆಯಲ್ಲಿ ದೇವಾಲಯದ ಮೂರುಪಾಲು ಕೆಲಸವೆಲ್ಲ ಮುಗಿದು ಇನ್ನು ಸ್ವಲ್ಪ ಭಾಗ ಕೆಲಸ ಮಾತ್ರ ಉಳಿದಿದ್ದಿತು.

ಪ್ರಭುಗಳು ಕೇತಮಲ್ಲನಾಯಕನನ್ನು ಕರಸಿಕೊಂಡು 'ಇನ್ನು ನಿಧಾನ ವಾದರೆ, ನಮ್ಮ ಮುಂದಿನ ಕಾರ್ಯಗಳಿಗೆ ತೊಂದರೆ ಬರುವುದು. ಬರುವ ಭಾದ್ರ ಪದದ ವೇಳೆಗೆ ಆಲಯಗಳಲ್ಲಿ ಮಹಾದೇವನ ಪ್ರತಿಷ್ಠೆ ಆಗಲೇಬೇಕು. ಹೊರಗಿನ ಕೆಲಸಗಳನ್ನು ಆಮೇಲೆ ಬೇಕಾದರೂ ಪೂರೈಸಬಹುದು ; ಇಷ್ಟರಲ್ಲಿ ಮುಗಿಸ ಬೇಕಾದ ಕಾರ್ಯಗಳು ಯಾವುವಿದ್ದರೂ ತತ್‌ಕ್ಷಣ ಅವುಗಳಿಗೆ ಗಮನಕೊಡುವುದು ಲೇಸು' ಎಂದರು.

ಕೇತಮಲ್ಲನಾಯಕ : ' ಅಷ್ಟು ಹೊತ್ತಿಗೆ ಎಲ್ಲ ಕಾರ್ಯಗಳೂ ಮುಗಿಯು ವುವು, ಪ್ರಭು. ಈಗ ಅತಿಮುಖ್ಯವಾಗಿ ಆಗಬೇಕಾದ ಕಾರ್ಯವೆಂದರೆ ಎರಡು ದೊಡ್ಡ ನಂದಿಯ ವಿಗ್ರಹಗಳಾಗಬೇಕು. ಆ ನಂದಿಗಳಿಗೆ ಮಂಟಪಗಳನ್ನು ಕಟ್ಟಿ ಆಯಿತು.'

' ಹಾಗಿದ್ದರೆ ಕೆಲಸವೆಲ್ಲ ಆದಂತೆಯೆ. ಎರಡು ತಿಂಗಳೊಳಗೆ ಎರಡು ನಂದಿಗಳನ್ನು ಸಿದ್ಧಪಡಿಸುವುದು ಕಷ್ಟವೆ! '

' ರೂವಾರಿಗಳ ಅಭಿಪ್ರಾಯದಲ್ಲಿ ದೇವಾಲಯಗಳ ಆಕಾರಕ್ಕೆ, ಭವ್ಯತೆಗೆ ಮಹೋನ್ನತವಾದ ನಂದಿಗಳೇ ಆಗಬೇಕಂತೆ, ಬೃಹದಾಕಾರದ ನಂದಿಗಳೆ ಆಗ ಬೇಕಂತೆ.'

' ಅಂದರೆ ? '

' ಚೆನ್ನಾಗಿ ಬೆಳೆದು ಉನ್ನತವಾದ ಸಲಗನಷ್ಟಾದರೂ ಇರಬೇಕಂತೆ. ಮಂಟಪಗಳನ್ನು ಆ ಪ್ರಮಾಣಕ್ಕೆ ಕಟ್ಟಿಯೂ ಆಯಿತು.'

' ಹಾಗಾದರೆ ಹೆಚ್ಚು ಜನರನ್ನು ಆ ಕೆಲಸಕ್ಕೆ ನಿಯಮಿಸಿ. ನಿರ್ದಿಷ್ಟ ಕಾಲಕ್ಕೆ ಅದನ್ನು ಪೂರ್ತಿಗೊಳಿಸಿಬಿಡಿ.'

' ಆದರೆ ಪ್ರಭೂ, ಅಂತಹ ಬೃಹದಾಕಾರದ ನಂದಿಗಳನ್ನು ಕಡೆಯಲು, ಅವುಗಳ ಗಾತ್ರಕ್ಕೆ ಸುಮಾರು ಒಂದೂವರೆ, ಎರಡರಷ್ಟು ದೊಡ್ಡ ಮೆದುಕಲ್ಲಿನ ಬಂಡೆಗಳು ಆಗಬೇಕು. ಅದಕ್ಕಾಗಿ ಎರಡು ತಿಂಗಳು ಕಾಲದಿಂದ ಹುಡುಕಿಸು ತ್ತಿದ್ದೇನೆ. ಪೊರೆ, ಪೆಡಸು, ಗರ್ಭ, ಗಡಸು ಇಲ್ಲದ ಅಷ್ಟು ದೊಡ್ಡ ಮೆದು ಕಲ್ಲಿನ ಬಂಡೆ ಈ ಸುತ್ತಮುತ್ತ ಎರಡು ಮೂರು ಹರಿದಾರಿ ದೂರದಲ್ಲಿ ಎಲ್ಲಿಯೂ ದೊರೆಯಲಿಲ್ಲ.'

' ಇನ್ನಷ್ಟು ದೂರದಿಂದಾಗಲಿ ತರಿಸಬೇಕಲ್ಲವೆ ? '

' ನಾಲ್ಕಾರು ಹರಿದಾರಿ ದೂರದಿಂದ ಅಷ್ಟು ದೊಡ್ಡ ಬಂಡೆಗಳನ್ನು ಇಲ್ಲಿಗೆ ಸಾಗಿಸಿಕೊಂಡು ಬರುವುದಾದರೂ ಹೇಗೆ ಪ್ರಭೂ ? . . . ಕಾಡುದಾರಿಯಲ್ಲಿ, ಕಲ್ಲುದಾರಿಯಲ್ಲಿ, ಹಳ್ಳ ಕೊರಕಲುಗಳಲ್ಲಿ, ದಟ್ಟವಾಗಿ ಬೆಳೆದಿರುವ ವೃಕ್ಷ ಸಮೂಹಗಳ ನಡುವೆ . . .'

' ನಮ್ಮಲ್ಲಿ ಆನೆಗಳಿಲ್ಲವೆ ? '

' ಹತ್ತಿಲ್ಲದಿದ್ದರೆ, ಇಪ್ಪತ್ತು, ಇಲ್ಲದಿದ್ದರೆ ನಲವತ್ತು ಆನೆಗಳನ್ನು ಎಳೆಯು

ವುದಕ್ಕೆ ಸಿದ್ಧಪಡಿಸಿಕೊಳ್ಳಬಹುದು. ಅಷ್ಟು ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತುತರುವ ಶಕಟಗಳು ಬೇಕಲ್ಲವೆ? ಆ ಭಾರಕ್ಕೆ ಮುರಿಯದಂತಹ ಬಲ ವಾದ ಶಕಟಗಳಾಗಬೇಕು. ಹಳ್ಳ ತಿಟ್ಟುಗಳಲ್ಲಿ ಚಕ್ರಗಳೂ ಅಚ್ಚುಗಳೂ ಮುರಿಯದಂತ ದೃಢವಾದ ಬಾಟೆಯನ್ನು ನಿರ್ಮಿಸಬೇಕಾಗುವುದು.'

'ಸರಿ, ಇದು ಕಠಿಣ ಸಮಸ್ಯೆಯಾಗಿ ಪರಿಣಮಿಸಿತು. ಹಿಂದೆ ತಲವನ ಪುರದ ಮೇಲೆ ದಂಡೆತ್ತಿಹೋದಾಗ—ನಿಮಗೆ ನೆನಸಿರಬೇಕು—ತುಂಬು ಪ್ರವಾ ಹದ ಕಾವೇರಿಯನ್ನು ನಮ್ಮ ಸೈನ್ಯಗಳು ದಾಟುವುದೂ ಇಂತಹದೇ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತಲ್ಲವೆ—ಗಂಗರಾಜರು ಉಪವಾಸ ನಿಂದು, ಕಾವೇರಿ ಯಲ್ಲಿ ಮಿಂದು, ಪೂಜಿಸಿ, ಪ್ರಾರ್ಥಿಸಲು ತಾಯಿ ಕಾವೇರಿ ದಾರಿ ತೋರಲಿಲ್ಲವೆ? ಅದಕ್ಕಿಂತ ಅಗಾಧ ಕಾರ್ಯವೆ ಇದು! ದೈವಾನುಗ್ರಹಕ್ಕೆ ಕೈನೀಡಿ ಕೆಲಸವನ್ನು ಉಪಕ್ರಮಿಸಿ. ಮಹಾದೇವನೆ ದಾರಿ ತೋರುವನು . . . ಒಂದು ವೇಳೆ ಅಂತಹ ದೊಡ್ಡ ಬಂಡೆಗಳನ್ನು ಇಲ್ಲಿಗೆ ಸಾಗಿಸಿಕೊಂಡು ಬಂದು, ನಂದಿಗಳನ್ನು ಇಲ್ಲಿ ಕಡೆಯುವ ಬದಲು, ನಂದಿಗಳನ್ನು ಅಲ್ಲಿಯೇ ನಿರ್ಮಿಸಿ ಇಲ್ಲಿಗೆ ತರುವುದು ಸ್ವಲ್ಪಮಟ್ಟಿಗಾದರೂ ಸುಲಭವಾಗುವುದಲ್ಲವೆ?'

'ಅದು ಸುಲಭೋಪಾಯವೆ ಹೌದು, ಬಂಡೆಗಳು ದೊರೆತರೆ ಹಾಗೆ ಮಾಡುವುದೇ ಲೇಸು. ಕೆಲಸ ಅರ್ಧದಷ್ಟು ಕಡಮೆಯಾದರೂ, ಸಿದ್ಧವಾದ ಆ ನಂದಿಗಳನ್ನು ಸುರಕ್ಷಿತವಾಗಿ ಇಲ್ಲಿಗೆ ಸಾಗಿಸಿಕೊಂಡು ಬರುವುದು ಮತ್ತೂ ಕಷ್ಟ ವಾಗುವುದು. ಬಹು ಜಾಗರೂಕತೆಯಿಂದ ಸಾಗಿಸಿಕೊಂಡು ಬರಬೇಕಾಗು ವುದು.'

'ಇದು ಸುಲಭಕಾರ್ಯವಲ್ಲ, ನಾಯಕರೆ. ಈ ಮಹತ್ಕಾರ್ಯವನ್ನು ಮಹಾ ದೇವನೆ ಆಗಮಾಡಿಸಬೇಕು. ನಾಯಕರೆ, ನೀವು ಹೇಳಿದ್ದು ನಿಜ. ಮಹಾ ದೇವನ ವಾಹನವು ಮಹೋನ್ನತವಾಗಿಯೆ ಇರಬೇಕು. ರೂವಾರಿಗಳು ಹೇಳು ವುದೂ ನ್ಯಾಯವಾಗಿದೆ. ಈ ಮಹಾ ಉಜ್ಜುಗವನ್ನು ಎರಡು ತಿಂಗಳೊಳಗೆ ಕೊನೆ ಮುಟ್ಟಿಸಿ ನಮ್ಮನ್ನು ಅಚ್ಚರಿಪಡಿಸಿಬಿಡಿ. ಅಂತಹ ಬಂಡೆ ಒಂದು ಗಾವುದದಷ್ಟು ದೂರದಲ್ಲಿರಲಿ, ಮಹಾದೇವನ ಕಾರ್ಯಕ್ಕೆ ಅವು ಒದಗಲೇಬೇಕು. ಮಹಾದೇವನು ದಯಮಾಡಿಯಾನು. ಅದು ನಮ್ಮ ನಂಬುಗೆ. ಹುಡುಕುವ ಕಾರ್ಯಕ್ಕೆ ಸಾವಿರ ಸಾವಿರ ಜನರನ್ನು ನಿಯಮಿಸಿರಿ. 'ಹತ್ತು ದಿನದೊಳಗೆ

ಹುಡುಕಿ ಹೇಳುವವರಿಗೆ ಹತ್ತು ಹತ್ತು ಹೊನ್ನು ಗದ್ಯಾಣ ಬಹುಮಾನ' ಎಂದು ಸಾರಿರಿ. ಆಗ ಭೂಗರ್ಭದಲ್ಲೇ ಇದ್ದರೂ ಶೋಧಿಸಿ ತೆಗೆದಾರು.'

'ಅಪ್ಪಣೆ ಪ್ರಭೂ, ಹಾಗೆಯೇ ಮಾಡುತ್ತೇನೆ. ಈಶ್ವರನ ಸಂಕಲ್ಪ ವಿದ್ದಂತೆ ಆಗಲಿ.'

ಕೇತಮಲ್ಲನಾಯಕನು ಪ್ರಭುಗಳಿಗೆ ನಮಸ್ಕಾರ ಮಾಡಿ ಉತ್ಸಾಹಭರಿತ ನಾಗಿ, ಮುಂದಿನ ಕಾರ್ಯಗಳನ್ನು ಗಮನಿಸಲು ಹೋದನು.

§

ನವದಂಪತಿಗಳಲ್ಲಿ ಅನ್ಯೋನ್ಯ ಚೆನ್ನಾಗಿ ಬೆಳೆಯಿತು. ಅದನ್ನು ನೋಡಿ ಪ್ರಭುಗಳೂ ರಾಣಿಯರೂ ತುಂಬ ತೃಪ್ತರಾದರು. ಇಷ್ಟರಲ್ಲಿ ತಿರುನಾರಾಯಣ ಪುರ ದೇವಾಲಯದ ಕಟ್ಟಡವು ಪೂರ್ತಿಯಾಗಿ, ಯತಿವರ್ಯ ಶ್ರೀ ರಾಮಾನುಜಾ ಚಾರ್ಯರಿಂದ ಚೆಲುವನಾರಾಯಣ ದೇವರ ಪ್ರತಿಷ್ಠಾಪನೆಯು ಬಹು ವಿಜೃಂಭಣೆ ಯಿಂದ ನಡೆಯಿತು. ಉದಾರ ಧನಸಹಾಯ ಮಾಡಿದ ವಿಷ್ಣುವರ್ಧನ ಪ್ರಭು ವನ್ನು ಕಂಡು ಆಶೀರ್ವದಿಸಬೇಕೆಂದೂ, ಅವರನ್ನು ತಿರುನಾರಾಯಣಪುರಕ್ಕೆ ಕರೆ ತಂದು ದೇವತಾದರ್ಶನ ಮಾಡಿಸಬೇಕೆಂದೂ ಯತಿವರ್ಯರು ಸಂಕಲ್ಪಮಾಡಿ ತಾವೇ ವೇಲಾಪುರಿಗೆ ದಯಮಾಡಿಸಿದರು. ಇದಕ್ಕೆ ಹಿಂದೆಯೆ ಪಂಡಿತ ಪೆರು ಮಲೆಯವರು ಯತಿವರ್ಯರಿಗೆ ವಿಜಯನಾರಾಯಣ ಪ್ರತಿಷ್ಠಾಪನೋತ್ಸವ ಕಾಲದಿಂದ ಮೊದಲ್ಗೊಂಡು ಮೇಲಿಂದ ಮೇಲೆ 'ಒಂದು ಸಲವಾದರೂ ವೇಲಾ ಪುರಿಗೆ ದಯಮಾಡಿ' ಎಂದು ಹೇಳಿಕಳಿಸುತ್ತಲೇ ಇದ್ದರು. ಕಾಲ ಈಗ ತಾನಾಗಿ ಒದಗಿಬಂತು.

ಭಾದ್ರಪದದ ಆದಿಯಲ್ಲಿಯೇ 'ನಾವು ವಿಜಯನಾರಾಯಣನ ಸೇವೆಗೆ ಇಂತಹ ದಿನ ಬರುವೆವು' ಎಂದು ಶ್ರೀ ರಾಮಾನುಜರು ಪಂಡಿತರಿಗೆ ಓಲೆ ಬರೆ ಯಿಸಿ ಕಳಿಸಿಕೊಟ್ಟರು. ಪಂಡಿತರಿಗೆ ಅತ್ಯಾನಂದವಾಯಿತು. ವಯಸ್ಸಿನಲ್ಲಿ ಶ್ರೀ ಆಚಾರ್ಯರು ಇವರಿಗಿಂತ ಕಿರಿಯರಾದರೂ, ಭಗವದಂಶಪುರುಷರಾದ ಆಚಾರ್ಯರ ದರ್ಶನ ಪಡೆಯುವ ಹಂಬಲ ಪಂಡಿತರಿಗೆ ಬಹುದಿನಗಳಿಂದಲೂ ಇತ್ತು. ಆ ಸಮಯಕ್ಕೆ ಪ್ರಭುಗಳನ್ನೂ ಮಕ್ಕಳಿಬ್ಬರನ್ನೂ ನವದಂಪತಿಗಳನ್ನೂ ವೇಲಾಪುರಿಗೆ ಕರೆಸಿಕೊಳ್ಳಲು ಪಂಡಿತರು ಆಶಿಸಟ್ಟು, ದ್ವಾರವತಿಗೆ ಓಲೆ ಬರೆ

ಯಿಸಿ ಕಳಿಸಿಕೊಟ್ಟರು. ಯತಿವರ್ಯರಲ್ಲಿ ಅಪಾರ ಭಕ್ತಿಯನ್ನು ಬೆಳೆಸಿಟ್ಟು ಕೊಂಡಿದ್ದ ಪ್ರಭುಗಳೂ ರಾಣಿಯರೂ ಆ ಸಮಯಕ್ಕೆ ವೇಲಾಪುರಿಗೆ ಹೋಗು ವುದೆಂದು ನಿರ್ಧರಿಸಿದರು.

ಅಷ್ಟರಲ್ಲಿ ಸೋವಲೆಗೆ ಮೈಯಲ್ಲಿ ಸ್ವಲ್ಪ ಅಸ್ವಸ್ಥತೆಯಾಯಿತು. 'ಏನನ್ನೊ ಕಂಡು ಅಂಜಿದೆ' ಎಂದಳು ಸೋವಲೆ. ಅಂದಿನಿಂದ ಅವಳಿಗೆ ಚಾತುರ್ಥಿಕ ಜ್ವರ ಬರಲುಪಕ್ರಮವಾಯಿತು. ಔಷಧಿ ಉಪಚಾರಗಳಿಂದ ಜ್ವರ ನಿಲ್ಲಲಿಲ್ಲ, ಸ್ವಲ್ಪ ಕೃಶವಾದಳು. 'ತನ್ನ ನೆರಳನ್ನೆ ಕಂಡು ಅಂಜಿದ್ದಾಳೆ, ಒಳ್ಳೆ ಧೈರ್ಯ ಶಾಲಿ ಹೆಣ್ಣು!' ಎಂದು ಕುವರವಿಷ್ಣು ದೊಡ್ಡಕ್ಕನೊಡನೆ ಹೇಳಿದ.

'ಬರುವೆವು' ಎಂದ ದಿನವೆ ಶ್ರೀ ರಾಮಾನುಜಾಚಾರ್ಯರು ಶಿಷ್ಯವೃಂದ ದೊಡನೆ ವೇಲಾಪುರಿಯನ್ನು ಸಮೀಪಿಸಿದರು. ಪ್ರಭುಗಳಾದಿಯಾಗಿ ರಾಜ ಮನೆತನದವರೆಲ್ಲ ಹಿಂದಿನ ದಿನವೆ ವೇಲಾಪುರಿಗೆ ಬಂದಿದ್ದರು. ಸೋವಲೆ ದೇಹದಲ್ಲಿ ಅಸ್ವಸ್ಥತೆ ಇದ್ದರೂ, ಯತಿವರ್ಯರ ದರ್ಶನಭಾಗ್ಯವನ್ನೂ ಆಶೀರ್ವಾದ ವನ್ನೂ ಪಡೆಯುವ ಆಶೆಯಿಂದ ಬಂದಿದ್ದಳು.

ಪ್ರಭುಗಳೂ ಪಂಡಿತರೂ ಆಚಾರ್ಯರನ್ನು ಊರಬಾಗಿಲಲ್ಲಿಯೆ ಇದಿರು ಗೊಂಡು ಸಾಷ್ಟಾಂಗವೆರಗಿ, ಅರ್ಘ್ಯ ಪಾದ್ಯ ಆಚಮನೀಯಗಳನ್ನಿತ್ತು, ಕುಶಲ ವನ್ನು ಕೇಳಿ, ಸಮಸ್ತ ರಾಜಮರ್ಯಾದೆಗಳೊಡನೆ, ಅಡ್ಡಪಲ್ಲಕ್ಕಿಯಲ್ಲಿ ಯತಿ ಗಳನ್ನು ಕೂಡಿಸಿಕೊಂಡು, ಮೇಳ ತಾಳ ವಾದ್ಯಗಳೊಂದಿಗೆ, ಸಂಭ್ರಮದಿಂದ ಪುರಪ್ರವೇಶಮಾಡಿಸಿದರು. ದಾರಿಯುದ್ದಕ್ಕೂ ಭಕ್ತರಿಂದ, ಪೌರಶ್ರೇಷ್ಠರಿಂದ, ಮರ್ಯಾದೆ, ಉಪಚಾರ, ನಮಸ್ಕಾರಗಳನ್ನು ಯತಿವರ್ಯರು ಸ್ವೀಕರಿಸಿದರು. ಕೇಶವಾಲಯದಲ್ಲೆ ಯತಿವರ್ಯರ ಬಿಡಾರವಾಯಿತು. ಆ ಮಹಾ ಸುಂದರ ವಾದ ದೇವಾಲಯವನ್ನು ಕಂಡು, ಶ್ರೀ ರಾಮಾನುಜಾಚಾರ್ಯರು ಬೆರಗಾಗಿ ಹೋದರು. 'ಕೇಶವನಿಗೆ ಇಷ್ಟು ಸುಂದರವಾದ ಮನೆ ಇರುವಾಗ, ನಮ್ಮ ಬಡ ಕುಟೀರಗಳಿಗೆ ಏಕೆ ತಾನೆ ಬಂದಾನು! ಅವನು ಇಲ್ಲಿಯೇ ಇದ್ದಾನೆ, ವೈಕುಂಠಸಮಾನವಾದ ಆಲಯವಿದು. ಯದ್ಭಾವಂ ತದ್ಭವತಿ. ರಾಜದಂಪತಿ ಗಳ ಮನಸ್ಸು ಎಷ್ಟು ದೊಡ್ಡದೊ, ಎಷ್ಟು ಸುಂದರವೊ ಅದಕ್ಕೆ ಈ ಆಲಯವೆ ಸಾಕ್ಷಿ. ಇಂತಹ ರಾಜ ಮಹಾರಾಣಿಯರನ್ನೂ ಇಂತಹ ದೇವಾಲಯವನ್ನೂ ಪಡೆದ ಈ ಹೊಯಿಸಳ ನಾಡು ಪುಣ್ಯದ ಬೀಡು. ಇಂತಹ ಪ್ರಭುಗಳನ್ನು

ಅಳಿಯಂದಿರನ್ನಾಗಿ ಪಡೆದಿರುವ ನೀವೂ ಧನ್ಯರು' ಎಂದು ಪ್ರಭುಗಳನ್ನೂ ಪಂಡಿತರನ್ನೂ ಅವರೆದುರಿನಲ್ಲಿಯೆ ಪ್ರಶಂಸಿಸಿದರು. ಎರಡು ದಿನ ವೇಲಾಪುರಿ ಯಲ್ಲೆ ಇದ್ದು ವಿಜಯನಾರಾಯಣನನ್ನು ಮನಸಾರೆ ಸೇವಿಸಿದರು.

ಮಾರನೆಯ ದಿನ ಉಷಃಕಾಲದಲ್ಲಿ ಆಚಾರ್ಯರು ಸ್ನಾನಾದಿಗಳನ್ನು ಮುಗಿಸಿ ತಮ್ಮ ಅಮೃತಹಸ್ತಗಳಿಂದ ವಿಜಯನಾರಾಯಣ, ಚೆನ್ನಕೇಶವ ಮೂರ್ತಿಗಳಿಗೆ ಅಭಿಷೇಕಮಾಡಿ, ಅಲಂಕರಿಸಿ, ಮಹಾಪೂಜೆಗೆ ಕುಳಿತು ಕೊಂಡರು. ಆ ಸಮಯಕ್ಕೆ ಪ್ರಭುಗಳೂ ಸ್ನಾನ ಮುಗಿಸಿ, ಯೋಗ್ಯ ಮಡಿ ಗಳನ್ನುಟ್ಟು ಬಂದರು. ಅವರೊಡನೆ ರಾಣಿಯರೂ ಕುವರ ಸೋವಲೆಯರೂ ಸ್ನಾನಾದಿಗಳನ್ನು ಪೂರೈಸಿಕೊಂಡು ಸೌಮ್ಯವಸ್ತ್ರಭೂಷಣಗಳಿಂದ ಬಂದರು. ಎಲ್ಲರೂ ಒಟ್ಟಾಗಿ ಆಚಾರ್ಯರಿಗೆ ನಮಸ್ಕರಿಸಿದರು. ಆಚಾರ್ಯರು ಆ ನಮಸ್ಕಾರ ಗಳನ್ನು ನಾರಾಯಣನಿಗೆ ಅರ್ಪಿಸಿ 'ನಾರಾಯಣನಿಗೆ ಪ್ರೀತಿಯಾಗಲಿ, ನಾರಾ ಯಣನಿಗೆ ಪ್ರೀತಿಯಾಗಲಿ, ಎಲ್ಲರೂ ಕುಳಿತುಕೊಳ್ಳಿರಿ' ಎಂದರು.

ಎಲ್ಲರೂ ಆಚಾರ್ಯರ ಮಹಾಪೂಜೆಯನ್ನು ನೋಡುತ್ತ ಕುಳಿತುಕೊಂಡರು. ಪೂಜೆ ದಿವ್ಯವಾಗಿ ನಡೆಯಿತು. ಮಹಾಮಂಗಳಾರತಿಗೆ ಎಲ್ಲರೂ ಎದ್ದು ನಿಂತರು. ಮಂತ್ರಪುಷ್ಪ, ಪ್ರಾರ್ಥನಾದಿಗಳಾದವು. ಎಲ್ಲರೂ ವಿಜಯನಾರಾಯಣನನ್ನು ಭಕ್ತಿ ಶ್ರದ್ಧೆಗಳಿಂದ ಸೇವಿಸಿದರು. ಇದಾದನಂತರ ಪ್ರಭುಗಳು ಯತಿವರ್ಯರಿಗೆ ಸಾಷ್ಟಾಂಗವೆರಗಿ ತೀರ್ಥಪ್ರಸಾದಗಳನ್ನು ಅವರ ಕೈಗಳಿಂದ ಸ್ವೀಕರಿಸಿದರು. ಪಂಡಿತರು ಪ್ರಭುಗಳ ಚರಿತ್ರೆಯನ್ನೆಲ್ಲ ಯತಿವರ್ಯರಿಗೆ ಹಿಂದಿನ ರಾತ್ರಿಯೆ ತಿಳಿಸಿ ದ್ದರು. ಇಂತಹ ಮಹಾಭಾಗನಾದ ರಾಜರ್ಷಿಯನ್ನು ಕಾಣಲು ಆಚಾರ್ಯರು ಬಹುದಿನಗಳಿಂದ ಇಚ್ಛೆಪಟ್ಟಿದ್ದರು. ರೂಪದಲ್ಲಿ, ಆಕೃತಿಯಲ್ಲಿ, ಔನ್ನತ್ಯದಲ್ಲಿ, ಬಾಹ್ಯತಃ, ಅಂತಃ ಈ ವಿಷ್ಣುಭೂಪತಿಯು ಎಷ್ಟು ಮಾತ್ರವಿರಬಹುದೆಂದು ಶ್ರೀ ಆಚಾರ್ಯರು ಮನಸ್ಸಿನಲ್ಲಿ ಅಳತೆಮಾಡಿಟ್ಟುಕೊಂಡಿದ್ದರೊ, ಅದಕ್ಕಿಂತಲೂ ಪ್ರಭು ಹೆಚ್ಚಾಗಿಯೆ ಇದ್ದುದನ್ನು ಕಂಡು ಯತಿವರ್ಯರಿಗೆ ಆನಂದವಾಯಿತು; ಬಹು ತೃಪ್ತಿಯಾಯಿತು. ಯತಿವರ್ಯರು ಪ್ರಭುಗಳನ್ನು ಸಂಬೋಧಿಸಿ, 'ರಾಜನ್, 'ನಾವಿಷ್ಣುಃ ಪೃಥ್ವೀಪತಿಃ' ಎಂಬುದು ನಿನಗೆ ಅಕ್ಷರಶಃ ಸಲ್ಲುವುದು. ನೀನು ಮಹಾಧೀರನೂ, ಉದಾರಿಯೂ, ಯಶೋಕಾಮನೂ ಆದ ವೈಷ್ಣವಾಂಶ ಪುರುಷ. ನಿನ್ನ ಸಮಸ್ತ ಇಷ್ಟಾರ್ಥಗಳೂ ಕೈಗೂಡುವುವು. ಕಡೆಗೆ ನೀನು

ಪರಮಾರ್ಥ ಆಕಾಂಕ್ಷಿಯಾಗುತ್ತೀಯೆ, ಅರಿಯುತ್ತೀಯೆ. ಈ ಭೂಮಿಯಲ್ಲಿ ನಿನ್ನ ಹೆಸರನ್ನು ಬರೆದಿಟ್ಟು ಹೋಗುತ್ತೀಯೆ' ಎಂದು ಹರಸಿದರು.

ತರುವಾಯ ಆಚಾರ್ಯರು ತಮ್ಮ ಚರಣಗಳಲ್ಲಿ ಮೈಯಿಕ್ಕಿದ ಶಾಂತಲೆ ಲಕ್ಷ್ಮಿಯರನ್ನು ಕಂಡು 'ತನುಮನಗಳನ್ನು ಚೆನ್ನಕೇಶವನಿಗೆ ಅರ್ಪಿಸಿಕೊಂಡ ಚೆನ್ನೆಯರು ನೀವೇ ಮಹನೀಯರು, ಪ್ರಭುವಿನ ಪುಣ್ಯರೂಪಿಗಳು. ಪ್ರಭುಗಳನ್ನು ಪುಣ್ಯದ ಹಾದಿಯಲ್ಲೆ ಸತತ ನಡೆಸಿಕೊಂಡು ಬನ್ನಿ. ನಿಮ್ಮಿಬ್ಬರ ತನುಮನಗಳಲ್ಲಿ ಭೇದವೇ ಇಲ್ಲ. ಇದು ಬಹು ಅಪರೂಪ' ಎಂದು ಹರಸಿ ಆನಂದಪಟ್ಟರು.

'ನಾನು, ಕುವರವಿಷ್ಣು, ಅಭಿವಾದನ ಮಾಡುತ್ತಿದ್ದೇನೆ' ಎಂದು ಕುವರನು ಯತಿವರ್ಯರ ಪಾದಪದ್ಮಗಳಿಗೆ ತನುವಿಟ್ಟ. ಆಚಾರ್ಯರು ಅವನ ತಲೆಯಲ್ಲಿ ಕೈಯಿಟ್ಟು 'ಮಹಾವಿಷ್ಣುವಿನ ಕುವರನೇ ನೀನು. ಅಂಶಪುರುಷ ನೀನು' ಎಂದು ಹರಸಿದರು. ಅನಂತರ 'ನಾನು ಅವರ ಸತಿ ಸೋವಲೆ' ಎನ್ನುತ್ತ ನಮಸ್ಕರಿಸಿದ ಆಕೆಯನ್ನು ಆಚಾರ್ಯರು ಕಂಡು, ಆಕೆಯ ಮುಖಲಕ್ಷಣದಿಂದ ಬಾಧೆಯನ್ನರಿತು, 'ಏಕೆ ಮಗಳೆ, ನಿನ್ನ ಮುಖದಲ್ಲಿ ಆರೋಗ್ಯವೇಕಿಲ್ಲ?' ಎಂದು ಕೇಳಿದರು. 'ಭಗವನ್, ಈಕೆ ತಾನು ಭಯಗ್ರಸ್ತಳಾದೆನೆಂದು ಹೇಳುತ್ತಿದ್ದಾಳೆ. ಒಂದು ಮಾಸದಿಂದ ಚಾತುರ್ಥಿಕ ಜ್ವರ ಬರುತ್ತಿದೆ, ಉತ್ತಮ ಔಷಧಿಗಳಿಂದಲೂ ಉಪಚಾರವಾಗಲಿಲ್ಲ. ಆಶೀರ್ವದಿಸಬೇಕು, ಅನುಗ್ರಹಿಸಬೇಕು, ಇಬ್ಬರೂ ನನಗೆ ಮಕ್ಕಳಂತೆ' ಎಂದರು ಪ್ರಭುಗಳು.

ಆಚಾರ್ಯರು ಸ್ವಾಮಿಗೆ ಅಭಿಷೇಕಮಾಡಿದ ತೀರ್ಥವನ್ನು ಮಂತ್ರಪೂರ್ವಕವಾಗಿ ಸೋವಲೆಯ ಶಿರಸ್ಸಿನ ಮೇಲೆಯೂ ಮುಖದ ಮೇಲೆಯೂ ಪ್ರೋಕ್ಷಿಸಿ 'ಮನಸ್ಸಿನ ಭೀತಿಗಳು ಈ ಕ್ಷಣವೇ ತೊಲಗಲಿ, ಆರೋಗ್ಯಭಾಗ್ಯ ಉಂಟಾಗಲಿ' ಎಂದು ಹರಸಿದರು.

ಆ ದಿನ ಪ್ರಭುಗಳು ಆಚಾರ್ಯರನ್ನು ಅರಮನೆಗೆ ಬರಮಾಡಿಕೊಂಡು ಸುವರ್ಣಪುಷ್ಪಗಳಿಂದ ಪಾದಪೂಜೆ ಮಾಡಿ, ಅವರಿಂದಲೆ ವೈಷ್ಣವಧರ್ಮದ ಮಹಾ ತತ್ತ್ವಗಳನ್ನು ಉಪದೇಶ ಹೊಂದಿದರು. ಆಗ ಪ್ರಭುಗಳ ಧರ್ಮಶ್ರದ್ಧೆ ಇನ್ನೂ ಹೆಚ್ಚಿತು, ಪರಮಾರ್ಥವಿಚಾರಾಸಕ್ತಿ ಉದಯಿಸಿತು. ಪ್ರಭುಗಳ ದೈವಭಕ್ತಿ, ಧರ್ಮಶ್ರದ್ಧೆ, ಪ್ರಜಾನುರಾಗ, ಉತ್ತಮರಾಜ್ಯವಿಚಕ್ಷಣೆ ಇವು

ಗಳನ್ನೂ, ಈ ಯೋಗ್ಯತೆಗಳಲ್ಲಿ ಸಮತೂಕದವರೇ ಆದ ಶಾಂತಲೆ ಲಕ್ಷ್ಮಿಯ ರನ್ನೂ ಕಂಡು ಯತಿವರ್ಯರ ಮನಸ್ಸಿಗೆ ತೃಪ್ತಿಯಾಯಿತು. ಚೆಲುವನಾರಾಯಣನಿಗೆ ಬೇಕಾದಷ್ಟು ದತ್ತಿಗಳನ್ನು ಕೊಟ್ಟು ಪ್ರಭುಗಳು ಧನ್ಯರಾದರು. ಸೋವಲೆಗೆ ಚಾತುರ್ಥಿಕ ಜ್ವರ ನಿಂತು ಆಕೆ ದಿನದಿನಕ್ಕೂ ಆರೋಗ್ಯಭಾಗ್ಯ ಪಡೆದು ಪೂರ್ಣಚಂದ್ರಮನಂತಾದಳು. ಕೆಲವು ದಿನಗಳಾದ ಮೇಲೆ ಪ್ರಭುಗಳು ಸಕಲ ಸಂಸಾರದೊಂದಿಗೆ ತಿರುನಾರಾಯಣಪುರಕ್ಕೆ ಹೋಗಿ ಚೆಲುವ ನಾರಾಯಣನ ದರ್ಶನಭಾಗ್ಯ ಪಡೆದು, ಭಗವಂತನನ್ನೂ ಯತಿವರ್ಯರನ್ನೂ ಮನಸಾರೆ ಸೇವಿಸಿ, ಆಶೀರ್ವಾದ ಪಡೆದರು. ಹಿಂದಿರುಗಿ ಬರುವಾಗ ಆ ಊರಿನ ಈಶ್ವರಾಲಯಕ್ಕೂ ದತ್ತಿಗಳನ್ನು ಬಿಟ್ಟುಕೊಟ್ಟು, ಅಖಂಡದೀಪಕ್ಕೆ ವ್ಯವಸ್ಥೆ ಮಾಡಿ ಬಂದರು.

ಬಂದ ಕ್ಷಣವೇ ಪ್ರಭುಗಳು ದಿಗ್ವಿಜಯಕ್ಕೆ ಅನುಕೂಲಗಳನ್ನೂ ಸಲಕರಣೆ ಸಾಮಗ್ರಿಗಳನ್ನೂ ಸೈನ್ಯಶೇಖರಣೆಗಳನ್ನೂ ಕೈಕೊಂಡರು. ಪುನೀಸ, ಚಿಕ್ಕ ಮರಿಯಾನೆ, ಮಾರಸಿಂಗಮಯ್ಯ, ಬೋಕಿಗರುಡ, ಬಾಗಿಪ್ಪಯ್ಯ, ಬೊಪ್ಪಣ, ಕೇತಮಲ್ಲನಾಯಕ ಇವರುಗಳೆಲ್ಲ ತಮ್ಮ ತಮ್ಮ ಸಮಸ್ತ ಸೈನ್ಯಗಳೊಂದಿಗೆ ಸಿದ್ಧರಾಗಿ ನಿಂತರು. ಪ್ರಭುಗಳು ಸಕಲ ಸಲ್ಲಕ್ಷಣಗಳುಳ್ಳ ಒಂದು ಅಶ್ವವನ್ನು ಆಭರಣದುಕೂಲಗಳಿಂದ ಅಲಂಕರಿಸಿ, ಅದರ ನೆತ್ತಿಗೆ 'ಯಜ್ಞಾಶ್ವ'ವೆಂದು ಚಿನ್ನದ ಪಟ್ಟೆಯನ್ನು ಬರಸಿ ಬಿಗಿದು, ಅದನ್ನು ಮುಂದೆ ಬಿಟ್ಟುಕೊಂಡು, ತಾವು ಮಹೋನ್ನತವಾದ ದಂತಿಯೊಂದನ್ನಡರಿ ವಿಜಯದಶಮಿಯ ಶುಭ ಮುಹೂರ್ತದಲ್ಲಿ ಹೊರಟರು.

ಹೊರಡುವ ಮುನ್ನ ಪ್ರಭುಗಳು ಶಾಂತಲೆಯ ಬಳಿಗೆ ಬಂದು 'ದೇವಿ, ರಾಜಧಾನಿಯ ರಕ್ಷಣೆಗೆ ಈ ಸಾರಿ ದೊಡ್ಡ ಸೈನ್ಯವನ್ನು ಇಟ್ಟು ಹೋಗುತ್ತಿದ್ದೇನೆ. ಕುವರನು ಅದರ ನಾಯಕನಾಗಿ ಇಲ್ಲಿರುವುದು ಲೇಸು. ಆದರಿಂದ ನಮ್ಮ ಮನಸ್ಸಿಗೆ ನೆಮ್ಮದಿ, ಧೈರ್ಯ. ಮಾವಯ್ಯನವರು ಇನ್ನೊಂದು ದೊಡ್ಡ ಸೈನ್ಯದೊಡನೆ ರಾಜಧಾನಿಯ ಸುತ್ತು ಎಲ್ಲೆಯನ್ನು ಕಾಪಾಡಿಕೊಂಡು ಇರುತ್ತಾರೆ. ಎಲ್ಲ ಸಮಾಚಾರಗಳನ್ನೂ ಆಗಿಂದಾಗ್ಗೆ ಅವರಿಂದ ಅರಿಯುತ್ತಿರಬಹುದು. ಎಂಟು ಹತ್ತು ದಿನಗಳಿಗೊಮ್ಮೆ ನಾನು ಎಲ್ಲಿದ್ದರೂ ಸಮಾಚಾರವನ್ನು ಕಳಿಸುತ್ತಿರುತ್ತೇನೆ. ಎರಡು ಮೂರು ತಿಂಗಳೊಳಗಾಗಿಯೆ ನಾವು ಕೈಗೊಂಡಿರುವ

ಕಾರ್ಯಗಳೆಲ್ಲವೂ ವಿಜಯನಾರಾಯಣನ ಕೃಪೆಯೊಂದಿದ್ದರೆ ಪೂರ್ಣವಾಗುವುವು. ಎಂತೂ ವಸಂತಋತುವಿಗೆ ಮೊದಲೆ ರಾಜಧಾನಿಗೆ ಹಿಂದಿರುಗುವ ಸಂಕಲ್ಪವಿದೆ. ಹೋದಸಲದಂತೆ, ಚಿಂತೆಯಿಂದ, ವ್ರತೋಪವಾಸಗಳಿಂದ ದೇಹವನ್ನು ಕೃಶ ಪಡಿಸಿಕೊಳ್ಳಬೇಡ. ನಾನು ಹಿಂದಿರುಗಿ ಬಂದಾಗ ನಿನ್ನನ್ನು ನೋಡಿ ಸಂಕಟ ಪಟ್ಟುಕೊಳ್ಳುವ ಹಾಗೆ ಮಾಡಬೇಡ. ನೀನು ಇಲ್ಲಿ ಸಂತೋಷದಿಂದಿದ್ದರೆ, ನಾನು ಅಲ್ಲಿ ಸಂತೋಷವಾಗಿರುತ್ತೇನೆ. ನೀನು ಹಾಗಿರುವುದು ನಾನು ಕೈಕೊಂಡಿ ರುವ ಕಾರ್ಯಕ್ಕೆ ನೆರವಾಗುತ್ತದೆ. ಪ್ರಾರ್ಥನಾದಿಗಳನ್ನೂ ದಾನಧರ್ಮಗಳನ್ನೂ ಯಥೇಚ್ಛವಾಗಿ ನಡಸಿಕೊಂಡು ಬಾ. ಕೈ ನಡೆಯುವಾಗ ಆದಷ್ಟು ದಾನಧರ್ಮ ಗಳನ್ನು ಮಾಡಿಬಿಡಬೇಕು. . . . . ಪಂಡಿತ ಮಾವಯ್ಯನವರ ಆರೋಗ್ಯ ಈಚೆಗೆ ಚೆನ್ನಾಗಿಲ್ಲ. ಅವರಿಗೆ ವಯಸ್ಸಾಗುತ್ತ ಬಂತು. ಲಕ್ಷ್ಮಿ ಆಗಾಗ್ಗೆ ವೇಲಾಪುರಿಗೆ ಹೋಗಿ ಬರುತ್ತಿರಲಿ. ನೀನೂ ಆಗಾಗ್ಗೆ ಹೋಗಿ ನೋಡಿಕೊಂಡು ಬಾ. ಸೋವ ಲೆಯ ಆರೋಗ್ಯವನ್ನೂ ಚೆನ್ನಾಗಿ ನೋಡಿಕೊ, ಅರಿಯದ ಹುಡುಗಿ ಅವಳು' ಎನ್ನುತ್ತಿರುವಾಗ್ಗೆ ಲಕ್ಷ್ಮಿಯೂ ಅಲ್ಲಿಗೆ ಬಂದಳು. ಬಂದವಳು ಪ್ರಭುಗಳ ಪಾದ ಗಳನ್ನು ಮುಟ್ಟಿ ನಮಸ್ಕರಿಸಿ 'ಸ್ವಾಮಿ, ಕುವರನೂ ತಮ್ಮ ಜೋತೆಯಲ್ಲಿಯೇ ಬರಬೇಕೆಂದು ಹಟಮಾಡಿ ಹೇಳುತ್ತಿದ್ದಾನೆ. ಸುಮಾರು ಒಂದು ತಿಂಗಳಿಂದಲೂ "ಅಪ್ಪಾಜಿಯವರಿಗೆ ನೀನು ಹೇಳು—ನೀನು ಹೇಳು" ಎಂದು ನಮ್ಮಿಬ್ಬರೊಡ ನೆಯೂ ಹೇಳಿಕೊಳ್ಳುತ್ತಲೇ ಇದ್ದಾನೆ. ಈಗಲಾದರೂ "ಈ ಕ್ಷಣವೆ ನೀನು ಅಪ್ಪಾಜಿಯವರಿಗೆ ಹೋಗಿ ಹೇಳು, ಹೇಳು" ಎಂದು ನನಗೆ ಒಂದು ನಿಮಿಷ ವಾದರೂ ಬಿಡುವು ಕೊಡದೆ ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ' ಎಂದಳು.

'ಲಕ್ಷ್ಮಿ, ಅವನ ಆಶೆ ನ್ಯಾಯವಾದುದೆ ಹೌದು. ನನ್ನೊಡನೆಯೂ ಬಂದು ಹೇಳಿಕೊಂಡ. ನಾನು ಅವನಿಗೆ ಬಹು ಸಮಾಧಾನಪಡಿಸಬೇಕಾಯಿತು. "ರಾಜಧಾನಿಯ ರಕ್ಷಣೆಗೆ ನೀನೆ ಸಮರ್ಥನು. ನಿನ್ನ ದಕ್ಷತೆ, ಶಕ್ತಿ ಸಾಮರ್ಥ್ಯ ಗಳಲ್ಲಿ ನನಗೆ ಬಹು ನಂಬಿಕೆ ಇದೆ. ಈ ಧೈರ್ಯದ ಮೇಲೆಯೆ ನಾನು ಈ ದೊಡ್ಡ ಕಾರ್ಯವನ್ನು ಕೈಕೊಂಡಿರುವುದು. ನಿನ್ನ ರಕ್ಷಣೆ ರಾಜಧಾನಿಗೆ ಇರುವುದೆಂದು ನಾನು ಧೈರ್ಯದಿಂದ, ನಿಶ್ಚಿಂತೆಯಿಂದ ನನ್ನ ಕಾರ್ಯಗಳೆಲ್ಲವನ್ನೂ ಮುಗಿಸಲು ಸಾಧ್ಯವಾಗುವುದು. ನನ್ನ ಕೈ ಉಡುಗಿದಾಗ ನಮ್ಮೆಲ್ಲರ ರಕ್ಷಣೆಯೂ ನಿನಗೆ ಸೇರಿದ್ದೇ ಅಲ್ಲವೆ? ನೀನು ಇಲ್ಲಿರುವುದರಿಂದ ನಾನು ಎಲ್ಲಿದ್ದರೂ ನನಗೆ ಧೈರ್ಯ

ವಿರುವುದು' ಎಂದೆಲ್ಲ ಹೇಳಿ ಅವನನ್ನು ಸಮಾಧಾನಪಡಿಸಬೇಕಾಯಿತು. ನೋಡು, ಇಷ್ಟೆಲ್ಲ ಹೇಳಿದ ಮೇಲೂ ಈಗ ನಿನ್ನನ್ನು ಕಳುಹಿಸಿದ್ದಾನೆ. ಲಕ್ಷ್ಮಿ, ಅವನಿಗೆ ಮದುವೆಯಾದ ವರ್ಷವಿದು. ಅವನನ್ನು ಯುದ್ಧಭೂಮಿಗೆ ಹೇಗೆ ಕರೆದುಕೊಂಡು ಹೋಗಲಿ? ನನ್ನ ಪ್ರಜೆಗಳು ಏನೆಂದಾರು? ಲಕ್ಷ್ಮಿ, ಈಚೆಗೆ ನಿನ್ನ ಮೇಲೆ ಅವನಿಗೆ ನಂಬಿಕೆ ಹೆಚ್ಚಾಗಿದೆ. "ದೊಡ್ಡಕ್ಕನೂ ಅಪ್ಪಾಜಿಯವರೂ ಒಂದು. ನನ್ನ ಪರವಾಗಿ ದೊಡ್ಡಕ್ಕ ಒಂದೇ ಒಂದು ಮಾತು ಹೇಳುವುದಿಲ್ಲ" ಎಂದು ಪಂಡಿತ ಮಾವಯ್ಯನವರೊಡನೆ ಅಂದನಂತೆ.'

ಲಕ್ಷ್ಮಿ: 'ಸ್ವಾಮಿ, ನೀವು ಈಗ ಹೇಳಿದ ಮಾತುಗಳನ್ನೆ ನಾನೂ ಅಕ್ಕನೂ ಅನೇಕ ವೇಳೆ, ಅನೇಕ ವಿಧಗಳಲ್ಲಿ ಹೇಳಿದ್ದೇವೆ. ಬರಬರುತ್ತ ಶುದ್ಧ ಮೊಂಡನಾಗುತ್ತಿದ್ದಾನೆ. "ಬೊಪ್ಪಣ ಹೋಗಬಹುದು, ನಾನು ಹೋಗ ಕೂಡದೊ?" ಎಂದು ಒಂದೇ ಮಾತು ಕೇಳುತ್ತಾನೆ.'

ವಿಷ್ಣುವರ್ಧನ: 'ಬೊಪ್ಪಣನನ್ನು ಕರೆದುಕೊಂಡು ಹೋಗುತ್ತಿದ್ದೇನೆ. ನಿಜ, ಅವನೂ ಈ ವರ್ಷ ಮದುವೆಯಾದವನೆ. ಇತರ ಕಾರ್ಯಗಳಿಗೆ ಅವನನ್ನು ಉಪಯೋಗಿಸಿಕೊಳ್ಳುತ್ತೇನೆ. ರಣರಂಗದೊಳಕ್ಕೆ ಅವನನ್ನು ಬಿಡುವುದಿಲ್ಲ.'

ಶಾಂತಲೆ: 'ಸರಿ, ಇವನನ್ನೂ ಹಾಗೆಯೆ ಇಡಿ.'

ವಿಷ್ಣುವರ್ಧನ: 'ಅಲ್ಲಿಗೆ ಹೋದ ಮೇಲೆ ಇವನು ನನಗೆ ಖಂಡಿತ ತಲೆ ನೋವು ಕೊಡುತ್ತಾನೆ. ಇಲ್ಲೇ ನೋಡು, ಎಷ್ಟು ರಂಪು ಮಾಡುತ್ತಿದ್ದಾನೆ. "ನನ್ನನ್ನೇಕೆ ಕರತಂದುದು? ಈ ಭಾಗ್ಯಕ್ಕೆ ನಾನು ಊರಲ್ಲೆ ಇರುತ್ತಿದ್ದೆನಲ್ಲಾ" ಎಂದು ಕೇಳಿದರೂ ಕೇಳುವವನೆ. ಇವನ ಹತ್ತಿರ ನಾನು ಆಗ ವಾದಕ್ಕೆ ನಿಂತು ಕೊಳ್ಳಲೆ?'

ಲಕ್ಷ್ಮಿ: 'ಅಕ್ಕ, ನಿನಗೆ ಏನೆಲ್ಲ ಬೇಕು? ಎಷ್ಟು ವಜ್ರ, ವೈಡೂರ್ಯ, ಮರಕತ? ಎಂತೆಂತಹ ಮುತ್ತಿನ ಹಾರ? ಎಂದೆಲ್ಲ ಕೇಳುತ್ತಾನೆ. ನಿನಗೆ ಇಷ್ಟು, ದೊಡ್ಡಕ್ಕನಿಗೆ ಇಷ್ಟು, ಎಂದು ಪಟ್ಟಿಯನ್ನೇ ಬರೆದಿಟ್ಟುಕೊಂಡಿದ್ದಾನೆ.'

ವಿಷ್ಣುವರ್ಧನ: 'ಇದೆಲ್ಲ ಎಲ್ಲಿಂದ ತರುತ್ತಾನಂತೆ?'

ಲಕ್ಷ್ಮಿ: 'ರಾಜರುಗಳ ಕಂಠಾಭರಣಗಳಲ್ಲಿ, ಕಂಕಣವಲಯಗಳಲ್ಲಿ, ಭುಜಕೀರ್ತಿಗಳಲ್ಲಿ, ಬೊಕ್ಕಸಗಳಲ್ಲಿ ಎನ್ನುತ್ತಾನೆ.'

ವಿಷ್ಣುವರ್ಧನ: 'ದೋಚುವುದೆಂದರೆ ಅವನಿಗೆ ಆಶೆ ಇರುವ ಹಾಗೆ ಕಾಣುತ್ತದೆ.'

ಲಕ್ಷ್ಮಿ: 'ನಾನೂ ಹಾಗೇ ಎಂದುದಕ್ಕೆ, ಅನ್ಯಾಯದ ಸುಲಿಗೆಗಳು ಒಬ್ಬರದಾಗಿ ನಿಲ್ಲವು ಎಂದ.'

ವಿಷ್ಣುವರ್ಧನ: 'ಅಂಥವು ನಮಗಾದರೂ ಏಕಂತೆ?'

ಲಕ್ಷ್ಮಿ: 'ಎಲ್ಲ ರಾಜಬೊಕ್ಕಸಗಳೂ ಅಷ್ಟೆ', ಎಂದ. ನಾ ಕೇಳಿದೆ: 'ನಮಗೆಲ್ಲರಿಗೂ ಆಯಿತು. ಸೋವಲೆಗೆ ಏನೂ ಬೇಡವೆ?' ಎಂದು. ಅದಕ್ಕೆ ಅವನು "ಸೋವಲೆಗೆ ಈಗಾಗಲೆ ಅಪ್ಪಾಜಿಯವರು ಹೊರಲಾರದಷ್ಟು ಹೊರಿಸಿದ್ದಾರೆ. ಇನ್ನೇನಾದರೂ ಹೊರಿಸಿದರೆ ಆ ಭಾರಕ್ಕೆ ಪಾತಾಳಕ್ಕೆ ಇಳಿದಾಳು" ಎಂದ.'

ಆ ಮಾತು ಅವರೆಲ್ಲರಲ್ಲಿ ದೊಡ್ಡ ನಗುವಿಗೆ ಕಾರಣವಾಯಿತು.

§

ವಿಜಯದಶಮಿಯ ದಿನ ಶುಭ ಮುಹೂರ್ತದಲ್ಲಿ ವಿಷ್ಣುವರ್ಧನಪ್ರಭು ವಿಜಯಯಾತ್ರೆ ಹೊರಟರು. ಆ ದಿನ ವಿಜಯನಾರಾಯಣನನ್ನು ವಿಧಿವತ್ತಾಗಿ ಪೂಜಿಸಿ, ವಾಸಂತಿಕಾದೇವಿಯ ಅನುಗ್ರಹವನ್ನು ಕೋರಿ, ಪ್ರೀತಿಯ ಪತ್ನಿಯರು ಆದರದಿಂದಿಟ್ಟ ರಕ್ಷೆಯನ್ನು ಸ್ವೀಕರಿಸಿ, ಕುವರನನ್ನು ಕರೆದು 'ಇಗೋ, ನೀನಿಲ್ಲಿರುವೆಯೆಂಬ ಧೈರ್ಯದ ಮೇಲೆ ನಾನೀಗ ಹೊರಟಿರುವುದು, ಇನ್ನು ಮೇಲಿನ ಯುದ್ಧಗಳೆಲ್ಲ ನಿನ್ನವೆ' ಎಂದು ಹೇಳಿ ಸಮಾಧಾನಗೊಳಿಸಿ, ಲಕ್ಷ್ಮಿಯನ್ನು ಕರೆದು 'ಎಂಟೆಂಟು ದಿನಗಳಿಗೊಮ್ಮೆ ನಿನ್ನ ಅಕ್ಕನೂ ನೀನೂ ವೇಲಾಪುರಕ್ಕೆ ಹೋಗಿ ಅಯ್ಯನನ್ನು ಕಂಡುಬನ್ನಿ. ಈಚಿಗೆ ತಪಸ್ಸಿನಿಂದ ಅವರ ದೇಹ ಬಹು ಕುಗ್ಗಿದೆ' ಎಂದು ಹೇಳಿ, ಶಾಂತಲೆಯ ಕೈಹಿಡಿದುಕೊಂಡು 'ದೇವಿ, ನನ್ನ ಅರ್ಧಜೀವವನ್ನು ನಿನ್ನಲ್ಲಿ ಬಿಟ್ಟುಹೋಗುತ್ತಿದ್ದೇನೆ. ವಿಜಯನಾರಾಯಣನ ಸ್ಮರಣೆಯನ್ನು ಮರೆಯದಿರು. ನಿನ್ನ ವ್ರತ, ನಿಯಮ, ನೋಂಪಿ ನನ್ನನ್ನು ಎಂತಹ ಇಕ್ಕಟ್ಟನಲ್ಲಿಯೂ ಕಾಯುವುದು, ಜಯ ಗಳಿಸಿಕೊಡುವುದು. ನೀವಿಬ್ಬರೂ ಹಂಬಲಿಸಕೂಡದು, ಕಣ್ಣೀರಿಡಕೂಡದು. ನಿಮ್ಮ ಕಣ್ಣಿನಲ್ಲಿ ನೀರು ಕಾರಿದರೆ ನಮ್ಮ ಹೃದಯ ರಕ್ತ ಕಾರೀತು, ಎಚ್ಚರಿಕೆ. ಸುಮ್ಮಾನದಿಂದ ನನ್ನನ್ನು ಕಳಿಸಿಕೊಡಿ. ವಿಜಯನಾರಾಯಣನ ಕೃಪೆಯಿದ್ದರ ಮೂರೇ ತಿಂಗಳುಗಳೊಳಗೆ

ಕೆಲಸಗಳೆಲ್ಲವನ್ನು ಆಗುಮಾಡಿಕೊಂಡು ಬರುತ್ತೇನೆ' ಎಂದು ಆತ್ಮೀಯತೆಯ ಮಾತುಗಳನ್ನಾಡಿ, ಶಾಂತಲೆ ಲಕ್ಷ್ಮಿಯರನ್ನು ಸಮಾಧಾನಪಡಿಸಿ, ತೃಪ್ತಿಯಿಂದ ವಿಜಯಯಾತ್ರೆ ಹೊರಟರು. ಸೈನ್ಯವೆಲ್ಲ ಪ್ರಭುಗಳನ್ನು ಅನುಸರಿಸಿತು.

ದಂಡಯಾತ್ರೆ ಹೊರಟ ಹತ್ತನೆಯ ದಿನವೆ ಹೊಯಿಸಳ ಸೇನೆ ನೊಳಂಬ ವಾಡಿಯನ್ನು ಮುತ್ತಿತು. ನೊಳಂಬವಾಡಿ ಜಯಸಿಂಹನ ಆಡಳಿತದಲ್ಲಿತ್ತು. ಪಲ್ಲವರನ್ನು ಜಯಿಸಿದ ಪಾಂಡ್ಯ ಅರಸರ ಸಾಮಂತ ಈ ಜಯಸಿಂಹ. ಜಯ ಸಿಂಹ ಚಾಲುಕ್ಯ ಕುಲದವನು. ಚಾಲುಕ್ಯರ ಆಜನ್ಮಶತ್ರು ವಿಷ್ಣುವರ್ಧನ. ಆಗ ಇದ್ದ ಚಾಲುಕ್ಯಪ್ರಭು ಆರನೆಯ ವಿಕ್ರಮಾದಿತ್ಯ. ವಿಷ್ಣುವರ್ಧನನ ಗುಣ ಸ್ವಭಾವಗಳನ್ನೂ ಶಕ್ತಿ ಸಾಮರ್ಥ್ಯಗಳನ್ನೂ ಅರಿಯದೆ ಅವನನ್ನು ಈ ವಿಕ್ರ ಮಾದಿತ್ಯ ಹಗೆ ಮಾಡಿಕೊಂಡ, ಪ್ರಬಲವಾದ ಹಗೆ ಮಾಡಿಕೊಂಡ.

ಹೊಯಿಸಳ ಅರಸರು ಎರೆಯಂಗರ ಕಾಲವಾಗುವವರೆಗೂ ಚಾಲುಕ್ಯರ ಮಹಾಸಾಮಂತರಾಗಿಯೆ ಇದ್ದರು. ಎರೆಯಂಗರು ಕಾಲವಾದ ವರ್ಷವೆ ಈ ಚಾಲುಕ್ಯರ ವಿಕ್ರಮಾದಿತ್ಯ ಹೊಯಿಸಳ ಗಡಿನಾಡು ಒಂದನ್ನು ತನ್ನ ಸಂಬಂಧಿ ಯೊಬ್ಬನಿಗೆ ಹಂಚಿಕೊಡಲು ಯತ್ನಿಸಿದ. 'ಎರೆಯಂಗರ ಮಕ್ಕಳು ಇನ್ನೂ ಕುನ್ನಿಗಳು, ಇವರು ಏಕೆ ಪ್ರತಿಭಟಿಸಿಯಾರು?' ಎಂದು ವಿಕ್ರಮಾದಿತ್ಯ ನೆನಸಿದ್ದ. ಆದರೆ, ಎರೆಯಂಗರ ಈ ಮೂವರು ಮಕ್ಕಳೂ, ಬಲ್ಲಾಳ, ಬಿಟ್ಟಿದೇವ, ಉದ ಯಾದಿತ್ಯ ಇವರುಗಳು ಪ್ರತಿಭಟಿಸಿ ನಿಂತರು. ಮಹಾದೇವಿ ಅಕ್ಕನವರು ಕುಪಿತ ಫಣಿಯಂತೆ ಎದ್ದುನಿಂತು 'ನಾನು ಬಂಜೆಯಲ್ಲ, ನನ್ನ ಮಕ್ಕಳು ಅವರ ಅಯ್ಯನ ಸ್ವತ್ತನ್ನು ಕಾಪಾಡಿಕೊಳ್ಳಬಲ್ಲರು' ಎಂದರು. ಗಂಗರಾಜರು 'ನನ್ನ ಕತ್ತಿಯ ಅಲಗು ಮುರಿದುಹೋದ ಮೇಲಲ್ಲವೆ, ಈ ಚಾಲುಕ್ಯರು ಹೊಯಿಸಳ ನಾಡಿಗೆ ಕಾಲಿಡಬಲ್ಲರು!' ಎಂದು ಮಕ್ಕಳನ್ನು ಹುರಿದುಂಬಿಸಿದರು. ಚಾಲುಕ್ಯರ ವಿಕ್ರ ಮಾದಿತ್ಯ ತನ್ನ ಸೇನಾಧಿಪತಿಯಾದ ಸಂತಾರ ಜಗದ್ದೇವನನ್ನು ಸೈನ್ಯದೊಡನೆ ಕಳುಹಿಸಿ 'ಈ ಕುನ್ನಿಗಳ ಸೊಕ್ಕನ್ನು ಅಡಗಿಸಿ ದ್ವಾರವತಿಯನ್ನು ಸುಟ್ಟು ಬಾ' ಎಂದು ಕಳಿಸಿದ. 'ಎರೆಯಂಗರ ಮಕ್ಕಳು ಕುನ್ನಿಗಳಲ್ಲ, ಸಿಂಹದ ಮರಿಗಳು' ಎಂದು ಜಗದ್ದೇವನಿಗೆ ಬೇಗನೆ ಅನುಭವಕ್ಕೆ ಬಂದಿತು. ದ್ವಾರವತಿಯನ್ನು ಮುತ್ತಲು ಬಂದ ಜಗದ್ದೇವನ ಸೇನೆಯನ್ನು ಈ ಹೊಯಿಸಳ ಕುಮಾರರು ಗಂಗ ರಾಜರ ಸೇನಾಧಿಪತ್ಯದಲ್ಲಿ ನಿರ್ಲಕ್ಷ್ಯದಿಂದ ಎದುರಿಸಿ ಕಾದಿ, ಜಗದ್ದೇವನ

ಮುಕ್ಕಾಲು ಸೈನ್ಯವನ್ನೆಲ್ಲ ರಣರಂಗದಲ್ಲಿ ಕೊಚ್ಚಿಹಾಕಿದರು. ಜಗದ್ದೇವನು ಆನೆ ಯನ್ನು ಹತ್ತಿ ರಣರಂಗದಿಂದ ಓಡಿದ. ಬಿಟ್ಟಿದೇವ ಬೆನ್ನಟ್ಟಿ ಹೋಗಿ ತೀಕ್ಷ್ಣ ಶರಗಳಿಂದ ಅವನ ಆನೆಯನ್ನು ನೋಯಿಸಿದ. ಆನೆಯು ಜಗದ್ದೇವನನ್ನು ನೆಲಕ್ಕೆ ಕೆಡವಿ ಅಂಕೆ ತಪ್ಪಿ ಓಡಿತು. ಆಗ ಜಗದ್ದೇವನಿಗೂ ಚಿಕ್ಕವನಾದ ಬಿಟ್ಟಿದೇವನಿಗೂ ಮಲ್ಲಯುದ್ಧ ನಡೆಯಿತು. ಚಿಕ್ಕವನ ಪೆಟ್ಟುಗಳಿಗೆ ನೊಂದು ಜಗದ್ದೇವ ಓಡಿದ. 'ಓಡುವೆಯಾ ಹೇಡಿ' ಎಂದು ಬಿಟ್ಟಿದೇವ ಜಗದ್ದೇವನನ್ನು ಹಿಡಿದೆಳೆದ. ಆದರೆ ಬಿಟ್ಟಿದೇವನ ಕೈಗೆ ಸಿಕ್ಕಿದುದು ಜಗದ್ದೇವನ ಕುತ್ತಿಗೆಯಲ್ಲಿ ಮೆರೆಯುತ್ತಿದ್ದ ಅನಘ್ಯವಾದ ಪಚ್ಚೆಯ ಸರ. ಜಗದ್ದೇವ ಓಡಿಯೆ ಹೋದ. ಪಚ್ಚೆಯ ಸರವನ್ನು ಬಿಟ್ಟಿದೇವ ತನ್ನ ಅವ್ವೆಗೆ ತಂದೊಪ್ಪಿಸಿದ.

ಅದುಮೊದಲು ವಿಷ್ಣುವರ್ಧನ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಮೇಲೆ ಕಡುಹಗೆ ಸಾಧಿಸುತ್ತಲೆ ಬಂದ. ಚಾಲುಕ್ಯರ ಹೆಸರನ್ನೆ ತೊಡೆದುಹಾಕುವ ಆಶೆ ಅವನಿಗಿದ್ದಿತು. ವಿಕ್ರಮಾದಿತ್ಯನು ವಿವೇಕಿಯೂ ಆಲೋಚನಾಪರನೂ ಆಗಿದ್ದಿದ್ದರೆ, ವಿಷ್ಣುವರ್ಧನನ ಸತ್ವವನ್ನು ಸ್ವಲ್ಪಕಾಲ ಗಮನಿಸಿ, ಬಳಿಕ ಆ ಮಹಾಸಾಮಂತನ ಸ್ನೇಹವನ್ನು ಉಳಿಸಿಕೊಂಡಿದ್ದರೆ, ಹೊಯಿಸಳ ವಿಷ್ಣುವರ್ಧನ ಚಾಲುಕ್ಯರ ಕೀರ್ತಿಸ್ತಂಭವಾಗಿ ನಿಲ್ಲುತ್ತಿದ್ದ. ಈಗ ವಿಷ್ಣುವರ್ಧನ ಚಾಲುಕ್ಯರ ಪ್ರಬಲ ವೈರಿಯೆ ಆದ. ವಿಷ್ಣುವರ್ಧನ ಈಗ ಕೈಕೊಂಡ ದಂಡಯಾತ್ರೆ ಚಾಲುಕ್ಯ ಸಾಮಂತರೆಲ್ಲರ ಬೆನ್ನು ಮುರಿಯುವುದಕ್ಕೆ. ಹಾಗೆ ಮಾಡಿದರೆ ಚಾಲುಕ್ಯವೃಕ್ಷ ಬಾಡಿ ನಾಶವಾಗುವುದೆಂದು ವಿಷ್ಣುವರ್ಧನನು ಬಲ್ಲವನಾಗಿದ್ದ.

ಆದ್ದರಿಂದಲೆ ಪ್ರಭು ಈ ವಿಷಯವನ್ನು ಹಿಂದೆ ಶಾಂತಲೆಯ ಕಿವಿ ಯಲ್ಲಿ ಉಸುರಿದಾಗ, ಆಕೆ ವಿಜಯನಾರಾಯಣನನ್ನು ನೆನೆದು, ತನ್ನ ಹಣೆಯ ಕುಂಕುಮಸೌಭಾಗ್ಯವನ್ನೂ ಮಂಗಳಸೂತ್ರವನ್ನೂ ಮುಟ್ಟಿಕೊಂಡಳು, 'ದೇವರೇ, ಇದನ್ನು ರಕ್ಷಿಸಿಕೊಡು' ಎಂಬ ಆಂತರ್ಯದ ಪ್ರಾರ್ಥನೆಯಿಂದ.

ನೊಳಂಬವಾಡಿಯ ಅರಸ ಈ ಜಯಸಿಂಹ, ಯಜ್ಞಾಶ್ವವನ್ನು ತಡೆದು ಕಟ್ಟಿದ. ಆಗ ಅನೇಕ ಆನೆಗಳೂ, ರಥಗಳೂ, ಕುದುರೆಗಳೂ ಉಳ್ಳ ಪಾಂಡ್ಯರ ಸೇನೆ ಜಯಸಿಂಹನ ಸಹಾಯಕ್ಕೆ ಬಂದು ನಿಂತಿತು. ಎರಡು ಸೇನೆಗಳಿಗೂ 'ದುಮ್ಮೆ' ಎಂಬ ಸ್ಥಳದಲ್ಲಿ ದೊಡ್ಡ ಯುದ್ಧವಾಯಿತು. ವಿಷ್ಣುವರ್ಧನನ ಸೇನೆಯಲ್ಲಿ ಒಬ್ಬ ಹೊಸಬ ಡಣಾಯಕ ಚಾಮದೇವನೆಂಬವನು ಈ ಯುದ್ಧದಲ್ಲಿ

ಅತುಳಪರಾಕ್ರಮದಿಂದ ಹೋರಾಡಿದ. ಜಯಸಿಂಹನ ಪಾಂಡ್ಯಸೇನೆ ಸೋತು ಹೋಯಿತು. ಅಲ್ಲಿಂದ ಮುಂದಕ್ಕೆ ಚಾವುದೇವ ವಿಜಯೋತ್ಸಾಹದಿಂದ ಸೈನ್ಯಗಳನ್ನು ತಾನೇ ನಡಸಿಕೊಂಡು ಹೋಗಿ ಬಂಕಾಪುರ, ಉಚ್ಚಂಗಿಗಳನ್ನು ಕೈವಶ ಮಾಡಿಕೊಂಡು ಬಂದು ವಿಷ್ಣುವರ್ಧನಪ್ರಭುವಿಗೆ ಒಪ್ಪಿಸಿ, ಅವರಿಂದ 'ಸುಭಟ' ಪಟ್ಟವನ್ನು ಸಂಪಾದಿಸಿಕೊಂಡ.

ಜಯಸಿಂಹನು ಪರಾಜಯ ಹೊಂದಿದ್ದನ್ನೂ, ಬಂಕಾಪುರ ಉಚ್ಚಂಗಿಗಳು ವಿಷ್ಣುವರ್ಧನನ ಕೈವಶವಾದುದನ್ನೂ ಕಂಡು, ಸ್ವಯಂ ಪಾಂಡ್ಯನೆ ಸೈನ್ಯವನ್ನು ಒಟ್ಟುಗೂಡಿಸಿಕೊಂಡು ಯುದ್ಧಕ್ಕೆ ಬಂದು ನಿಂತ. ವಿಷ್ಣುವರ್ಧನ ಎದುರಿನಿಂದಲೂ, ನಾಯಕ ಸಾಮಂತ ಚಟ್ಟ ಎಡಪಾರ್ಶ್ವದಿಂದಲೂ, ನಾಯಕ ಮಾಚಣ್ಣ ಬಲಪಾರ್ಶ್ವದಿಂದಲೂ ಈ ಪಾಂಡ್ಯನನ್ನು ಆಕ್ರಮಣ ಮಾಡಿದರು. ಪುನೀಸ, ಬೋಕಿಗರುಡ ಪ್ರಭುಗಳ ಅಂಗರಕ್ಷಕರಾಗಿ ನಿಂತರು. ಆ 'ದುಮ್ಮೆ' ಎಂಬ ಸ್ಥಳದಲ್ಲಿಯೆ ಮತ್ತೆ ಘೋರ ಯುದ್ಧವಾಯಿತು. ದಂಡಯಾತ್ರೆ ಹೊರಟ ನಿಮಿಷದಿಂದ ವಿಜಯಲಕ್ಷ್ಮಿ ಹೊಯಿಸಳ ಪ್ರಭುಗಳ ಜೊತೆಯಲ್ಲಿಯೆ ಇದ್ದಳು. ವಿಷ್ಣುವರ್ಧನನ ಕತ್ತಿ ಪಾಂಡ್ಯನ ತಲೆಯನ್ನು ಎಗರಿಸಿಬಿಟ್ಟಿತು.

ಅನಂತರ ಪ್ರಭು ಸೈನ್ಯದೊಡನೆ ಪ್ರಸಿದ್ಧವಾದ ಹಾನಗಲ್ಲುದುರ್ಗದ ಮೇಲೆ ನಡೆದರು. ಕೈಸೇರಿದ್ದ ಬಂಕಾಪುರವನ್ನು ತಮ್ಮ ರಾಜ್ಯದ ಉತ್ತರ ಮೇರೆಯ ರಾಜಧಾನಿಯನ್ನಾಗಿ ಮಾಡಿಕೊಂಡು, ವಿಜಯೋತ್ಸವದ ನೆನಪಿಗೆ ಗದಗಿನಲ್ಲಿ ವೀರನಾರಾಯಣ ದೇವಾಲಯವನ್ನು ಕಟ್ಟಿಸಿದರು. ಹಾನಗಲ್ಲಿನ ದುರ್ಗ ಅತಿ ದುರ್ಗಮವಾಗಿತ್ತು. ವಿಷ್ಣುವರ್ಧನನ ಸೇನೆ ಅಲ್ಲಿ ತಿಂಗಳುಗಟ್ಟಲೆ ಶಿಬಿರ ನಿಲ್ಲ ಬೇಕಾಯಿತು. ಸುತ್ತಮುತ್ತಲಿನ ಊರುಗಳಲ್ಲಿನ ಜನರನ್ನು ದೂರಮಾಡಿ, ದುರ್ಗಕ್ಕೆ ಹೋಗುವ ಮಾರ್ಗಗಳೆಲ್ಲವನ್ನೂ ತಡೆದು, ದುರ್ಗಕ್ಕೆ ಯಾವ ವಿಧವಾದ ಹೊರಗಿನ ಸಹಾಯವೂ ದೊರಕದಂತೆ ಮಾಡಲು ಹೊಯಿಸಳ ಸೈನ್ಯಕ್ಕೆ ಸ್ವಲ್ಪ ಕಾಲ ಬೇಕಾಯಿತು. ಇಷ್ಟಾದರೂ ದುರ್ಗದ ಒಳಗಡೆ ಇದ್ದ ಶತ್ರುಸೈನ್ಯಗಳಿಗೆ ನಾಲ್ಕು ತಿಂಗಳಿಗೆ ಸಾಕಾಗುವಷ್ಟು ಆಹಾರ, ನೀರು, ಎಲ್ಲ ಶೇಖರಣೆಯಾಗಿತ್ತು. ಈ ಮೂರು ನಾಲ್ಕು ತಿಂಗಳು ಕಾಲ, ಅವರ ಆಹಾರವೆಲ್ಲ ಮುಗಿದುಹೋಗುವ ತನಕ, ವಿಷ್ಣುವರ್ಧನಪ್ರಭು ಕಾದು ಕೂತಿರಲು ಇಷ್ಟಪಡ ಲಿಲ್ಲ. ಮೊದಲನೆಯ ತಿಂಗಳಲ್ಲಿಯೆ ದುರ್ಗಕ್ಕೆ ಬಲವಾದ ದಾಳಿಯನ್ನಿಟ್ಟರು.

ಹಾನಗಲ್ಲುದುರ್ಗ ಆಗ ಎರಡನೆಯ ತೈಲಪನ ಮೊಮ್ಮಗನಾದ ಮಲ್ಲಿಕಾರ್ಜುನನ ಆಡಳಿತದಲ್ಲಿತ್ತು. ಇವನ ತಂದೆ ಮಯೂರವರ್ಮ ನಾಲ್ಕೇ ವರ್ಷ ರಾಜ್ಯವಾಳಿ ಮೃತಿ ಹೊಂದಿದ್ದ. ಈ ಮಲ್ಲಿಕಾರ್ಜುನನೂ ದೃಢಕಾಯನಲ್ಲ, ಸಾಹಸಪರನಲ್ಲ. ಹೊರಗಿಂದ ದುರ್ಗಕ್ಕೆ ಯಾವ ಸಹಾಯ ಬರುವುದಕ್ಕೂ ಈಗ ಸಾಧ್ಯವಿರಲಿಲ್ಲ. ಮಲ್ಲಿಕಾರ್ಜುನ ದುರ್ಗದ ತನ್ನರಮನೆಯೊಳಗೆ ಆಗ ಅನಾರೋಗ್ಯದಿಂದ ಹಾಸಿಗೆ ಹಿಡಿದು ಮಲಗಿದ್ದ. ದುರ್ಗದೊಳಗೆ ತಕ್ಕಷ್ಟು ಸುಶಿಕ್ಷಿತ ಸೈನ್ಯವಿದ್ದಿತು. ಹೊರಗಡೆಯೂ ಸ್ವಲ್ಪ ಸೇನೆ ದುರ್ಗದ ಸುತ್ತ, ದುರ್ಗದ ಬಾಗಿಲುಗಳನ್ನೂ ದಿಡ್ಡಿಗಳನ್ನೂ ಕಾದುನಿಂತಿತ್ತು.

ವಿಷ್ಣುವರ್ಧನನ ಸೇನೆ ಪ್ರಚಂಡ ದಾಳಿಯನ್ನಾರಂಭಿಸಿದ ದಿನವೇ ಅದು ವಿಪುಲ ಸೈನ್ಯವನ್ನೂ ನಾಲ್ವರು ಉತ್ತಮ ನಾಯಕರುಗಳನ್ನೂ ಕಳೆದು ಕೊಂಡಿತು. ದುರ್ಗದ ಮೇಲಿದ್ದ ಮಲ್ಲಿಕಾರ್ಜುನನ ಸೇನೆಯಲ್ಲಿ ಅತಿ ಚತುರ ರಾದ ಬಿಲ್ಗಾರರಿದ್ದರು. ಅವರು ಸುರಿಸಿದ ಶರವರ್ಷದಿಂದ ಒಂದೇ ದಿನದಲ್ಲಿ ಐದು ನೂರು ಹೊಯಿಸಳ ಸೇನೆ ಭೂಗತವಾಯಿತು, ನಾಲ್ವರು ದೊಡ್ಡ ನಾಯಕರುಗಳು ಮಡಿದರು. ಈ ನಾಲ್ವರು ನಾಯಕರುಗಳನ್ನು ಕೊಂದದ್ದು ಒಬ್ಬನೆ ಮಹಾ ಚತುರನಾದ ಬಿಲ್ಗಾರ. ಈ ನಾಲ್ವರ ಪ್ರಾಣಗಳನ್ನೂ ಆಹುತಿ ಗೊಂಡ ನಾಲ್ಕು ನಾರಾಚಗಳೂ ಒಂದೇ ಮಾದರಿಯವು. ನಾಲ್ಕೂ ಎದೆಯನ್ನು ಹೊಕ್ಕು ಹೃದಯಗಳನ್ನು ಛೇದಿಸಿದ್ದವು. ನಾಲ್ವರು ಸತ್ತದ್ದೂ ಒಂದೇ ರೀತಿಯಲ್ಲಿ.

ವಿಷ್ಣುವರ್ಧನನೂ ಚತುರ ಬಿಲ್ಗಾರ. ಆದರೂ ಈ ಬಿಲ್ಗಾಳುತನವನ್ನು ಕಂಡು ವಿಷ್ಣುವರ್ಧನ ಆಶ್ಚರ್ಯಪಟ್ಟ, ಭಯಪಟ್ಟ. 'ಹುಡುಕಿ ಹುಡುಕಿ ನಾಯಕರುಗಳ ಹೃದಯವನ್ನು ಛೇದಿಸುತ್ತಿರುವ ಈ ಬಿಲ್ಗಾರನು ಯಾವನೊ ಕಲಿಪಾರ್ಥನೆ ಇರಬೇಕು. ಈ ನಾಲ್ಕು ಅಂಬುಗಳಂತೆ ಯುದ್ಧಭೂಮಿಯಲ್ಲೆಲ್ಲ ಹುಡುಕಿದರೂ ಇನ್ನೊಂದು ಅಂಬು ಸಿಕ್ಕಲಿಲ್ಲ. ಅದರಿಂದ ನಾಲ್ಕು ಬಾಣಗಳೂ ಅವನು ತೊಟ್ಟದ್ದೆ ಇರಬೇಕು, ಅವನು ಬಿಟ್ಟದ್ದೆ ನಾಲ್ಕು ಬಾಣಗಳಿರಬೇಕು. ಇನ್ನಾರಿಗೂ ಅವನು ಗುರಿಯಿಡಲೇ ಇಲ್ಲ. ಆಯ್ದು ಆಯ್ದು ನಾಯಕರನ್ನು ಕೊಲೆ ಮಾಡಿರುವನು. ಈ ಪರಿಸ್ಥಿತಿಯಲ್ಲಿ ಸೈನ್ಯದಲ್ಲಿನ ಇತರ ನಾಯಕ ದಣಾಯಕರುಗಳು ನಾಳೆ ಯುದ್ಧಭೂಮಿಯಲ್ಲಿ ಕಾಲಿಡಲು ಎದೆಗೆಟ್ಟಾರು.

ಮುಂದಿನ ದಾರಿಯೇನು, ಭಗವಂತ?' ಎಂದು ವಿಷ್ಣುವರ್ಧನ ಪ್ರಭು ಯೋಚಿಸುತ್ತ ಕುಳಿತುಬಿಟ್ಟರು.

ಆ ದಿನ ರಾತ್ರಿ ಪ್ರಭು ಬಹಳ ಹೊತ್ತಿನವರೆಗೆ ತಮ್ಮ ಚಮೂಪರೊಡನೆ ಆಲೋಚನೆಯಲ್ಲಿ ಕುಳಿತಿದ್ದರು. ಒಮ್ಮೆ ಬೊಪ್ಪಣನನ್ನು ನೋಡಿ 'ನಮಗೆ ಶತ್ರು ಸೈನಿಕರು ಎಷ್ಟು ಜನ ಸೆರೆ ಸಿಕ್ಕಿರುವರು?' ಎಂದು ಕೇಳಿದರು.

'ನಿನ್ನಿನ ಯುದ್ಧದಲ್ಲಿ ಸುಮಾರು ಇಪ್ಪತ್ತು ಶತ್ರುಸೈನಿಕರು ಮಾತ್ರ ಸೆರೆ ಸಿಕ್ಕಿದರು. ವಿಚಾರಿಸಲಾಗಿ ಈ ಪ್ರಸಿದ್ಧ ಬಿಲ್ಗಾರನ ಹೆಸರು ಚಮೂಪ ಕುಂಜುಶೆಟ್ಟಿ ಎಂದೂ, ಆತ ಕೇರಳದೇಶದವನೆಂದೂ ತಿಳಿದುಬಂತು. ಮಲ್ಲಿ ಕಾರ್ಜುನನು ಅನಾರೋಗ್ಯದ ದೆಸೆಯಿಂದ ಯುದ್ಧಭೂಮಿಗೆ ಇನ್ನೂ ಕೆಲವು ದಿನಗಳು ಬರುವಹಾಗಿಲ್ಲವಂತೆ. ಆದ್ದರಿಂದ ಸೇನೆಯ ಸರ್ವಾಧಿಕಾರವನ್ನೂ ಕುಂಜುಶೆಟ್ಟಿಯೆ ವಹಿಸಿಕೊಂಡಿರುವನಂತೆ. ತನಗೆ ಸರಿಸಮಾನರಾದ ನೂರು ಜನ ಬಿಲ್ಗಾರರನ್ನು ಅವನು ತನ್ನ ಬಳಿ ಇಟ್ಟುಕೊಂಡಿರುವನಂತೆ. ಕುಂಜು ಶೆಟ್ಟಿ ಶಬ್ದವೇಧಿಯನ್ನೂ ಬಲ್ಲವನಂತೆ. ಅಂಬಿನಿಂದ ಕೂದಲನ್ನು ಎರಡಾಗಿ ಸೀಳಬಲ್ಲವನಂತೆ' ಎಂದ ಬೊಪ್ಪಣ.

'ಭಲೆ ಬೊಪ್ಪಣ, ಎಷ್ಟು ಬೇಗ ಎಷ್ಟು ವಿಷಯಗಳನ್ನು ಸಂಗ್ರಹಿಸಿ ರುವೆ' ಎಂದು ಬೊಪ್ಪಣನನ್ನು ಹೊಗಳಿದರು ಪ್ರಭುಗಳು. ಅಲ್ಲಿದ್ದವರಿಗೆಲ್ಲ 'ಇನ್ನು ನೀವೆಲ್ಲ ಹೋಗಿ ನಾಳೆಯ ಯುದ್ಧಕ್ಕೆ ಸಜ್ಜುಮಾಡಿಕೊಳ್ಳಿ. ಈಗ ನಾವೂ ಬೊಪ್ಪಣನೂ ನಮಗೆ ದೊರೆತಿರುವ ಈ ವಿಷಯಸಾಮಗ್ರಿಗಳನ್ನು ಹೇಗೆ ಉಪಯೋಗಿಸಿಕೊಳ್ಳಬಹುದೆಂಬ ಅಂಶವನ್ನು ಯೋಚಿಸುತ್ತೇವೆ. ಇನ್ನು ಮೇಲೆ ಶಿರಸ್ತ್ರಾಣ, ವಕ್ಷತ್ರಾಣಗಳಿಲ್ಲದೆ ಯಾರೂ ಯುದ್ಧಭೂಮಿಗೆ ಕಾಲಿಡ ಬೇಡಿ. ಇಂತಹ ಸಂದರ್ಭಗಳಲ್ಲಿ ಯುಕ್ತಿ ಚಾತುರ್ಯಗಳಿಂದಲೇ ಕಾರ್ಯಸಾಧನೆ ಮಾಡಿಕೊಳ್ಳಬೇಕಾಗುತ್ತದೆ. ಅಂಬುಗಳ ಸುರಿಮಳೆಗೆ ವೃಥಾ ನಮ್ಮ ಸೈನಿಕ ರನ್ನು ಈಡುಮಾಡಬಾರದು' ಎಂದು ಹೇಳಿ ಎಲ್ಲರನ್ನೂ ಶಿಬಿರಗಳಿಗೆ ಕಳಿಸಿ ಕೊಟ್ಟು, ತಾವೂ ಬೊಪ್ಪಣನೂ ಚಾಣಕ್ಯನೀತಿಯೊಂದನ್ನು ಹೊಸೆಯುತ್ತ ಕುಳಿತರು.

§

'ಸೈನ್ಯಗಳು ಈ ದಿನ ಯುದ್ಧಭೂಮಿಗೆ ಹೋಗುವುದು ಬೇಡ' ಎಂದು

ರಾಜಾಜ್ಞೆ ಬೆಳಗಾಗುವುದರೊಳಗೆ ಹೊರಟಿತು. ದಂಡನಾಯಕರುಗಳಿಗೂ ಚಮೂಪರಿಗೂ ಇದು ಆಶ್ಚರ್ಯವನ್ನುಂಟುಮಾಡಿತು. ಯುದ್ಧಭೂಮಿಗೆ ಹೊರಡಲು ಅಣಿಯಾಗಿದ್ದ ಸೈನ್ಯ ನಿಂತಿತು.

ಶತ್ರುಸೈನ್ಯಗಳು ಕುಂಜುಶೆಟ್ಟಿಯ ನೇತೃತ್ವದಲ್ಲಿ ಸಿದ್ಧವಾಗಿಯೇ ಇದ್ದವು. ಬೆಳಗಾಗಿ ಬಹಳ ಹೊತ್ತಾದರೂ ಹೊಯಿಸಳ ಸೇನೆ ಶಿಬಿರದಿಂದ ಹೊರಡದಿರುವುದನ್ನು ಕಂಡು ಕುಂಜುಶೆಟ್ಟಿಗೆ ಆಶ್ಚರ್ಯವಾಯಿತು. ತನ್ನ ಕೈವಾಡವನ್ನು ಕಂಡು ಹೊಯಿಸಳರು ಬೆದರಿದರೆಂದೇ ಎಣಿಸಿದನವನು. ಆದರೂ ತನ್ನ ಕರ್ತವ್ಯದಲ್ಲಿ ಲೋಪ ಬರಬಾರದೆಂದು ಜಾಗರೂಕನಾಗಿ ಕಾದು ಕುಳಿತ.

ಆಗ ಹಿಂದಿನ ದಿನ ಸೆರೆ ಸಿಕ್ಕಿದ ಹಾನಗಲ್ಲು ಸೈನಿಕರ ತಂಡ ಹೊಯಿಸಳ ಶಿಬಿರದಿಂದ ತಮ್ಮ ಸ್ವಂತ ಶಿಬಿರಕ್ಕೆ ಹೊರಟಿತು. ವಿಷ್ಣುವರ್ಧನನೆ ಅವರನ್ನು ಸೆರೆಯಿಂದ ಬಿಡಿಸಿ ಕಳಿಸಿದ್ದು. ಈ ತಂಡ 'ಮಲ್ಲಿಕಾರ್ಜುನ ರಾಜರಿಗೆ ಜಯವಾಗಲಿ—ವಿಜಯವಾಗಲಿ' ಎಂದು ಸಂತೋಷ ಉದ್ಗಾರಗಳಿಂದ ದುರ್ಗದ ಹೆಬ್ಬಾಗಿಲ ಬಳಿಗೆ ನೇರಾಗಿ ಬರುತ್ತಿದ್ದುದನ್ನು ಕುಂಜುಶೆಟ್ಟಿ ಕಂಡು, ಇದು ಏನೊ ಶತ್ರುಗಳ ಕುಹಕವೇ ಇರಬೇಕೆಂದು ಸಂಶಯಪಟ್ಟ. ತಮ್ಮ ಸೈನಿಕರಂತೆ ವೇಷಭೂಷಗಳನ್ನು ಧರಿಸಿದ್ದ ಇವರು ಹೊಯಿಸಳ ಸೈನಿಕರೇ ಇರಬೇಕೆಂದು ಊಹಿಸಿ, ತನ್ನ ಬಿಲ್ಗಾರರಿಗೆ 'ಸಿದ್ಧರಾಗಿರಿ' ಎಂದು ಮುನ್ನೆಚ್ಚರಿಕೆ ಕೊಟ್ಟ. ಒಂದೆರಡು ಬಾಣಗಳೂ ತಂಡದ ಮುಂದೆ ಹಾಯ್ದುಹೋದವು.

'ಅಲ್ಲಿಯೆ ನಿಲ್ಲಿರಿ, ಯಾರು ನೀವು?' ಎಂದು ದುರ್ಗದ ಮೇಲೆ ನಿಂತಿದ್ದ ಕುಂಜುಶೆಟ್ಟಿ ಕೂಗಿ ಕೇಳಿದ. 'ನಾವು ನಿಮ್ಮವರು, ನಿನ್ನೆ ಶತ್ರುಗಳಿಗೆ ಕೈಸೆರೆ ಸಿಕ್ಕಿಬಿದ್ದವರು. ಈಗ ನಮಗೆ ಬಿಡುಗಡೆಯಾಯಿತು, ಮಲ್ಲಿಕಾರ್ಜುನ ರಾಜರಿಗೆ ಜಯವಾಗಲಿ! ವಿಜಯವಾಗಲಿ!' ಎಂದು ಆ ತಂಡ ಪುನಃ ಕೂಗಿತು. ಕೆಳಗೆ ದುರ್ಗದ ಬಾಗಿಲನ್ನು ಕಾಯ್ದು ನಿಂತಿದ್ದ ಮಲ್ಲಿಕಾರ್ಜುನನ ಸೇನೆ ಇವರು ತಮ್ಮವರೆಂದೇ ಗುರುತಿಸಿತು.

ಹೊಯಿಸಳ ವಿಷ್ಣುವರ್ಧನರೆ ತಮಗೆ ಬಂಧವಿಮೋಚನೆ ಮಾಡಿಸಿದರೆಂದೂ, ಸೇನಾಪತಿ ಕುಂಜುಶೆಟ್ಟಿಯವರಿಗೆ ಹೊಯಿಸಳ ಪ್ರಭುಗಳಿಂದ ತಾವು ಓಲೆಯೊಂದನ್ನು ತಂದಿರುವೆವೆಂದೂ ಹೇಳಿ ಈ ಸೈನ್ಯತಂಡ ತಾವು ತಂದಿದ್ದ ಓಲೆಯನ್ನು ಕುಂಜುಶೆಟ್ಟಿಗೆ ಕಳಿಸಿಕೊಟ್ಟರು.

'ಓಹೋ! ನಮ್ಮ ಕೈಸೆಟ್ಟು ಬಿಸಿಯೇರಿ ಈಗ ಸಂಧಿಯನ್ನು ಬಯಸಿದರೊ!' ಎನ್ನುತ್ತ ಕುಂಜುಶೆಟ್ಟಿ ಓಲೆಯನ್ನು ಓದಿದ.

'ಧನುರ್ವೇದ ಪಾರಂಗತ ಚಮೂಪ ಕುಂಜುಶೆಟ್ಟಿ ಕೇರಳ ಅವರಿಗೆ, ಹೊಯಿಸಳೇಶ್ವರ ವಿಷ್ಣುವರ್ಧನರ ಆಜ್ಞಾಧಿಕಾರಿ ಬೊಪ್ಪಣನ ಬಿನ್ನಪ. ನಮ್ಮ ಪ್ರಭುಗಳು ನಿಮ್ಮ ಧನುರ್ವಿದ್ಯಾಕೌಶಲವನ್ನು ಕೇಳಿದ್ದರು. ಈಗ ತಾವೇ ಕಂಡು ಮೆಚ್ಚಿರುವರು. ಯುದ್ಧಕಿಂತಲೂ ವಿದ್ಯೆ, ಕಲೆ, ಇವುಗಳಲ್ಲಿ ಹೆಚ್ಚು ಅಭಿಮಾನಿಗಳಾದ ನಮ್ಮ ಪ್ರಭುಗಳು ವಿದ್ಯಾವಂತರಿಗೂ, ಕಲಾವಿದರಿಗೂ, ಹೆಚ್ಚು ಗೌರವ ಪ್ರೋತ್ಸಾಹಗಳನ್ನು ಕೊಡುವರು. ನಿಮ್ಮ ಧನುರ್ವಿದ್ಯಾ ನೈಪುಣ್ಯವನ್ನು ನೋಡಿ ಆನಂದಿಸಬೇಕೆಂದು ಅಪೇಕ್ಷಿಸುತ್ತಾರೆ. ತಾತ್ಕಾಲಿಕವಾಗಿ ಯುದ್ಧವನ್ನೂ ನಿಲ್ಲಿಸಿರುತ್ತಾರೆ. ಸೌಹಾರ್ದ ಸೌಮನಗಳಿಂದ ಈ ನಮ್ಮ ಕರೆಯನ್ನು ನೀವು ಗೌರವಿಸಿ ನಮ್ಮ ಪ್ರಭುಗಳ ಮನಸ್ಸಿಗೆ ಮೆಚ್ಚಿಗೆಯನ್ನುಂಟು ಮಾಡುತ್ತೀರೆಂದು ನಂಬಿರುತ್ತೇವೆ. ನಿಮ್ಮ ಅಧಿಕಾರ ಗೌರವಗಳಿಗೆ ದೈವ ಸಾಕ್ಷಿಯಾಗಿ ಯಾವ ಲೋಪದೋಷಗಳೂ ಬಾರದಂತೆ ನೋಡಿಕೊಳ್ಳುವುದು ನಮ್ಮ ಕರ್ತವ್ಯವೆಂದು ಎಣಿಸಿದ್ದೇವೆ. ನಿಮ್ಮನ್ನು ಆದರದಿಂದ ಸ್ವಾಗತಿಸುತ್ತಿದ್ದೇವೆ. ಮಧ್ಯಾಹ್ನಾತ್ಪರ ನಮ್ಮ ಶಿಬಿರಕ್ಕೆ ದಯಮಾಡಿಸಿರಿ.'

ಬೊಪ್ಪಣ ಡಣಾಯಕ.

ವಿಷ್ಣುವರ್ಧನರೂ ಒಳ್ಳೆಯ ಬಿಲ್ಗಾರರೆಂಬ ಖ್ಯಾತಿಯನ್ನು ಕುಂಜುಶೆಟ್ಟಿ ಕೇಳಿದ್ದ. 'ಇಂತಹ ಕಲಾಭಿಮಾನಿಯ ಎದುರಿನಲ್ಲಿ ತನ್ನ ಕಲಾನೈಪುಣ್ಯವನ್ನು ಪ್ರದರ್ಶಿಸದಿದ್ದರೆ ತಾನು ವಿದ್ಯೆಯನ್ನು ಕಲಿತೂ ಅದಕ್ಕೆ ಮಾನ್ಯತೆ ಇಲ್ಲದೆ ಹೋಗುವುದು' ಎಂದು ಅಭಿಮಾನಿ ಕುಂಜುಶೆಟ್ಟಿ ಪ್ರಭುಗಳ ಸ್ವಾಗತಕ್ಕೆ ಒಪ್ಪಿ, ಆಗಲೆ ಮರುಓಲೆ ಬರೆಯಿಸಿ ಕಳಿಸಿಕೊಟ್ಟ. 'ಒಂದು ವೇಳೆ ತನ್ನ ಶಕ್ತಿ ಸಾಮರ್ಥ್ಯಗಳಿಗೆ ಮೆಚ್ಚಿ, ಇಂತಹ ಯೋಧರ ಸಂಗಡ ವಿರೋಧ ಕೂಡದು ಎಂದು ವಿಷ್ಣುವರ್ಧನನು ಯೋಚಿಸಿಯಾನು, ಸಂಧಿಗೆ ಬಯಸಿಯಾನು. ಹಾಗೊಂದು ವೇಳೆ ಆದರೆ ಒಳ್ಳೆಯದೆ ಆಯಿತು' ಎಂಬ ಒಂದು ಆಶೆಯೂ ಕುಂಜುಶೆಟ್ಟಿಗೆ ಆಗ ಉಂಟಾಯಿತು.

ನಿರ್ದಿಷ್ಟಕಾಲಕ್ಕೆ ಕುಂಜುಶೆಟ್ಟಿ ತನ್ನ ಧನುರ್ಬಾಣಗಳೊಂದಿಗೆ, ಇಬ್ಬರು ಆಪ್ತರನ್ನೊಡಗೂಡಿ, ಕುದುರೆಯನ್ನು ಹತ್ತಿ ಹೊಯಿಸಳ ಶಿಬಿರಕ್ಕೆ ಬಂದ.

ಬೊಪ್ಪಣ ತಾನೂ ತನ್ನ ಇಬ್ಬರು ಆಪ್ತರೊಂದಿಗೆ ಅವನನ್ನು ಮರ್ಯಾದೆಯಿಂದ ಎದುರುಗೊಂಡು ಸ್ವಾಗತಿಸಿ, ತನ್ನ ಪ್ರಭುಗಳಲ್ಲಿ ಕರೆದೊಯ್ದ. ಡಣಾಯಕ ಚಮೂಪತಿಗಳ ನಡುವೆ ಸೂರ್ಯನಂತೆ ಪ್ರಕಾಶಮಾನವಾಗಿ ವಿಷ್ಣುವರ್ಧನ ಪ್ರಭುಗಳು ದಿವ್ಯಾಸನಾರೂಢರಾಗಿದ್ದರು.

ಪ್ರಭುಗಳು ಸುಮ್ಮಾನದಿಂದ ಹಸನ್ಮುಖಿಯಾಗಿ ಕುಂಜುಶೆಟ್ಟಿಯನ್ನು ಸ್ವಾಗತಿಸಿ, ಉಚಿತ ಆಸನವನ್ನಿತ್ತು, ಆತನ ಧನುರ್ವಿದ್ಯಾಕ್ರಮಗಳನ್ನು ವಿಚಾರಿಸಿ, ಆ ಮಹಾಸಾಧನೆಯ ವಿವರಗಳನ್ನು ಕೇಳುಕೇಳುತ್ತ ಪ್ರಶಂಸಿಸಿ 'ಇಂತಹ ಅಪೂರ್ವ ಚಾಪಲಾಘವವನ್ನು ನೋಡಿ ಸಂತೋಷಪಡಲು ನಾವೆಲ್ಲರೂ ಕುತೂಹಲಿಗಳಾಗಿರುವೆವು. ತೊಂದರೆಯೆಂದು ಭಾವಿಸಬಾರದು. ನಿಮ್ಮ ವಿದ್ಯೆಯನ್ನು ನಾವು ಬಹು ಗೌರವಿಸುತ್ತೇವೆ' ಎಂದರು.

ಕುಂಜುಶೆಟ್ಟಿ ಪ್ರಭುಗಳ ಪ್ರೋತ್ಸಾಹಕ್ಕೆ ಹರ್ಷಿತನಾದ. ಆ ತುಂಬು ಸಭೆಯನ್ನು ನೋಡಿ ಆನಂದಪಟ್ಟು, ತನ್ನ ಧನುಸ್ಸಿಗೆ ಹೆದೆಯನ್ನೇರಿಸಿ, ಠೇಂಕಾರ ಮಾಡಿ, ಮನಸ್ಸಿನಲ್ಲಿಯೆ ತನ್ನ ಗುರುದೇವನನ್ನೂ ಪಶುಪತಿಯನ್ನೂ ಸ್ಮರಿಸಿ, ವಂದಿಸಿ, ಚಾಪಲಾಘವವನ್ನು ಪ್ರದರ್ಶಿಸಲು ಸಿದ್ಧನಾದ. ಪ್ರದರ್ಶನದ ಮೂರು ದೊಡ್ಡ ಅಂಶಗಳೆಂದರೆ: ಮೊದಲನೆಯದು—ಕುಂಜುಶೆಟ್ಟಿ ಕಂಚಿನ ಕನ್ನಡಿಯ ಮುಂದೆ ನಿಂತು, ಹಿಂದೆ ದೂರದಲ್ಲಿ ಪ್ರತಿಬಿಂಬಿತವಾಗಿದ್ದ ಕೃತಕ ಪಕ್ಷಿಯ ತಲೆಯನ್ನು ಶರದಿಂದ ಭೇದಿಸಿದ್ದು; ಎರಡನೆಯದು—ದೂರದಲ್ಲಿ ತೂಗುಹಾಕಿದ್ದ ಕುದುರೆಯ ಬಾಲದ ಕೂದಲನ್ನು ಕೂರಂಬಿನಿಂದ ಎರಡು ತುಂಡುಮಾಡಿದ್ದು; ಮೂರನೆಯದು—ಅತಿ ಆಶ್ಚರ್ಯಕರವಾದದ್ದು, ತೂಗು ಕಟ್ಟಿದ್ದ ಕುದುರೆಯ ಬಾಲದ ಕೂದಲನ್ನು ಎರಡಾಗಿ ಸೀಳಿದ್ದು. ಈ ಚಾಪಲಾಘವವನ್ನು ಕುಂಜುಶೆಟ್ಟಿ ತೋರುತ್ತಿದ್ದಾಗ ಸಭೆಯವರೆಲ್ಲ ಬಿಚ್ಚುಗಣ್ಣು, ಬಿಚ್ಚುಬಾಯಿ ಬೊಂಬೆಗಳಾದರು. ಕುಂಜುಶೆಟ್ಟಿ ಮೂರು ಆಳು ಪ್ರಮಾಣದ ದೂರದಲ್ಲಿ ವೀರಾಸನದಲ್ಲಿ ಕುಳಿತು, ಪ್ರಾಣಾಯಾಮಕ್ರಮದಿಂದ, ಉಚ್ಛ್ವಾಸ ನಿಶ್ವಾಸಗಳನ್ನು ನಿರೋಧಿಸಿ, ಚಾಪಹಸ್ತನಾಗಿ ತೀಕ್ಷ್ಣಾತ್‌ತೀಕ್ಷ್ಣತರವಾಗಿ ಸೂಜಿಮೊನೆಗಿಂತಲೂ ತೆಳುವಾದ ಅಲಗುತಲೆಯುಳ್ಳ ಬಾಣವನ್ನು ಸಂಧಾನಮಾಡಿ, ರೆಪ್ಪೆ ಹೊಡೆಯದೆ, ತನ್ನ ಲಕ್ಷ್ಯವನ್ನು ಕೂದಲಿನ ಮೇಲೆ ಕೇಂದ್ರೀಕರಿಸಿ, ಶರವನ್ನು ಲಘುವಾಗಿ ತೂಗಿ ಒಂದು ಹದವಲ್ಲಿರಿಸಿಕೊಂಡು, ತನ್ನ ಲಕ್ಷ್ಯ, ಕೂದಲೆಳೆ,

ಶರಾಗ್ರ ಒಂದೆ ಧಾರೆಯಲ್ಲಿ ಮಿಳನವಾದ ಒಂದು ಕ್ಷಣಾಂಶಸಮಯದಲ್ಲಿ ಶರವನ್ನು ಬಿಟ್ಟ. ಶರ ಹೋದ ರಭಸಕ್ಕೆ ಕೂದಲಕೊನೆಗೆ ಕಟ್ಟಿದ್ದ ತೂಗುಗುಂಡು ಸ್ವಲ್ಪ ಮಾತ್ರ ಅಲುಗಿತು. ಶರದ ಅಲಗು ಕೂದಲಿನ ಆಚೆ ಬಿದ್ದಿತು. ಶರ ಈಚೆಯೆ ಬಿದ್ದಿತು. ಸಭೆಯವರು ಕಂಡದ್ದು ಅಷ್ಟೆ. ಕುಂಜುಶೆಟ್ಟಿ ಈ ಸಮಾಧಿಯೋಗದಿಂದ ಎದ್ದಾಗ, ಅವನ ಮೈ ಬೆವರಿತ್ತು. ಕಣ್ಣುಗಳಲ್ಲಿ ಆನಂದಬಾಷ್ಪವಿತ್ತು. ಮಹಾದೇವನನ್ನು ಸ್ಮರಿಸಿ ತನ್ನ ಎರಡು ಹಸ್ತಗಳನ್ನು ಜೋಡಿಸಿ ಅನಂತ ವಂದನೆಗಳನ್ನು ಸಮರ್ಪಿಸಿದ. ಸಭೆಯಲ್ಲಿದ್ದವರ ದೃಷ್ಟಿಗೆ ತೂಗುಹಾಕಿದ್ದ ಕೂದಲು ಹಾಗೆಯೆ ನಿಂತಿತ್ತು. ಕುಂಜುಶೆಟ್ಟಿ ಮಾತ್ರ ತಾನು ಕೃತಕೃತ್ಯನಾದಂತೆ ಕಂಡುಬಂದ. ವಿಷ್ಣುವರ್ಧನ ಪ್ರಭುವಿಗೂ ಏನಾಯಿತೆಂಬುದು ತಿಳಿಯಬರಲಿಲ್ಲ. ಕುಂಜುಶೆಟ್ಟಿ ಎಲ್ಲರ ಮುಖದಲ್ಲಿಯೂ ಪ್ರಶ್ನಾರ್ಥಕ ಚಿಹ್ನೆಯನ್ನೇ ಕಂಡ. ಆಗ ಅವನು ಎದ್ದುಹೋಗಿ ಆ ಕೂದಲನ್ನು ತಂದು ಪ್ರಭುಗಳ ಮುಂದಿಟ್ಟು, ತಾನು ಸೀಳಿದ ಭಾಗವನ್ನು ಇಬ್ಭಾಗವಾಗಿ ಹಿಡಿದು ತೋರಿಸಿದ. ಅಲಗು ಇದ್ದ ಪ್ರಮಾಣಕ್ಕೆ ಸರಿಯಾಗಿ ಕೂದಲು ಸಮ ಇಬ್ಭಾಗವಾಗಿ ಸೀಳಿದ್ದಿತು. ಆ ಆಶ್ಚರ್ಯವನ್ನು ಕಂಡು ಸಭೆಯವರೆಲ್ಲ ಬೆರಗಾಗಿಹೋದರು. ವಿಷ್ಣುವರ್ಧನ ಪ್ರಭುವು ಸುವರ್ಣಮಯವೂ ರತ್ನಖಚಿತವೂ ಆದ ತಮ್ಮ ದಿವ್ಯ ಧನುಸ್ಸನ್ನೂ ಬತ್ತಳಿಕೆಯನ್ನೂ ಆಕ್ಷಣವೆ ತರಿಸಿ 'ಚಾಪವಿದ್ಯಾಮಹೋನ್ನತ, ಇದನ್ನು ನೀನು ಸ್ವೀಕರಿಸಬೇಕು. ಇದು ನಮ್ಮ ಸಂತೋಷದ ಅಲ್ಪ ಪಾರಿತೋಷಕ. ಪೃಥ್ವಿ ಹುಟ್ಟಿದ ಮೇಲೆ ಇದುವರೆಗೆ ನಿನ್ನಂತಹ ಚಾಪವಿದ್ಯಾಪ್ರವೀಣನನ್ನು ಯಾರೂ ಯಾವ ಕಾಲದಲ್ಲೂ ನೋಡಿರಲಾರರು. ಅತ್ಯುಗ್ರ ಯೋಗಸಾಧನೆಯ ಸಿದ್ಧಿಯಿದು. ನೀನು ಸುಭಟ' ಎಂದು ಹೊಗಳಿ, ಸುವರ್ಣವಿಭೂತಿಪಟ್ಟವನ್ನು ಕುಂಜುಶೆಟ್ಟಿಯ ನೆತ್ತಿಗೆ ಕಟ್ಟಿಸಿ ಶ್ರೀಸ್ಮದುಕೂಲಗಳಿಂದ ಅವನನ್ನು ಬಹುವಾಗಿ ಗೌರವಿಸಿ ಕಳುಹಿಸಿಕೊಟ್ಟರು, ಕಲಾಭಿಮಾನಿ ಹೊಯಿಸಳ ವಿಷ್ಣುವರ್ಧನಪ್ರಭು.

ಕುಂಜುಶೆಟ್ಟಿ ಆನಂದದಿಂದ ತುಂಬಿಹೋದ. 'ಇಂತಹ ಪ್ರಭುವಿನ ಸೇವೆ ತನಗಿಲ್ಲದೆ ಹೋಯಿತಲ್ಲ! ಇಂತಹ ಪ್ರಭುವನ್ನು ಈಗ ಶತ್ರುವಾಗಿ ಎಣಿಸಿ ಯುದ್ಧ ಮಾಡಬೇಕಾಯಿತಲ್ಲ!' ಎಂದು ಅವನ ಮನವೂ ಅಳುಕಿತು. ಒಂದು ವಿಧದಲ್ಲಿ ವಿಷ್ಣುವರ್ಧನನಿಗೆ ಬೇಕಾಗಿದ್ದುದೂ ಅದೆ. ಕುಂಜುಶೆಟ್ಟಿಯನ್ನು ಹೀಗೆ ಬಹುಮಾನಿಸುವುದರಿಂದ, ಅವನ ವಿದ್ಯೆಯನ್ನು ಗೌರವಿಸಿದಂತೆ ಆಗುವುದೊಂದೇ

ಅಲ್ಲದೆ, ಯುದ್ಧದಲ್ಲೂ ಕುಂಜುಶೆಟ್ಟಿಯ ಕೈಯನ್ನು ಒಂದು ವಿಧವಾಗಿ ನಿರೋಧಿಸಿದಂತಾಗಿ, ತನ್ಮೂಲಕ ಒಂದು ತಂತ್ರವನ್ನು ಸಾಧಿಸಿದಂತಾಯಿತೆಂದು ವಿಷ್ಣುವರ್ಧನನ ಮನಸ್ಸಿಗೆ ಸಮಾಧಾನವಾಯಿತು.

ಕುಂಜುಶೆಟ್ಟಿ ತನ್ನ ಪಾಳಯಕ್ಕೆ ಹಿಂದಿರುಗಿದಾಗ ಮಲ್ಲಿಕಾರ್ಜುನನ ಕಡೆಯವರೆಲ್ಲರೂ ಅವನಿಗೆ ದೊರೆತ ಉಡುಗೊರೆ, ರತ್ನಖಚಿತ ಸುವರ್ಣ ಧನುಸ್ಸು, ಬತ್ತಳಿಕೆ, ವಿಭೂತಿಪಟ್ಟ, 'ಚಾಪವಿದ್ಯಾಮಹೋನ್ನತ'ನೆಂಬ ಬಿರುದು ಎಲ್ಲವನ್ನೂ ಕಂಡ ಹಲವರು ಸಂತೋಷಪಟ್ಟರು. ಹಲವರು ಕರುಬಿದರು. ಶತ್ರುಸೇನೆಯಲ್ಲಿಯೂ ಆಗ ವಿಷ್ಣುವರ್ಧನನಿಗೆ ಒಂದು ಗೌರವವೇರ್ಪಟ್ಟಿತು.

ಆಗ ಸಂಜೆ ಸಮೀಪಿಸುತ್ತಿತ್ತು. ನಾಲ್ವರು ಮಲ್ಲಿಕಾರ್ಜುನನ ಸೈನಿಕರು ಓಡಿ ಬಂದು ಕುಂಜುಶೆಟ್ಟಿಗೆ ನಮಸ್ಕರಿಸಿ 'ಸ್ವಾಮಿ, ತುಂಬಿದ ಮೂರು ಗಾಡಿಗಳು, ನಮ್ಮ ದುರ್ಗದ ಬಾಗಿಲ ಮುಂದೆಯೆ ಶತ್ರುಶಿಬಿರದ ಕಡೆಗೆ ಹೋಗುತ್ತಿದ್ದುವು. ತಡೆದು ನಿಲ್ಲಿಸಿ ನೋಡಲಾಗಿ ಒಳಗಿದ್ದ ದೊಡ್ಡ ಬಾನೆಗಳಲ್ಲಿ ಮದ್ಯ ತುಂಬಿದ್ದಿತು. ಹೆದರಿಸಿ ಬೆದರಿಸಿ 'ಎಲ್ಲಿಗೆ?' ಎಂದು ಕೇಳಲಾಗಿ, ಗಾಡಿಹೊಡೆಯುತ್ತಿದ್ದವನೊಬ್ಬ 'ಅಲ್ಲಿ ಅವರು ಹೆಚ್ಚು ಹಣಕೊಟ್ಟು ಕೊಳ್ಳುತ್ತಾರೆ' ಎಂದು ಶತ್ರುಶಿಬಿರದ ಕಡೆ ಕೈಮಾಡಿ ತೋರಿಸಿದ. ಸ್ವಾಮಿಯ ಅಪ್ಪಣೆಯೇನು?' ಎಂದು ಬಿನ್ನವಿಸಿಕೊಂಡರು.

ಕುಂಜುಶೆಟ್ಟಿಗೆ ಸಿಟ್ಟುಬಂದಿತು. 'ಏನು ಏನು! ಶತ್ರುಸೈನಿಕರಿಗೆ ನಮ್ಮ ಗ್ರಾಮವಾಸಿಗಳೆ ಮದ್ಯವನ್ನು ಒದಗಿಸುತ್ತಿರುವರೆ? ಈ ನೀಚತನ ಎಷ್ಟು ದಿನಗಳಿಂದ ನಡೆಯುತ್ತಿದೆಯೊ? ಆ ಬಂಡಿಯವರನ್ನು ಸೆರೆಯಲ್ಲಿಡಿ, ಅನಂತರ ವಿಚಾರಿಸುವೆವು. ಇಂದು ಹೇಗೂ ನಮ್ಮ ಸಂತೋಷದ ದಿನ, ಆ ಮದ್ಯವನ್ನು ದುರ್ಗರಕ್ಷಕ ಸೈನಿಕರಿಗೆಲ್ಲ ಒಂದೊಂದೆ ಬಟ್ಟಲಿನಷ್ಟು ಹಂಚಿಬಿಡಿ. ಜೋಕೆ, ಮಿತಿಯಿರಲಿ, ಮಿತಿಮೀರಿದವರನ್ನು ಕತ್ತಲೆಕೋಣೆಯಲ್ಲಿರಿಸುತ್ತೇವೆ' ಎಂದು ಕುಂಜುಶೆಟ್ಟಿ ಆಜ್ಞೆಮಾಡಿದ.

ಸೆರೆಸಿಕ್ಕಿದ ಬಂಡಿಯಾಳುಗಳು ಹಾನಗಲ್ಲಿನ ಗ್ರಾಮವಾಸಿಗಳಲ್ಲ, ಗ್ರಾಮವಾಸಿಗಳಂತೆ ವೇಷಧರಿಸಿದ್ದ ಹೊಯಿಸಳ ಸೈನಿಕರು. ಗಾಡಿ, ಎತ್ತುಗಳು, ಬಾನೆಗಳು ಗ್ರಾಮದವರಿಂದ ಸಂಪಾದಿಸಿದುದು. ಮದ್ಯ ಹೊಯಿಸಳ ಸೈನ್ಯದವರ ಸ್ವಂತ ತಯಾರಿಕೆ. ಹೆಚ್ಚು ಮತ್ತು ತಲೆಗೇರುವಂತೆಯೂ, ಒಳ್ಳೆಯ

ರುಚಿ ಇರುವಂತೆಯೂ ಮಾಡಿದ್ದ ಆ ಮದ್ಯವನ್ನು ಮಲ್ಲಿಕಾರ್ಜುನನ ಸೈನಿಕರು ಮನಸ್ಸಿ ಹೀರಿದರು. ಪರಿಣಾಮ—ರಾತ್ರಿ ಎಚ್ಚರವಾಗಿದ್ದು ದುರ್ಗರಕ್ಷಣೆ ಮಾಡಬೇಕಾಗಿದ್ದ ಅವರು, ಅಮಲಿನ ಲೋಲಿನಲ್ಲಿ ಗಾಢ ನಿದ್ರೆಹೋದರು.

ವಿಷ್ಣುವರ್ಧನನ ಚಾಣಕ್ಯತನ ಇಲ್ಲಿಯೂ ಚೆನ್ನಾಗಿ ಫಲಿಸಿತು. ದುರ್ಗ ರಕ್ಷಕರು ಅಮಲುನಿದ್ದೆಯಲ್ಲಿದ್ದಾಗ, ಹೊಯಿಸಳ ಸೈನಿಕರು ಗ್ರಾಮವಾಸಿಗಳಂತೆ ವೇಷತಳೆದು 'ದುರ್ಗಕ್ಕೆ ಲಗ್ಗೆ ಹತ್ತಲು ಅನುಕೂಲವೆಲ್ಲಿ' ಎಂದು ದುರ್ಗದ ಸುತ್ತ ಹುಡುಕುತ್ತಿದ್ದರು. ಎರಡನೆಯ ಪ್ರಹರದ ರಕ್ಷಕರು ಬರುವುದರೊಳಗಾಗಿ ಇವರು ತಮ್ಮ ಕಾರ್ಯಸಾಧನೆ ಮಾಡಿಕೊಳ್ಳಬೇಕಾಗಿತ್ತು. ಮಲ್ಲಿಕಾರ್ಜುನನ ಸೇನೆ ದುರ್ಗಗಳನ್ನು ಲಗ್ಗೆಹತ್ತಲು ಅಭ್ಯಾಸ ಮಾಡಿಕೊಳ್ಳುತ್ತಿದ್ದ ಎಡೆಯೆ ಹೊಯಿಸಳ ಸೈನಿಕರ ಕಣ್ಣಿಗೆ ಬಿತ್ತು. ಅಲ್ಲಲ್ಲಿ ಗೋಡೆಯ ಹೆಗ್ಗಲ್ಲುಗಳ ನಡುವೆ ಉಂಗುಟ ತ್ರಾಣಕ್ಕೆ ಸರಿಯಾದ ಬಿರುಕುಗಳೂ, ಕೆಲವು ಕಡೆ ಮರದ ಗೂಟಗಳೂ ಕಂಡು ಬಂದವು. ಈ ವಿಷಯವನ್ನು ಪ್ರಭುಗಳಿಗೆ ಅರಿಕೆ ಮಾಡಿಕೊಳ್ಳಲು ಈ ವೇಷ ಧಾರಿಗಳಾಗಿದ್ದ ಹೊಯಿಸಳ ಸೈನಿಕರು ತಮ್ಮ ಶಿಬಿರಕ್ಕೆ ಬಂದರು. ಆಗ ಅವರ ಶಿಬಿರದಲ್ಲಿ ಒಂದು ವಿಶೇಷ ಸನ್ನಿವೇಶ ನಡೆದಿತ್ತು.

ಲೆಂಕರಾಯನೆಂಬ ಒಬ್ಬ ಸೈನಿಕ ತಾನು 'ಭೈರವ' ನಾಗಲು ನಿರ್ಧರಿಸಿ, ಮುಂದೆ ಬಂದು ಪ್ರಭುಗಳಿಗೆ ನಮಸ್ಕರಿಸಿ, 'ಪ್ರಭು, ನಾನು ಲೆಂಕ, ನಾಳೆ ಭೈರವನಾಗಲು ಪೂರ್ಣ ಸಂತೋಷದೊಡನೆ ಬಂದಿದ್ದೇನೆ, ವೀಳೆಯ ಅಪ್ಪಣೆ ಯಾಗಬೇಕು' ಎಂದ. ಪ್ರಭುಗಳು ಸ್ವಲ್ಪ ಹೊತ್ತು ಯೋಚಿಸಿ, ಲೆಂಕನ ಧೈರ್ಯಕ್ಕೆ, ಆತ್ಮಾಹುತಿಗೆ ಮೆಚ್ಚಿ, 'ಲೆಂಕರಾಯ, ನೀನು ಆದರ್ಶ ಭೈರವನಾದೆ, ಇದೊ ವೀಳೆಯವನ್ನು ತೆಗೆದುಕೊ, ನಾಳಿನ ದಿನ ನೀನು ವೀರಸ್ವರ್ಗಕ್ಕೆ ಹತ್ತಿಹೋಗು. ನಿನ್ನ ಮಡದಿ ಮಕ್ಕಳಿಗೆ ಐವತ್ತು ಗದ್ಯಾಣಗಳನ್ನೂ ಐದು ಬಳ್ಳ ಗದ್ದೆಯನ್ನೂ ನಾವು ಮುಡುಪಿಡುತ್ತೇವೆ' ಎಂದರು. ಲೆಂಕನಿಗೆ ಮಹದಾನಂದವಾಯಿತು.

ನಾಳೆ ರಣಭೈರವನಿಗೆ ಆಹುತಿಯನ್ನಿತ್ತುಕೊಳ್ಳುವ ಈ ಭೈರವಲೆಂಕನಿಗೆ ಆಗ ವಿಷ್ಣುವರ್ಧನನ ಶಿಬಿರದಲ್ಲಿ ವಿಶೇಷ ಮರ್ಯಾದೆಗಳು ಸಲ್ಲುತ್ತಿದ್ದುವು. ಅನಂತರ ಬೊಪ್ಪಣ ಲೆಂಕನನ್ನು ಗುಟ್ಟಾಗಿ ಬೇರೆ ಕರೆದುಕೊಂಡು ಹೋಗಿ ಅವನನ್ನು ಈ ಸಂದರ್ಭದಲ್ಲಿ ಇನ್ನೂ ಒಂದು ಯುದ್ಧಕೌಟಿಲ್ಯಕ್ಕೆ ಒಪ್ಪಿಸಿದ.

ಮೊದಲ ಜಾವದ ಕೋಳಿ ಕೂಗುವ ಮುನ್ನವೆ, ಲೆಂಕರಾಯನಿಗೆ ಮಲ್ಲಿ

ಕಾರ್ಜುನ ರಾಜನಂತೆ ಆಡಂಬರದ ವೇಷಭೂಷಣಗಳನ್ನು ತೊಡಿಸಿ ಸಿಂಗರಿಸಿದರು. ಅದೃಷ್ಟವಶಾತ್ ಲೆಂಕನೂ ನಿಲವಿನಲ್ಲಿ ಮಲ್ಲಿಕಾರ್ಜುನನಷ್ಟೆ ಎತ್ತರವಿದ್ದನು. ಹೀಗೆ ಇದ್ದುದನ್ನು ಕಂಡೇ, ಬೊಪ್ಪಣ ಈ ಹೊಸ ಚಾಣಕ್ಯನೀತಿಯನ್ನು ಹುಡುಕಿದ. ತನ್ನ ಸೈನಿಕರು ಈಗಾಗಲೆ ನೋಡಿ ಬಂದಂತೆ, ದುರ್ಗವನ್ನು ಲಗ್ಗೆಹತ್ತಲು ಸಾಧ್ಯವಿದ್ದ ಸ್ಥಳಕ್ಕೆ ಲೆಂಕನನ್ನು ಕತ್ತಲೆಯ ಮುಸುಕಿನಲ್ಲೂ ಕಂಬಳಿ ಹೊದ್ದಿಸಿ ಕರೆದುಕೊಂಡು ಹೋಗಿ, ಪ್ರಯಾಸದಿಂದ ದುರ್ಗವ ಮೇಲಕ್ಕೆ ಹತ್ತಿಸಿಬಿಟ್ಟ ಬೊಪ್ಪಣ. 'ನಿಶ್ಚಿತ ಸಮಯದ ತನಕ, ಯಾರ ಕಣ್ಣಿಗೂ ಕಾಣಿಸಿಕೊಳ್ಳದೆ, ಹೇಗಾದರೂ, ಎಲ್ಲಾದರೂ ಅಡಗಿಕೊಂಡಿರು. ಅಷ್ಟರೊಳಗೆ ನೀನು ಯಾರ ಕಣ್ಣಿಗಾದರೂ ಬಿದ್ದರೆ ಕೆಲಸವೆಲ್ಲ ಕೆಟ್ಟುಹೋಗುತ್ತದೆ. ಸರಿಯಾಗಿ ಬೆಳಗ್ಗೆ ಎಂಟು ಘಳಿಗೆಯ ವೇಳೆಗೆ ನಿನ್ನ ಕಾರ್ಯವನ್ನು ನೆರವೇರಿಸಿಬಿಡು' ಎಂದು ಲೆಂಕನಿಗೆ ಹೇಳಿ ತನ್ನ ಶಿಬಿರಕ್ಕೆ ಹಿಂದಿರುಗಿದ. ಮುಂದಿನ ಯುದ್ಧದ ರೀತಿಯೇ ಒಂದು ವಿಶೇಷರೀತಿಯದಾಗಿದ್ದಿತು.

§

ಕುಂಜುಶೆಟ್ಟಿ ಹೊಯಿಸಳ ಶಿಬಿರಕ್ಕೆ ಹೋಗಿ ಅಲ್ಲಿ ವಿಷ್ಣುವರ್ಧನನಿಂದ ಮರ್ಯಾದೆ ಪಡೆದು ಬಂದದ್ದು ಮಲ್ಲಿಕಾರ್ಜುನನ ಮನಸ್ಸಿಗೆ ಹಿಡಿಸಲಿಲ್ಲ. ಇದು ಶತ್ರುಗಳ ಕುಹಕಮಾರ್ಗವೆಂದೇ ಅವನು ಪರಿಗಣಿಸಿದ. ಕುಂಜುಶೆಟ್ಟಿಯನ್ನು ಕರಸಿ 'ಶತ್ರುಗಳಿಂದ ನೀನು ಬಹುಮಾನ ಸ್ವೀಕರಿಸುವುದೆ! ಇದೆಂತಹ ನಾಚಿಕೆಗೆಟ್ಟತನ?' ಎಂದು ಮಲ್ಲಿಕಾರ್ಜುನ ಕುಂಜುಶೆಟ್ಟಿಯನ್ನು ನಿಂದಿಸಿದ. ಬನವಸೆಯನ್ನು ಕಳೆದುಕೊಂಡ ದುಃಖ ಮಲ್ಲಿಕಾರ್ಜುನನಿಗೆ ಬಹಳವಾಗಿತ್ತು. 'ಇಷ್ಟೊಂದು ಚತುರ ಬಿಲ್ಗಾರರಿದ್ದೂ ನಮಗೆ ಇಂತಹ ಅಪಮಾನವೆ!' ಎಂದು ಅವನು ಮನನೊಂದಿದ್ದ. 'ಕೊಲೆಗಿಂತ ಕಲೆಯಲ್ಲಿ ನಮಗೆ ಅಭಿಮಾನ ಹೆಚ್ಚು. ವಿಷ್ಣುವರ್ಧನನೇನೂ ಸಾಮಾನ್ಯನಲ್ಲ. ಯುದ್ಧತಂತ್ರಗಳನ್ನು ಚೆನ್ನಾಗಿ ಬಲ್ಲವನು. ನಾಳಿನ ಯುದ್ಧದಲ್ಲಿ ಅವನ ಆನೆಗಳು ನಮ್ಮ ದುರ್ಗದ ಹೆಬ್ಬಾಗಿಲನ್ನು ಪುಡಿಪುಡಿ ಮಾಡುವುವು. ಅದಕ್ಕಾಗಿ ಅವರು ಸರ್ವಸನ್ನಾಹ ಮಾಡಿಕೊಳ್ಳುತ್ತಿರುವುದನ್ನು ನಾನೆ ಕಂಡೆ. ಆನೆಗಳಿಗೆ ಯಾವ ಪೆಟ್ಟಿನ ಬಾಧೆಯೂ ಆಗದಂತೆ ಅವರು ಮಾಡಿಕೊಂಡಿದ್ದಾರೆ. ಸೈನಿಕರೂ ನಮ್ಮ ಶರಗಳಿಂದ ಯಾವ ತೊಂದ

ರೆಗೂ ಸಿಗದಂತೆ, ಶಿರರಕ್ಷೆ, ವಕ್ಷರಕ್ಷೆಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಆದ ಕ್ಕಾಗಿ ಒಂದು ದಿನದ ಯುದ್ಧವನ್ನೆ ಅವರು ನಿಲ್ಲಿಸಿಬಿಟ್ಟರು. ಇಷ್ಟೆಲ್ಲ ಕಂಡ ಮೇಲೆ, ಅವರೊಡನೆ ಸ್ನೇಹ ಸಮಾಧಾನಗಳನ್ನು ಮಾಡಿಕೊಳ್ಳುವುದು ಒಳ್ಳೆಯ ದೆಂದು ನನಗೆ ತೋರುತ್ತದೆ' ಎಂದ ಕುಂಜುಶೆಟ್ಟಿ.

ಕುಂಜುಶೆಟ್ಟಿಯು ಈ ಮಾತುಗಳನ್ನು ಕೇಳಿ ಮಲ್ಲಿಕಾರ್ಜುನನಿಗೆ ಮೈ ಬೆಂದಿತು. 'ರಾಜರು ಯಾವಾಗಲೂ ಸ್ವತಂತ್ರರಾಗಿಯೆ ಇರಬೇಕು. ಇಲ್ಲದಿದ್ದರೆ 'ರಾಜ'ನೆಂಬ ಹೆಸರಾದರೂ ಏಕೆ? ಸಾಮಂತತನದ ಅಂಕುಶ ನಮ್ಮ ಮೇಲೆ ಬೇಡ. ನಾವು ತಲೆ ಮಣಿದೆವೆಂದರೆ, ಕೈಲಾಸದಲ್ಲಿರುವ ನಮ್ಮ ಅಯ್ಯನೂ ಅಜ್ಜ ತೈಲಪನೂ ತಮ್ಮ ವಂಶ ಇಲ್ಲಿಗೆ ಅಳಿಯಿತೆಂದು ಎದೆಗೆಟ್ಟಾರು. ನಾಳಿನ ಯುದ್ಧ ಎಷ್ಟೇ ಕಷ್ಟತರವಾದರೂ ನೀನು ದುರ್ಗವನ್ನು ರಕ್ಷಿಸಿಕೊಳ್ಳಬೇಕು. ನಮ್ಮ ದುರದೃಷ್ಟಕ್ಕೆ ಈಗಲೆ ನಮ್ಮ ಆರೋಗ್ಯ ಹೀಗಾಗಬೇಕೆ? ಸಾಧ್ಯವಾದರೆ ನಾಳೆ ನಾವೇ ದುರ್ಗದ ಮೇಲಕ್ಕೆ ಬಂದು ನಮ್ಮ ಸೈನ್ಯಗಳಿಗೆ ಕಾಣಿಸಿಕೊಳ್ಳು ವೆವು' ಎಂದು ಕುಂಜುಶೆಟ್ಟಿಗೆ ಸೂಚನೆ ಇತ್ತು ಕಳಿಸಿ, ತಾನು ಚಿಂತಾಮಗ್ನ ನಾದನು.

ಕುಂಜುಶೆಟ್ಟಿ ದುರ್ಗದ ರಕ್ಷಣೆಗೆ ತನ್ನ ಕೈಯಲ್ಲಾದ ಎಲ್ಲ ಏರ್ಪಾಡು ಗಳನ್ನೂ ಸೂರ್ಯೋದಯದ ವೇಳೆಗೆ ಮಾಡಿಕೊಂಡ. ಸೂರ್ಯೋದಯವಾದ ಸ್ವಲ್ಪಹೊತ್ತಿನ ಮೇಲೆ ಹೊಯಿಸಳ ಶಿಬಿರದಿಂದ ಉನ್ನತವಾದ ಬಲಶಾಲಿಗಳಾದ ಆನೆಗಳ ಗುಂಪೊಂದು ಹೊರಟಿತು. ಮೇಲ್ಗಡೆಯಿಂದಾಗಲಿ, ಮುಂದುಗಡೆ ಯಿಂದಾಗಲಿ, ಹಿಂಭಾಗದಿಂದಾಗಲಿ ಅವುಗಳಿಗೆ ಶರಗಳು ತಾಗದಂತೆ ರಕ್ಷಣೆ ಗಳನ್ನು ಕಲ್ಪಿಸಿದ್ದರು. ಉದ್ದನೆಯ ನೀಟು ತೂಗುದಿಮ್ಮಿಗಳೆರಡನ್ನು ಅವು ಸೊಂಡಿಲುಗಳಲ್ಲಿ ಹಿಡಿದು ತಂದವು. ಸಂಗಡ ಶಿರಸ್ತ್ರಾಣಗಳನ್ನೂ ವಕ್ಷರಕ್ಷೆ ಗಳನ್ನೂ ಧರಿಸಿ ಕತ್ತಿ, ಗುರಾಣಿ, ಬಿಲ್ಲು, ಭರ್ಜಿ, ಇತರ ಅಸ್ತ್ರಶಸ್ತ್ರಗಳನ್ನು ಹಿಡಿದು ಹೊಯಿಸಳ ಸೈನಿಕರು ಬಂದರು; ರಥಿಕರೂ ಅಶ್ವಸೈನಿಕರೂ ಬಂದರು. ಬೆಳಗಾಗುವುದಕ್ಕೆ ಮುನ್ನವೆ ದೂರದ ಕಾಡಿನಲ್ಲಿ ಅಡಗಿದ್ದ ಹೊಯಿಸಳ ಪದಾತಿ ಸೈನ್ಯದ ಗುಂಪೊಂದು ಮರದ ಕೊಂಬೆಗಳನ್ನು ಭುಜಗಳಿಗೆ, ತಲೆಗಳಿಗೆ ಕಟ್ಟಿ ಕೊಂಡು ದುರ್ಗವನ್ನು ಲಗ್ಗೆಹತ್ತಲು ಬೇಕಾಗುವ ಸಕಲ ಸಾಮಗ್ರಿಗಳೊಡನೆ, ಮೆಲ್ಲಮೆಲ್ಲನೆ ಸರಿದು, ಕಾಡುದಾರಿಯಲ್ಲಿ ನುಗ್ಗಿ, ಹಿಂದಿನ ರಾತ್ರಿ ಲೆಂಕರಾಯ

ನನ್ನು ಲಗ್ಗೆ ಹತ್ತಿಸಿದ್ದ ಸ್ಥಳಕ್ಕೆ ನಡೆಯಿತು. ಈ ಗುಂಪು ಶತ್ರುಗಳ ಕಣ್ಣಿಗೆ ಬೀಳಲಿಲ್ಲ.

ದುರ್ಗದ ಮಹಾದ್ವಾರದ ಕಡೆಗೆ ಹೊರಟ ಹೊಯಿಸಳ ಸೇನೆ, ಶತ್ರು ಸೈನಿಕರೆಲ್ಲರ ದೃಷ್ಟಿಯನ್ನೂ ತಮ್ಮ ಕಡೆಗೆ ಸೆಳೆದುಕೊಳ್ಳಲು ಕೊಂಬು, ಕಹಳೆ, ತಮ್ಮಟೆ ಮುಂತಾದ ವಾದ್ಯಗಳನ್ನು ಬಲವಾಗಿ ಘೋಷಿಸುತ್ತ ಯುದ್ಧಭೂಮಿಗೆ ಬಂದರು. ಹೊಯಿಸಳ ಸೇನೆ ದುರ್ಗದ ಬಾಗಿಲ ಕಡೆ ದಾಳಿ ಬರುತ್ತಿರುವುದನ್ನು ಕಂಡು, ದುರ್ಗದ ಮೇಲಿದ್ದ ಕುಂಜುಶೆಟ್ಟಿ ತನ್ನ ಬಿಲ್ಗಾರರನ್ನೆಲ್ಲ ದುರ್ಗದ ನೆತ್ತಿಗೇ ಕರಸಿಕೊಂಡ. ಇದರಿಂದ ದುರ್ಗವನ್ನು ಲಗ್ಗೆ ಹತ್ತಲು ಗುಪ್ತವಾಗಿ ಹೊರಟಿದ್ದ ಹೊಯಿಸಳ ಸೇನೆಗೆ ಇನ್ನಷ್ಟು ಅನುಕೂಲವೆ ಆಯಿತು.

ಮೇಲಿಂದ ಅಂಬುಗಳ ಸುರಿಮಳೆಯಾಗುತ್ತಿದ್ದರೂ, ಶಿರರಕ್ಷೆ, ವಕ್ಷರಕ್ಷೆ, ಬೆನ್ನುರಕ್ಷೆಗಳನ್ನು ಹೊಂದಿದ್ದ ಹೊಯಿಸಳ ಸೇನೆಯೂ ಆನೆಗಳ ಗುಂಪೂ ನಿರು ಪಾಧಿಕವಾಗಿ ಹೆಬ್ಬಾಗಿಲನ್ನು ಸಮೀಪಿಸಿದುವು. ಹೆಬ್ಬಾಗಿಲ ಬಳಿ ಕಾವಲಿದ್ದ ಮಲ್ಲಿಕಾರ್ಜುನನ ಸೇನೆಗೂ ಹೊಯಿಸಳ ಸೇನೆಗೂ ಘೋರ ಯುದ್ಧವಾಗಿ ರಕ್ತದ ಕಾಲುವೆ ಹರಿಯಿತು. ಎರಡು ಕಡೆಗಳಲ್ಲೂ ಬಹು ಜನರು ಸತ್ತರು.

ಆಗ ಹೊಯಿಸಳ ಸೇನೆಯ ನಡುವೆ ಮಹಾ ಕೋಲಾಹಲವೊಂದೆದ್ದಿತು: 'ಅದೊ! ಮಲ್ಲಿಕಾರ್ಜುನ ರಾಜ, ದುರ್ಗದ ಮೇಲೆ ಅದೊ; ಅದೊ; ಹೊಡಿ, ಕೊಲ್ಲು' ಎಂದು ಬೊಬ್ಬಿಟ್ಟಿತು. ತಮ್ಮ ಪ್ರಭು ಮಲ್ಲಿಕಾರ್ಜುನರು ದುರ್ಗದ ಮೇಲೆ ಕಾಣಿಸಿಕೊಂಡರೆಂದು, ಅವನ ಸೇನೆ 'ಜಯ ಜಯ'ಕಾರ ಮಾಡಿತು. ಉತ್ಸಾಹದಿಂದ ರಾಜರ ಕಡೆಗೆ ನೋಡಿತು. ಹೊಯಿಸಳ ಬಿಲ್ಗಾರರು ಕೂರಂಬು ಗಳನ್ನು ಮಲ್ಲಿಕಾರ್ಜುನನ ಮೇಲೆ ಗುರಿಯಿಟ್ಟು ಸೆಳೆಸೆಳೆದು ಬಿಟ್ಟರು. ಗುರಿ ಯಿಟ್ಟ ಅಂಬುಗಳೆಲ್ಲ ಬಹುವಾಗಿ ದುರ್ಗದ ತುದಿಗೋಡೆಗೆ ತಾಗಿ ನಿರರ್ಥಕ ವಾದವು. ಅವರು ಇಟ್ಟ ಗುರಿಯೂ ಅಲ್ಲಿಗೇ. ಅದೇ ಸಮಯದಲ್ಲಿ ಆನೆಗಳು ದುರ್ಗದ ಹೆಬ್ಬಾಗಿಲುಗಳನ್ನು ದಿಮ್ಮಿಗಳಿಂದ ತೂಗಿ, ತೂಗಿ, ಜಡಿದು, ಜೊತೆಗೆ ತಮ್ಮ ಮೈಯತ್ರಾಣಗಳನ್ನೂ ಆ ತೂಗಿನೊಡನೆ ಸೇರಿಸಿ ಬಾಗಿಲುಗಳನ್ನು ಒಡೆ ಯಲು ಪ್ರಯತ್ನಪಡುತ್ತಿದ್ದುವು.

ಇಷ್ಟರಲ್ಲಿ ದುರ್ಗದ ಮೇಲೆ ಕಾಣಿಸಿಕೊಂಡ ಮಲ್ಲಿಕಾರ್ಜುನನ ಎದೆಗೆ ಒಂದು ಕೂರಂಬು ನಟ್ಟಂತಾಗಿ ಅವನು ವಿಕಾರವಾಗಿ ಕೂಗುತ್ತ, ದುರ್ಗದ

ಮೇಲಿನಿಂದ ದುರ್ಗದೊಳಕ್ಕೆ ತಲೆ ಕೆಳಗಾಗಿ ಬಿದ್ದು ಸುಚ್ಚುನುಚ್ಚಾದನು. 'ಹ್ಹೊ ಹ್ಹೊ! ಮಲ್ಲಿಕಾರ್ಜುನನನ್ನು ಹೊಡೆದೆವು, ಕೊಂದೆವು. ಅವನು ಸತ್ತ. ಮಲ್ಲಿಕಾರ್ಜುನ ಸತ್ತ' ಎಂದು ಹೊಯಿಸಳ ಸೇನೆ, ಆನಂದದಿಂದ ಮೈಮರೆತು ತಮ್ಮ ಕತ್ತಿ, ಗುರಾಣಿಗಳನ್ನು ಮೇಲಕ್ಕೆ ಮೇಲಕ್ಕೆ ಎಸೆದು ಬುತ್ತಿ ಹಿಡಿದು ಕುಣಿ ಕುಣಿದಾಡಿತು. ಇದನ್ನು ಕಂಡು ಮಲ್ಲಿಕಾರ್ಜುನನ ಸೇನೆ ಎದೆಗೆಟ್ಟಿತು. ಲೆಂಕ ರಾಯ ಸ್ವರ್ಗಕ್ಕೆ ಏರಿಹೋದ. 'ಅಯ್ಯೋ! ಅನಾರೋಗ್ಯದಿಂದ ಮಲಗಿದ್ದ ಪ್ರಭುಗಳು ಅಪಾಯವನ್ನು ಅರಿಯದೆ ದುರ್ಗದ ಮೇಲಕ್ಕೆ ಬಂದು ಹೀಗೆ ಘೋರ ವಿಪತ್ತಿಗೆ ತುತ್ತಾದರಲ್ಲ' ಎಂದು ಕುಂಜುಶೆಟ್ಟಿ ಎದೆಕುಗ್ಗಿಹೋದ.

ಅದೇ ಸಮಯಕ್ಕೆ ಆನೆಗಳು ದುರ್ಗದ ಹೆಬ್ಬಾಗಿಲನ್ನು ಸೀಳಿ ಬೀಳಿಸಿ ದುವು. ಹೊಯಿಸಳಸೇನೆ ಪ್ರಳಯದಂತೆ ದುರ್ಗದೊಳಕ್ಕೆ ನುಗ್ಗಿತು. ಮಲ್ಲಿ ಕಾರ್ಜುನ ಹೊಯಿಸಳ ಸಾಮಂತನಾದ. ಹೀಗೆ ಉಚ್ಚಂಗಿ, ಬನವಸೆ, ಬೆಳವಲ, ಸಂತಲಿಗೆ, ಹಲಸಿಗೆ, ಹುಲಿಕೆರೆ, ಸವಿಮಲೆ, ಲೊಕ್ಕಿಗುಂಡಿ, ಹಾನಗಲ್ಲು ವಿಷ್ಣು ವರ್ಧನನ ಕಡತಕ್ಕೆ ಸೇರಿಹೋದವು. ವಿಷ್ಣುವರ್ಧನಪ್ರಭು ಅಲ್ಲಿಂದ ಉತ್ತರಕ್ಕೆ ನಡೆದು ಹೆದ್ದೊರೆಯನ್ನು ಸೇರಿ, ಆ ನದಿಯಲ್ಲಿ ತಮ್ಮ ಕಾಂಭೋಜಿಯನ್ನೂ ಕತ್ತಿಯನ್ನೂ ತೊಳೆದರು.

ಮೇಲಿನ ಊರುಗಳ ಪೈಕಿ ಬೆಳವಲ, ಹಲಸಿಗೆ ಊರುಗಳು ಆಗ ಕದಂಬರ ರಾಜನಾದ ಜಯಕೇಶಿಯ ಆಡಳಿತದಲ್ಲಿದ್ದುವು. ಈ ಜಯಕೇಶಿ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಅಳಿಯ. ಇವನ ರಾಜಧಾನಿ ಪಶ್ಚಿಮ ಸಮುದ್ರದ ಕರಾವಳಿಯಲ್ಲಿದ್ದ ಗೋವೆ. ತನ್ನ ಊರುಗಳನ್ನು ವಿಷ್ಣುವರ್ಧನ ಸ್ವಾಧೀನಪಡಿಸಿಕೊಂಡನೆಂಬ ಹೊಟ್ಟೆಯುರಿಯ ಮೇಲೆ, ಈ ಜಯಸಿಂಹ ಸೇನೆಗೆ ಹಾಲನ್ನೊದಗಿಸುತ್ತಿದ್ದ ಹೊಯಿಸಳರ ಗೋಗ್ರಹಣಮಾಡಿಸಿದ. ಆಗ ಪ್ರಭುಗಳು ಇವನನ್ನು ಗೋವೆಗೂ ಅಟ್ಟಿಸಿಕೊಂಡುಹೋದರು. ಕೈಯಲ್ಲಾಗದೆ ಜಯಕೇಶಿ ಆಗ ಹಸುಗಳನ್ನು ಒಪ್ಪಿಸಿ ಕಡೆಗೆ ಶರಣಾಗತನಾದ. ಪ್ರಭು ಈಗ ಪಶ್ಚಿಮಸಮುದ್ರ ತೀರದಲ್ಲಿ ವಿಜಯಸ್ತಂಭವನ್ನು ನೆಡಿಸಿ ತಮ್ಮ ದಿಗ್ವಿಜಯವನ್ನು ಪೂರ್ಣಗೊಳಿಸಿ ಬಳಿಕ ದ್ವಾರವತಿಯ ಮಾರ್ಗವನ್ನು ಹಿಡಿದರು. ಪಶ್ಚಿಮ ಉತ್ತರಗಳ ದಿಗ್ವಿಜಯ ಹೀಗೆ ಪೂರ್ಣವಾಯಿತಾದರೂ, ಶರಣಾಗತನಾಗಿದ್ದ ಹಾನಗಲ್ಲಿನ ಮಲ್ಲಿಕಾರ್ಜುನ ಕೆಲವು ವರ್ಷಗಳನಂತರ ಪುನಃ ಪ್ರಬಲನಾದ.

ಆಗಲೂ ಪ್ರಭುಗಳೇ ಮತ್ತೆ ಬಂದು, ಅವನನ್ನು ನಿರ್ನಾಮಮಾಡಿ ಹಾನಗಲ್ಲನ್ನು ತಮ್ಮ ಉತ್ತರ ಮೇರೆಯ ರಾಜಧಾನಿಯನ್ನಾಗಿ ಮಾಡಿಕೊಂಡರು.

§

ಪ್ರಭು ವಿಷ್ಣುವರ್ಧನರು ವಿಜಯವೈಭವದೊಡನೆ ದ್ವಾರವತಿಗೆ ಬಂದರು. ಕುವರನು ಊರ ಗಡಿಯ ಬಳಿ ಅಪ್ಪಾಜಿಯವರನ್ನು ಇದಿರುಗೊಂಡು ಕರೆತಂದ. ಪುರಜನರೆಲ್ಲ ವಿಜಯಶಾಲಿಯಾಗಿ ಬಂದ ಪ್ರಭುಗಳ ಮೇಲೆ ಹೂಮಳೆಕರೆದರು. ಪ್ರಭು ಅರಮನೆಯ ಬಳಿ ಕಾಂಭೋಜಿಯಿಂದ ಇಳಿದು, ಒಡನೆ ಶಾಂತಲೆಯನ್ನು ನೋಡಲು ಹೋದರು. ಇನಿಯನ ಬರುವಿಕೆಯನ್ನೇ ಎದುರುನೋಡುತ್ತಿದ್ದ ಶಾಂತಲೆ ಅವರನ್ನು ಕಂಡೊಡನೆ ಹೃದಯ ಉಕ್ಕಿ, ಕಣ್ಣೀರು ಉಕ್ಕಿ, ಪತಿಯ ಪಾದಗಳಿಗೆ ನಮಸ್ಕರಿಸಿದಳು. ಪ್ರಭು ಹೃದಯೇಶ್ವರಿಯನ್ನು ತಮ್ಮೆರಡು ಕೈಗಳಿಂದಲೂ ಹಿಡಿದೆತ್ತಿ 'ದೇವಿ, ನಿನ್ನ ಸ್ಥಳವಿಲ್ಲಿ' ಎಂದು ಪ್ರೀತಿಯಿಂದ ತಮ್ಮ ಹೃದಯಕ್ಕೆ ಅಪ್ಪಿಕೊಂಡು, ತಮ್ಮ ಅತುಳ ವಿಶ್ವಾಸವನ್ನು ವ್ಯಕ್ತಪಡಿಸಿದರು.

ಪ್ರಭುಗಳು ತಮ್ಮ ದೇವಿ ಹಿಂದಿನಂತೆಯೆ ಕೃಶಳೂ ದುಃಖಿತಳೂ ಆಗಿರಬಹುದೆಂದು ಭಯಪಟ್ಟಿದ್ದರು. ಈಗ ಅವರ ಹೃದಯಕ್ಕೆ ಸಮಾಧಾನವಾಯಿತು. ತುಂಬುಹೃದಯದಿಂದ 'ದೇವಿ, ನೀನು ನನ್ನ ವಿಜಯಶ್ರೀ, ನೀನು ನನ್ನ ಪುಣ್ಯರೂಪಿ. ನಿನ್ನ ಧರ್ಮ, ನಿನ್ನ ವ್ರತ, ನಿನ್ನ ಸೌಶೀಲ್ಯ ನನಗೆ ರಕ್ಷೆ' ಎಂದರು.

ಶಾಂತಲೆ ಬಹುಮಾನಿಸಲ್ಪಟ್ಟಳಾದರೂ ಲಜ್ಜೆಯಿಂದ, ಮೃದು ಮಧುರ ನಗೆಯಿಂದ 'ಪ್ರಭೂ, ಆ ಮಾತನ್ನು ಹೇಳಬೇಕಾದವಳು ನಾನು. ನೀವು ಕೈಹಿಡಿದು ನನ್ನನ್ನು ಈ ಔನ್ನತ್ಯಕ್ಕೆ ತಂದಿರಿ, ಇಲ್ಲದಿದ್ದರೆ ಹೇಗಿರುತ್ತಿದ್ದೆನೊ? ಎಲ್ಲಿರುತ್ತಿದ್ದೆನೊ? ಮಹಾರಾಣಿಯನ್ನಾಗಿ ಮಾಡಿಕೊಂಡಿರಿ, ಎಲ್ಲರ ಆದರ ಗೌರವಗಳಿಗೂ ಪಾತ್ರಳನ್ನಾಗಿ ಮಾಡಿದಿರಿ' ಎಂದಳು.

ಪ್ರಭುಗಳು ಶಾಂತಲೆಯ ಮುಂಗುರುಳುಗಳನ್ನು ಮೃದುವಾಗಿ ಎತ್ತಿ ನೇವರಿಸಿ 'ಚೆನ್ನೆ, ಎಲ್ಲರ ಆದರ ವಿಶ್ವಾಸಗಳಿಗೆ ನೀನು ಪಾತ್ರಳಾಗಿರುವುದು ನಿನ್ನ ಗುಣಗಳಿಂದಲೆ. ನೀನು ಗುಣವಂತೆಯಲ್ಲದಿದ್ದರೆ, ಜನರು ಪ್ರೀತಿ ವಿಶ್ವಾಸಗಳನ್ನು ತೋರುತ್ತಿದ್ದರೆ? ನಾನಾದರೂ ನನ್ನೆದೆಯಲ್ಲಿ ನಿನಗೆ ಎಡೆ ಕೊಡುತ್ತಿದ್ದೆನೆ? ದೇವಿ, ಎಲ್ಲಿ ರೂಪುಲಾವಣ್ಯಗಳಿರುವವೊ, ಅಲ್ಲಿ ಗುಣವೂ ಇರುವುದು

ವಿರಳ. ಈ ಮೂರಕ್ಕೂ ಹೊನ್ನಿಡುತ್ತಿರುವುದು ನಿನ್ನ ವಿದ್ಯೆ. ಈ ನಾಲ್ಕೂ ಒಂದೇ ವ್ಯಕ್ತಿಯಲ್ಲಿ ಸೇರಿರುವುದು ಇನ್ನೂ ವಿರಳ . . . ಇರಲಿ, ಲಕ್ಷ್ಮಿ ಎಲ್ಲಿ? ಹೇಗಿದ್ದಾಳೆ? ಪಂಡಿತ ನೂವಯ್ಯನವರು ಹೇಗಿದ್ದಾರೆ?'

'ಅದನ್ನೆ ಹೇಳಬೇಕೆಂದಿದ್ದೆ. ದೊಡ್ಡ ಅಯ್ಯ ಈಚೆಗೆ ಬಹಳ ಸೊರಗಿದ್ದಾರೆ. ನೀವು ಬರುವ ಸಮಾಚಾರ ತಿಳಿದು ಬಂದ ಮೇಲೆ, ಲಕ್ಷ್ಮಿ ವೇಲಾಪುರಕ್ಕೆ ಹೋಗಿ ಅಯ್ಯನನ್ನು ಕರೆತಂದಿದ್ದಾಳೆ.'

'ಲಕ್ಷ್ಮಿ ಏತಕ್ಕೆ ಅವರನ್ನು ಈ ಸ್ಥಿತಿಯಲ್ಲಿ ಕರೆತರಬೇಕಾಗಿತ್ತು? ನಾನೇ ವೇಲಾಪುರಕ್ಕೆ ಹೋಗಿಬರುತ್ತಿದ್ದೆನಲ್ಲ?'

'ನಾನೂ ಹಾಗೆಯೆ ಹೇಳಿದೆ. ಆದರೆ ಅವಳು ಕೇಳಬೇಕಲ್ಲ!'

ಪ್ರಭುವೂ ಶಾಂತಲೆಯೂ ಕೂಡಿ ಪಂಡಿತರನ್ನೂ ಲಕ್ಷ್ಮಿಯನ್ನೂ ಕಾಣಲು ಹೋದರು.

ಕೆಲವು ತಿಂಗಳು ಸುಖವಾಗಿ ಕಳೆದುಹೋದುವು. ಒಂದೇ ಒಂದು ದುಃಖದ ಸಂಗತಿಯೆಂದರೆ: ಲಕ್ಷ್ಮಿ ಎರಡು ತಿಂಗಳೊಳಗೆ ಕರ್ಮಬಾಧ್ಯಳಾದದ್ದು. ಲಕ್ಷ್ಮಿಯೂ ಶಾಂತಲೆಯೂ ಸಮದುಃಖಿಗಳಾದರು. ಮಾಚಿಕಬ್ಬೆ ಮಾರಸಿಂಗಮಯ್ಯನವರೂ, ಕುವರನೂ, ಪ್ರಭುಗಳೂ ಈ ದುಃಖದಲ್ಲಿ ಭಾಗಿಗಳಾದರು. ಪಂಡಿತರ ಜೀವನ ಆದರ್ಶಜೀವನವಾಗಿತ್ತು. ಮುಕ್ತ ಆತ್ಮ ಅವರದು.

ಇಷ್ಟರಲ್ಲಿ ಅಶ್ವಮೇಧಯಾಗಕ್ಕೆ ಆಗಬೇಕಾಗಿದ್ದ ಸಿದ್ಧತೆಗಳೆಲ್ಲ ನಡೆದಿದ್ದವು. ರಾಮೇಶ್ವರದಿಂದ ಕಾಶಿಯವರೆಗೆ, ಭಾರತದ ಎಲ್ಲಾ ವಿದ್ಯಾಪೀಠಗಳಿಗೆ, ಗುರುಪೀಠಗಳಿಗೆ, ಎಲ್ಲ ರಾಜ, ರಾಜಾಧಿರಾಜ, ಚಕ್ರೇಶ್ವರರಿಗೆ, ಉದ್ದಾಮ ಪಂಡಿತರಿಗೆ, ಮಠಾಧಿಪತಿಗಳಿಗೆ, ಈ ಮಹಾಯಾಗಕ್ಕೆ ಆಹ್ವಾನದ ಓಲೆಗಳು ಕಳಿಸಲ್ಪಟ್ಟಿದ್ದವು. ವಿದ್ವಾಂಸರುಗಳಿಗೆ, ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರಿಗೆ, ಮಠಾಧಿಪತಿಗಳಿಗೆ, ಹೊಯಿಸಳ ಬೊಕ್ಕಸದಿಂದಲೆ ಪ್ರಯಾಣದ ಸಕಲ ಸೌಲಭ್ಯಗಳೂ ಒದಗಿಸಲ್ಪಟ್ಟವು. ಈ ಮಹಾಯಾಗಕ್ಕೆ ಅನುಬಂಧಗಳಾದ ಎಲ್ಲಾ ಹವನ, ಹೋಮ, ಶಾಂತಿ ಸಮಾರಂಭಗಳಲ್ಲಿ ಪಾಲುಗೊಳ್ಳುವ ಋತ್ವಿಕರ, ಆಚಾರ್ಯರ, ವೇದಸಂಪನ್ನರ ಸಂಖ್ಯೆಯೆ ಸಾವಿರವಾಯಿತು.

ಯಗಚಿ ಹೊಳೆಯ ತೀರದ ರಮ್ಯವಾದ ಒಂದು ವನಪ್ರದೇಶದಲ್ಲಿ, ವಿಶಾಲವಾದ ಯಾಗಶಾಲೆಯೊಂದು ಶಾಸ್ತ್ರೋಕ್ತ ರೀತಿಯಲ್ಲಿ ನಿರ್ಮಾಣ

ವಾಯಿತು. ಯಾಗದ್ರವ್ಯಗಳೂ, ಯಾಗೋಪಕರಣಗಳೂ, ಇತರ ಸಾಮಗ್ರಿಗಳೂ ಎಲ್ಲವೂ ಅಪಾರವಾಗಿ ಶೇಖರಿಸಲ್ಪಟ್ಟವು. ಎರಡು ಮೂರು ತಿಂಗಳೊಳಗಾಗಿ ಈ ವನಾಂತರದಲ್ಲಿ ಒಂದು ಪರ್ಣನಗರಿಯೆ ಸೃಷ್ಟಿಯಾಯಿತು.

ಸಿದ್ಧತೆಗಳೆಲ್ಲ ಸಮರ್ಪಕವಾಗಿ ನಡೆದು, ಗೊತ್ತುಮಾಡಿದ್ದ ಸುಲಗ್ನ ಸುಮುಹೂರ್ತದಲ್ಲಿ ವಿಷ್ಣುವರ್ಧನನೂ ರಾಣಿಯರೂ ಸ್ನಾನಮಾಡಿ, ದೀಕ್ಷಾಯೋಗ್ಯ ವಸ್ತ್ರಗಳನ್ನುಟ್ಟು, ಸಕಲ ಬಂಧುಪರಿವಾರದೊಂದಿಗೆ, ಮಹರ್ಷಿಗಳೊಂದಿಗೆ, ವಿದ್ವಾಂಸರನ್ನೂ ಋತ್ವಿಕರನ್ನೂ ಕೂಡಿ, ಮಂಗಳವಾದ್ಯ ಮಂಗಳ ಘೋಷಗಳೊಡನೆ ಯಾಗಶಾಲೆಯನ್ನು ಪ್ರವೇಶಿಸಿ ದೀಕ್ಷಾಬದ್ಧರಾದರು.

ಈ ವಿಸ್ತಾರವಾದ ಯಾಗಶಾಲೆಯಲ್ಲಿ ಪ್ರಧಾನ ಯಜ್ಞವೇದಿ ಹೋಮಕುಂಡ ಒಂದಲ್ಲದೆ, ಇತರ ನೂರಾರು ಹೋಮಕುಂಡಗಳೂ ಇದ್ದವು. ಯಾಗಾರಂಭವಾಯಿತು. ಅಹರ್ನಿಶಿ ಬಿಡುವಿಲ್ಲದೆ ನಡೆಯುತ್ತಿರುವ ಹೋಮಗಳ ಆಜ್ಯಾಹುತಿಗಳ ಧೂಮ ಆ ವನಾಂತವನ್ನೇ ಸುಗಂಧಪೂರಿತವನ್ನಾಗಿ ಮಾಡಿತು. ನೂರಾರು ಕಂಠಗಳಿಂದ ಸುಶ್ರಾವ್ಯವಾಗಿ, ಶ್ರುತಿಬದ್ಧವಾಗಿ, ಸ್ವರಬದ್ಧವಾಗಿ ಹೊರಡುತ್ತಿದ್ದ ವೇದಘೋಷಗಳೂ ಹೋಮಮಂತ್ರಗಳೂ ಎಲ್ಲರ ಹೃದಯಗಳನ್ನು ಮಿಡಿದು ಅವರನ್ನು ಆನಂದಪುಲಕಾಂಕಿತರನ್ನಾಗಿ ಮಾಡಿದವು. ಆ ಮಹಾ ಯಾಗಶಾಲೆಯೂ ಪರ್ಣನಗರಿಯೂ ಶುಚಿಯಾಗಿ, ಪವಿತ್ರವಾಗಿ, ತನ್ನದೇ ಒಂದು ಅಪೂರ್ವ ಶೋಭೆಯಿಂದ ಕೂಡಿದ್ದಿತು.

ಹದಿನೆಂಟು ದಿನ ಅವಿಚ್ಛಿನ್ನವಾಗಿ ನಡೆಯಿತು ಈ ಅಶ್ವಮೇಧಕ್ರತು. ಪ್ರಭುವೂ ಶಾಂತಲೆ ಲಕ್ಷ್ಮಿಯರೂ, ಇತರ ರಾಣಿಯರೂ ಮಹಾನಿಷ್ಠೆಯಿಂದಿದ್ದು ಯಾಗವನ್ನು ಸಾಂಗವಾಗಿ ಪೂರ್ಣಗೊಳಿಸಿ, ಅವಭೃತಸ್ನಾನಮಾಡಿ, ಕಂಕಣ ವಿಸರ್ಜನೆಮಾಡಿದರು. ಇದಾದ ಮೇಲೆ ವಿಷ್ಣುವರ್ಧನರು ಗೋಗರ್ಭ ಪ್ರವೇಶ ಮಾಡಿದರು. ಒಬ್ಬ ಮನುಷ್ಯನು ಧಾರಾಳವಾಗಿ .ಒಳಹೊಕ್ಕು ಕುಳಿತು, ಮಂತ್ರೋಚ್ಚಾರಗಳನ್ನು ಮಾಡಿ ಈಚೆಗೆ ಬರುವಷ್ಟು ದೊಡ್ಡದಾಗಿ ಚಿನ್ನದಲ್ಲಿ ಮಾಡಿದ್ದ ಒಂದು ಗೋವಿನ ಉದರದೊಳಗೆ ಪ್ರಭುಗಳು ಹೋಗಿ ಕುಳಿತುಕೊಂಡು, ಮಂತ್ರಾನುಷ್ಠಾನಮಾಡಿ ಈಚೆಗೆ ಬಂದರು. ಅನಂತರ ಆ ಬೃಹದಾಕಾರದ ಚಿನ್ನದ ಗೋವನ್ನು ಹೊಯಿಸಳೇಶ್ವರ, ಶಾಂತಲೇಶ್ವರ ದೇವಾಲಯಗಳಿಗೆ ದಾನವಾಗಿ ಕೊಡಲಾಯಿತು. ಇದಾದ ಮೇಲೆ ಪ್ರಭು ತುಲಾಪುರುಷರೂ

ಆದರು. ತಕ್ಕಡಿಯ ಒಂದು ಕೈಯಲ್ಲಿ ಕುಳಿತು, ತಮ್ಮಷ್ಟೆ ಭಾರದ ಚಿನ್ನವನ್ನು ತೂಗಿಸಿ ಅದನ್ನು ವಿಜಯನಾರಾಯಣ ದೇವಾಲಯಕ್ಕೆ ದಾನಕೊಟ್ಟರು. ಆ ಹದಿನೆಂಟು ದಿನಗಳೂ ಭೂರಿ ಭೋಜನಾದಿಗಳು ನಡೆದವು. ಋತ್ವಿಕರಿಗೆ, ವಿದ್ವಾಂಸರಿಗೆ, ಯಾಗಕರ್ಮಗಳಲ್ಲಿ ಭಾಗವಹಿಸಿದ್ದವರಿಗೆ ಯೋಗ್ಯತಾನುಸಾರ ಸಂಭಾವನೆಗಳೂ, ಇತರರಿಗೆ ವಸ್ತ್ರದಾನ, ಗೋದಾನ, ಹಿರಣ್ಯದಾನ, ಅನ್ನದಾನ ಗಳೂ ಯಥೇಚ್ಛವಾಗಿ ನಡೆದವು. ದೇವತೆಗಳೂ ಮಾನವರೂ ಸಕಲರೂ ಸಂತುಷ್ಟರಾದರು. ಆಹ್ವಾನಿತರಾಗಿದ್ದ ರಾಜ, ರಾಜಾಧಿರಾಜರುಗಳಿಗೆ ಅವರವರ ಅಂತಸ್ತಿಗೆ ತಕ್ಕಂತೆ, ಸನ್ಮಾನ ಉಪಚಾರಗಳು ನಡೆದವು. ಎಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಸಂತೃಪ್ತಿ ಸಂತೋಷಗಳಿಂದ ಹಿಂದಿರುಗಿದರು.

ಯಾಗಾಗ್ನಿಯನ್ನು ಅತಿಶಯ ಶ್ರದ್ಧಾಭಕ್ತಿಗಳಿಂದ ಪೂಜಿಸಿ ಶಾಂತಲೆ ಲಕ್ಷ್ಮಿಯರು ಪುತ್ರಸಂತಾನಕ್ಕಾಗಿ ಬೇಡಿದ್ದರು. ಯಾಗಾಂತ್ಯದ ರಾತ್ರಿ ಶಾಂತ ಲೆಗೆ ಒಂದು ಕನಸಾಯಿತು: ತಾನೂ ಲಕ್ಷ್ಮಿಯೂ ಸಂಧ್ಯಾಸಮಯದಲ್ಲಿ ತಮ್ಮ ಪರ್ಣಕುಟಿಯ ಬಳಿ ಕುಳಿತಿದ್ದಂತೆ, ಆಗ ಅಲ್ಲಿಗೆ ಒಬ್ಬ ಮಹಾ ತೇಜಸ್ವಿಯೂ ತಪೋಧನನೂ ಆದ ಋಷಿ ಬಂದಂತೆ, ಇಬ್ಬರೂ ಆ ಋಷಿಗೆ ಸಾಷ್ಟಾಂಗವೆರಗಿ ಅನುಗ್ರಹಿಸಬೇಕೆಂದು ಬೇಡಿದಂತೆ, ಋಷಿ ಇಬ್ಬರನ್ನೂ ಆಶೀರ್ವದಿಸಿ ತನ್ನ ಕೈಯಲ್ಲಿದ್ದ ಒಂದೇ ನಾರಿಕೇಳ ಫಲವನ್ನು ಸೂಚಿಸಿ 'ನನ್ನಲ್ಲಿರುವುದು ಇದೊಂದೆ ಫಲ, ಯಾರಿಗೆ ಕೊಡಲಿ?' ಎಂದು ಕೇಳಿದಂತೆ, ತಾನು ಆಗ 'ಭಗವನ್, ಅದನ್ನು ನನ್ನ ತಂಗಿಗೇ ಕೊಡಿ' ಎಂದು ಉತ್ತರಕೊಟ್ಟಂತೆ, ಆಗ ಋಷಿ ಆ ಫಲವನ್ನು ಲಕ್ಷ್ಮಿಯ ತೆರೆದ ಕೈಗಳಲ್ಲಿಟ್ಟು, ಮಂದಹಾಸನಾಗಿ, ಆಗ್ನೇಯಾಭಿ ಮುಖನಾಗಿ ಹೋಗುತ್ತ ದೊಡ್ಡ ಬೆಂಕಿಯಂತೆ ಪ್ರಜ್ವಲಿಸಿ ಅದೃಶ್ಯನಾದಂತೆ ಕನಸು ಕಂಡಳು. ಶಾಂತಲೆ ಈ ಕನಸನ್ನು ಯಾರೊಡನೆಯೂ ಹೇಳಲಿಲ್ಲ.

ವಿಷ್ಣುವರ್ಧನನೂ ರಾಣಿಯರೂ ಸಕಲ ಪರಿವಾರದೊಡನೆ ಯಾಗಭೂಮಿ ಯಿಂದ ರಾಜಧಾನಿಗೆ ಹಿಂದಿರುಗಿದರು. ಹೊಯಿಸಳ ರಾಜ್ಯದಲ್ಲಿ ಧರ್ಮವೂ ಸುಭಿಕ್ಷವೂ ನೆಲೆಗೊಂಡವು. ಅಸೂಯಾಪರರಾದ ಸುತ್ತಮುತ್ತಲಿನ ರಾಜರು ಗಳಲ್ಲಿ, ಸಾಮಂತರುಗಳಲ್ಲಿ, ಸ್ವಭಾವತಃ ಹುಟ್ಟಿದ್ದ ನೀಚತ್ವವೂ ಬೆಳೆಸಿಕೊಂಡ ದುರಾಶೆ ಸ್ವೇಚ್ಛಂದವೃತ್ತಿಗಳೂ ತೊಲಗಲಿಲ್ಲ. ಕೆಲವು ಕಾಲಾನಂತರ ಒಳಗೊಳಗೆ ಸಂಚುಗಳನ್ನು ನಡಸುತ್ತ, ಹೊಯಿಸಳ ರಾಜರಿಗೆ ಸಲ್ಲಿಸಬೇಕಾಗಿದ್ದ ಕಪ್ಪ

ಕಾಣಿಕೆಗಳನ್ನು ಸುಳ್ಳು ಪೊಳ್ಳು ನೆಪಗಳಿಂದ ನಿಧಾನಮಾಡುತ್ತ, ಕಡಮೆ ಮಾಡುತ್ತ, ಅತ್ತ ಚಾಲುಕ್ಯರ ಸ್ನೇಹ ಸಂಪರ್ಕಗಳಿಗೆ ಒಳಒಳಗೇ ಮನತೆತ್ತರು. ಹೀಗೆ ಎದ್ದು ಕೂತವರಲ್ಲಿ ಮಲ್ಲಿಕಾರ್ಜುನನೂ ಜಯಕೇಶಿಯೂ ಮುಖ್ಯರಾದರು. ಹಾನಗಲ್ಲಿನ ಮಲ್ಲಿಕಾರ್ಜುನನು ತಗರೆಯಿಂದ ಮಾಸಣನನ್ನು ಕರೆಸಿಕೊಂಡು, ಈಸಲ ದುರ್ಗದ ರಕ್ಷಣೆಗೆ ಅವನನ್ನು ಮುಂದಿಟ್ಟುಕೊಂಡು, ತಾನು ಸ್ವತಂತ್ರ ನೆಂದು ಘೋಷಿಸಿದ. ಕುಂಜುಶೆಟ್ಟಿ ಅವನನ್ನು ಯಾವಾಗಲೊ ಬಿಟ್ಟುಹೋಗಿದ್ದ.

ರಾಜ್ಯದ ಎಲ್ಲೆಗಳನ್ನು ರಕ್ಷಿಸುವುದಕ್ಕೆ, ರಾಜಾದಾಯದ ಹಣವನ್ನು ಸಂಗ್ರಹಿಸುವುದಕ್ಕೆ, ಪ್ರಜೆಗಳ ಭಯಭೀತಿಗಳನ್ನು ಹೋಗಲಾಡಿಸುವುದಕ್ಕೆ, ರಾಜಭಕ್ತಿ ವಿಶ್ವಾಸಗಳನ್ನು ಹೆಚ್ಚಿಸುವುದಕ್ಕೆ, ನ್ಯಾಯಧರ್ಮಗಳ ಸ್ಥಾಪನೆಗೆ, ಬೊಪ್ಪಣನೂ ಕುವರನೂ ಆಗಾಗ್ಗೆ ದೇಶಾದ್ಯಂತ ಸುತ್ತಿ ಬರಬೇಕಾಯಿತು. ಕುವರನಿಗೆ ದೇಶಪರಿಚಯ ಹೀಗೆ ಹೆಚ್ಚುತ್ತ ಬಂದಿತು.

ಅಶ್ವಮೇಧಯಾಗಾನಂತರ ಪ್ರಭುಗಳು ಹೆಚ್ಚುಕಾಲ ರಾಜಧಾನಿಯ ಲ್ಲಿಯೂ ಆಗಾಗ್ಗೆ ತಲವನಪುರದ, ಬಂಕಾಪುರದ ರಾಜಧಾನಿಗಳಲ್ಲೂ ಇರುತ್ತಿ ದ್ದರು. ಇಂತಹ ಸಮಯಗಳಲ್ಲಿ ಒಂದೊಂದು ಸಲ ಶಾಂತಲೆಯೂ ಪ್ರಭುಗಳೊ ಡನೆ ಇರುತ್ತಿದ್ದಳು. ಆಗ ಲಕ್ಷ್ಮಿ ಪ್ರಧಾನರಾಜಧಾನಿಯಲ್ಲಿನ ಕಾರ್ಯಕಲಾಪ ಗಳನ್ನು ನಿರ್ವಹಿಸುತ್ತಿದ್ದಳು. ಕಿರಿಯ ರಾಣಿಯರ ಪೈಕಿ ಒಬ್ಬಳಾದ ಬಮ್ಮಲೆ ಲಕ್ಷ್ಮಿಗೆ ಸಹಾಯಕಳಾಗಿ ನಿಲ್ಲುತ್ತಿದ್ದಳು. ಬಮ್ಮಲೆ ಅಶ್ವಹೃದಯವನ್ನು ಬಲ್ಲ ಜಾಣೆ. ಕುದುರೆಸವಾರಿಯಲ್ಲಿ ನಿಪುಣೆ. ಉತ್ಕೃಷ್ಟವಾದ ಕುದುರೆಗಳನ್ನು ಪಳಗಿ ಸುವ ರಾಜಾಶ್ವಶಾಲೆ ಬಮ್ಮಲದೇವಿಯ ಮೇಲ್ವಿಚಾರಣೆಯಲ್ಲಿತ್ತು.

ಶಾಂತಲಾ ವಿಷ್ಣುವರ್ಧನರ ಅನುರಾಗ ದಿನದಿನಕ್ಕೂ ಮಧುರ ಮಧುರ ವಾಗಿ ಬೆಳೆಯತೊಡಗಿತು. ಒಬ್ಬರನ್ನೊಬ್ಬರು ಕೆಲವೇ ದಿನಗಳಾದರೂ ಅಗಲಿರ ಲಾರದೆಹೋದರು. ಇಷ್ಟೆಲ್ಲ ಇದ್ದರೂ ಶಾಂತಲೆಗೆ ಒಂದು ಚಿಂತೆ ಮಾತ್ರ ಇದ್ದೇ ಇದ್ದಿತು. ಅದು ಅತ್ತೆ ಹೇಳಿದ್ದ ಮಾತು: 'ಹೊಯಿಸಳ ರಕ್ತವನ್ನು ಬತ್ತಿಹೋಗ ಗೊಡಬೇಡ. ವಂಶವೃಕ್ಷವನ್ನು ಕಾಪಾಡಿಕೊಂಡು ಬರುವ ಭಾರ ನಿನ್ನದು' ಎಂದದ್ದು. ಇದರೊಂದಿಗೆ ಶಾಂತಲೆಗೆ ಅಂದು ಯಾಗಾಂತ್ಯದ ದಿನ, ರಾತ್ರಿಯ ಕೊನೆಯ ಜಾವದಲ್ಲಿ ಕಂಡ ಕನಸೂ ಕೂಡಿದ್ದಿತು. ತನಗೆ ಇನ್ನು ಸಂತಾನ ಭಾಗ್ಯವಿಲ್ಲವೆಂದು ಶಾಂತಲೆಗೆ ದೃಢವಾಯಿತು. 'ಅಶ್ವಮೇಧವೇ ಲಕ್ಷ್ಮಿಯ

ಪುತ್ರಕಾಮೇಷ್ಟಿಯಾಯಿತು, ಅಗ್ನಿಯೆ ಲಕ್ಷ್ಮಿಗೆ ವರವಿತ್ತಿರುವನು, ಅದು ಸಾರ್ಥಕವಾಗುವಂತೆ ತಾನೂ ಪ್ರಯತ್ನಿಸಬೇಕು' ಎಂದು ಅವಳ ಮನಸ್ಸಿಗೆ ಬೋಧೆಯಾಯಿತು. ಒಂದು ದಿನ ಪ್ರಭುಗಳೊಡನೆ ಬಂಕಾಪುರದಲ್ಲಿ ಏಕಾಂತ ದಲ್ಲಿದ್ದಾಗ ಮತ್ತೊಮ್ಮೆ ಶಾಂತಲೆ ಹಿಂದಿನ ಪ್ರಸಂಗವನ್ನು ಪ್ರಸ್ತಾಪಿಸಿದಳು.

ವಿಷ್ಣುವರ್ಧನ: 'ಅಯ್ಯೋ ಮುಗ್ಧೆ, ಪುನಃ ಅದೇ ಮಾತುಗಳನ್ನಾಡುತ್ತಿ ದ್ದೀಯೆ. ನಾನು ನಿನ್ನೊಂದಿಗೆ ಎಷ್ಟು ವಿಶ್ವಾಸದಿಂದಿರುವೆನೊ ಅಷ್ಟೇ ವಿಶ್ವಾಸ ದಿಂದ ಲಕ್ಷ್ಮಿಯ ಬಳಿಯಲ್ಲಿಯೂ ಇರುತ್ತೇನೆ. ಇದನ್ನು ನೀನು ಕಾಣೆಯ? ಒಳ್ಳೆಯದು, ಇನ್ನೊಮ್ಮೆ ನಾವು ಇಲ್ಲಿಗೆ ಬರುವಾಗ್ಗೆ ಲಕ್ಷ್ಮಿಯೂ ಒಡನೆ ಬರಲಿ, ಇರಲಿ.'

'ಪ್ರಭು, ನನಗೂ ಲಕ್ಷ್ಮಿಗೂ ಯಾವ ಭೇದಭಾವವೂ ಇಲ್ಲವಲ್ಲ.'

'ಅದನ್ನು ನಾನರಿಯೆನೆ?'

'ಅವಳೂ ಕೆಲಕಾಲ ನಿಮ್ಮ ಪಟ್ಟದ ರಾಣಿಯಾಗಿರಲಿ.'

'ಶಾಂತಲೆ, ಆ ಮಾತು ಶಿಷ್ಟವಿರುದ್ಧ, ಸಾಧ್ಯವಲ್ಲವೆಂದು ನಿನಗೆ ಹಿಂದೆ ಹೇಳಿದ್ದೆ. ನಾನಾಗಲಿ, ನೀನಾಗಲಿ, ಲಕ್ಷ್ಮಿಯೆ ಆಗಲಿ, ಯಾರೆ ಆಗಲಿ ಜನರ ಬಾಯಿಗೆ ಸಿಕ್ಕಬಾರದು. ನನ್ನ ಶಾಂತಲೆಯ ವಿಷಯದಲ್ಲಿ ನನ್ನವರೆ ಆಗಲಿ, ಅನ್ಯರೆ ಆಗಲಿ, ನನಗೆ ಅಹಿತರೆ ಆಗಲಿ ಅನುಚಿತವನ್ನು ಆಡಬಾರದು. ಅದರಿಂದ ನನಗೆ ಬಹು ಬಾಧೆಯಾದೀತು. ದೇವಿ, ನೀನು ಪಟ್ಟಮಹಿಷಿಯಾಗಿರುವಾಗ ನಿನ್ನ ಪಟ್ಟವನ್ನು ಕಿತ್ತು ಇನ್ನೊಬ್ಬರಿಗೆ ಕೊಟ್ಟರೆ, ದುಷ್ಟ ಜನರು ಇಲ್ಲದ ಸಲ್ಲದ ಕಾರಣಗಳನ್ನು ಕಲ್ಪಿಸಿ ಹರಟಬಹುದು. ಇದು ಲೋಗರ ಸ್ವಭಾವ. ರಜಕ ನೊಬ್ಬನು ಆಡಿದ ಮಾತಿಗೆ ಸೀತಾಮಾತೆಯ ಪರಿತ್ಯಾಗವೆ ಆಯ್ತಲ್ಲವೆ? ಅರಿಯೆಯಾ? ಈಗ ನಾವು ನಾವೇ ವಿಚಾರಮಾಡಿ ನೋಡೋಣ. ಲಕ್ಷ್ಮಿಗೆ ಈಗ ಏನು ಕೊರತೆ? ನನ್ನ ಸುಕೃತದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಲಕ್ಷ್ಮಿ ನಿನಗಿಂತ ಯಾವ ಭಾಗದಲ್ಲೂ ಕಡಮೆಯೆಂದು ನಾನು ಎಣಿಸಿಲ್ಲ, ನಡೆದುಕೊಂಡಿಲ್ಲ.'

'ಅದನ್ನು ನಾನು ಬಲ್ಲೆ, ಚೆನ್ನಾಗಿ ಬಲ್ಲೆ. ನನ್ನ ತಂಗಿಯೂ ಎಲ್ಲ ವಿಷಯಗಳಲ್ಲಿ ತೃಪ್ತಳೆ ಆಗಿದ್ದಾಳೆ.'

'ಮತ್ತೆ ಹೆಸರಿಗೆ ಈ ಪಟ್ಟವಿಲ್ಲದುದರಿಂದ ಬಂದಿರುವ ಕೊರತೆಯೇನು?

ಅವಳು ನಿನಗೆ ಅನ್ಯಥಾ ಅಲ್ಲವೆಂದು ತಿಳಿದುಬಂದ ಮೇಲೆ ನನ್ನ ಹೃದಯದಲ್ಲಿ ನಿಮ್ಮಿಬ್ಬರಿಗೂ ಸಮಾನಸ್ಥಾನವನ್ನು ಕೊಟ್ಟೆ. ದೇವಿ, ನಿನ್ನ ತಂಗಿಯನ್ನು ನೀನು ಅರಿತಿರುವುದಕ್ಕಿಂತ ನಾನೇ ಈಗ ಚೆನ್ನಾಗಿ ಅರಿತಿದ್ದೇನೆ. ನಿನ್ನ ಪಟ್ಟವನ್ನು ಅವಳು ಧರಿಸಲು ಒಪ್ಪಳು, ಸರ್ವಥಾ ಒಪ್ಪಳು. ಅವಳ ಮನಸ್ಸು ದೊಡ್ಡದು. ನೀನು ಊಹಿಸಿರುವುದಕ್ಕಿಂತ ದೊಡ್ಡದು. ಈ ಕೊರಗು ನಿನ್ನ ಮನಸ್ಸಿನಲ್ಲಿ ಇಷ್ಟು ದಿನಗಳಿಂದಲೂ ಏಕೆ ಉಳಿದಿದೆ? ನನ್ನ ವಿಷಯದಲ್ಲಿ ಅನುಮಾನವೆ? ವೃಥಾ ವ್ಯಥೆಯನ್ನು ಏಕೆ ಕಲ್ಪಿಸಿಕೊಳ್ಳುತ್ತಿದ್ದೀಯೆ? ಇನ್ನು ಮೇಲೆ ಲಕ್ಷ್ಮಿ ಯಾವಾಗಲೂ ನಮ್ಮೊಟ್ಟಿಗೇ ಇರಲಿ. ಇನ್ನು ಸಮಾಧಾನ ಮಾಡಿಕೊ.'

ಶಾಂತಲೆಗೆ ಬಾಯಿಕಟ್ಟಿದಂತಾಯಿತು. 'ನನ್ನ ಹೃದಯದ ಕಾತರವನ್ನು ಪ್ರಭುಗಳಿಗೆ ಹೇಗೆ ವ್ಯಕ್ತಪಡಿಸಲಿ? ವ್ಯಕ್ತಪಡಿಸದೆ ಹೇಗೆ ಇರಲಿ? ಪ್ರಭು ನನ್ನ ಹೃದಯವನ್ನು ಅರಿತುಕೊಳ್ಳಲು ಅಸಮರ್ಥರೆ? ಅತ್ತೆಯವರ ಮಾತನ್ನು ನಾನು ಹೇಗೆ ಉಳಿಸಿಕೊಳ್ಳಲಿ? "ಸತ್ತು ಸ್ವರ್ಗಕ್ಕೆ ಹೋದರೂ ನನ್ನ ಆತ್ಮಕ್ಕೆ ಶಾಂತಿ ಯಿರದು" ಎಂದು ಅತ್ತೆಯವರು ನುಡಿದು ಮಡಿದರಲ್ಲ! ಈ ನನ್ನ ಭಾರವನ್ನು ಹೇಗೆ ನೀಗಿಕೊಳ್ಳಲಿ?' ಎಂಬ ನಾನಾ ದುಃಖವಿಚಾರಗಳು ಶಾಂತಲೆಯ ಮನಸ್ಸಿನ ನೆಮ್ಮದಿಯನ್ನು ಕಲಕಿದವು.

ಶಾಂತಲೆ ಮಾತು ನಿಲ್ಲಿಸಿದುದನ್ನು ಕಂಡು ಪ್ರಭು ಆಶ್ಚರ್ಯಪಟ್ಟು 'ಲಕ್ಷ್ಮಿ ಯನ್ನು ಇನ್ನುಮೇಲೆ ಒಡನೆ ಕರೆದು ತಾ ಎಂದ ಮೇಲಲ್ಲವೆ ದೇವಿಗೆ ಸಮಾ ಧಾನವಾಯಿತು! ಆಹಾ! ಬೆನ್ನಲ್ಲಿ ಹುಟ್ಟಿದವಳಲ್ಲದಿದ್ದರೂ, ರಕ್ತಸಂಬಂಧ ಕ್ಕಿಂತ ದೃಢವಾದ ಇಂಥ ಸೋದರಪ್ರೇಮ ನಾನು ಕಂಡು ಕೇಳಿದುದೆ ಇಲ್ಲ!' ಎಂದು ಆನಂದಪಟ್ಟರು.

ಆ ರಾತ್ರಿ ಶಾಂತಲೆ ಬಗೆಹರಿಯದ ಚಿಂತೆಗೆ ಗುರಿಯಾದಳು. ಅವಳ ಮನಸ್ಸಿನಲ್ಲಿದ್ದುದು ಲಕ್ಷ್ಮಿಗೆ ಪಟ್ಟಕಟ್ಟಿಸಿ ನೋಡಬೇಕೆಂಬುದಲ್ಲ; 'ಲಕ್ಷ್ಮಿಗೆ ಒಂದು ಪುತ್ರಸಂತಾನವಾದರೆ ಹೊಯ್ಸಳ ವಂಶ ಉಳಿದಂತಾಗುವುದು. ಅತ್ತೆ ಯವರ ಆತ್ಮಕ್ಕೂ ತೃಪ್ತಿಯಾಗುವುದು. ಲಕ್ಷ್ಮಿ ಪಟ್ಟಮಹಿಷಿಯಾಗದೆ ಅವಳಿಗೆ ಪುತ್ರಸಂತಾನವಾದರೂ, ಆ ಸಂತಾನಕ್ಕೆ ಸಿಂಹಾಸನವನ್ನೇರುವ ಭಾಗ್ಯ ಬರು ವುದೊ ಇಲ್ಲವೊ? ಪ್ರಭುಗಳಾದರೂ ಕುವರನನ್ನೇ ಸಿಂಹಾಸನಕ್ಕೆ ಅರ್ಹನೆಂದು ನಿಶ್ಚಯಿಸಿರುವರು. ಪ್ರಭುಗಳಿಗೆ ಕರ್ತವ್ಯದೃಷ್ಟಿ ಇದೆ, ಧರ್ಮದೃಷ್ಟಿ ಇದೆ.

ತನ್ನ ರಕ್ತವೇ ರಾಜ್ಯವಾಳಬೇಕೆಂಬ ಸ್ವಾರ್ಥ ಅವರಿಗಿಲ್ಲ. ಯಾರು ದಕ್ಷರೊ, ಧರ್ಮಿಗಳೊ, ವೀರರೊ ಅಂತಹವರಿಗೇ ತಮ್ಮ ಸಿಂಹಾಸನವನ್ನು ಮೀಸಲಾಗಿ ಇಟ್ಟಿರುವರು. ವಿಶ್ವದ ಎಂಟು ಮೂಲೆಗಳನ್ನು ಹುಡುಕಿದರೂ ಕುವರನಂತಹವರು ಸಿಗಲಾರರು. ದಿಟ್ಟ ಆಣಿಮುತ್ತಿನಂತಹವನು ನನ್ನ ತಮ್ಮ. ಪ್ರಭುತಾ ಶಕ್ತಿ ಯುಳ್ಳವನು. ಪ್ರಜೆಗಳೆಲ್ಲರ ಆದರ ವಿಶ್ವಾಸಗಳಿಗೆ ಪಾತ್ರನಾದವನು. ಇಂತಹ ವನನ್ನು ಆರಿಸಿಟ್ಟಿರುವ ನಿರಭಿಮಾನಿಯಾದ ಪ್ರಭುವಿನ ಮನಸ್ಸನ್ನು ನನ್ನ ಚಪಲದಿಂದ ಕಲಕುವುದು ಸರ್ವಥಾ ಅಪರಾಧ. ಆದರೆ,—ಅತ್ತೆಯವರ ಆಶೆ ಯನ್ನು ಈಡೇರಿಸುವ ದಾರಿ? ಅತ್ತೆಯವರ ಆತ್ಮ ಎಷ್ಟು ನೋಯುವುದೊ! ಬೇಯುವುದೊ! ನನ್ನ ಅತ್ತೆಯವರ ಆತ್ಮ ತಿಳಿವಳಿಕೆ ಇಲ್ಲದ ಆತ್ಮವೆ? ಅಲ್ಲ ವಲ್ಲ. ಸಂಸ್ಕಾರಶುದ್ಧವಾದ ಆತ್ಮವದು. ದೇಶಹಿತವನ್ನೆ ಧ್ಯೇಯವನ್ನಾಗಿ ಬೆಳಸಿಕೊಂಡಿದ್ದ ಆತ್ಮವದು. ಆ ಸಂತ ಆತ್ಮಕ್ಕೆ, ಕುವರನು ಸಿಂಹಾಸನವನ್ನೇರಿ ದರೆ, ಅತೃಪ್ತಿಯಾಗುವುದೆ? ಆಗಲಾರದು. ನನ್ನ ಮನಸ್ಸಿನ ಭಯಗಳು ವೃಥಾ, ವೃಥಾ. ನನ್ನ ತಮ್ಮನಿಗೇ ಸಿಂಹಾಸನ ಬರಲಿ . . . ಆದರೆ ಲಕ್ಷ್ಮಿಗೆ ಸಂತಾನ ಉಂಟಲ್ಲವೆ! ಅಗ್ನಿಯ ವರ ತಪ್ಪುವುದೆ? ಆ ಸಂತಾನಕ್ಕೆ ಮುಂದಿನ ಸ್ಥಾನ ಮಾನಗಳೇನು? ನಮ್ಮ ದಿನಗಳು ಕಳೆದ ಮೇಲೆ ಲಕ್ಷ್ಮಿಯ ಸಂತಾನ ತನ್ನ ದೆಂದು ಸಿಂಹಾಸನಕ್ಕೆ ಹೊಡೆದಾಡಿದರೆ? ದೇಶದಲ್ಲಿ ಕಕ್ಷಿ ಪ್ರತಿಕಕ್ಷಿಗಳು ಎದ್ದರೆ? ರಾಜ್ಯದಲ್ಲಿ ಕ್ಷೋಭೆಯುಂಟಾದರೆ? ಅಯ್ಯೊ! ಇದೆಲ್ಲವನ್ನು ಯೋಚಿಸಿದರೆ, ಮನಸ್ಸಿಗೆ ಎಷ್ಟು ಅನುಮಾನಗಳು, ಎಷ್ಟು ಭೀತಿಗಳು ತೋರಿಬರುವುವು? ನಾರಾಯಣ, ನೀನೇ ಗತಿ, ನೀನೇ ಬಲ್ಲೆ. ನಿನ್ನ ಸಂಕಲ್ಪವಿದ್ದಂತೆ ನಡೆಯು ವುದು' ಎಂದು ಶಾಂತಲೆ ರಾತ್ರಿಯೆಲ್ಲ ಪೇಚಾಡುತ್ತಿದ್ದಳು.

§

ವರ್ಷಾಕಾಲಕ್ಕೆ ಮೊದಲೆ ಶಾಂತಲೆ ತನ್ನ ಸ್ವಂತ ಪರಿವಾರದೊಂದಿಗೆ ದ್ವಾರವತಿಗೆ ಹಿಂದಿರುಗಿದಳು. ಆರೆಂಟು ದಿನಗಳೊಳಗೆ ಬರುತ್ತೇನೆಂದು ಹೇಳಿ ಪ್ರಭುಗಳು ಶಾಂತಲೆಯನ್ನು ಮುಂದಾಗಿ ರಾಜಧಾನಿಗೆ ಕಳಿಸಿಕೊಟ್ಟಿದ್ದರು.

ದ್ವಾರವತಿಗೆ ಬಂದ ಮೇಲೂ ಶಾಂತಲೆಯ ಮನಸ್ಸು ಸಮಾಧಾನಕ್ಕೆ ಬರಲಿಲ್ಲ. ಸರ್ವವಿಧದಲ್ಲೂ ಕುವರನೇ ಈ ಸಿಂಹಾಸನಕ್ಕೆ ಅರ್ಹನೆಂಬ ನಿರ್ಧಾ

ರವೂ ಅವಳ ಮನಸ್ಸಿಗೆ ಬಂದಿತ್ತು. 'ಪ್ರಭುಗಳೂ ಈ ನಿಶ್ಚಯದಿಂದಲೆ ಇದ್ದಾರೆ, ಅವರ ಮನಸ್ಸನ್ನು ಯಾವ ವಿಧದಲ್ಲೂ ನೋಯಿಸಬಾರದು' ಎಂದಿತ್ತು ಅವಳ ಮನಸ್ಸು. ಆದರೆ, ಈಗ ಒಂದು ಹೊಸ ಅಧೈರ್ಯ ಅವಳ ಮನಸ್ಸಿನಲ್ಲಿ ಹುಟ್ಟಿ ಕೊಂಡಿತ್ತು: 'ದೈವದ ಆಶೀರ್ವಾದ ಸುಳ್ಳಾಗದು. ಲಕ್ಷ್ಮಿಗೆ ಪುತ್ರಸಂತಾನ ವಾದರೆ, ಆ ಸಂತಾನದ ಸ್ಥಾನಮಾನವೇನು? ರಾಜಮನೆತನದಲ್ಲಿ ಅಂತಃಕಲಹ ಗಳು ಹುಟ್ಟಿಕೊಂಡು ಹೊಯ್ಸಳ ರಾಜ್ಯಕ್ಕೇ ಹಾನಿ ಬಂದರೆ?' ಎಂದು.

ಶಾಂತಲೆ ದ್ವಾರವತಿಯನ್ನು ಸೇರಿದಾಗ ರಾತ್ರಿಯಾಗಿತ್ತು. ದ್ವಾರವತಿ ನಿದ್ರೆಯಲ್ಲಿತ್ತು. ಬೇಸಗೆಯ ದಿನಗಳಾದ್ದರಿಂದ, ಚಂದ್ರಿಕೆಯ ಆಮೋದವನ್ನು ಸವಿ ಯುತ್ತ ಪುರಜನರು, ಮನೆಯ ಹೊರಗೆ ಜಗುಲಿಗಳ ಮೇಲೆ, ಮಂಟಪಗಳಲ್ಲಿ, ದೇವಾಲಯದ ವಿಶಾಲ ಆವರಣಗಳಲ್ಲಿ ಮಲಗಿದ್ದರು. ಕುವರನು ತನ್ನನ್ನು ಚಿಕ್ಕಂದಿ ನಿಂದಲೂ ಹೊತ್ತು, ಎತ್ತಿ, ಆಡಿಸಿ ಬೆಳಸಿದ ವೃದ್ಧ ಲಕ್ಕಣನೊಡನೆ ಮಾತನಾಡುತ್ತ ಶಾಂತಲೇಶ್ವರ ಆಲಯದ ನಂದಿಮಂಟಪದಲ್ಲಿ ಮಲಗಿಕೊಂಡು, ಜ್ಯೋತ್ಸ್ನಾ ಮೃತ ಅಭಿಷಿಕ್ತ ದೇವಾಲಯದ ಸೊಬಗನ್ನು ನೋಡಿ ಆನಂದಪಡುತ್ತಿದ್ದ. ಲಕ್ಕಣ ಕೇಳಿದ: 'ನಿದ್ದೆ ಬರಲಿಲ್ಲವೆ ಒಡೆಯ? ಕೈಕಾಲು ಒತ್ತಲೆ?' ಎಂದು.

'ಬೇಡ ಲಕ್ಕಣ್ಣ. ನಿದ್ದೆ ಬರುತ್ತದೆ, ಬರುವ ಹಾಗೆ ಇದೆ. ಅದೇನು ನೀ ಕೊಟ್ಟ ಗುಳಿಗೆ! ಕೆಮ್ಮಿಗೆ ಒಳ್ಳೆಯದೆಂದೆ, ಕೆಮ್ಮೇನೊ ನಿಂತಿತು. ತಲೆ ಮಾತ್ರ ಗಿರ್ರೆಂದು ಸುತ್ತುತ್ತಿದೆ.'

'ಸ್ವಲ್ಪ ಹೊತ್ತು ಹಾಗೆಯೆ ಆಗುತ್ತೆ, ಒಡೆಯ. ಅದು ಮಾತ್ರೆಯ ತೀಕ್ಷ್ಣ. ನಿದ್ದೆ ಬಂದರೆ ಚಂದ್ರಲೋಕಕ್ಕೇ ಒಯ್ಯುತ್ತೆ ಆ ಗುಳಿಗೆ. ಗಂಟಲಲ್ಲಿ ಕಫ ಕಟ್ಟಿದ್ದರೆ, ಅದಕ್ಕೆ ರಾಮಬಾಣ ಆ ಗುಳಿಗೆ.

ಲಕ್ಕಣ ಭಿಷಗ್ಮಣಿ ಭಾಸ್ಕರ ಪಂಡಿತರ ಪರಮಶಿಷ್ಯ. ಕುವರನು ಗುರುಗಳ ಆಶ್ರಮದಲ್ಲಿರುತ್ತ ಶಸ್ತ್ರ, ಶಾಸ್ತ್ರಾಭ್ಯಾಸಗಳನ್ನು ಮಾಡುತ್ತಿದ್ದ ಸಮಯದಲ್ಲಿ, ಈ ಲಕ್ಕಣ ತನಗೆ ಏನೂ ಕೆಲಸವಿಲ್ಲದುದರಿಂದ ಭಿಷಗ್ಮಣಿ ಭಾಸ್ಕರ ಪಂಡಿತರ ಮನೆ ಯಲ್ಲಿ ಸೇವಾವೃತ್ತಿಯನ್ನು ತಾನಾಗಿಯೆ ಬೇಡಿ ಕಲ್ಪಿಸಿಕೊಂಡು, ಕಷಾಯ, ಭಸ್ಮ, ಚೂರ್ಣ, ಅವಲೇಹ, ಆಸವ, ಅರಿಷ್ಟ, ತೈಲಗಳನ್ನು ಪಂಡಿತರು ಹೇಳಿ ದಂತೆ ಸಿದ್ಧಪಡಿಸಿ, ಸಿದ್ಧಪಡಿಸಿ, ಅನುಭವಪಡೆದ. ಲಕ್ಕಣನ ಒಳ್ಳೆಯ ಗುಣ ಗಳನ್ನು ಪಂಡಿತರೂ ಮೆಚ್ಚಿಕೊಂಡು, ಆಗಾಗ್ಗೆ ಅವನಿಗೆ ಒಂದೆರಡು ಚುಟುಕ

ವೈದ್ಯಗಳನ್ನು ಹೇಳಿಕೊಡುತ್ತ, ಅವನನ್ನು ಧನ್ವಂತರಿಯಲ್ಲದಿದ್ದರೂ ಒಬ್ಬ ಅಳಲೆಕಾಯಿ ಪಂಡಿತನನ್ನಾಗಿ ಮಾಡಬೇಕೆಂದಿದ್ದರು. ಆದರೆ ಲಕ್ಕಣನ ಮನಸ್ಸಿನಲ್ಲಿ ನಿಂತ ಔಷಧಿಗಳ ತೆರನೇ ಬೇರೆಯಾಯಿತು. ವಿಷಮೂಲಿಕೆಗಳ, ವಿಷಫಲಗಳ, ವಿಷಧಾತುಗಳ, ವಿಷದ್ರವ್ಯಗಳ, ಶುದ್ಧಿ, ಪ್ರಮಾಣ, ಪ್ರಯೋಗ ಇವುಗಳಲ್ಲಿ ನಿಪುಣನಾಗಿಬಿಟ್ಟ. ಪಂಡಿತರು ಅವನ ವಕ್ರಮಾರ್ಗವನ್ನು ಕಂಡು ತಮ್ಮ ಬೋಧೆಯನ್ನು ಅಲ್ಲಿಗೆ ನಿಲ್ಲಿಸಿದರು. ನಿಲ್ಲಿಸಿದರೇನಾಯಿತು! ಅಷ್ಟು ಹೊತ್ತಿಗೆ ಲಕ್ಕಣ ಸುತ್ತುಮುತ್ತಲಿನ ಗ್ರಾಮವಾಸಿಗಳಿಗೆ ಧನ್ವಂತರಿ ಆಗಿಯೇ ಹೋಗಿದ್ದ. ಭಾಸ್ಕರ ಪಂಡಿತರು 'ಹುಂ! ನಾನು ಹೇಳಿಕೊಟ್ಟದ್ದು ಒಂದಾದರೆ, ಅವನು ಕಲಿತದ್ದೇ ಬೇರೊಂದು' ಎಂದರು.

ಅಕ್ಕನು ಊರಿಗೆ ಬಂದ ಸಂಗತಿಯನ್ನು ಸೇವಕನೊಬ್ಬನು ಆಗ ಕುವರ ವಿಷ್ಣುವಿಗೆ ಬಂದು ತಿಳಿಸಿದ. ಕುವರನು ಅದನ್ನು ಕೇಳಿ ಎದ್ದು ಕುಳಿತುಕೊಳ್ಳುವುದಕ್ಕೆ ಹೋದಾಗ ಅವನ ತಲೆ ಇನ್ನೂ ಗಿರ್ರೆಂದು ಸುತ್ತುತ್ತಲೆ ಇತ್ತು. 'ದೂರ ಪ್ರಯಾಣದಿಂದ ಅಕ್ಕ ಬಳಲಿರಬೇಕು. ನಾನೀಗ ಅಲ್ಲಿಗೆ ಹೋದರೆ ನಿದ್ದೆಕೆಟ್ಟು ರಾತ್ರಿಯೆಲ್ಲ ಹರಟುತ್ತ ಕುಳಿತುಕೊಳ್ಳುವಳು, ಅಕ್ಕನ ಆಯಾಸಪರಿಹಾರದ ನಿದ್ದೆಗೆ ನಾನು ಲೋಪ ತಂದಂತಾಗುವುದು, ಆದ್ದರಿಂದ ಬೆಳಗಾದ ಮೇಲೆ ನೋಡುವುದೆ ಸರಿ' ಎಂದುಕೊಂಡು, ಚಂದ್ರಮಂಡಲವನ್ನೇ ನೋಡುತ್ತ ಮಲಗಿದ.

ಅತ್ತ ಶಾಂತಲೆ ರಾತ್ರಿ ಚೆನ್ನಾಗಿ ನಿದ್ದೆಮಾಡಿ, ಪ್ರಾತಃಕಾಲ ಬೇಗನೆ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿ, ಸ್ನಾನಮಾಡಿ, ಮಡಿಯುಟ್ಟು, ಶ್ರೀ ಶಾರದೆಯ ಪೂಜೆಯನ್ನು ಮುಗಿಸುತ್ತಿದ್ದಾಗ 'ಅಕ್ಕ, ಅಪ್ಪಾಜಿಯವರು ಏಕೆ ಬರಲಿಲ್ಲ? ಯಾವಾಗ ಬರುತ್ತಾರೆ?' ಎನ್ನುತ್ತ ಕುವರವಿಷ್ಣು ಒಳಕ್ಕೆ ಬಂದು, ಅಕ್ಕ ಪೂಜೆಯಲ್ಲಿರುವುದನ್ನು ಕಂಡು ಶಾರದೆಗೂ ಅಕ್ಕನಿಗೂ ನಮಸ್ಕರಿಸಿ, ಒಂದು ಸುಖಾಸನದ ಮೇಲೆ ಕುಳಿತುಕೊಂಡ. ಶಾಂತಲೆ ಪೂಜೆ ಮುಗಿಸಿ ತೀರ್ಥ ಪ್ರಸಾದಗಳನ್ನು ಕುವರನಿಗೆ ಕೊಟ್ಟು, ತಾನೂ ತೆಗೆದುಕೊಂಡು, ಅನಂತರ ಅವನನ್ನು ನೋಡಿ ಸಂತೋಷದಿಂದ ಸ್ಮಿತವದನೆಯಾಗಿ 'ನಿನ್ನ ಅಪ್ಪಾಜಿಯವರು ಆರೆಂಟು ದಿನಗಳಲ್ಲಿ ಬರುತ್ತಾರೆ. ನೀನು ಸೌಖ್ಯವೆ? ಸೋವಲೆ ಹೇಗಿದ್ದಾಳೆ?' ಎಂದು ಕೇಳಿದಳು.

'ದಂಡಿಯಾಗಿದ್ದಾಳೆ. ನಾನೂ ಇದ್ದೇನೆ. ಅವಳು ನನ್ನೊಂದಿಗೆ ಬರುವವಳಿದ್ದಳು, ಆದರೆ ಅವಳ ಕೆಲಸಗಳು ಮುಗಿಯಬೇಕಲ್ಲ. ಅದೇನು ಕೆಲಸಗಳೊ! ಮುಟ್ಟಿದ್ದೆ ಮುಟ್ಟುವುದು, ತೊಳೆದದ್ದೆ ತೊಳೆಯುವುದು. ಅವಳ ಕೆಲಸಗಳಾಗುವವರೆಗೂ ಕಾಯುತ್ತ ನಾನು ಕುಳಿತಿದ್ದರೆ, ನಿನ್ನನ್ನು ಮಧ್ಯಾಹ್ನದ ತನಕ ನೋಡಲಾಗುತ್ತಿರಲಿಲ್ಲ. ಅಕ್ಕ, ಅವಳು ಹೋದ ಜನ್ಮದಲ್ಲಿ ಬಸವನ ಹುಳು ಆಗಿದ್ದಿರಬೇಕು! ಹೇಳಕ್ಕ, ಆ ನಿಮ್ಮ ಹೊಸ ರಾಜ್ಯ, ಹೊಸ ಜನ ಹೇಗೆ?'

'ನಿನ್ನ ಅಪ್ಪಾಜಿಯವರಿಗೆ ಒಂದು ಸಾವಿರ ಕೆಲಸ. ಒಂದು ಮುಗಿಯುವುದರೊಳಗೆ ಇನ್ನೈದು ಪ್ರಾಪ್ತ. ಇಂದು ಹೊರಡೋಣ, ನಾಳೆ ಹೊರಡೋಣ ಎನ್ನುವುದರಲ್ಲೆ ಒಂದು ತಿಂಗಳು ಕಳೆಯಿತು.'

'ಅಕ್ಕ, ನಿನ್ನೆ ರಾತ್ರಿ ನಾನೊಂದು ಕನಸು ಕಂಡೆ. ಅದನ್ನೆ ಹೇಳಲು ಇಷ್ಟು ಅವಸರದಿಂದ ಬಂದೆ. ಎಂತಹ ವಿಚಿತ್ರವಾದ, ಎಷ್ಟು ಅದ್ಭುತವಾದ ಕನಸದು!'

'ಅಷ್ಟು ಅದ್ಭುತವಾದ ಕನಸೆ! ಹೇಳು ನನ್ನಯ್ಯ, ಕೇಳುತ್ತೇನೆ.'

ಶಾಂತಲೆ ಒಂದು ಸುಖಾಸನದಲ್ಲಿ ಕುಳಿತಳು. ಕುವರವಿಷ್ಣು ಹೇಳಲು ಉಪಕ್ರಮಿಸಿದ.

§

ಕನಸೆಂದೆನೆ! ಕನಸಲ್ಲ ಅಕ್ಕ ಅದು, ನಾನು ಕಣ್ಣು ತೆರೆದುಕೊಂಡೇ ಇದ್ದೆ . . . . ಹೊಯಿಸಳೇಶ್ವರ, ಶಾಂತಲೇಶ್ವರ ದೇವಾಲಯಗಳನ್ನು ಕಟ್ಟಿ ಮುಗಿಸಿದ್ದರು. ಎರಡು ಆಲಯಗಳ ಪೂರ್ವಮುಖದಲ್ಲಿರುವ ದೊಡ್ಡ ದೊಡ್ಡ ನಂದಿಮಂಟಪಗಳನ್ನೂ ಕಟ್ಟಿ ಆಗಿತ್ತು. ನಂದಿಗಳು ಮಾತ್ರ ಸಿದ್ಧವಾಗಿರಲಿಲ್ಲ. ಅದಕ್ಕೆ ತಕ್ಕ ಘನ ಶಿಲೆಗಳು ಸಿಗದಿದ್ದುದೇ ಕಾರಣ. ಆಗ ಅಪ್ಪಾಜಿಯವರು 'ಯಾರೇ ಆಗಲಿ, ಇಷ್ಟು ದೊಡ್ಡ ಪ್ರಮಾಣದ ಮೆತು ಶಿಲೆಗಳನ್ನು ಸುತ್ತಮುತ್ತ ಪ್ರದೇಶಗಳಲ್ಲಿ ಎರಡು ಮೂರು ಹರಿದಾರಿಗಳ ದೂರದೊಳಗೆ ಎಲ್ಲಿ ಹುಡುಕಿ ಕೊಟ್ಟರೂ, ಅವರಿಗೆ ಹತ್ತುಹತ್ತು ಹೊನ್ನು ಗದ್ಯಾಣಗಳ ಬಹುಮಾನ ಕೊಡುವೆ'ವೆಂದು ಸಾರಿದರಲ್ಲವೆ? ಅದನ್ನು ನೀನೂ ಬಲ್ಲೆ. ಜನರು ಅಂತಹ ಶಿಲೆಗಳನ್ನು ಕೊನೆಗೆ ಹುಡುಕಿ ತೆಗೆದು, ಬಹುಮಾನಗಳನ್ನು ಪಡೆದರಲ್ಲ.

ಆಗ ಭಾದ್ರಪದ ಹುಣ್ಣಿಮೆಗೆ ಇನ್ನು ಇದ್ದುದು ಎರಡೇ ತಿಂಗಳು. ಅಷ್ಟ ರಲ್ಲಿ ನಂದಿಗಳೆರಡೂ ಸಿದ್ಧವಾಗಬೇಕಾಯಿತು. ಅಪ್ಪಾಜಿಯವರು ಆ ಕೆಲಸಕ್ಕೆ ನೂರು ರೂವಾರಿಗಳನ್ನು ನೇಮಿಸಿ, ಒಂದೂವರೆ ತಿಂಗಳೊಳಗಾಗಿ ನಂದಿಗಳು ಸಿದ್ಧವಾಗಬೇಕೆಂದು ಕಟಾಜ್ಞೆ ಮಾಡಿದರು. ರೂವಾರಿಗಳು ಕಾಡಿನಲ್ಲೆ ಬಿಡಾರ ಮಾಡಿಕೊಂಡು ಆ ಬೃಹದಾಕಾರದ ನಂದಿಗಳನ್ನು ಮಹಾದೇವನ ಪ್ರತಿಷ್ಠಾಪ ನೆಗೆ ಇನ್ನೂ ಇಪ್ಪತ್ತು ದಿನಗಳಿರುವಾಗಲೆ ಸಿದ್ಧಮಾಡಿದರಲ್ಲವೆ. ಇದನ್ನೂ ನೀನು ಬಲ್ಲೆ.

ಬೃಹದಾಕಾರವಾದರೂ ಬಹು ಸುಂದರವಾದ ನಂದಿಗಳು ಅವು. ಪ್ರಕಾಂಡ ದೇಹ, ಆಕಾರಕ್ಕೆ ಸರಿಯಾದ ಅಂಗಸೌಷ್ಠವ, ಅಲಂಕಾರಗಳು, ಸರಪಳಿಗಳು, ಕಿರುಗೆಜ್ಜೆ, ಬಿರುಗೆಜ್ಜೆ ಸರಗಳು, ಕಿರುಗಂಟೆ, ಬಿರುಗಂಟೆ, ಗಳಗಂಟೆ ಸರಗಳು, ಮೈತುಂಬ ಒಡವೆಗಳು. ಮಹಾದೇವನಿಗೆ ಒಪ್ಪುವಂತಹ ವಾಹನಗಳವು. ನಾವೆಲ್ಲ ಹೋಗಿ ನೋಡಿಬಂದೆವು. ನೀನು ಆ ದಿನ ನಿಮ್ಮೂರಿನ ಧರ್ಮೇಶ್ವರನಿಗೆ ಸೇವೆಸಲ್ಲಿಸಲು ಹೋಗಿದ್ದೆ. ಆ ನಂದಿಗಳಿರುವ ಸ್ಥಳಕ್ಕೂ ನಮ್ಮ ರಾಜಧಾನಿಗೂ ಸುಮಾರು ನಾಲ್ಕು ಹರಿದಾರಿಗಳ, ಹತ್ತಿರ ಹತ್ತಿರ ಒಂದು ಗಾವುದದಷ್ಟು ದೂರ ಇತ್ತು.

ಅನಂತರ ಬಂದುದು ಕಷ್ಟ. ಆ ಮಹಾನಂದಿಗಳನ್ನು ಇಲ್ಲಿಗೆ ಸಾಗಿಸಿ ಕೊಂಡು ಬರುವುದು ಅಸಾಧ್ಯವಾಯಿತು. ಎಂಟೆಂಟು ಚಕ್ರಗಳುಳ್ಳ ಎರಡು ಮಹಾ ಶಕಟಗಳನ್ನು ಆಗಲೆ ನಿರ್ಮಿಸಿ ಆಗಿತ್ತು. ಆ ನಂದಿಗಳೆರಡನ್ನೂ ಯಾವ ಭಿನ್ನವೂ ಇಲ್ಲದೆ ಶಕಟಗಳಿಗೆ ಸಾಗಿಸಲು ಮಹಾಪ್ರಯಾಸವಾಯಿತು. ಆ ನಂದಿಗಳನ್ನು ಅಲುಗಾಡದಂತೆ ಆನೆಸೊಂಡಿಲ ಗಾತ್ರದ ಹಗ್ಗಗಳಿಂದ ಆ ಶಕಟಕ್ಕೆ ಬಿಗಿದು ಕಟ್ಟಲಾಯಿತು. ನಾಲ್ಕು ನಾಲ್ಕು ಆನೆಗಳನ್ನು ಕಟ್ಟಿ ಎಳಸಿದರು. ಇದಕ್ಕಾಗಿ ರಾಜಧಾನಿಯವರೆಗೆ ಒಂದು ಮಾರ್ಗವೆ ನಿರ್ಮಾಣ ವಾಯಿತು. ಶಕಟಗಳು ಸ್ವಲ್ಪದೂರ ಬಂದ ಮೇಲೆ ಮಳೆಯಿಂದ ನೆನೆದಿದ್ದ ಕಡೆಯ ಭೂಮಿಯಲ್ಲಿ ಶಕಟದ ಚಕ್ರಗಳು ನಂದಿಗಳ ಭಾರಕ್ಕೆ ಹೂತುಹೋದವು. ಹೆಚ್ಚು ಆನೆಗಳನ್ನು ಕಟ್ಟಿ ಎಳಸಿದರು. ಎಳೆದಷ್ಟೂ ಚಕ್ರಗಳು ಇನ್ನೂ ಇನ್ನೂ ಆಳಕ್ಕೆ ಹೂತವು. ಆನೆಗಳ ಎಳೆತಕ್ಕೆ ಶಕಟದ ಮರದ ದೂಲ ಗಳು ಕಿತ್ತು ಬಂದುವು. ಚಕ್ರಗಳು ಮಾತ್ರ ಮೇಲಕ್ಕೆ ಏಳಲೆ ಇಲ್ಲ.

ವಿಶ್ವಪ್ರಯತ್ನಪಟ್ಟಾಯಿತು, ಚಕ್ರಗಳು ಅಲ್ಲೆ ಭೂಸಮಾಧಿಯಾದುವು.

ಹೀಗಾದುದನ್ನು ಕೇಳಿ ಅಪ್ಪಾಜಿಯವರಿಗೂ ನಿನಗೂ ದಿಕ್ಕೇ ತೋರ ದಾಯಿತು. ಜನರೆಂದರು: 'ವರ್ಷಕಾಲ ಮುಗಿಯುವತನಕ ಈ ನಂದಿಗಳನ್ನು, ಅಲ್ಲಿಂದ ತರಲು ಸಾಧ್ಯವಿಲ್ಲ'ವೆಂದು. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ, ಅಕ್ಕ. ಇನ್ನು ಉಳಿದುದು ಐದೇ ದಿನ. ನಂದಿಗಳು ನಾಲ್ಕು ಹರಿದಾರಿ ದೂರ ದಲ್ಲೆ ಉಳಿದುವು. ಎಲ್ಲರ ಮುಖಗಳಲ್ಲಿಯೂ ನಿರಾಶಾಭಾವ ಕಂಡುಬಂದಿತು. ಅಪ್ಪಾಜಿಯವರಿಗೂ ನಿನಗೂ ಮಹಾವ್ಯಥೆಯಾಯಿತು. ಕೇತಮಲ್ಲನಾಯಕರು 'ಇಷ್ಟೆಲ್ಲವನ್ನೂ ನಡೆಸಿಕೊಟ್ಟ ದೇವರು ಈಗ ಕೈಬಿಟ್ಟನೇಕೆ?' ಎಂದು ಬಹು ಸಂಕಟಪಟ್ಟರು. ಅಪ್ಪಾಜಿಯವರಿಗಂತೂ ಮಹಾದೇವನ ಪ್ರತಿಷ್ಠೋತ್ಸವವನ್ನು ಪೂರ್ಣಗೊಳಿಸಿಯೆ ಚಾಲುಕ್ಯರ ಮೇಲೆ ದಿಗ್ವಿಜಯಕ್ಕೆ ಹೋಗಬೇಕೆಂಬ ಆಶೆ ಯಿತ್ತು. 'ಮಹಾದೇವ, ನಿನ್ನ ಆಶೀರ್ವಾದವಿಲ್ಲದಿದ್ದರೆ, ನಾನು ದಿಗ್ವಿಜಯ ಹೊರಡುವವನಲ್ಲ' ಎಂದು ಕುಳಿತುಬಿಟ್ಟರು.

ಅಪ್ಪಾಜಿಯವರೂ ನೀನೂ ವ್ರತವಿದ್ದು ಮಹಾದೇವನನ್ನು ಮನಸಾರೆ ಪೂಜಿಸಿ 'ಮಹಾದೇವ, ಈಗ ನೀನೆ ದಾರಿ ತೋರಬೇಕು' ಎಂದು ಬೇಡಿದಿರಿ. ಅಕ್ಕ, ಆ ರಾತ್ರಿ ನಿನಗೊಂದು ಸ್ವಪ್ನವಾಯಿತು: 'ನಿಮ್ಮ ಸಿದ್ಧತೆಗಳನ್ನು ನೀವು ಮಾಡಿಕೊಳ್ಳಿ, ನನ್ನ ನಂದಿಗಳನ್ನು ನಾನು ಕರಸಿಕೊಳ್ಳುತ್ತೇನೆ' ಎಂದು. ಮಹಾದೇವನೆ ನಿನ್ನ ಕನಸಿನಲ್ಲಿ ಬಂದು ಹೇಳಿದ ಈ ಮಾತು ನಂಬಲಾಗದಷ್ಟು ಆಶ್ಚರ್ಯವಾಗಿ ಕಂಡಿತು ನಿನಗೆ. ಅಪ್ಪಾಜಿಯವರೂ, ಅದೇ ರಾತ್ರಿ, ಅದೇ ಕನಸನ್ನು ಕಂಡರು: 'ನಿಮ್ಮ ಸಿದ್ಧತೆಗಳನ್ನು ನೀವು ಮಾಡಿಕೊಳ್ಳಿ, ನನ್ನ ನಂದಿ ಗಳನ್ನು ನಾನೆ ಕರಸಿಕೊಳ್ಳುತ್ತೇನೆ' ಎಂದು. 'ಇದು ಹೇಗೆ! ಹೇಗೆ ಸಾಧ್ಯ? ನಂಬುವದೆಂತು! ಇಬ್ಬರಿಗೂ ಒಂದೇ ರೀತಿಯ ಭರವಸೆ ಬಂದಿರುವುದಲ್ಲ! ಮಹಾದೇವ . . . ಈಗ ನಾವು ಕರ್ತವ್ಯಪರರಾಗುವುದೆ? ಅಥವಾ ಸುಮ್ಮನಿರು ವುದೆ?' ಎಂಬ ಶಂಕೆ ನಿಮ್ಮಿಬ್ಬರಲ್ಲಿ ಹುಟ್ಟಿತಾದರೂ, 'ನಮ್ಮ ನಂಬುಗೆಯನ್ನು ಪರೀಕ್ಷಿಸುವುದಕ್ಕಾಗಿಯೆ ಪರಶಿವನು ಹೀಗೆಂದಿರಬೇಕು. ನಂಬಿಕೆ ಇಡದಿದ್ದರೆ ದೈವದ್ರೋಹಿಗಳಾಗುವೆವು. ದೈವವನ್ನು ಪರೀಕ್ಷಿಸುವುದು ತಗದು. ಭಗವಂತನು ತನ್ನ ನಂದಿಗಳನ್ನು ಸಮಯಕ್ಕೆ ಕರೆಸಿಕೊಳ್ಳುತ್ತಾನೆ. ಇಲ್ಲದಿದ್ದರೆ ಇಬ್ಬರಿಗೂ ಒಂದೇ ರಾತ್ರಿ, ಒಂದೇ ಹೊತ್ತಿನಲ್ಲಿ ಒಂದೇ ರೀತಿಯ ಸ್ವಪ್ನವಾಗುತ್ತಿರಲಿಲ್ಲ.

ಇದನ್ನು ನಾವು ದೃಢವಾಗಿ ನಂಬಬೇಕು' ಎಂದು ನೀನು ಅಪ್ಪಾಜಿಯವರಿಗೆ ಹೇಳಿದೆ.

ನೀನೆಂದ ಮಾತಿನಲ್ಲಿ, ರೀತಿಯಲ್ಲಿ, ಅಪ್ಪಾಜಿಯವರಿಗೆ ವಿಶ್ವಾಸ ಉಂಟಾಯಿತು. 'ಸಕಲತಂತ್ರಸ್ವತಂತ್ರನು ತನ್ನ ನಂದಿಗಳನ್ನು ಹೇಗೋ ಕರಸಿಕೊಳ್ಳುವನು, ನಮ್ಮ ಎಲ್ಲ ಸಿದ್ಧತೆಗಳನ್ನು ನಾವು ಮಾಡಿಕೊಳ್ಳೋಣ' ಎಂದು ಅಪ್ಪಾಜಿಯವರೂ ಒಪ್ಪಿದರು.

'ಸತ್ಯಯುಗಗಳಲ್ಲಿ, ಧರ್ಮಯುಗಗಳಲ್ಲಿ ಇಂತಹ ದೈವಲೀಲೆಗಳನ್ನು ಆಗಿನ ಜನರು ಕಂಡದ್ದುಂಟು. ಈ ಕಲಿಯುಗದಲ್ಲೂ ಇಂತಹ ಪವಾಡ ಒಂದಾದರೂ ಆದರೆ, ಜನರು ಧರ್ಮಿಗಳಾದಾರು; ಅಧರ್ಮಿಗಳೂ ನಾಸ್ತಿಕರೂ ಬಣ್ಣಕೆಟ್ಟಾರು. ನಮ್ಮ ವಿಷ್ಣುಪ್ರಭು ಶಾಂತಲದೇವಿಯವರ ಕಾಲ ಸತ್ಯಯುಗ; ಇದು ಅವರ ಧರ್ಮ ತಪಸ್ಸುಗಳ ಫಲ. ಇಂತಹ ಪ್ರಭುಗಳ ಪೋಷಣೆಯಲ್ಲಿರುವ ನಾವು ಧನ್ಯರು. ಈ ದೈವಲೀಲೆಯನ್ನು ನೋಡುವ ಸುಕೃತ ನಮ್ಮದು' ಎಂದು ಪ್ರಜೆಗಳೆಲ್ಲ ಆನಂದಪಟ್ಟರು.

'ರೂವಾರಿಗಳೂ ಇತರ ಕೆಲಸಗಾರರೂ ನಂದಿಗಳು ಎಲ್ಲಿರುವುವೊ ಅಲ್ಲಿಯೆ ಬಿಟ್ಟು ಬರತಕ್ಕದ್ದು. ಅಲ್ಲಿಂದ ರಾಜಧಾನಿಗೆ ಮಾಡಿರುವ ಮಾರ್ಗದಲ್ಲಿರುವ ಅರಣ್ಯವಾಸಿ ಜನಗಳೆಲ್ಲ ಆ ಮಾರ್ಗದಿಂದ ಎರಡು ಹರಿದಾರಿ ದೂರದಲ್ಲಿ ಹೋಗಿ ನೆಲಸತಕ್ಕದ್ದು. ದೇವಾಲಯದ ಸಮಸ್ತ ಕಾರ್ಯಗಳನ್ನು ಪ್ರತಿಷ್ಠಾಪನಾ ದಿನಕ್ಕೆ ಒಂದು ದಿನ ಮೊದಲೆ ಪೂರ್ಣಮಾಡತಕ್ಕದ್ದು' ಎಂದು ರಾಜಾಜ್ಞೆ ಹೊರಟಿತು.

ದಿನಗಳು ಕಳೆದುಹೋದುವು. ಭಾದ್ರಪದ ಶುದ್ಧ ಏಕಾದಶಿಯ ವೇಳೆಗೆ ಶಿವನೆಂದ ಮಾತು ಸರ್ವವ್ಯಾಪಿಯಾಯಿತು. ಸುತ್ತಮುತ್ತ ಇದ್ದ ಜನರೆಲ್ಲ ರಾಜಧಾನಿಗೆ ಬರಲು ಉಪಕ್ರಮವಾಯ್ತು. ಅಪ್ಪಾಜಿಯವರೂ ನೀನೂ ಮೂರು ದಿನಗಳಿಂದ ನಿಯಮನಿಷ್ಠೆಗಳಲ್ಲಿರುತ್ತ, ಅಹರ್ನಿಶಿ ಶಿವಪೂಜೆ ಧ್ಯಾನಾದಿಗಳಲ್ಲಿ ಮಗ್ನರಾಗಿದ್ದಿರಿ. ಹೊಯಿಸಳೇಶ್ವರ, ಶಾಂತಲೇಶ್ವರ ದೇವಾಲಯದಲ್ಲಿ ಸಾವಿರಾರು ಕೆಲಸದವರು ಕೆಲಸ ಮಾಡಿ ಮುಗಿಸಿ, ದೇವಾಲಯದ ಸಮಸ್ತ ಭಾಗಗಳನ್ನು ಶುಚಿಮಾಡಿಟ್ಟರು. ಇನ್ನು ಉಳಿದುದು ಎರಡೇ ದಿನ . . . ನಂದಿಗಳು ಕಾಡಿನೆಡೆಯಲ್ಲಿ ನಾಲ್ಕು ಹರಿದಾರಿಗಳ ದೂರದಲ್ಲೆ ಇದ್ದುವು.

ಆದರೇನು! ಅಪ್ಪಾಜಿಯವರ ನಂಬುಗೆಗೆ ಎಳ್ಳಷ್ಟೂ ಲೋಪ ಬರಲಿಲ್ಲ. ದ್ವಾದಶಿ, ತ್ರಯೋದಶಿಗಳು ಮುಗಿದಾಗ ದೇವಾಲಯಗಳ ಸಕಲ ಕಾರ್ಯಗಳೂ ಮುಗಿದು ಆಲಯ ಚೊಕ್ಕಟವಾಯಿತು. ಪ್ರತಿಷ್ಠಾಪನೆಗೆ ಮಹಾಲಿಂಗಗಳನ್ನೂ ತಂದು ಪಾಣಿವಟ್ಟಗಳಲ್ಲಿ ಇಟ್ಟೂ ಆಯಿತು. ದೇವಾಲಯಗಳೆರಡನ್ನೂ ತಳಿರು ತೋರಣಗಳಿಂದ ಸುಂದರವಾಗಿ ಅಲಂಕರಿಸಿಯಾಯಿತು.

ಯಾರೊ ಕೇಳಿದರು . . . ಯಾರೊ ಏನು? ಹೇಮಾದ್ರಿಗಳೇ ಕೇಳಿದರು: 'ಕೇತಮಲ್ಲನಾಯಕರೆ, ದೇವಾಲಯಗಳೆರಡರ ನವರಂಗಗಳನ್ನು ಹೀಗೇಕೆ ಒಂದೇ ಮಾರ್ಗದಿಂದ ಒಟ್ಟುಗೂಡಿಸಿದಿರಿ?' ಎಂದು. ಕೇತಮಲ್ಲರೆಂದರು: 'ಹೇಮಾದ್ರಿಗಳೆ, ನಮ್ಮ ಪ್ರಭುಗಳೂ ಮಹಾರಾಣಿಯವರೂ ಆಕಾರಗಳಿಂದ ಬೇರೆಬೇರೆಯಾದರೂ ಇಬ್ಬರ ಆತ್ಮಗಳೂ ಒಂದೇ ಅಲ್ಲವೆ?' ಎಂದು.

ಚತುರ್ದಶಿ ಸೂರ್ಯೋದಯವಾಯಿತು. 'ನಂದಿಗಳು ಇನ್ನೂ ಅಲ್ಲಿಯೆ ಇವೆ' ಎಂಬ ಸುದ್ದಿ ರಾಜಧಾನಿಯಲ್ಲೆಲ್ಲ ಹರಡಿತು. ಈ ಸುದ್ದಿ ನಿನ್ನ ಕಿವಿಗೂ ಬಿತ್ತು. ಅದರಿಂದ, ಅಕ್ಕ, ನೀನು ಧೈರ್ಯಗೆಡಲಿಲ್ಲ. ನಿನ್ನ ಮನಸ್ಸಿನ ಸ್ಥೈರ್ಯವನ್ನು ಕಂಡು ಅಪ್ಪಾಜಿಯವರೂ ಧೈರ್ಯಗೊಂಡರು. 'ನಂದಿಗಳಿರುವ ಎಡೆಗೆ, ಆ ದಾರಿಯಲ್ಲಿ ಪಟ್ಟಣಿಗರೆ ಆಗಲಿ, ಇತರರೆ ಆಗಲಿ, ಯಾರೂ ಹೋಗಕೂಡದು' ಎಂದು ಅಪ್ಪಾಜಿಯವರು ಕಟ್ಟಾಜ್ಞೆ ವಿಧಿಸಿದರು. ಅಂದು ನೀವಿಬ್ಬರೂ ನಿರಶನವ್ರತ ಕೈಕೊಂಡು ಮಹಾದೇವನ ಧ್ಯಾನದಲ್ಲೆ ದಿನವೆಲ್ಲ ಕಳೆದಿರಿ.

ಸಂಜೆ ಚತುರ್ದಶಿ ಚಂದ್ರಮನ ಉದಯವಾಯಿತು. ಎಲ್ಲ ಪೌರರ ಮನೆಗಳಲ್ಲೂ ಅಂದು ಮಹಾದೇವನಿಗೆ ವಿಶೇಷ ಪೂಜೆಗಳು ನಡೆಯುತ್ತಿವೆ. ಹೊಯಿಸಳೇಶ್ವರ, ಶಾಂತಲೇಶ್ವರ ದೇವಾಲಯಗಳನ್ನು ಲಕ್ಷದೀಪಗಳು ಬೆಳಗುತ್ತಿವೆ. ದೇವಾಲಯದ ನಾಲ್ಕು ಮೂಲೆಗಳಲ್ಲೂ, ಮಹಾದ್ವಾರಗಳ ಮೇಲೂ ಪ್ರಕಾಶಮಾನವಾದ ಮಹಾದೀಪಗಳಿವೆ. ರಾಜಧಾನಿಯ ಎಲ್ಲರ ಮನೆಗಳಲ್ಲೂ ದೀಪೋತ್ಸವಗಳು ನಡೆದಿವೆ. ಎಲ್ಲರ ಮುಖಗಳಲ್ಲಿ, ಮನಗಳಲ್ಲಿ ಉತ್ಸಾಹ, ಭಕ್ತಿ ಉಕ್ಕುತ್ತಿವೆ.

ಮರುದಿನ ಸೂರ್ಯೋದಯ ಮುಹೂರ್ತದಲ್ಲಿಯೆ ಪ್ರತಿಷ್ಠಾಪನೋತ್ಸವ ಮುಹೂರ್ತ ನಿಶ್ಚಿತವಾಗಿತ್ತು. ದೇವಾಲಯದಲ್ಲಿ ಸಕಲ ಸಾಮಗ್ರಿಗಳೂ ರಾತ್ರಿಯೆ

ಸಿದ್ಧವಾಗಿದ್ದವು. ಚತುರ್ದಶಿ ರಾತ್ರಿ ಎಲ್ಲರಿಗಿಂತ ಮೊದಲು ನಾನೇ ದೇವಾಲಯದ ಆವರಣದೊಳಕ್ಕೆ ಹೋದೆ. ಮಧುರ ಚಂದ್ರಿಕೆ ದೇವಾಲಯದ ಗೋಡೆಗಳ ಹೊರಭಾಗದ ಶಿಲ್ಪಕೌಶಲಗಳ ಮೇಲೆ ಪಸರಿಸಿ ಅತಿಶಯ ಶೋಭೆಯನ್ನುಂಟು ಮಾಡಿತ್ತು. ಆಗ ಚಂದ್ರಿಕೆ ಹೆಚ್ಚುಹೆಚ್ಚುತ್ತ ಬಂದಿತು. ಇದೇಕೆ! ಎಂದು ನಾನು ಅಂತರಿಕ್ಷದ ಕಡೆಗೆ ನೋಡಿದೆ. ಚಂದ್ರಬಿಂಬವೇ ವೇಗದಿಂದ ಭೂಮಿಯ ಕಡೆಗೆ ಬರುತ್ತಿದ್ದುದನ್ನು ಕಂಡೆ. ಚಂದ್ರಿಕೆಯಲ್ಲಿ ನಕ್ಷತ್ರಗಳ ಬೆಳಕು ಕಂದುವುದಾದರೂ, ಆಗ ಅವು ಸಹ ಅಂತರಿಕ್ಷದಿಂದ ತೂಗಿಬಿಟ್ಟ ಮುತ್ತಿನ ಗೊಂಚಲುಗಳಂತೆ ಕಂಡವು. ಪ್ರಕಾಶಮಾನವಾದ ಆ ಗೊಂಚಲುಗಳು ಒಂದರ ಸುತ್ತ ಇನ್ನೊಂದು ವರ್ತುಳಾಕಾರದಲ್ಲಿ ಗಿರ್ರನೆ ಸುತ್ತುತ್ತಿದ್ದವು. ಚಂದ್ರಬಿಂಬ ಆಗ ಒಂದಕ್ಕೆ ನಾಲ್ಕರಷ್ಟು ದೊಡ್ಡದಾಯಿತು. ಆ ಬೆಳಕಿನಲ್ಲಿ ದೇವಾಲಯ ಅಪೂರ್ವ ತೇಜಸ್ಸಿನಿಂದ ಶೋಭಿಸಿತು. ನಾನು ಕಣ್ಣುರೆಪ್ಪೆ ಸಹ ಬಡಿಯದೆ ನೋಡುತ್ತಿದ್ದೆ. ಸರೋವರದ ತಿಳಿಯಾದ ನೀರಿನಲ್ಲಿ ಪ್ರತಿಬಿಂಬಿಸಿದುದನ್ನು ಗಾಳಿ ಬಂದು ಕಲಕಿದಾಗ, ಆ ಪ್ರತಿಬಿಂಬ ನೀರಿನ ತೆರೆಗಳಲ್ಲಿ ಕಲಕಿಹೋದ ಹಾಗಾಗಿ, ಕ್ರಮೇಣ ಸ್ಥಿರ ಆಕಾರವನ್ನು ಮತ್ತೆ ತಾಳುವುದಲ್ಲವೆ! ಹಾಗೆಯೆ ಆಯಿತು, ನನ್ನ ಕಣ್ಣುಗಳಿಗೆ ಆ ದೇವಾಲಯದ ಆಕಾರ. ಆದರೆ, ಅಕ್ಕ, ಈಗ ದೇವಾಲಯ ಒಂದಕ್ಕೆ ನಾಲ್ಕರಷ್ಟು ದೊಡ್ಡದಾಗಿ ಬೆಳೆದು ನಿಂತಿತ್ತು. ಮತ್ತೊಮ್ಮೆ ದೇವಾಲಯದ ಆಕಾರ ಕದಡಿಹೋದಂತಾಯಿತು. ಪುನಃ ಸಮುಸ್ಥಿತಿಗೆ ಬಂದಾಗ ದೇವಾಲಯ ಇನ್ನು ದೊಡ್ಡದಾಗಿ ಬೆಳೆದಿತ್ತು.. ಬಿಂಬ ಮತ್ತೊಮ್ಮೆ ಕದಡಿಹೋಯಿತು. ಈ ಸಲ ಸಮುಸ್ಥಿತಿಗೆ ಬಂದಾಗ ಅದರ ವೈಶಾಲ್ಯ ಔನ್ನತ್ಯಗಳು ಕಣ್ಣಿಗೇ ನಿಲುಕದಾದುವು. ಆಗ ನನಗೆ ನಾನು ಬಹು ದೂರದಲ್ಲಿ ನಿಂತು ನೋಡುತ್ತಿದ್ದಂತೆ ಅನುಭವವಾಯಿತು. ನನ್ನ ದೃಷ್ಟಿಯಲ್ಲೇ ಒಂದು ವೈಪರೀತ್ಯ ಉಂಟಾಗಿತ್ತು. ಅಷ್ಟು ದೂರದಲ್ಲಿ ನಿಂತು ನೋಡುತ್ತಿದ್ದರೂ ನನ್ನ ಕಣ್ಣುಗಳಿಗೆ ಮಾತ್ರ ಕೈ ಮುಂದೆಯೇ ಎಲ್ಲವೂ ನಡೆಯುತ್ತಿರುವಂತೆ ಕಾಣಬಂದವು.

ದೇವಾಲಯದ ಹೊರಗಡೆಯ ಭಿತ್ತಿಯ ಪ್ರತಿ ಕಟ್ಟಿನಲ್ಲಿಯೂ ಇದ್ದ ಎಲ್ಲ ಶಿಲ್ಪಗಳೂ—ಯಕ್ಷ, ರಾಕ್ಷಸ, ಗರುಡ, ಗಂಧರ್ವ, ಕಿನ್ನರ, ಕಿಂಪುರುಷ, ಉರಗರೂ, ಸಕಲ ಮೃಗಪಕ್ಷಿಸಂಕುಲಗಳೂ, ಪುರಾಣಯುಗಗಳ, ರಾಮಾಯಣ ಮಹಾಭಾರತ ಕಾಲಗಳ ರಾಜರುಗಳೂ, ಅತಿರಥ ಮಹಾರಥರೂ, ಮುನಿ

ವರರೂ, ಸಕಲ ಲೋಕಗಳಲ್ಲಿನ ದೇವರುಗಳೂ, ದಿಕ್ಪಾಲಕರೂ, ಮಾನವರೂ, ಲತಾವೃಕ್ಷಾದಿಗಳೂ, ಸಕಲವೂ ತಮ್ಮ ತಮ್ಮ ನೈಜವಾದ ಆಕೃತಿ ಪರಿಮಾಣ ಗಳಿಗೆ ಬೆಳೆದು ನಿಂತಿರುವುದನ್ನು ಕಂಡೆ. ನನಗೆ ಆಶ್ಚರ್ಯವಾಯಿತು. ಭಯವೂ ಆಯಿತು.

ದೇವಾಲಯದ ಗೋಪುರ ಚಂದ್ರಮಂಡಲವನ್ನು ತಾಗಿ ನಿಂತಿತ್ತು. ಆಗ ಚಂದ್ರಮಂಡಲದಿಂದ ತಪ್ತಕಾಂಚನದ ಕಾಂತಿಯಿದ್ದ ಅಮೃತರಸಪ್ರವಾಹ ವೊಂದು ದೇವಾಲಯದ ಗೋಪುರದ ತುದಿಯಿಂದ ಮೆಲ್ಲನೆ ಶಿಲಾರಸದಂತೆ ಮಂದಗತಿಯಿಂದ ಹರಿದುಬಂದಿತು. ಆ ತಪ್ತಕಾಂಚನಪ್ರವಾಹ ಮೇಲಿನಿಂದ ಹರಿದುಬರುತ್ತಾ ಅವಾವುದನ್ನು ಆಚ್ಛಾದಿಸಿತೊ ಅವೆಲ್ಲ ಸುವರ್ಣಮಯವಾದವು, ಸಜೀವವಾದವು. ಗೋಪುರದಲ್ಲಿನ ಮುನಿವರರೂ, ಸಿದ್ಧರೂ, ನಾಗರೂ, ಯಕ್ಷರೂ, ಗಣಗಳೂ, ನಂದಿ ಭೃಂಗಿಗಳೂ ಎಲ್ಲರೂ ಜೀವಂತರಾದರು. ಅನಂತರ ಆ ತಪ್ತಕಾಂಚನರಸ ದೇವಾಲಯದ ಹೊರಗೋಡೆಗಳ ಮೇಲಿನ ಶಿಲ್ಪಗಳ ಒಂದೊಂದು ಕಟ್ಟಿನ ಮೇಲೆಯೂ ಹರಿದುಬರಲು ಉಪಕ್ರಮವಾಯಿತು.

ಮೊದಲು ಮೇಲ್ಕಟ್ಟಿನ ಮದನನ ಕೈಗೊಂಬೆಗಳಂತೆ ಇರುವ ಶಿಲಾ ಸುಂದರಿಯರೆಲ್ಲ ಭವ್ಯ ಮಾನವಾಕಾರದ ಸುರಸುಂದರಿಯರಾದರು. ಅವರು ತಮ್ಮ ಉಡುಪು, ತೊಡವುಗಳನ್ನು ತಿದ್ದಿಕೊಳ್ಳುತ್ತ, ಕೈ ಮೈಗಳನ್ನು ವಿವಿಧ ಭಂಗಿಗಳಲ್ಲಿ ರೂಪಿಸುತ್ತ, ವಾದ್ಯ ಬಾರಿಸುತ್ತಿರುವವರ ತಾಳಕ್ಕೆ, ಮೇಳಕ್ಕೆ, ಕೈತೂಗಿ, ಮೈತೂಗಿ, ತಲೆತೂಗಿ, ಕುಣಿಯಲು ಮೊದಲಿಟ್ಟರು. ಈಗ ಮೇಲಿಂದ ಎರಡನೆಯ ಕಟ್ಟಿಗೆ ಜೀವ ಬಂದಿತು. ದೇವಾದಿದೇವ ಮಹದೇವರುಗಳೂ, ಇಂದ್ರಾದಿ ಅಷ್ಟದಿಕ್ಪಾಲಕರೂ, ತಮ್ಮ ತಮ್ಮ ಲೋಕಗಳಲ್ಲಿದ್ದುಕೊಂಡು, ಸಭೆ ಗಳನ್ನು ನಡಸುತ್ತ ಓಲಗದಲ್ಲಿ ಮಹೋನ್ನತಾಸೀನರಾಗಿದ್ದರು. ಮೇಲಿನಿಂದ ಮೂರನೆಯ ಕಟ್ಟು ಜೀವಂತವಾಯಿತು. ಹಂಸಗಳು, ಶುಕ, ಪಿಕ, ಮಯೂರ ಗಳು ಪಕ್ಕಗಳನ್ನು ಬಿಚ್ಚಿ ಹಾರಾಡಿದವು. ಮಕರಗಳೂ ಉರಗಗಳೂ ಹರಿ ದಾಡಿದವು. ವಾನರ ಸಂಕುಲಗಳು ವೃಕ್ಷಗಳಲ್ಲಿದ್ದ ಫಲಗಳನ್ನು ಕಿತ್ತು ಕಿತ್ತು ತಿಂದವು, ಎರಚಾಡಿದವು, ಎಗರಾಡಿದವು. ನಾಲ್ಕನೆಯ ಕಟ್ಟಿನ ರಾಮಾಯಣ ಮಹಾಭಾರತದ ಕಾಲಗಳ ರಾಜರುಗಳು, ಯೋಧರು, ಎದ್ದರು, ಕೂತರು, ರಥಗಳನ್ನು ನಡಸಿದರು. ಆನೆಗಳ ಮೇಲೆ, ಕುದುರೆಗಳ ಮೇಲೆ, ರಥಗಳಲ್ಲಿ

ಕುಳಿತು, ಒಬ್ಬರನ್ನೊಬ್ಬರು ಅಸ್ತ್ರಶಸ್ತ್ರಗಳಿಂದ, ಕತ್ತಿಗಳಿಂದ, ಮುದ್ಗರಗಳಿಂದ ಹೊಡೆದರು, ಕೊಂದರು. ಸತ್ತವರ ಮಡದಿ ಮಕ್ಕಳು ಅತ್ತರು. ಅವರ ರಕ್ತ ಮಾಂಸಗಳನ್ನು ಶಾಕಿನಿ, ಡಾಕಿನಿಗಳು ಕುಡಿದು ತಿಂದು ಕುಣಿದಾಡಿದವು. ಐದನೆಯ ಆರನೆಯ ಕಟ್ಟುಗಳಲ್ಲಿನ ಮಾನವರೂ ಮೃಗ ಪಕ್ಷಿ ಸಂಕುಲಗಳೂ ಸಜೀವವಾದವು. ಕೆಳಗಿನಿಂದ ಎರಡನೆಯ ಕಟ್ಟನಲ್ಲಿದ್ದ ಭಯಂಕರಗಳಾದ ಸಿಂಹ, ಶಾರ್ದೂಲ, ವ್ಯಾಳಿಗಳು ಮೈಕೊಡವಿ, ಕಿವಿ ಕೇಸರ ಲಾಂಗೂಲಗಳನ್ನು ನಿಮಿರಿಸಿಕೊಂಡು ದಿಕ್ತಟಗಳು ಬಿರಿಯುವಂತೆ ಗರ್ಜಿಸಿ, ದೇವಾಲಯವನ್ನು ಸುತ್ತಿ ಸುತ್ತಿ ಅದೇ ಕಟ್ಟನಲ್ಲಿ ಪ್ರದಕ್ಷಿಣ ನಡೆದವು. ಅಷ್ಟರಲ್ಲಿ ಕೆಳಗಿನ ಕಟ್ಟ ನಲ್ಲಿದ್ದ ಆನೆಗಳ ಸಾಲುಸಾಲೇ ಜೀವಗೊಂಡು ಭಯಂಕರವಾಗಿ ಘೀಳಿಟ್ಟವು. ಸಾವಿರಾರು ಯುದ್ಧದಾನೆಗಳು, ಅವುಗಳ ಕೊರಳ ಘಂಟೆಗಳು 'ಘಣಿರ್ ಘಣಿರ್' ಎಂದು ಶಬ್ದಮಾಡುತ್ತ, ಬೆನ್ನಮೇಲೆ ಇಕ್ಕಡೆಗಳಲ್ಲೂ ಇಳಿಯಬಿಟ್ಟಿದ್ದ ಘನಘಂಟೆಗಳು 'ಢಣ ಢಣ' ಎಂದು ಶಬ್ದಮಾಡುತ್ತ, ಆ ಮದ್ದಾನೆಗಳು ಒಂದರ ಬಾಲವನ್ನು ಇನ್ನೊಂದು ಹಿಡಿದು ಪ್ರದಕ್ಷಿಣ ಬಂದವು. ಮೇಲಿನ ಕಟ್ಟನ ಸಿಂಹ ಶಾರ್ದೂಲಗಳು ಹಾಗೆಯೆ ಪ್ರದಕ್ಷಿಣ ಬರುತ್ತಿದ್ದವು. ಯೋಧರು ಯುದ್ಧಮಾಡುತ್ತಲೆ, ಕೊಲ್ಲುತ್ತಲೆ ಇದ್ದರು. ವಾದ್ಯಗಾರರು ವಿವಿಧ ವಾದ್ಯ ಗಳನ್ನು ನುಡಿಸುತ್ತಲೆ ಇದ್ದರು. ವಿಲಾಸಿನಿಯರೂ, ಅಪ್ಸರೆಯರೂ ನರ್ತನ ಮಾಡುತ್ತಲೆ ಇದ್ದರು.

ಎಷ್ಟು ಎಷ್ಟು ಹೇಳಿದರೂ, ಹೇಗೆ ಹೇಗೆ ಬಣ್ಣಿಸಿದರೂ ಸಾಲದು, ಅಕ್ಕ, ಆಗ ನಾನು ಕಂಡ ದೃಶ್ಯ. ಸಾವಿರ ನಾಲಗೆಗಳ ಆದಿಶೇಷನ ಬಣ್ಣನೆಗೂ ಅಳವ ಲ್ಲದ ನೋಟವದು. ಆ ಸಿಂಹಶಾರ್ದೂಲಗಳನ್ನು ನೋಡಿ ನನಗೆ ಭಯವಾಗಲಿಲ್ಲ. ಯಾವುದೊ ಒಂದು ಮಹಾಶಕ್ತಿಯೆ ನನ್ನ ಒಡಲಿನಲ್ಲಿ ಮನೆ ಮಾಡಿದಂತೆ ಆಗ ನನಗೆ ಅನುಭವವಾಯಿತು. ನಾನು ಆಲಯದೊಳಕ್ಕೆ ಹೋದೆ. ಆಲಯದ ಪೂರ್ವದ್ವಾರದಲ್ಲಿದ್ದ ದ್ವಾರಪಾಲಕರು ಮೂರು ಮೂರು ಪುರುಷಪ್ರಮಾಣ ಗಳಲ್ಲಿದ್ದರು. ದಿವ್ಯಾಭರಣಭೂಷಿತರಾಗಿ, ಅಂಕುಶ, ಗದೆಗಳನ್ನು ಹಿಡಿದು, ದುಕೂಲ ಧರಿಸಿ, ಜೊಂಪೆಜೊಂಪೆಯಾಗಿ ತೂಗುತ್ತಿರುವ ಮುತ್ತಿನ ಗೊಂಚಲು ಗಳಿಂದಲೂ ವಜ್ರ ವೈಡೂರ್ಯ ಮರಕತ ಮಾಣಿಕಗಳಿಂದಲೂ ಹೊಳೆಯುತ್ತಿರುವ ಎತ್ತರವಾದ ಕನಕಮಯಮಕುಟಗಳನ್ನು ಶಿರದಲ್ಲಿ ಧರಿಸಿಕೊಂಡು, ತ್ರಿಭಂಗಿ

ಯಲ್ಲಿ ನಿಂತಿದ್ದರು. ನನ್ನನ್ನು ಅವರು ಅಡ್ಡಿಪಡಿಸಲಿಲ್ಲ. 'ಒಳಕ್ಕೆ ದಯಮಾಡಿ' ಎಂದು ಉಪಚರಿಸಿದರು. ಒಳಕ್ಕೆ ಹೋದೆ. ದೇವಾಲಯದೊಳಕ್ಕೆ ಹೋದೆನೊ, ಬ್ರಹ್ಮಾಂಡವನ್ನೇ ಹೊಕ್ಕೆನೊ ನನಗೆ ತಿಳಿಯಲಿಲ್ಲ. ಆಲಯದ ವೈಶಾಲ್ಯವೂ ಕಣ್ಣಿಗೆ ಸಿಗಲಿಲ್ಲ, ಔನ್ನತ್ಯವೂ ಕಣ್ಣಿಗೆ ಸಿಗಲಿಲ್ಲ. ಒಳಗೆ ಯಾರೂ ಇದ್ದಂತೆ ಕಾಣಬರಲಿಲ್ಲ. ಆಗ ಅತಿ ಪ್ರಕಾಶಮಾನವಾದ ಬೆಳಕು ಅಲ್ಲಿ ಉದಯವಾ ಯಿತು. ಆ ಬೆಳಕಿನಲ್ಲಿ ರವಿಯ ತೇಜಸ್ಸೂ, ಚಂದ್ರನ ತಂಪೂ ಎರಡೂ ಸೇರಿ ದ್ದವು. ಮಂಕುಬಡಿದವನಂತಾದೆ ನಾನು.

ಆಲಯದ ಒಂದು ಕಡೆ ನೆಲದಿಂದ ಬಹು ದೊಡ್ಡದಾದ ಒಂದು ಕಮಲ ಹುಟ್ಟಿ ಅರಳಿತು. ಪಕ್ಕದಲ್ಲಿ ಮದ್ದಾನೆಯ ಸೊಂಡಿಲಿನಷ್ಟು ದಪ್ಪದ ಶರೀರವುಳ್ಳ ಆದಿಶೇಷ ಮೈಯನ್ನು ಸುತ್ತಿಟ್ಟುಕೊಂಡು, ತನ್ನ ಸಹಸ್ರ ಫಣೆಗಳನ್ನು ಬಿಚ್ಚಿ ನಿಂತ. ಫಣಾರತ್ನಗಳ ಕಾಂತಿ ಉರಿಯುತ್ತಿರುವ ಕೆಂಡಗಳಂತೆ ಇದ್ದಿತು. ಆ ಮಹಾಶೇಷನ ತೆಳ್ಳನೆಯ ಸೀಳುನಾಲಗೆಗಳು ಆ ಬೆಳಕಿನಲ್ಲಿ ಮಿಂಚಿನ ಬಳ್ಳಿ ಗಳಂತೆ ಹೊಳೆದವು. ಆದಿಶೇಷನನ್ನು ಕಂಡ ನನಗೆ ಭಯವಾಗಲಿಲ್ಲ. ಆ ಮಹೋರಗನಿಗೆ ಪಕ್ಕದಲ್ಲಿ ಹಿಮಾಚ್ಛಾದಿತ ಧವಳಗಿರಿಶಿಖರವೊಂದು ನೆಲದಿಂದ ಮೇಲೆದ್ದಿತು. ಇಷ್ಟಾಗುವ ಹೊತ್ತಿಗೆ ಅಲ್ಲಲ್ಲಿ ಸುತ್ತಮುತ್ತ ಸಾವಿರಾರು ಚಿಕ್ಕ ದೊಡ್ಡ ಸುಖಾಸನಗಳು ಮೇಲಕ್ಕೆ ಎದ್ದುವು. ಅರಳಿದ ಆ ಮಹಾಕಮಲದಲ್ಲಿ ಬ್ರಹ್ಮನೂ ಸರಸ್ವತಿಯೂ, ಉರಗಶಯ್ಯೆಯಲ್ಲಿ ಲಕ್ಷ್ಮೀನಾರಾಯಣರೂ, ಧವಳ ಗಿರಿಯ ಶಿಖರಪೀಠದಲ್ಲಿ ಉಮಾಮಹೇಶ್ವರರೂ ಕುಳಿತಿದ್ದರು. ಅವರವರ ಪರಿ ವಾರಗಳು ಇಕ್ಕಡೆಗಳಲ್ಲು ನಿಂತಿದ್ದರು. ತ್ರಿಮೂರ್ತಿಗಳೂ ಅವರ ದೇವಿಯರೂ ಎಲ್ಲರಿಗಿಂತ ಉನ್ನತರೂ, ಎಲ್ಲರಿಗಿಂತ ತೇಜಸ್ವಿಗಳೂ ಆಗಿದ್ದರು. ಸಾವಿರಾರು ದೇವ ದೇವತೆಗಳು ಆ ಆಲಯದ ತುಂಬ ಕುಳಿತಿದ್ದರು. ಹಲವರು ನಿಂತಿದ್ದರು. ಗಂಧರ್ವರು, ವಿದ್ಯಾಧರ ವಿದ್ಯಾಧರೆಯರು, ಅಪ್ಸರ ಅಪ್ಸರೆಯರು ಎಲ್ಲರೂ ಅಲ್ಲಿದ್ದರು. ಆಗ ತ್ರಿಮೂರ್ತಿಗಳ ಎದುರಿಗೆ ವಿಶಾಲವಾದ ವರ್ತುಳಾಕಾರದ ನುಣುಪಾದ ಸ್ಫಟಿಕ ಶಿಲಾಪೀಠ ಒಂದು ನೆಲಮಟ್ಟಕ್ಕಿಂತ ಎರಡು ಮೊಳಗಳಷ್ಟು ಎತ್ತರವಾಗಿ ಎದ್ದು ನಿಂತಿತು. ಅದರ ಸುತ್ತಲೂ ವಿವಿಧ ವಾದ್ಯಗಳನ್ನು ಹಿಡಿದಿದ್ದ ಗಂಧರ್ವರೂ, ಶ್ರೇಷ್ಠ ಆಸನಗಳಲ್ಲಿ ತುಂಬುರರೂ, ನಾರದರೂ ಒಂದೆಡೆ ಉನ್ನ ತಾಸನದಲ್ಲಿ ಇಂದ್ರನೂ ಶಚಿಯೂ, ಇನ್ನೊಂದೆಡೆ ಅಗ್ನಿಯೂ ಸ್ವಾಹಾದೇವಿಯೂ

ಅಂಥದೇ ಆಸನಗಳಲ್ಲಿ ಯಮ, ನಿರ್ಋತಿ, ವರುಣ, ವಾಯು, ಈಶಾನ, ಕುಬೇರರೂ ತಮ್ಮ ತಮ್ಮ ದೇವಿಯರೊಡಗೂಡಿ ಸಂತೋಷದಿಂದ ಕುಳಿತಿದ್ದರು. ಆಗ ಬಹು ಮಧುರವೂ ಸ್ವರ್ಗೀಯವೂ ಆದ ವಾದ್ಯಸಮ್ಮಿಲನವು ಮೊದಲಿಟ್ಟಿದು. ಸೊದೆಗರೆವ ಕಂಠಮಾಧುರ್ಯ ಉಳ್ಳ ಅಪ್ಸರೆಯರೂ ಗಂಧರ್ವರೂ ದನಿಗೂಡಿಸಿ ಹಾಡಿದರು.

ನರ್ತನ ಮಾಡತೊಡಗಿದವರು ಸಕಲ ಕಲಾಮಾತೆ ಶ್ರೀ ಶಾರದೆ. ಬ್ರಹ್ಮನು ಆ ನರ್ತನಕ್ಕೆ ತಾನೆ ತಾಳವಾದ್ಯಗಳನ್ನು ನುಡಿಸಿದ. ಬಳಿಕ ಲಕ್ಷ್ಮೀನಾರಾಯಣರು ಆನಂದನೃತ್ಯವಾಡಿದರು. ಶಿವ ಪಾರ್ವತಿಯರ ನರ್ತನಕ್ಕೆ ಅಖಂಡ ಬ್ರಹ್ಮಾಂಡಗಳೆ ಕುಣಿದಾಡಿದುವು. ರತಿ ಮನ್ಮಥರು ಲಾವಣ್ಯನೃತ್ಯ ಮಾಡಿದರು, ರಂಭೆ ಊರ್ವಶಿಯರ ಶೃಂಗಾರನರ್ತನ ಮನಮೋಹಕವಾಗಿತ್ತು. ಇವರೆಲ್ಲ ನರ್ತನಮಾಡಿ ಮುಗಿದ ಮೇಲೆ ನರ್ತನ ಮಾಡಿದವನು ಗಣಪತಿ. ಇವರೆಲ್ಲರನ್ನು ನೋಡಿ ಅವನಿಗೆ ತಾನೂ ನರ್ತಿಸಬೇಕೆಂಬ ಆಶೆ ಹುಟ್ಟಿರಬೇಕು. ಅವನಿಗೆ ಹಿಂದೆ ಎಂದಾದರೂ ನರ್ತಿಸಿ ಅಭ್ಯಾಸವಿದ್ದಿತೊ ಇಲ್ಲವೊ! ಕಿವಿಗಳನ್ನು ಆಡಿಸುತ್ತ, ಸೊಂಡಿಲನ್ನು ಬೀಸುತ್ತ, ಮೋಟುಕೈಗಳನ್ನು ತಿರುವುತ್ತ, ಕಂಬಗಳಂತಿದ್ದ ಆ ಕಾಲುಗಳಿಗೆ ಕಿರುಗೆಜ್ಜೆಗಳ ಸರಗಳನ್ನು ಕಟ್ಟಿಕೊಂಡು ನಾಟ್ಯರಂಗವೇರಿದ ಗಣಪತಿ. ಎಲ್ಲರಿಗೂ ಹೊಟ್ಟೆಯಲ್ಲಿ ನಗು, ಮುಖದಲ್ಲಿ ಬಿಗು. ಗಣಪತಿಯ ಕೋಪಕ್ಕೆ, ಶಾಪಕ್ಕೆ ಈಡಾಗಬಾರದೆಂದು ನಗುವನ್ನು ಬಿಗಿಹಿಡಿದು ಕುಳಿತಿದ್ದರು. ವಾದ್ಯಘೋಷಣೆಗೆ ಮೊದಲಾಯಿತು. ತುಂಬುರರೂ ನಾರದರೂ ಹಾಡಿದರು.

ಮಹಾದೇವನು ಪಾರ್ವತಿಯನ್ನು ನೋಡಿ, ಮೆಲ್ಲಗೆ 'ಇವನಿಗೇಕೆ ಕುಣಿಯುವ ಆಶೆ ಬಂತು ಈಗ, ಈ ಮೈಯನ್ನಿಟ್ಟುಕೊಂಡು?' ಎಂದನು. ಪಾರ್ವತಿಗೆ ಸ್ವಲ್ಪ ಸಿಟ್ಟು ಬಂತೆಂದು ಕಂಡಿತು. 'ಮಕ್ಕಳು ಸಂತೋಷದಿಂದ ಕುಣಿಯಬಾರದೇನು!' ಎಂದಳು. ಶಿವನು ತಾನು ಕೇಳಿದುದು ತಪ್ಪಾಯಿತೆಂದು ತಿಳಿದು ಸುಮ್ಮನಾದನು. ಗಜಾನನನು ತಾಂಡವ ನೃತ್ಯಕ್ಕೆ ಮೊದಲಿಟ್ಟನು. ಗಜಾನನನ ಆ ನರ್ತನಕ್ಕೆ ಶಿಲಾಪೀಠ ಅದುರಿತು, ನೆಲ ನಡುಗಿತು, ನುಣ್ಣನೆಯ ಶಿಲೆಯ ಮೇಲೆ ಒಮ್ಮೆ ಗಣಪನಿಗೆ ಕಾಲು ಜಾರಿತು, ರಭಸದಿಂದ ಬಿದ್ದನು. ಭಯಾವೃತವಾಗಿದ್ದ ಆ ಸಭೆಯಲ್ಲಿ ಯಾರೂ ನಗಲಾಗಲಿಲ್ಲ. ಶಿವನು ಮಾತ್ರ ನಕ್ಕ. ಆ

ನಗು ಗಣಪತಿಗೆ ಕೇಳಿಸಿತು. ಪಾರ್ವತಿ ಪತಿಯ ಕಡೆ ನೋಡಿದಳು. ಶಿವನಿಗೆ ಆಗ ತಾನು ನಗಬಾರದಿತ್ತು ಎನ್ನಿಸಿತು. ಗಣಪತಿಗೆ ಸಿಟ್ಟುಬಂದಿತು. 'ನನ್ನ ನಾಟ್ಯ ನನಗೆ ಸುಖ ಕೊಟ್ಟರೆ ಸಾಕು, ಇತರರು ನೋಡಿ ಏನೂ ಮೆಚ್ಚ ಬೇಕಾಗಿಲ್ಲ' ಎಂದುಕೊಳ್ಳುತ್ತ ಎದ್ದುಹೋಗಿ ದೇವಾಲಯದ ದಕ್ಷಿಣದ್ವಾರದ ಒಂದು ಪಾರ್ಶ್ವದಲ್ಲಿ ತನ್ನ ಸುಖಕ್ಕಾಗಿಯೆ ನಾಟ್ಯವಾಡುತ್ತ ನಿಂತುಬಿಟ್ಟ.

ಅನಂತರ ಗಂಧರ್ವರೂ ಅವರ ಪತ್ನಿಯರೂ ಸಮೂಹನಾಟ್ಯವಾಡಿದರು. ಆಗ ಪಟ್ಟಣಿಗರೆಲ್ಲ ಆಲಯದೊಳಕ್ಕೆ ಬಂದು, ನಡೆಯುತ್ತಿದ್ದ ನರ್ತನಗಳನ್ನು ನೋಡುತ್ತಿದ್ದರು. ಅಪ್ಪಾಜಿಯವರೂ ಸುಖಾಸನ ಒಂದರಲ್ಲಿ ಕುಳಿತು ಪ್ರಾರಂಭ ದಿಂದಲೂ ನೋಡುತ್ತಿದ್ದರು.

ಈ ದೇವಲೋಕದವರ ನರ್ತನಗಳು ಮುಗಿದನಂತರ ಇಬ್ಬರು ಗಂಧರ್ವ ಕನ್ನೆಯರು ನನ್ನ ಅಕ್ಕನನ್ನು ನಾಟ್ಯರಂಗಕ್ಕೆ ಕರೆತಂದರು. ನೀನು ಎದುರಿಗಿದ್ದ ತ್ರಿಮೂರ್ತಿಗಳಿಗೂ, ಅವರ ದೇವಿಯರಿಗೂ, ಸುತ್ತಲಿದ್ದ ಎಲ್ಲ ದೇವ ದೇವಿಯ ರಿಗೂ, ಅಪ್ಪಾಜಿಯವರಿಗೂ ಭಕ್ತಿ ವಿನಯಗಳಿಂದ ಕೈಮುಗಿದು, ಆನಂದನರ್ತನ ಮಾಡಲಾರಂಭಿಸಿದೆ. ಚಿಕ್ಕ ಅಕ್ಕ ವೀಣೆಯನ್ನು ನುಡಿಸುತ್ತಿದ್ದಳು. ರಂಭೆ ಊರ್ವಶಿಯರಾದಿಯಾಗಿ ಎಲ್ಲ ದೇವಾಂಗನೆಯರೂ ದೇವರ್ಕಳೂ ನಿನ್ನ ನರ್ತನಕ್ಕೆ ಬೆರಗಾಗಿಹೋದರು. ಬಹುಶಃ ಮತ್ಸರಗೊಂಡಿದ್ದರೂ ಹೆಚ್ಚಲ್ಲ. ಭಾರತಿಯು 'ನಮ್ಮ ಮಗಳಿವಳು' ಎಂದಳು ಬ್ರಹ್ಮನೊಡನೆ. ಧರ್ಮೇಶನು 'ನನ್ನ ಮಗ ಳಿವಳು' ಎಂದನು ಶಿವೆಯೊಡನೆ. 'ಲಕ್ಷ್ಮಿ, ಇವಳು ನಮ್ಮ ವೇಲಾಪುರಿಯ ಮಗುವಲ್ಲವೆ!' ಎಂದನು ಚೆಲುವನಾರಾಯಣ ಮಹಾಲಕ್ಷ್ಮಿಯೊಡನೆ.

'ಭಲೆ! ಭಲೆ! ನಾಟ್ಯವು ಇವಳಿಗಾಗಿಯೆ ಹುಟ್ಟಿತು' ಎಂದರು ಅಲ್ಲಿದ್ದ ತುಂಬುರರು, ನಾರದರು. ಶಚೀಪತಿ 'ಈ ನರ್ತನವನ್ನು ನೋಡಿ ಕಲಿಯಿರಿ' ಎಂದರ್ಥ ಬರುವಂತೆ ರಂಭೆ, ಊರ್ವಶಿ, ತಿಲೋತ್ತಮೆಯರ ಕಡೆ ನೋಡಿದ. 'ನರ್ತನ ಗಂಧರ್ವವಿದ್ಯೆ, ದೇವಲೋಕದ ಸ್ವತ್ತು' ಎಂಬುದು ಸುಳ್ಳಾಯಿತು ಅಕ್ಕ, ಅಂದು ನಿನ್ನಿಂದ. ಅಕ್ಕ, ನೀನೊಮ್ಮೆ ಚೆಲುವಕೇಶವನ ಮುಂದೆ ಅಂದು ನರ್ತನ ಮಾಡಿದುದಕ್ಕಿಂತಲೂ ಇಂದು ಚೆನ್ನಾಗಿ ನರ್ತಿಸಿದೆ. ನಿನ್ನ ನರ್ತನ ನಿಂತೊಡನೆಯೆ ಎಲ್ಲರೂ ಸಂತೋಷಸೂಚಕಧ್ವನಿಗಳಿಂದ ತಮ್ಮ ತೃಪ್ತಿಯನ್ನು ವ್ಯಕ್ತಪಡಿಸಿದರು. ಲಕ್ಷ್ಮಿ, ಸರಸ್ವತಿ, ಪಾರ್ವತಿಯರು ಎದ್ದುಬಂದು ನಿನ್ನನ್ನು

ಬಿಗಿದಪ್ಪಿಕೊಂಡರು. ನೀನು ಅವರಿಗೆಲ್ಲ ನಮಸ್ಕರಿಸಿದೆ. ಅವರು ಹರಸಿದರು.

ಇಷ್ಟೆಲ್ಲ ಆದ ಮೇಲೆ ಏನೋ ಮಂಜುಕವಿದಂತಾಯಿತು! ದೇವಾಲಯ ದಲ್ಲಿದ್ದವರೆಲ್ಲ ಅದೃಶ್ಯರಾದರು. ನೀನೊಬ್ಬಳೆ ನರ್ತನಶಿಲೆಯ ಮೇಲೆ ನಿಂತಿದ್ದೆ. ನನ್ನನ್ನು ನೋಡಿ 'ಬಹಳ ಆಯಾಸವಾಗಿದೆ ನನಗೆ' ಎಂದೆ. ನಾನು ನಿನ್ನನ್ನು ಕರೆತಂದು, ಸೂರ್ಯಾಲಯದ ಬಾಗಿಲನ್ನು ತೆರೆದು 'ಅಕ್ಕ, ನೀನಿಲ್ಲೆ ವಿಶ್ರಮಿಸು' ಎಂದೆ. ನೀನು ಭಗವಾನ್ ಸೂರ್ಯನಾರಾಯಣನ ಪಾದಗಳ ಮೇಲೆ ತಲೆ ಯಿಟ್ಟು ಪವಡಿಸಿದೆ. ಒಡನೆ ನಿದ್ರೆ ಹೋದೆ. ನಿನ್ನ ನಿದ್ದೆಗೆ ಯಾರೂ ಭಂಗ ತರಬಾರದೆಂದು ನಾನು ಬಾಗಿಲನ್ನು ಎಳೆದು ಮುಚ್ಚಿಕೊಂಡು ಹೊರಕ್ಕೆ ಬಂದೆ.

* * * *

ಶಾಂತಲೆ ತಾನು ಕುಳಿತಿದ್ದ ಆಸನವನ್ನು ಬಿಟ್ಟೆದ್ದುಬಂದು ಕುವರನ ತಲೆಯ ಮೇಲೆ ಕೈಯಿಟ್ಟು, ಒಂದು ಕೈಯಿಂದ ಮುಖವೆತ್ತಿನೋಡಿ, 'ತಮ್ಮಾ, ಇದು ತಪ್ಪು, ಇದು ತಪ್ಪು. ಇಷ್ಟೆಲ್ಲ ನಿನಗೆ ಅಕ್ಕನ ಮೇಲಿರುವ ಅತಿಶಯ ವಿಶ್ವಾಸದ ಪರಿಭ್ರಮೆ. ಇಷ್ಟು ಗಾಢವಾದ ವಿಶ್ವಾಸವನ್ನು ಬೆಳಸಿಕೊಳ್ಳಬಾರದು. ಮುಂದೆ ನೋವಿಗೆ ಕಾರಣವಾಗಬಹುದಿದು. 'ಅತಿ ಸರ್ವತ್ರ ವರ್ಜಯೇತ್' ಎಂದು ಬಲ್ಲವರು ಹೇಳಿರುವುದನ್ನು ಅರಿಯೆಯ? ನನ್ನ ಮೇಲೆ ನಿನಗಿರುವ ಅತಿಶಯ ವಿಶ್ವಾಸವೆ ಈ ನಿನ್ನ ಕನಸಿಗೆ ಕಾರಣ' ಎಂದಳು.

'ಅಕ್ಕ, ನೀನಿನ್ನೂ ಪೂರ್ತಿಯಾಗಿ ಕೇಳಲೆ ಇಲ್ಲ' ಎನ್ನುತ್ತ ಕುವರವಿಷ್ಣು ಕನಸಿನ ನಿರೂಪಣೆಯನ್ನು ಮುಂದುವರಿಸಿದ.

* * * *

ಹೊರಗೆ ಬಂದು ನೋಡುತ್ತೇನೆ, ಆಲಯದ ಒಳಗಿದ್ದ ಪಟ್ಟಣಿಗರೆಲ್ಲ ಈಗ ಹೊರಗಿದ್ದರು. ದೇವಾಲಯ ಇನ್ನೂ ಚಂದ್ರಚುಂಬಿಯಾಗಿಯೆ ಇದ್ದಿತು. ಸಿಂಹ ಶಾರ್ದೂಲಗಳು ಎರಡನೆಯ ಕಟ್ಟನಲ್ಲಿಯೂ, ಆನೆಗಳು ಮೊದಲ ಕಟ್ಟನಲ್ಲಿಯೂ ಹಿಂದಿನಂತೆಯೆ ಪ್ರದಕ್ಷಿಣೆ ಬರುತ್ತಿದ್ದವು. ಜನರೆಲ್ಲ ಹೊರಗೆ ನಿಂತು ಈ ಮಹಾ ದೃಶ್ಯವನ್ನು ಭಯ ವಿಸ್ಮಯಗಳಿಂದ ನೋಡುತ್ತಿದ್ದರು. ಏನೀ ಅದ್ಭುತ! ಏನೀ ಮಾಯೆ! ನಾವು ಭೂಮಿಯ ಮೇಲೆ ಇರುವೆವೊ? ಅಥವಾ ಇನ್ನಾವ ಲೋಕ ಕ್ಕಾದರೂ ಸಜೀವವಾಗಿ ಕೊಂಡೊಯ್ಯಲ್ಪಟ್ಟಿರುವೆವೊ! ಈ ವಿಷ್ಣುವರ್ಧನ ಶಾಂತಲದೇವಿಯರ ಪುಣ್ಯವೆಂತಹದು? ತಪಸ್ಸೆಂತಹದು! ಸ್ವರ್ಗವನ್ನೆ ಭೂಮಿಗೆ

ಇಳಿಸಿರುವ ಈ ಮಹಾನುಭಾವ ವಿಶ್ವಾಮಿತ್ರಾದಿಗಳಿಗಿಂತಲೂ ತಪೋಮಹಿಮರು. ಶಾಂತಲದೇವಿ ಅನಸೂಯೆ ಅರುಂಧತಿಯರಂತೆ ಪತಿವ್ರತೆ, ತಪಸ್ವಿನಿ. ಇಂಥವರು ಕೋರಿದರೆ ನಂದಿಗಳು ಬಾರದೆ ಇದ್ದಾವೆ! ಬಂದೇ ಬರುವವು. ಅಥವಾ ಇಲ್ಲಿಯೆ ಉದ್ಭವವಾದರೂ ಆದಾವು' ಎಂದು ಜನರೆಲ್ಲ ನಂದಿಗಳ ಆಗಮನವನ್ನೊ, ಉದ್ಭವವನ್ನೊ ನಿರೀಕ್ಷಿಸುತ್ತ, ಸುವರ್ಣಮೇರುವಿನಂತೆ ಎದ್ದು ನಿಂತಿದ್ದ ದೇವಾಲಯವನ್ನು ಎವೆಯಿಕ್ಕದೆ ನೋಡುತ್ತ ನಿಂತಿದ್ದರು.

ಆಗ ಅರ್ಧರಾತ್ರಿ ಕಳೆದು ಒಂದು ಜಾವ ಕಾಲವಾಗಿತ್ತು. ಕಾತುರರಾಗಿದ್ದ ಜನಗಳ ದೃಷ್ಟಿ ಈಗ ರಂಧ್ರಪಾತ್ರೆಯ ಮೇಲೆ ಬಿದ್ದಿತು. 'ಎಷ್ಟು ಹೊತ್ತಿಗೆ? ಮುಹೂರ್ತದ ವೇಳೆಗೆ ಇನ್ನೂ ಎಷ್ಟು ಹೊತ್ತಿದೆ?' ಎಂದು ಒಬ್ಬರನ್ನೊಬ್ಬರು ಪ್ರಶ್ನಿಸುತ್ತ 'ಸೂರ್ಯೋದಯಾದಿ ಒಂದು ಗಳಿಗೆಗೆ ಪ್ರತಿಷ್ಠಾಪನಾಮುಹೂರ್ತ, ಇನ್ನೂ ಏಳು ಗಳಿಗೆಗಳ ಕಾಲ ಅವಕಾಶವಿರುವುದು' ಎಂದು ಒಬ್ಬರಿಗೊಬ್ಬರು ಉತ್ತರ ಹೇಳುತ್ತ ಸಮಯನಿರೀಕ್ಷಣೆ ಮಾಡುತ್ತ ನಿಂತರು.

ಅಪ್ಪಾಜಿಯವರು ಸ್ನಾನ ಮುಗಿಸಿ ಮಡಿಯುಟ್ಟು, ವೈಖಾನಸರ, ಸಿದ್ಧಾಂತಿಗಳ, ಪುರೋಹಿತರ ಒಡಗೂಡಿ, ಭಕ್ತಿಯಿಂದ ಕೈಗಳನ್ನು ಜೋಡಿಸಿ ಕೊಂಡು ಮಹಾದೇವನನ್ನು ಸ್ಮರಿಸುತ್ತ ದೇವಾಲಯಕ್ಕೆ ನಡೆದುಬಂದರು. ಒಳಕ್ಕೆ ಬಂದೊಡನೆಯೆ ಈ ಮಹಾದ್ಭುತವನ್ನು ಕಂಡರು. 'ಕನಸು ಕಾಣು ತ್ತಿರುವೆನೊ!' ಎಂದು ಭ್ರಮೆಯಾಗಿ ಕಣ್ಣು ಹೊಸಕಿಕೊಳ್ಳುತ್ತ ಹೊರಆವರಣ ದೊಳಗಿದ್ದ ಒಂದು ಕಲ್ಲು ಸೋಪಾನದ ಮೇಲೆ ಕುಳಿತುಬಿಟ್ಟರು. 'ಉಪವಾಸ ವ್ರತಗಳಿಂದ ಪಿತ್ತೋದ್ರೇಕವೂ ಚಿತ್ತಭ್ರಮಣೆಯೂ ದೃಷ್ಟಿವೈಪರೀತ್ಯವೂ ಆಗಿರ ಬಹುದೆಂದುಕೊಂಡರು. ತನ್ನೊಡನೆ ಬಂದಿದ್ದವರೆಲ್ಲರೂ, ಅಲ್ಲಿ ನೆರೆದಿದ್ದವರೆಲ್ಲರೂ, ಬೆಕ್ಕಸಬೆರಗಾಗಿ, ಬಿಚ್ಚುಗಣ್ಣು, ಬಿಚ್ಚುಬಾಯಿಯಾಗಿ ದೇವಾಲಯವನ್ನು ನೋಡುತ್ತಿರುವುದನ್ನು ಕಂಡು, 'ಇದು ಚಿತ್ತಭ್ರಮೆ, ದೃಷ್ಟಿವೈಪರೀತ್ಯಗಳಿಂದಾ ದುದಲ್ಲ. ಎಲ್ಲವೂ ಮಹಾದೇವನ ಸಂತೋಷ' ಎನ್ನುತ್ತ ಆ ಮಹಾ ಅದ್ಭುತ ದೃಶ್ಯವನ್ನು ಕಣ್ತಣಿಯೆ ನೋಡುತ್ತ ಕುಳಿತರು. ಆಗ ಅಪ್ಪಾಜಿಯವರಿಗೆ ಅವರ್ಣನೀಯವಾದ ಮನಃಸ್ಥಿತಿ ಒಂದುಂಟಾಯಿತು. ತಮ್ಮೆರಡು ಕೈಗಳಿಂದ ಮುಖ ಮುಚ್ಚಿಕೊಂಡರು. ಬಾಷ್ಪವೂ, ಆನಂದಬಾಷ್ಪವೂ ಒಂದೇ ಧಾರೆಯಾಗಿ ಸುರಿಯಿತು. ಅಪ್ಪಾಜಿಯವರ ಹೃದಯದಲ್ಲಿ ಏಕಕಾಲದಲ್ಲಿ ಇಷ್ಟು ಸುಖ,

ಇಷ್ಟು ದುಃಖ, ಏಕೆ ಮಿಳಿತವಾಗಿತ್ತು ಎಂಬುದನ್ನರಿಯಲು ಸಾಧ್ಯವಿರಲಿಲ್ಲ. 'ಯಃಕಶ್ಚಿತ್ ಮನುಷ್ಯನಾದ ನನಗೆ ದೈವವು ಇಷ್ಟು ಕೃಪೆ ತೋರಬೇಕೆ! ಆತನ ಆಳು ನಾನು, ನಾನೇ ಮಾಡಬೇಕಾಗಿದ್ದ ಕಾರ್ಯವನ್ನು ದೈವದ ಮೇಲೆ ಹೊರಿಸಿ ದೆನಾದರೂ, ದಯಾಮಯನು ನನ್ನ ಉದ್ಧಾರಕ್ಕಾಗಿ ನೆರವಾದನಲ್ಲ!' ಎಂದು ಅವರಿಗೆ ದುಃಖ ಬಂದಿರಬಹುದು. ದೈವಗಳು ಹಲವೆಂದು ತಿಳಿದಿದ್ದ ತನ್ನ ಮನಕ್ಕೆ ದೈವ ಒಂದೆ, ರೂಪ ಹಲವಾರು ಎಂದು ತೋರಿಕೊಟ್ಟು, ಸಂಶಯ ವನ್ನು ಹೋಗಲಾಡಿಸಿ ಕರುಣಿಸಿದ ಭಗವಂತನಿಗೆ, ತಮ್ಮ ಆತ್ಮಾರ್ಪಣೆಯಿಂದ ಆದ ಸುಖರೂಪದ ಹರ್ಷಾಂಬು ಅದು ಇದ್ದರೂ ಇರಬಹುದು.

ಮಧ್ಯರಾತ್ರಿ ಕಳೆದು ಹತ್ತು ಗಳಿಗೆಗಳಾದವು. ಪೂರ್ವಾಕಾಶದಲ್ಲಿ ಸ್ವಲ್ಪ ಅರುಣಛಾಯೆ ಮೂಡಿತು. ಆಗ ಸಿಡಿಲು ಧರೆಗೆರಗಿದಂತೆ ಮಹಾ ಶಬ್ದ ವಾಯಿತು. ಧರೆ ಅದುರಿತು. ಎಲ್ಲರೂ ಪೂರ್ವದಿಕ್ಕನ್ನೇ ನೋಡಿದೆವು. 'ಉಲ್ಕಾ ಪಾತವಾಯಿತೆ! ಭೂಸ್ಪಂದನವೇಕಾಯಿತು!' ಎಂದು ಎಲ್ಲರೂ ಭಯಪಟ್ಟರು. ಕೆಲವರಂದರು: 'ಪೂರ್ವಾಕಾಶ ಮೇಘಾಚ್ಛಾದಿತವಾಗಿದೆ, ದೊಡ್ಡ ಮಳೆ ಬರ ಬಹುದು' ಎಂದು. ಮೇಘಾಚ್ಛಾದಿತವಾಗಿದ್ದರೆ ಅರುಣಛಾಯೆಯೆಂತು?' ಎಂದು ಕೆಲವರು ವಾದಿಸಿದರು.

ಅಪ್ಪಾಜಿಯವರ ಹೃದಯ ಈಗ ನಿರ್ಭೀತಿಯಿಂದಿತ್ತು. ಅಪ್ಪಾಜಿಯ ವರು ಹತ್ತಿರ ನಿಂತಿದ್ದ ಆಗಮಿಕರನ್ನು ನೋಡಿ 'ಈಗ ಸಮಯವೆಷ್ಟು?' ಎಂದು ಕೇಳಿದರು. ಆಗಮಿಕರು ಪಶ್ಚಿಮ ಆಕಾಶದಲ್ಲಿ ಇಳಿಯುತ್ತಿದ್ದ ಚಂದ್ರಮಂಡಲ ವನ್ನು ಈಕ್ಷಿಸಿ, ಕ್ಷಿತಿಜಕ್ಕೂ ಚಂದ್ರಮಂಡಲಕ್ಕೂ ಇರುವ ಅಂತರವನ್ನು ಗಮನಿಸಿ 'ಪ್ರಭೂ, ಮಧ್ಯರಾತ್ರಿ ಕಳೆದು ಒಂದು ಜಾವವಾಗಿದೆ' ಎಂದರು. ಇಷ್ಟು ಬೇಗ ಸೂರ್ಯೋದಯವೆ! ಆಗಮಿಕರೆ, ಹೊತ್ತನ್ನು ಚೆನ್ನಾಗಿ ಗಮನಿಸಿದಿರೇ?' ಎಂದರು. ಆಗಮಿಕರು ಮತ್ತೊಮ್ಮೆ ನಿಧಾನವಾಗಿ ಗಮನಿಸಿ, ಬಳಿಕ ರಂಧ್ರ ಪಾತ್ರೆಯನ್ನೂ ಗಮನಿಸಿ 'ಇನ್ನೂ ಎರಡು, ಎರಡೂವರೆ ಘಳಿಗೆ ಹೆಚ್ಚಿರಬಹುದು, ಪ್ರಭು' ಎಂದರು.

ಅಪ್ಪಾಜಿಯವರು ಪೂರ್ವದಿಕ್ಕನ್ನು ಮತ್ತೆ ನೋಡಿದರು. ಅರುಣ ಛಾಯೆ ಇದ್ದಿತು. ಎಷ್ಟು ಹೊತ್ತು ನೋಡಿದರೂ ಸೂರ್ಯಮಂಡಲದ ಅಂಚೇನೂ ಏಳಲಿಲ್ಲ, ಹಕ್ಕಿಗಳ ಕಲಕರವೂ ಇಲ್ಲ. 'ಇದೇನಾಶ್ಚರ್ಯ! ಅತ್ತ ಸೂರ್ಯೋದಯ

ಸಮಯವಾದರೆ, ಇತ್ತ ಚತುರ್ದಶಿಯ ಚಂದ್ರ ಅಸ್ತಮಿಸಬೇಕಾಗಿತ್ತಲ್ಲ! ಚಂದ್ರ ಮಂಡಲ ಅಸ್ತಮಿಸಬೇಕಾದರೆ ಹೆಚ್ಚುಕಡಮೆ ಇನ್ನೂ ಜಾವದಷ್ಟು ಕಾಲಾವ ಕಾಶವಿದೆಯಲ್ಲ!' ಎಂದುಕೊಂಡು, ಅಪ್ಪಾಜಿಯವರು ರಂಧ್ರಪಾತ್ರೆಯ ಕಾವಲು ಗಾರನನ್ನು ಕರೆಯಿಸಿ, ಅವನು ಹೋರೆ ಹೋರೆಗೂ ಗುರುತು ಮಾಡಿಡುತ್ತಿದ್ದ ಹಲಗೆಯನ್ನು ತರಿಸಿನೋಡಿದರು. ಅರ್ಧರಾತ್ರಿಯ ದೊಡ್ಡ ಚುಕ್ಕೆಯ ಅನಂತರ ಆ ಹಲಗೆಯ ಮೇಲೆ ಇನ್ನೂ ಮೂರು ಸಣ್ಣ ಚುಕ್ಕೆಗಳು ಸುಣ್ಣದಲ್ಲಿ ಗುರುತಾ ಗಿದ್ದವು. ಆಗಮಿಕರು ಹೇಳಿದ ಕಾಲ ಸರಿಯಾಗಿಯೆ ಇದ್ದಿತು. ಆಗ ಅಪ್ಪಾಜಿ ಯವರಿಗೆ ಇನ್ನೂ ಅಷ್ಟು ಆಶ್ಚರ್ಯವಾಯಿತು. ಪೂರ್ವದಿಕ್ಕನ್ನೆ ನೋಡುತ್ತ ಕುಳಿತರು. ಜನರೆಲ್ಲ 'ಕಣ್ಣುರೆಪ್ಪೆ ಬಡಿದರೆ, ಅಷ್ಟರೊಳಗೆ ಇನ್ನೇನು ಅದ್ಭುತ ತಮ್ಮ ಕಣ್ಣುತಪ್ಪಿಹೋಗುವುದೊ!' ಎಂದೆಣಿಸಿ ರೆಪ್ಪೆಬಡಿಯದೆ ಪೂರ್ವಾಕಾಶ ವನ್ನು ನೋಡುತ್ತಿದ್ದರು.

ಅಪ್ಪಾಜಿಯವರು ಒಮ್ಮೆ ಚಂದ್ರಮಂಡಲವನ್ನೂ, ಒಮ್ಮೆ ದೇವಾಲಯ ವನ್ನೂ, ಒಮ್ಮೆ ಪೂರ್ವದಿಗಂತವನ್ನೂ, ಒಮ್ಮೆ ರಂಧ್ರಪಾತ್ರೆಯನ್ನೂ ನೋಡುತ್ತ ಕುಳಿತರು. ರಂಧ್ರಪಾತ್ರೆಯ ನೀರೆಲ್ಲ ಕೆಳಗಿನ ಪಾತ್ರೆಗೆ ತೊಟ್ಟಿಟ್ಟಿತು. ಒಂದು ಹೋರೆಯ ಕಾಲವಾಯಿತು. ಕಾವಲುಗಾರ ಆಕ್ಷಣವೆ ಮೇಲಿನ ಪಾತ್ರೆಯನ್ನು ನೀರಿನಿಂದ ಮತ್ತೆ ತುಂಬಿಟ್ಟು ಹಲಗೆಯ ಮೇಲೆ ಸುಣ್ಣದಿಂದ ಮೂರು ಚುಕ್ಕೆ ಗಳ ಜೊತೆಗೆ ಇನ್ನೊಂದು ಚುಕ್ಕೆಯನ್ನು ಸೇರಿಸಿದ.

ನಮ್ಮ ಕಣ್ಣೆಲ್ಲ, ಜನಗಳ ಕಣ್ಣೆಲ್ಲ ನಂದಿಮಂಟಪಗಳ ಮೇಲಿತ್ತು. 'ನಂದಿ ಗಳು ಈಗಲೊ, ಇನ್ನು ಸ್ವಲ್ಪ ಹೊತ್ತಿಗೊ ಇಲ್ಲಿಯೆ ನೆಲಬಿರಿದುಕೊಂಡು ಉದ್ಭವಿಸುವುವು' ಎಂದು ಹೇಳುತ್ತ ಜನ ಕಣ್ಣೆವೆಯಿಕ್ಕದೆ ನೋಡುತ್ತಿದ್ದರು. ನೋಡುತ್ತಿದ್ದಷ್ಟೂ ಜನರ ಉತ್ಸಾಹ, ನಂಬಿಕೆ, ಆತುರಗಳು ಹೆಚ್ಚುತ್ತಲೆ ಹೋದುವು. ಪೂರ್ವದ ಹೊಂಬೆಳಕು ಇನ್ನಷ್ಟು ಹೆಚ್ಚಿತು. ಪಶ್ಚಿಮಾಕಾಶದಲ್ಲಿ ಚಂದ್ರಮಂಡಲ ಮೆಲ್ಲಮೆಲ್ಲನೆ ಕೆಳಕ್ಕಿಳಿಯುತ್ತಿದ್ದಿತು. ಇನ್ನೊಂದು ಹೊರೆ ಯೊಳಗಾಗಿ ಚಂದ್ರಾಸ್ತವಾಗಬಹುದೆಂದು ಕಂಡಿತು.

ಆಗ ಪೂರ್ವದಿಕ್ಕಿನಲ್ಲಿ, ಎಲ್ಲಿಯೊ ಬಹು ದೂರದಲ್ಲಿ ಪರ್ವತಾಗ್ರದಿಂದ ಬಂಡೆಗಳು ಉರುಳಿದಂತೆ ಸದ್ದಾಯಿತು. ಎಲ್ಲರೂ ಪೂರ್ವದಿಕ್ಕನ್ನೇ ನೋಡ

ತೊಡಗಿದರು. ಶಬ್ದ ಬರುಬರುತ್ತ ಹೆಚ್ಚಿತು. ಸ್ವಲ್ಪ ಕಾಲಾನಂತರ ಶಬ್ದಗಳು ಇನ್ನೂ ಸ್ಪಷ್ಟವಾದವು.

ಮೂವತ್ತು ನಲವತ್ತು ಸಹಸ್ರ ಜನರಿದ್ದ ಇಲ್ಲಿ ನಿಶ್ಶಬ್ದ, ನೀರವ. ಭಯ ಆಶ್ಚರ್ಯಗಳಿಂದ ಎಲ್ಲರ ಹೃದಯಗಳೂ ನಿಂತುಹೋಗುವುವೊ! ಎನ್ನುವಷ್ಟರ ಮಟ್ಟಿನ ನಿಶ್ಶಬ್ದ. ಆಗ ರಾಜಧಾನಿಯ ಪೂರ್ವ ಅಂಚಿನ ಕಾವಲುಗಾರರಿಬ್ಬರು ಪ್ರಭುಗಳನ್ನು ಅರಸುತ್ತ ಒಂದೇ ಉಸುರಿಗೆ ಓಡಿ ಓಡಿ ಇಲ್ಲಿಗೆ ಬಂದರು. ಜನರು ಅವರನ್ನು ಅಪ್ಪಾಜಿಯವರಿದ್ದಲ್ಲಿಗೆ ಕರೆತಂದರು. ಕಾವಲುಗಾರರ ಮುಖಗಳು ಆಯಾಸದಿಂದ, ಭಯದಿಂದ ವಿವರ್ಣವಾಗಿದ್ದವು. ಇಬ್ಬರೂ ಅಪ್ಪಾಜಿಯವರ ಪಾದಗಳಿಗೆ ಅಡ್ಡಬಿದ್ದು, ನಡುಗುತ್ತ, ತೊದಲುತ್ತ, 'ದೇವ! ನಂದಿಗಳು! ಕಲ್ಲು ನಂದಿಗಳು ನಡೆದುಬರುತ್ತಿವೆ! ಅವು ಜೀವಂತವಾಗಿವೆ! ಚಿನ್ನದ ಕಾಂತಿಯಂತೆ ಹೊಳೆಯುತ್ತಿದೆ ಅವುಗಳ ಮೈ! . . . ಅಲ್ಲಿ ಕಾಣುವ ಹೊಂಬೆಳಕು ಆ ನಂದಿಗಳ ಮೈಕಾಂತಿ! ದೇವ, ಅವುಗಳ ಕಣ್ಣುಗಳು ಜ್ಯೋತಿಗಳಂತೆ ಉರಿಯುತ್ತಿವೆ! ನಾವು ನೋಡಿ ಬಂದಿರುವುದನ್ನು ಅರಿಕೆಮಾಡಿಕೊಳ್ಳುತ್ತಿದ್ದೇವೆ. ದೇವರ ದೇವ, ಇದು ಸುಳ್ಳಲ್ಲ! ಸುಳ್ಳಾದರೆ ನಮ್ಮ ತಲೆಗಳನ್ನು ಕೊಟ್ಟೇವು. ಏನೀ ಆಶ್ಚರ್ಯ! ಏನೀ ಆಶ್ಚರ್ಯ! ಕಲ್ಲುನಂದಿಗಳು ಜೀವಂತವಾಗಿ ಎದ್ದು ನಡೆದುಬರುತ್ತಿವೆ! ಭಗವಾನ್ ಬಾಹುಬಲಿಸ್ವಾಮಿ ಆ ವಿರಾಟ್ ಆಕಾರದ ಶಿಲಾಪ್ರತಿಮೆ! ಆ ದ್ವಾದಶ ಪುರುಷ ಪ್ರಮಾಣೋನ್ನತ! ಆ ಸ್ವಾಮಿಯೆ ಸಜೀವನಾಗಿ ನಂದಿಗಳನ್ನು ಅಟ್ಟಿಕೊಂಡು ಬರುತ್ತಿದ್ದಾನೆ! ಕಾವಲು ಅಟ್ಟದ ಮೇಲೆ ನಿಂತಿದ್ದ ನಾವುಗಳು ಇದನ್ನು ಕಣ್ಣಾರೆ ಕಂಡೆವು. ತತ್‍ಕ್ಷಣವೆ ಓಡಿಬಂದು ತಮಗೆ ಅರಿಕೆ ಮಾಡಿಕೊಂಡಿದ್ದೇವೆ. ಶಿಲಾಕೃತಿಗಳೆಲ್ಲಾ ಸಜೀವವಾದರೆ ಇದೇನು ಕಾಲ ಬಂತು! ನಮಗೆ ಬಹು ಭಯವಾಗಿದೆ, ಕಾಪಾಡಬೇಕು ಪ್ರಭೂ!' ಎಂದು ಬಿನ್ನವಿಸಿಕೊಂಡರು.

ಅಪ್ಪಾಜಿಯವರು ಅವರಿಗೆ ಹೇಳಿದರು: 'ಇದಕ್ಕೆ ಭಯಪಡಬೇಕಾದುದಿಲ್ಲ. ಎಲ್ಲ ದೇವರುಗಳೂ ಇಂದು ನಮ್ಮ ಮೇಲೆ ದಯೆಗೈದಿರುವರು' ಎನ್ನುತ್ತಿರುವಾಗ ಅಪ್ಪಾಜಿಯವರ ಎದೆ ಉಬ್ಬಿತು, ಮುಖ ಅರಳಿತು, ಕಣ್ಣುಗಳಲ್ಲಿ ಅಪೂರ್ವ ಕಾಂತಿ ಶೋಭಿಸಿತು. ಆನಂದಬಾಷ್ಪ ಧಾರೆಯಾಯಿತು. ಅವರು ತಮ್ಮ ಕೊರಳಲ್ಲಿದ್ದ ರತ್ನಹಾರಗಳೆರಡನ್ನೂ ತೆಗೆದು, ಬಾಗಿ ನಿಂತಿದ್ದ ಆ ಕಾವಲು

ಗಾರರ ತಲೆಯ ಮೇಲೆ ಒಂದೊಂದನ್ನಿಟ್ಟು 'ಇಂತಹ ದೃಶ್ಯವನ್ನು ಎಲ್ಲರಿಗಿಂತ ಮೊದಲೆ ಕಂಡ ನೀವೇ ನಮಗಿಂತ ಭಾಗ್ಯಶಾಲಿಗಳು. ಹೋಗಿ, ಈ ಸಂತೋಷದ ಸುದ್ದಿಯನ್ನು ಎಲ್ಲರಿಗೂ ತಿಳಿಸಿರಿ: ನಂದಿಗಳು ಜೀವಂತವಾಗಿ ನಡೆದು ಬರುತ್ತಿರುವವೆಂದು ತಿಳಿಸಿರಿ, ಭಗವಾನ್ ಬಾಹುಬಲಿಸ್ವಾಮಿಯೆ ಅವುಗಳನ್ನು ಕರೆತರುತ್ತಿದ್ದಾನೆಂದು ತಿಳಿಸಿರಿ' ಎಂದು ಮಿಗಿಲಾದ ಉತ್ಸಾಹದಿಂದ ಹೇಳಿದರು.

ಜನರಿಗೆ ಈ ಸಂಗತಿ ತಿಳಿದುಬಂದು, ಅವರ ಆನಂದಕ್ಕೆ ಮಿತಿ ಇಲ್ಲವಾಯ್ತು. ಅವರು ಉನ್ನತವಾದ ಸೌಧಗಳ ಮೇಲೆ, ಉನ್ನತ ವೃಕ್ಷಾಗ್ರಗಳನ್ನು ಹತ್ತಿನೋಡಿದರು. ಸುಮಾರು ಹರಿದಾರಿಯಷ್ಟು ದೂರದಲ್ಲಿ ಭಗವಾನ್ ಬಾಹುಬಲಿ, ಶ್ರವಣಬೆಳುಗೊಳದ ಆ ಗೊಮ್ಮಟೇಶ್ವರಸ್ವಾಮಿ ನಂದಿಗಳನ್ನು ಕರೆತರುತ್ತಿದ್ದನು. ಮಹೋನ್ನತ ಬಾಹುಬಲಿಸ್ವಾಮಿ ಹನ್ನೆರಡು ಪುರುಷ ಪ್ರಮಾಣದ ಶಿಲಾಮೂರ್ತಿ ಸಜೀವ ಸೌಮ್ಯಪುರುಷನಾಗಿದ್ದನು. ಆ ಗೊಮ್ಮಟನ ಒಂದೊಂದು ಹೆಜ್ಜೆಗೂ ಧರೆ ಕಂಪಿಸಿತು. ಪದತಲಕ್ಕೆ ಸಿಕ್ಕಿದ ವೃಕ್ಷಲತೆಗಳು ಚೂರ್ಣವಾದವು. ನೆಲಮಟ್ಟದಿಂದ ಅಹಂಕಾರ ದರ್ಪಗಳಂತೆ ಎದ್ದುನಿಂತಿದ್ದ ಬಂಡೆಗಳು ಭಗವಂತನಿಂದ ತುಳಿಯಲ್ಪಟ್ಟು ಭೂಮಿಯೊಳಕ್ಕೆ ಕುಸಿದವು. ನಂದಿಗಳ ಮೈ ಮೆರುಗಿಟ್ಟ ಹೊನ್ನಿನಂತೆ ಹೊಳೆಯುತ್ತಿತ್ತು. ಅವುಗಳ ಕುತ್ತಿಗೆಯಲ್ಲಿ, ಮೈಮೇಲೆ, ಕಟಿಪಾರ್ಶ್ವಗಳಲ್ಲಿ ಇದ್ದ ಕಿರುಗೆಜ್ಜೆ, ಬಿರುಗೆಜ್ಜೆ, ಕಿರುಗಂಟೆ, ಬಿರುಗಂಟೆ, ಕಟಿಗಂಟೆ, ಗಳಗಂಟೆಗಳ ಸುನಾದ ಆ ಕಾನನವನ್ನೆಲ್ಲ ತುಂಬಿಸಿತ್ತು.

ನಂದಿಗಳು ವೇಗದಿಂದ ಬರುತ್ತಿದ್ದವು. ನಾನೂ ಅಪ್ಪಾಜಿಗಳೂ, ಚಿಕ್ಕಕ್ಕನೂ, ಉತ್ಸವಮೂರ್ತಿಗೆಂದು ಹೊಸದಾಗಿ ಮಾಡಿಸಿದ್ದ ಎತ್ತರವಾದ ತೇರನ್ನೇರಿ ನೋಡಿದೆವು. ಆ ದೃಶ್ಯ ನಮಗೆಲ್ಲ ಬ್ರಹ್ಮಾನಂದವನ್ನುಂಟುಮಾಡಿತು, ಅಕ್ಕ.

ಜನಗಳ ಆನಂದಕ್ಕೆ, ಉತ್ಸಾಹಕ್ಕೆ ಮಿತಿಯೆಲ್ಲಿ! ಬರುತ್ತಿರುವ ನಂದಿಗಳ ಬಾಯಿಗೆಂದು ನೂರಾರು ಗೊನೆ ಕಳಿತ ಬಾಳೆಯಹಣ್ಣುಗಳನ್ನು ತಂದು ಬಿಡಿಸಿಟ್ಟರು. ಬೀಜ ಬಿಡಿಸಿದ ಹಲಸಿನ ಹಣ್ಣಿನ ತೊಳೆಗಳನ್ನು ಗೂಡೆ ಗೂಡೆ ತಂದರು. ಎಷ್ಟೋ ನೂರು ತೆಂಗಿನಕಾಯ್ಗಳನ್ನು ತಂದು ಒಡೆದು, ಚಿಪ್ಪಿನಿಂದ ಕೊಬ್ಬರಿಯನ್ನು ಬಿಡಿಸಿ ಚೂರುಚೂರು ಮಾಡಿ ಇಟ್ಟರು. ಬೆಲ್ಲದ ಮುದ್ದೆಗಳನ್ನು ಗೂಡೆಗಳಲ್ಲಿ ಹೊತ್ತು ತಂದು ಪುಡಿಮಾಡಿ ಹಣ್ಣುಕಾಯಿ ಕೊಬ್ಬರಿಗಳೊಡನೆ ಕೂಡಿಸಿ ಎರಡು ಕಬ್ಬಿನಹಾಲು ಕಾಯಿಸುವ ಕೊಪ್ಪರಿಗೆಗಳಲ್ಲಿ

ತುಂಬಿಟ್ಟರು. ಇನ್ನೆರಡು ಕೊಪ್ಪರಿಗೆಗಳಲ್ಲಿ ಶೀತಳೋದಕವನ್ನು ತುಂಬಿ ಸಿಟ್ಟರು. ಭಗವಾನ್ ಬಾಹುಬಲಿಸ್ವಾಮಿಗೆ ಪುಷ್ಪಾಭಿಷೇಕ ಮಾಡಲು, ದೇವಾಲಯದ ಮಹಾದ್ವಾರದ ಮೇಲುಗಡೆ ಸುವಾಸನೆಯ ಪುಷ್ಪಗಳನ್ನು ರಾಸಿರಾಸಿ ಶೇಖರಿಸಿಟ್ಟರು. ಜನರ ಈ ಆನಂದವನ್ನು ನೋಡಿ ಅಪ್ಪಾಜಿಯವರಿಗೆ ಹೃದಯ ಉಕ್ಕಿ ಉಕ್ಕಿ ಹರಿಯಿತು.

ನಂದಿಗಳೂ ಬಾಹುಬಲಿಸ್ವಾಮಿಯೂ ಇನ್ನು ಅರ್ಧ ಹರಿದಾರಿ ದೂರ ಇರುವರೆನ್ನುವಷ್ಟರಲ್ಲಿ ನಿಂತುಬಿಟ್ಟಂತಾಯಿತು. ಜನರು ಹೇಳಿದರು: 'ಪ್ರತಿಷ್ಠಾ ಸಮಯ ಎರಡು ಜಾವದ ಮೇಲೆ ಒಂದು ಘಳಿಗೆಗೆ ಅಲ್ಲವೆ! ಅಷ್ಟು ಹೊತ್ತಿಗೆ ಬಂದರಾಯ್ತು, ಎಂದು ನಿಂತಿರಬೇಕು' ಎಂದು. ನಾನೂ ಚಿಕ್ಕಕ್ಕನೂ ಪುನಃ ತೇರಿನ ಮೇಲಕ್ಕೆ ಹತ್ತಿ ನೋಡಿದೆವು. ಬಾಹುಬಲಿಸ್ವಾಮಿ ಕದಲದೆ ನಿಂತು ಬಿಟ್ಟಿದ್ದನು. ನಂದಿಗಳೂ ನಿಂತುಬಿಟ್ಟಿದ್ದವು. 'ಜನರೆಂದ ಮಾತು ನಿಜವಿರ ಬಹುದು. ಸಮಯಕ್ಕೆ ಸರಿಯಾಗಿ ಭಗವಂತನು ನಂದಿಗಳನ್ನು ಕರೆತರುವನು' ಎಂದು ಚಿಕ್ಕಕ್ಕನೊಡನೆ ನಾನೆಂದೆ. 'ಈ ಮಾತೇ ನಿಜವಾಗಲಿ' ಎಂದಳು ಚಿಕ್ಕಕ್ಕ. ಆಗ ಅಲ್ಲಿದ್ದ ಎಲ್ಲರಿಗೂ ನಮಗೂ ಒಂದು ವಿಚಿತ್ರ ಅನುಭವವಾಯ್ತು. ಗಾಳಿ ಚಲಿಸದೆ ನಿಂತಿತು. ಅಷ್ಟುಹೊತ್ತೂ ಹಿತವಾಗಿ ಬೀಸುತ್ತಿದ್ದ ತಂಗಾಳಿ ಈಗ ತಟ್ಟನೆ ನಿಂತಂತಾಯ್ತು. ವೃಕ್ಷಗಳಲ್ಲಿ ಎಲೆಗಳು ಸಹ ಅಲುಗಲಿಲ್ಲ. ದೇವಾಲಯದ ಹೊರಕಟ್ಟುಗಳಲ್ಲಿ ಪ್ರದಕ್ಷಿಣೆ ಬರುತ್ತಿದ್ದ ಆನೆಗಳೂ, ಸಿಂಹಗಳೂ, ತುರಗ ಖಗ ಮೃಗಗಳೂ, ದೇವರುಗಳೂ, ನಾಟ್ಯವಾಡುತ್ತಿದ್ದ ಗಂಧರ್ವ ವಿಲಾಸಿನಿಯರೂ ವಾದ್ಯಗಾರರೂ, ಸೈನಿಕರೂ, ಅತಿರಥ ಮಹಾರಥರೂ, ಎಲ್ಲರೂ ಅಲುಗಾಡದೆ, ಅಲ್ಲಲ್ಲಿಯೇ, ಹಾಗೆ ಹಾಗೆಯೆ ನಿಂತವು, ನಿಂತರು. 'ಈ ಭೀಕರ ಸನ್ನಿವೇಶ ತಟ್ಟನೆ ಒದಗಿತೇಕೆ! ಇದೇನು! ಏನು ಕಾರಣ?' ಎಂದು ಒಬ್ಬರಿಗೊಬ್ಬರು ಕೇಳಿದರು.

ಅಪ್ಪಾಜಿಯವರೂ 'ಇದೇಕೆ ಹೀಗಾಗುತ್ತಿದೆ! ನಂದಿಗಳು ತಟ್ಟನೆ ನಿಂತುಬಿಟ್ಟವೇಕೆ? ಒಂದುವೇಳೆ ಜನರು ಆಡಿಕೊಳ್ಳುತ್ತಿರುವಂತೆ ಇನ್ನೂ ಪ್ರತಿಷ್ಠಾಪನೆಯ ವೇಳೆ ಆಗಲಿಲ್ಲವೆಂದೆ? ದೇವಾಲಯದ ಹೊರಕಟ್ಟುಗಳಲ್ಲಿ ಪ್ರದಕ್ಷಿಣೆ ಬರುತ್ತಿದ್ದ ಆನೆಗಳೂ, ವ್ಯಾಳಿಗಳೂ ಇತರ ಮೃಗಪಕ್ಷಿ ಸಂಕುಲಗಳೂ ಏಕೆ ನಿಂತುಬಿಟ್ಟವು? ಯಕ್ಷರೂ ಗಂಧರ್ವರೂ ದೇವತೆಗಳೂ ಹೀಗೇಕೆ ನಂದಿ

ಗಳು ನಿಂತೊಡನೆಯೆ ಇವರೂ ನಿಶ್ಚಲರಾಗಿ ನಿಂತುಬಿಟ್ಟರು? ಭಗವಾನ್ ಬಾಹುಬಲಿಯೂ ನಿಂತನೇಕೆ?' ಎಂದು ಕಳವಳಗೊಂಡರು.

ರಂಧ್ರಪಾತ್ರೆಯ ನೀರೆಲ್ಲ ಮತ್ತೊಮ್ಮೆ ಬರಿದಾಯಿತು. ಕಾವಲುಗಾರ ಮತ್ತೆ ಪಾತ್ರೆಯನ್ನು ತುಂಬಿಸಿಟ್ಟ, ಹಲಗೆಯ ಮೇಲೆ ಇನ್ನೊಂದು ಸಣ್ಣ ಚುಕ್ಕೆಯನ್ನಿಟ್ಟ. ಒಂದು ಜಾವ ಕಳೆದು ಐದು ಗಳಿಗೆಗಳ ಕಾಲವಾಗಿತ್ತು. 'ಇನ್ನು ಮೂರೂವರೆ ಗಳಿಗೆಗಳಲ್ಲವೆ ಉಳಿದಿರುವುದು? ಅಷ್ಟುಹೊತ್ತಿಗೆ ನಂದಿಗಳು ಬರಲೇಬೇಕಲ್ಲವೆ!' ಎಂದರು ಜನರು. ಅಪ್ಪಾಜಿಯವರ ಮನಸ್ಸಿನಲ್ಲಿ ಏನೊ ಕಳವಳ ಉತ್ಪನ್ನವಾಯಿತು. ಪೂರ್ವದಿಕ್ಕನ್ನು ನೋಡಿದರು, ರಂಧ್ರಪಾತ್ರೆಯನ್ನು ನೋಡಿದರು. ಪಶ್ಚಿಮದಿಕ್ಕನ್ನು ನೋಡಿದರು. ಅನಂತರ ತಲೆತಗ್ಗಿಸಿ ಮಹಾದೇವನ ಧ್ಯಾನಮಾಡುತ್ತ ಕುಳಿತುಬಿಟ್ಟರು.

ಗಾಳಿಯ ಸುಳಿವೆ ಇಲ್ಲವಾಯ್ತು. ಉಸಿರಾಡಲು ಸಹ ಕಷ್ಟವಾಗುತ್ತಿರುವಂತೆ ಎಲ್ಲರಲ್ಲೂ ಅನುಭವವಾಯ್ತು. ನಾಲ್ಕಾರು ಉಚ್ಛ್ವಾಸ ನಿಶ್ವಾಸಗಳನಂತರ ಒಂದು ಸಲ ದೀರ್ಘವಾಗಿ ಉಸಿರೆಳೆದುಕೊಳ್ಳಬೇಕಾಗಿ ಬಂದಿತು. ಏಕೆ ಹೀಗಾಗುತ್ತಿದೆಯೆಂದು ಯಾರಿಗೂ ತಿಳಿಯಲಾಗಲಿಲ್ಲ. ಉತ್ಸಾಹದಿಂದಿದ್ದ ಜನಗಳ ಮನಸ್ಸಿನಲ್ಲಿ ಈಗ ಭೀತಿ ಅಂಕುರಿಸುತ್ತ ಬಂದಿತು.

ಈ ಶೋಚನೀಯವಾದ ಸ್ಥಿತಿಯಲ್ಲಿ ಮತ್ತೊಮ್ಮೆ ರಂಧ್ರಪಾತ್ರೆ ಬರಿದಾಯಿತು. ಕಾವಲುಗಾರ ಮತ್ತೆ ತುಂಬಿ, ಹಲಗೆಯ ಮೇಲೆ ಇನ್ನೊಂದು ಚುಕ್ಕೆಯನ್ನಿಟ್ಟ. ಈಗ ಮಧ್ಯರಾತ್ರಿಯಾಗಿ ಮೇಲೆ ಎರಡು ಜಾವಗಳಾದವು. ಪೂರ್ವದಿಕ್ಕಿನ ಕೆಂಜಾಯೆ ಮಾತ್ರ ಹಾಗೆಯೆ ಇತ್ತು. ಪಶ್ಚಿಮಾಕಾಶದಲ್ಲಿ ಚಂದ್ರಮಂಡಲ ಹಿಂದೆ ಇದ್ದ ಸ್ಥಳದಲ್ಲಿಯೆ ಇತ್ತು. ನಂದಿಗಳೂ ನಿಂತಲ್ಲಿಯೆ ನಿಂತಿದ್ದವು. ಭಗವಾನ್ ಬಾಹುಬಲಿಯೂ ನಿಂತ ಸ್ಥಳದಿಂದ ಕದಲಿರಲಿಲ್ಲ.

ಬರುಬರುತ್ತ ನಮ್ಮೆಲ್ಲರಿಗೂ ಉಸಿರಾಡುವುದು ಅತಿ ಕಷ್ಟವಾಗುತ್ತ ಬಂತು. ಎಷ್ಟು ಎಷ್ಟು ಎಳೆದುಕೊಂಡರೂ ಗಾಳಿ ಸಾಲದಾಗಿಹೋಯಿತು. ಮೇಲುಬ್ಬಸದ ರೋಗ ಬಂದವರಂತಾದೆವು. ಅಪ್ಪಾಜಿಯವರ ಬಳಿಯೆ ನಿಂತಿದ್ದ ಚಿಕ್ಕಕ್ಕನ ಅವಸ್ಥೆಯಂತೂ ಬಹು ಘೋರವಾಗಿತ್ತು. ಅಪ್ಪಾಜಿಯವರು ಮೊದಲೇ ವ್ರತನಿಯಮಗಳಿಂದ, ಉಪವಾಸದಿಂದ, ಶಕ್ತಿ ಕುಂದಿದವರಾಗಿದ್ದರು. ಈಗ ಉಸಿರಾಡಲು ಸಹ ಅವರು ಕಷ್ಟಪಡುತ್ತಿರುವುದು ಮುಖಭಾವದಿಂದ

ವ್ಯಕ್ತಪಡುತ್ತಿತ್ತು; ಅಪ್ಪಾಜಿಯವರು ಆಗ ಕತ್ತೆತ್ತಿ ಬಳಿಯೆ ನಿಂತಿದ್ದ ಆಗಮಿಕ ರನ್ನು ಕುರಿತು 'ಭಟ್ಟರೆ, ಈಗೆಷ್ಟು ಸಮಯವಾಯಿತು?' ಎಂದು ಕೇಳಿದರು. ಉತ್ತರ ಹೇಳಲು ಅವರಿಗೆ ಬಹು ಕಷ್ಟವಾಯಿತು. ರಂಧ್ರಪಾತ್ರದ ಎಣಿಕೆಯ ಪ್ರಕಾರ ಆಗ ರಾತ್ರಿ ಕಳೆದು ಎರಡು ಜಾವವಾಗಿಹೋಗಿದ್ದಿತು. ಆ ವೇಳೆಗೆ ಸೂರ್ಯೋದಯ ಚೆನ್ನಾಗಿ ಆಗಿರಬೇಕಾಗಿದ್ದಿತು. ಆಗಮಿಕರು 'ರಾತ್ರಿ ಕಳೆದು ಎರಡು ಜಾವವಾಗಿರಲಾರದು, ಪ್ರಭು' ಎಂದರು.

ಅಪ್ಪಾಜಿಯವರಿಗೆ ದಿಕ್ಕು ತೋರದಂತಾಯ್ತು. ಆಗಮಿಕರಿಗೆ ಹಲಗೆಯ ಮೇಲಿದ್ದ ಚುಕ್ಕೆಗಳನ್ನು ಎಣಿಕೆಮಾಡಿ ತೋರಿದರು. ಆಗಮಿಕರು 'ಒಂದು ಚುಕ್ಕೆ ಕೈತಪ್ಪಿ ಹೆಚ್ಚು ಬಿದ್ದಿರಬಹುದು, ಪ್ರಭು' ಎಂದರು. ಆಗಮಿಕರೆಂದ ಮಾತನ್ನು ಅಪ್ಪಾಜಿಯವರು ಈ ವಿಚಿತ್ರ ಪರಿಸ್ಥಿತಿಯಲ್ಲಿ ನಂಬಲೂ ಆಗಲಿಲ್ಲ, ನಂಬದೆ ಇರಲೂ ಆಗಲಿಲ್ಲ. ಇಂದ್ರಜಾಲ ಮಹೇಂದ್ರಜಾಲ ಪೋಟಿಯೊಂದು ನಡೆಯುತ್ತಿದ್ದಂತೆ ಕಂಡಿತು. ಸುತ್ತಲೂ ಇರುವ ಜನರೆಲ್ಲ ಗಾಳಿಗಾಗಿ ಬಾಯಿ ಬಿಟ್ಟುಕೊಂಡು ವಿವರ್ಣರಾಗಿ ನಿಂತಿರುವುದನ್ನೂ, ತಮ್ಮ ಸ್ಥಿತಿಯೂ ಹಾಗೆಯೆ ಆಗಿರುವುದನ್ನೂ ಕಂಡು ವ್ಯಥೆಪಟ್ಟರು. ಈ ಘೋರ ಪರಿಸ್ಥಿತಿಯಲ್ಲಿಯೆ ಇನ್ನೂ ಒಮ್ಮೆ ರಂಧ್ರಪಾತ್ರೆ ಬರಿದಾಯಿತು. ಕಾವಲುಗಾರ ಮತ್ತೆ ತುಂಬಿಟ್ಟ, ಮತ್ತೊಂದು ಚುಕ್ಕೆಯನ್ನಿಟ್ಟ.

ಅಪ್ಪಾಜಿಯವರೂ ಆಗಮಿಕರೂ ಸಿದ್ಧಾಂತಿಗಳೂ ಎಲ್ಲರೂ ಪೂರ್ವ ಆಕಾಶವನ್ನು ನೋಡಿದರು. ಸೂರ್ಯಮಂಡಲದ ರೇಖೆಯೂ ಕಾಣಬರಲಿಲ್ಲ. ಪಶ್ಚಿಮದಲ್ಲಿ ಚಂದ್ರನು ಒಂದು ಗೆರೆಯಷ್ಟೂ ಕೆಳಗಿಳಿದಿರಲಿಲ್ಲ.

ರಂಧ್ರಪಾತ್ರೆಯ ಲೆಕ್ಕದಂತೆ ಆಗ ಮುಹೂರ್ತಕಾಲ ಮುಗಿದೇಹೋಗಿತ್ತು. ನಾನು ಇನ್ನೊಮ್ಮೆ ಬಹು ಶ್ರಮದಿಂದ ತೇರಿನ ಮೇಲೇರಿ ನೋಡಿದೆ. ನಂದಿ ಗಳೂ ಕದಲಿರಲಿಲ್ಲ, ಬಾಹುಬಲಿಸ್ವಾಮಿಯೂ ಕದಲಿರಲಿಲ್ಲ. ಜನರೆಲ್ಲರೂ ನಿಶ್ಶಕ್ತರಾಗಿ, ತೇಜೋಹೀನರಾಗಿ, ನೀರಿನಿಂದ ಎಳೆದು ದಡಕ್ಕೆ ಬಿಸಾಡಿದ್ದ ಮತ್ಸ್ಯಗಳಂತೆ ಬಾಯಿಬಾಯಿಬಿಡುತ್ತ ನಿಂತಲ್ಲಿಯೆ ಗುಂಪುಗುಂಪಾಗಿ ಕುಳಿತಿ ದ್ದರು. ವಸ್ತ್ರದಿಂದ ಬೀಸಿಕೊಂಡರೂ ಗಾಳಿ ಇಲ್ಲ.

ಅಪ್ಪಾಜಿಯವರು ಮೇಲುಸಿರುಬಿಡುತ್ತ 'ಸಿದ್ಧಾಂತಿಗಳೆ, ನೀವು ಹೇಳಿ, ಈಗೆಷ್ಟು ಸಮಯವಾಗಿದೆ?' ಎಂದು ಕೇಳಿದರು. ಒಣಗಿಹೋಗಿದ್ದ ಅವರ

ಗಂಟಲು, ನಾಲಗೆ ಈಗ ಕಟ್ಟಿಯೇ ಹೋಯಿತು. ಅವರು 'ಪ್ರಭು, ಇಂತಹ ಆಶ್ಚರ್ಯಕರವಾದ ಸನ್ನಿವೇಶ ಹಿಂದೆ ಯಾವ ಕಾಲದಲ್ಲೂ ಆಗಿದ್ದನ್ನೇ ಕೇಳಿ ಅರಿಯೆವು! ಕಾಲವೆ ಸುಳ್ಳೊ, ಕಣ್ಣುಗಳೆ ಸುಳ್ಳೊ! ಹೇಳಲಾರೆ' ಎಂದರು. ಕುಳಿತಿದ್ದ ಜನರೆಲ್ಲ ಈಗ ಮಲಗಿಬಿಟ್ಟಿದ್ದರು. ಕುಳಿತುಕೊಳ್ಳಲು ಸಹ ಅವರಿಗೆ ಶಕ್ತಿ ಇಲ್ಲದೆ ಹೋಗಿತ್ತು. ಹೃದಯಗಳು ಇನ್ನೇನು ನಿಂತುಹೋಗುವ ಕಾಲ ಬಂದಿದ್ದಿತು.

ಯಾವ ತಪ್ಪಿತದಿಂದಲೊ, ಯಾವ ದೋಷದಿಂದಲೊ, ಯಾವ ದ್ರೋಹದಿಂದಲೊ ಹೀಗಾಗುತ್ತಿರಬಹುದೆಂದೆಣಿಸಿ ಅಪ್ಪಾಜಿಯವರು ತಮ್ಮೆಲ್ಲರ ಪರವಾಗಿ ಜನಗಳೆಲ್ಲರ ಪರವಾಗಿ ಭಗವಂತನಲ್ಲಿ ಮೊರೆಯಿಟ್ಟು ಬೇಡಿದರು. 'ಕೃಪೆ ತೋರಿದ ದೈವ ಈಗೇಕೆ ಕೈಬಿಟ್ಟಿತು? ಯಾರಿಂದ ಏನು ಅಪರಾಧವಾಯ್ತು?' ಎಂದು ಅವರ ಮನಸ್ಸು ಕೊರಗಿತು. ಆಗ ಅವರ ಮನಸ್ಸಿಗೆ ದೈವವೆ ಈ ವಿಷಯವನ್ನು ಸೂಚಿಸಿತೊ! ಎಂಬಂತೆ ಕತ್ತೆತ್ತಿ ಚಿಕ್ಕಕ್ಕನನ್ನು ನೋಡಿದರು. ಚಿಕ್ಕಕ್ಕ ಆಕಾಶದ ಕಡೆ ಮುಖಮಾಡಿ, ಇಲ್ಲದ ಗಾಳಿಯನ್ನು ಎಳೆದುಕೊಳ್ಳುವುದಕ್ಕೆ ಯತ್ನಿಸುತ್ತಿದ್ದಳು. ಅಪ್ಪಾಜಿಯವರು ಅತಿ ಕಷ್ಟದಿಂದ 'ಲಕ್ಷ್ಮಿ, ನಿನ್ನ ಅಕ್ಕನೆಲ್ಲಿ?' ಎಂದು ಕೇಳಿದರು. ಲಕ್ಷ್ಮಿ ಏದುತ್ತ ಏದುತ್ತ, 'ದೇವ, ಮಧ್ಯರಾತ್ರಿಗೆ ಒಂದು ಜಾವದ ಮೊದಲು ಅಕ್ಕನನ್ನು ನೋಡಿದ್ದೆ, ಆಮೇಲೆ ನೋಡಲಿಲ್ಲ' ಎಂದಳು. ಅಪ್ಪಾಜಿಯವರು ನೋಡಿ ಬನ್ನಿರೆಂದು ಆಳುಗಳನ್ನು ಅರಮನೆಗೆ ಅಟ್ಟಿದರು; 'ವಾಸಂತಿಕಾ ದೇವಿಯ ಆಲಯದಲ್ಲಿ, ತವರುಮನೆಯಲ್ಲಿ, ಶಾರದಾಲಯದಲ್ಲಿ ಎಲ್ಲ ಕಡೆಯೂ ಹುಡುಕಿ ಕರೆತನ್ನಿರಿ, ಬೇಗನೆ ಕರೆತನ್ನಿರಿ' ಎಂದಾಜ್ಞೆ ಮಾಡಿದರು. ಆಳುಗಳು ಎಲ್ಲ ಕಡೆಯಲ್ಲೂ ಹುಡುಕಿ ಪ್ರಯೋಜನವಿಲ್ಲದೆ ಬಂದು ಅರಿಕೆ ಮಾಡಿದರು. ಅರಮನೆಯ ದಾಸಿಯರು ಬಂದು 'ಜೀಯ, ದೇವಿಯರು ಅರಮನೆಯಲ್ಲಿಲ್ಲ; ಅವರು ಈ ರಾತ್ರಿ ಹಾಸಿಗೆಯಲ್ಲಿ ನಿದ್ರಿಸಲೇ ಇಲ್ಲ'ವೆಂದರು. 'ಮನೆಗೂ ಬರಲಿಲ್ಲ' ಎಂದು ಮಾಚಿಕಬ್ಬೆಯವರೆ ಬಂದು ತಿಳಿಸಿದರು. ಅಪ್ಪಾಜಿಯವರಿಗೆ ದಿಕ್ಕು ತೋಚದೆ ಹುಚ್ಚರಂತಾದರು. ಸುತ್ತ ನೆರೆದಿದ್ದ ಪೌರರೂ ಮಕ್ಕಳೂ ಹೆಂಗಸರೂ ಉಸಿರಿಗಾಗಿ ಕಷ್ಟಪಡುತ್ತಿರುವುದನ್ನು ನೋಡಲಾರದೆ 'ಶಿವಶಿವ ಇದೇನು ಘೋರ!' ಎಂದು ಕಣ್ಣು ಮುಚ್ಚಿಕೊಂಡರು. ಆಗ ಚಿಕ್ಕಕ್ಕ ಮೆಲ್ಲಮೆಲ್ಲನೆ, ನೆಲಕ್ಕೆ ಉರುಳಿಹೋಗುವ ರೀತಿಯಲ್ಲಿ ನಾನಿದ್ದಲ್ಲಿಗೆ ಬಂದಳು.



ಹಳೆಯಬೀಡಿನ ನಂದಿಯ ಮಂಟಪಗಳಲ್ಲೊಂದು

(ಹೊಯಿಸಳೇಶ್ವರನ ಎದುರಿಗೆ—ಸೂರ್ಯದೇವಾಲಯ ಸಹಿತವಾಗಿ)

ನನ್ನ ಅವಸ್ಥೆಯೂ ಎಲ್ಲರಂತೆಯೆ ಇದ್ದಿತು. ಬಿದ್ದಿರುವ ಕಡ್ಡಿಯನ್ನು ಸಹ ಮೇಲಕ್ಕೆ ಎತ್ತಿಕೊಳ್ಳುವಷ್ಟು ಶಕ್ತಿ ಇರಲಿಲ್ಲ ನನಗೆ. ರಥದ ಚಕ್ರವೊಂದನ್ನು ಒರಗಿ ನಿಂತಿದ್ದೆ. ಚಿಕ್ಕಕ್ಕ ಹೇಗೋ ಬಳಿಗೆ ಬಂದು ಅತಿ ಸಂಕಟದಿಂದ 'ಅಕ್ಕ ನೆಲ್ಲಿ? ಅಪ್ಪಾಜಿಯವರು ಬಹು ಕಾತುರರಾಗಿದ್ದಾರೆ. ಎಲ್ಲ ಕಡೆ ಹುಡುಕಿಸಿದರು, ಸಿಗಲಿಲ್ಲ' ಎಂದು ಹೇಳಿ ಅತ್ತುಬಿಟ್ಟಳು.

ಚಿಕ್ಕಕ್ಕ ಏಕೆ ಇಷ್ಟು ದುಃಖಪಡುತ್ತಿದ್ದಾಳೆಂದು ನನಗೆ ಬಹಳ ಆಶ್ಚರ್ಯವಾಯಿತು. ನಾನು ಚಿಕ್ಕಕ್ಕನ ಕೈಹಿಡಿದುಕೊಂಡು ಮೆಲ್ಲಗೆ ಸೂರ್ಯಾಲಯದ ಬಳಿಗೆ ಹೋದೆ. ಸೂರ್ಯಾಲಯದ ಬಾಗಿಲು ನಾನು ಮುಚ್ಚಿದಂತೆಯೆ ಇತ್ತು. ಅದನ್ನು ಯಾರೂ ತೆರೆದಿರಲಿಲ್ಲ. 'ಅಕ್ಕ ಒಂದು ವೇಳೆ ಇನ್ನೂ ನಿದ್ರಿಸುತ್ತಲೆ ಇರಬಹುದು, ನಿದ್ರಾಭಂಗವಾದೀತು' ಎಂದು ಬಾಗಿಲನ್ನು ಮೆಲ್ಲನೆ ತೆರೆದೆ. ಆಲಯದೊಳಗೆ ಸೂರ್ಯದೇವನ ಮುಂದಿದ್ದ ಅಖಂಡ ದೀಪ ಜಾಜ್ವಲ್ಯಮಾನವಾಗಿ ಉರಿಯುತ್ತಿತ್ತು. ಆಲಯದೊಳಗೆ ಸ್ವಚ್ಛ ವಾತಾವರಣವಿದ್ದಿತು. ಅಲ್ಲಿ ಮಾತ್ರ ಗಾಳಿ ಇದ್ದಿತು. ಅಕ್ಕ ಸೂರ್ಯದೇವನ ಪಾದಪದ್ಮಗಳ ಮೇಲೆ ತಲೆಯಿಟ್ಟುಕೊಂಡು, ತಾಯಿಮಡಿಲಲ್ಲಿದ್ದ ಕೂಸಿನಂತೆ ಸುಖನಿದ್ರೆ ಮಾಡುತ್ತಿದ್ದಳು. ಗುಡಿಯೊಳಗೆ ಬಂದ ಚಿಕ್ಕಕ್ಕನಿಗೆ ಈಗ ಉಸಿರಾಡಿತು. ನನಗೂ ಹೋದ ಜೀವ ಬಂದಂತಾಯಿತು. 'ಅಕ್ಕಾ!' ಎಂದು ಚೀರಿ ನಿನ್ನನ್ನು ತಬ್ಬಿ ಹಿಡಿದಳು ಚಿಕ್ಕಕ್ಕ. ನೀನು ಭಯಪಟ್ಟು ಜಗ್ಗನೆ ಎದ್ದು ಕುಳಿತೆ. ನಮ್ಮನ್ನು ನೋಡಿ 'ಏಕೆ ಲಕ್ಷ್ಮಿ! ಏನಾಯಿತು! ಏನಾಯಿತು?' ಎಂದು ಭಯಪಟ್ಟು ಕೇಳಿದೆ. ಚಿಕ್ಕಕ್ಕ ಅಂದಳು: 'ಎದ್ದು ಬಾ, ಅಕ್ಕ. ಬೇಗ ಬಾ, ನೀ ಬೇಗ ಬಂದರೆ ನಲವತ್ತು ಸಾವಿರ ಜೀವಗಳು ಉಳಿದುಕೊಳ್ಳುವುವು' ಎಂದಳು. ಆ ಮಾತು ಕೇಳಿ ನೀನು ತಟ್ಟನೆ ಎದ್ದು ಚಿಕ್ಕಕ್ಕನೊಡನೆ ಹೊರಕ್ಕೆ ಓಡಿದೆ. ಚಿಕ್ಕಕ್ಕನಿಗೆ ಇಷ್ಟರಲ್ಲಿ ಚೈತನ್ಯ ಬಂದಿತ್ತು, ಉಸಿರಾಡಲು ಇನ್ನೂ ಹಗುರವಾಯ್ತು. ನನಗೂ ಹಾಗೆಯೇ ಆಯಿತು.

ನೀನೂ ಚಿಕ್ಕಕ್ಕನೂ ಅಪ್ಪಾಜಿಯವರಿದ್ದಲ್ಲಿಗೆ ಹೋದಿರಿ. ಆ ಕ್ಷಣವೆ ಅಪ್ಪಾಜಿಯವರಿಗೆ ಉಸಿರಾಡಿಸಲೂ ಹಗುರವಾಯ್ತು. ಎಲ್ಲಿಯೊ ಅಡಗಿಹೋಗಿದ್ದ ಗಾಳಿ ನೀನು ಸೂರ್ಯಾಲಯದಿಂದ ಹೊರಗೆ ಬಂದಾಗ ನಿನ್ನ ಹಿಂದೆಯೇ ಬಂದಿತು. ನಿಂತುಹೋಗಿದ್ದ ಗಾಳಿ ಪುನಃ ಬೀಸತೊಡಗಿತು, ಅಕ್ಕ. ಎಲೆ

ಬಳ್ಳಿಗಳು ಅಲುಗಾಡಿದವು. ಪಕ್ಷಿಗಳ ಉಲಿವು ಕೇಳಬಂದಿತು. ಒಂದೇ ನಿಮಿಷ ದಲ್ಲಿ ನಲವತ್ತು ಸಾವಿರ ಜೀವಗಳು ಚೇತನಗೊಂಡವು. ನೀನು ಬರುವುದು ಇನ್ನು ಸ್ವಲ್ಪ ತಡವಾಗಿದ್ದರೂ, ಏನೇನು ಅನಾಹುತಗಳಾಗುತ್ತಿದ್ದುವೊ! ದೇವಾ ಲಯದ ಹೊರಕಟ್ಟಿನ ಆನೆಗಳೂ, ಸಿಂಹಗಳೂ, ಕುದುರೆಗಳೂ, ಪಶುಪಕ್ಷಿಗಳೂ ನವಚೇತನಗೊಂಡು ಪುನಃ ಪ್ರದಕ್ಷಿಣೆಗೆ ಮೊದಲಿಟ್ಟವು.

ನೀವಿಬ್ಬರೂ ಅಪ್ಪಾಜಿಯವರಿಗೆ ನಮಸ್ಕರಿಸಿ ನಿಂತಿರಿ. ಅಪ್ಪಾಜಿಯವರು ತಲೆಯೆತ್ತಿ ನಿನ್ನನ್ನು ನೋಡಿ ಕಣ್ಣೀರು ತುಂಬಿದವರಾಗಿ 'ದೇವಿ, ಇಷ್ಟುಹೊತ್ತು ನೀನೆಲ್ಲಿದ್ದೆ! ನಿನಗಾಗಿ ಊರೆಲ್ಲವನ್ನೂ ಹುಡುಕಿಸಿದ್ದಾಯಿತು. ಇಷ್ಟು ಜನರೂ, ನಾನೂ ಈಗ ಬದುಕಿದುದು ನೀನಿಲ್ಲಿಗೆ ಬಂದುದರಿಂದ' ಎಂದರು. 'ಜನರು ಏಕೆ ಇಷ್ಟು ಕಾತುರರಾಗಿರುವರು? ಎಲ್ಲರೂ ಇಷ್ಟೇಕೆ ಬಳಲಿರುವರು?' ಎಂಬ ಯೋಚನೆಗಳು ಆಗ ನಿನ್ನ ಮನಸ್ಸಿನಲ್ಲಿ ಉಂಟಾಗಿರಬಹುದು. ನೀನು ಅಪ್ಪಾಜಿ ಯವರೊಡನೆ 'ಏಕೆ ದೇವ! ದೇವರುಗಳೆಲ್ಲರ ಸಮ್ಮುಖದಲ್ಲಿ ನಾನು ನಾಟ್ಯ ವಾಡಿದಾಗ ತಾವೂ ಅಲ್ಲಿಯೆ ಇದ್ದಿರಲ್ಲವೆ! ಈ ಪಟ್ಟಣಿಗರೂ ಇದ್ದರಲ್ಲವೆ! ಪಾತಾಳ, ಭೂಮಿ, ಅಮರಾವತಿ, ಅಲಕಾವತಿ, ವೈಕುಂಠ, ಕೈಲಾಸಗಳಲ್ಲಿನ ಯಕ್ಷಯಕ್ಷಿಯರೂ, ಗಂಧರ್ವರೂ, ಅಪ್ಸರರೂ, ಅಪ್ಸರೆಯರೂ, ದೇವತೆಗಳೂ, ದಿಕ್ಪಾಲಕರುಗಳೂ, ಅವರ ದೇವಿಯರೂ, ತ್ರಿಮೂರ್ತಿಗಳೂ, ಅಲ್ಲಿದ್ದರಲ್ಲ! ನನ್ನ ತಂಗಿ ಲಕ್ಷ್ಮಿ ವೀಣೆ ನುಡಿಸಿದಳು; ಉಮೆ, ರಮೆ, ವಾಣಿಯರು ನನ್ನನ್ನು ಮುಟ್ಟಿ ಹರಸಿದರು. ಇದನ್ನೆಲ್ಲ ತಾವೇ ಕಂಡಿರಿ . . . ಆಮೇಲೆ ನನಗೆ ಬಹಳ ಆಯಾಸವಾಯಿತು. ನನ್ನ ತಮ್ಮ ನನ್ನನ್ನು ಕರೆತಂದು, 'ಸೂರ್ಯಾಲಯದಲ್ಲಿ ನೀನು ಮಲಗಿ ನಿದ್ರೆಮಾಡು' ಎಂದು ಹೇಳಿ, ಅವನೆ ಬಾಗಿಲನ್ನು ಎಳೆದು ಮುಚ್ಚಿಕೊಂಡು ಹೋದನಲ್ಲ! ಆಯಾಸದಿಂದ ಮೈಮರೆತು ನಿದ್ದೆಹೋದೆ. ಈಗ ಲಕ್ಷ್ಮಿಯೂ ನನ್ನ ತಮ್ಮನೂ ನನ್ನನ್ನು ಎಬ್ಬಿಸಿ ಕರೆತಂದರು. ನಾನು ಮಲಗಿದ್ದ ಸ್ಥಳ ತಮ್ಮನಿಗೆ ತಿಳಿದಿದ್ದಿತಲ್ಲ! ಈಗ ಆದುದೇನು ದೇವ? ಈಗಲೆ ಅರಮನೆಗೆ ಹೋಗಿ ಸ್ನಾನಮಾಡಿ ಮಡಿಯುಟ್ಟು ಪ್ರತಿಷ್ಠಾಪನಾ ಸಮಯಕ್ಕೆ ಬಂದುಬಿಡುತ್ತೇನೆ' ಎಂದೆ ನೀನು.

ಆಗ ಅಪ್ಪಾಜಿಯವರ ಕಣ್ಣುಗಳಿಂದ ಆನಂದಬಾಷ್ಪ ಸುರಿಯಿತು: 'ದೇವಿ, ನೀನು ದೊಡ್ಡವಳು. ನಿಸ್ಸಂಶಯವಾಗಿ ದೇವಾಂಶಸಂಭೂತೆ. ಭಗ

ವಾನ್ ಸೂರ್ಯನಾರಾಯಣನು ಸಹ, ತನ್ನ ಭಕ್ತಳೊಬ್ಬಳು ಪಾದಗಳ ಬಳಿ ಆಯಾಸದಿಂದ ನಿದ್ದೆಮಾಡುತ್ತಿದ್ದಾಳೆ, ಆಯಾಸ ತೀರುವ ತನಕ ಸುಖನಿದ್ರೆ ಮಾಡಲಿ ಎಂದು ಇದ್ದುಬಿಟ್ಟನೆಂದು ಕಾಣುತ್ತದೆ. ಪ್ರತಿಷ್ಠಾಪನಾ ಸಮಯ ಸಮೀಪಿಸುತ್ತಿದ್ದರೂ, ನೀನು ಎಚ್ಚರವಾಗದುದನ್ನು ಕಂಡು, ಕಾಲವನ್ನೂ ಮುಂದುವರಿಯದಂತೆ ತಡೆದನು ಆ ಭಗವಂತ. ಭೂಮಿಯ ಚಲನವಲನಗಳೂ ನಿಂತುಹೋದವು ದೇವಿ. ಆದರಿಂದ ವಾತಾವರಣವೇ ಸ್ತಬ್ಧವಾಯಿತು. ನಮ ಗೆಲ್ಲ ಉಸಿರಾಡಲು ಸಹ ಗಾಳಿ ಸಾಲದೇಹೋಯಿತು. ಇಷ್ಟರೊಳಗೆ ನೀನು ಬಂದೆ ಯಾದುದರಿಂದ ಜನರೆಲ್ಲ ಬದುಕಿದರು, ನಾನೂ ಬದುಕಿದೆ. ಇಲ್ಲಿ ನಡೆದ ಅದ್ಭುತಗಳು ಇನ್ನೂ ಎಷ್ಟೋ ಇವೆ. ಅವನ್ನೆಲ್ಲ ಸಾವಕಾಶವಾಗಿ ಹೇಳುತ್ತೇನೆ' ಎಂದು ಅಪ್ಪಾಜಿಯವರು ಹೇಳುತ್ತಿರುವಾಗ, ಸಿದ್ಧಾಂತಿಗಳು ಓಡಿಬಂದು 'ಪ್ರಭೂ! ಆಶ್ಚರ್ಯ! ಆಶ್ಚರ್ಯ! ಚಲಿಸದೆ ನಿಂತಿದ್ದ ಚಂದ್ರನೂ ಈಗ ಚಲಿಸುತ್ತಿದ್ದಾನೆ, ಭೂಮಿಯೂ ಚಲಿಸುತ್ತಿದೆ. ಅದೋ ನೋಡಿರಿ, ಪೂರ್ವ ದಿಗಂತದಲ್ಲಿ ಸೂರ್ಯಮಂಡಲ ಮೆಲ್ಲಮೆಲ್ಲನೆ ಮೇಲಕ್ಕೇರಿ ಬರುತ್ತಿರುವುದನ್ನು, ಪಶ್ಚಿಮದಲ್ಲಿ ಚಂದ್ರಮಂಡಲ ಜಾಗ್ರತೆಯಾಗಿ ಕ್ಷಿತಿಜದ ಕಡೆಗೆ ಇಳಿಯುತ್ತಿರುವುದನ್ನು. ಹಕ್ಕಿಗಳ ಕಲಕಲವನ್ನು ಕೇಳಿದಿರ!' ಎಂದು ಉತ್ಸಾಹದಿಂದ ಅಪ್ಪಾಜಿಯವರಿಗೆ ಅರಿಕೆ ಮಾಡುತ್ತಿದ್ದಾಗ, ಜನರು ಓಡಿಬಂದು ಮಹಾ ಆನಂದ ಉದ್ಗಾರಗಳಿಂದ 'ಪ್ರಭೂ! ಪ್ರಭೂ! ನಂದಿಗಳು ನಡೆದು ಬರುತ್ತಿವೆ! ಬಾಹುಬಲಿಸ್ವಾಮಿ ಕರೆತರುತ್ತಿದ್ದಾನೆ' ಎಂದು ಅರಿಕೆ ಮಾಡಿದರು.

ಕತ್ತಲೆ ಹೋಗಿ ಬೆಳಕು ಹರಿಯುತ್ತ ಬಂದಿತು. ಆ ಸಮಯಕ್ಕೆ ನಂದಿಗಳು ನಡೆದುಬರುತ್ತಿರುವ ಶಬ್ದ ಚೆನ್ನಾಗಿ ಕೇಳಿಬಂದಿತು. ಅಪ್ಪಾಜಿಯವರು ನಿಮ್ಮಿಬ್ಬರನ್ನೂ ಕರೆದುಕೊಂಡು ಮಹಾದ್ವಾರದ ಬಳಿಗೆ ನಡೆದರು.

ನಂದಿಗಳು! ಅಕ್ಕ, ಹೊಂಬಣ್ಣದ ನಂದಿಗಳು! ಮೇರುಪರ್ವತದಂತೆ ಉನ್ನತವಾದ, ಪುಷ್ಟವಾದ, ಸರ್ಪಾಭರಣಾಲಂಕೃತಗಳಾದ ಆ ನಂದಿಗಳು ಬರುತ್ತಿರುವುದನ್ನೂ, ಹನ್ನೆರಡು ಪುರುಷಪ್ರಮಾಣನಾದರೂ ಪರಮಸೌಮ್ಯನೂ ಸುಂದರನೂ ಆದ ಭಗವಾನ್ ಬಾಹುಬಲಿಸ್ವಾಮಿಯೆ ಅವುಗಳನ್ನು ಕರೆತರುವುದನ್ನೂ ನೋಡಿಯೆ ಆನಂದಿಸಬೇಕು. ಅಕ್ಕ, ಬಾಯಿಬಣ್ಣನೆಗೆ ಅದು ಎಟುಕದ ವಿಷಯ. ಜನರೆಲ್ಲ 'ಇದಕ್ಕಿಂತ ಪುಣ್ಯದೃಶ್ಯ ಇನ್ನೆಲ್ಲಿಯದು! ನಮ್ಮ ಕಣ್ಣುಗಳು

ಇಂದಿಗೆ ಸಾರ್ಥಕವಾದವು. ಇನ್ನು ನಮ್ಮ ಕಣ್ಣುಗಳು ಇಂಗಿಹೋದರೂ ನಮಗೆ ದುಃಖವಿಲ್ಲ. ಸಾಯುವ ತನಕ ಈ ದೃಶ್ಯವನ್ನೇ ಮನಸ್ಸಿನಲ್ಲಿ ನೆಟ್ಟು ಜೀವಿಸಿರ ಬಹುದು' ಎಂದು ಮಾತನಾಡಿಕೊಂಡರು.

ನನ್ನ ಅಪ್ಪಾಜಿಯವರ, ನನ್ನ ಅಕ್ಕನ ಪುಣ್ಯವೆಷ್ಟು! ತಪಸ್ಸೆಷ್ಟು! ಇಲ್ಲದಿದ್ದರೆ ಈ ಕಲಿಯುಗದಲ್ಲೂ, ಸತ್ಯಯುಗಗಳಲ್ಲಿಯೇ ಅಸಾಧಾರಣವಾದಂತಹ ಪವಾಡ ನಡೆಯುವುದೆ? ಶಿಲೆ ಅಹಲ್ಯೆಯಾದುದು ತ್ರೇತಾಯುಗದಲ್ಲಿ. ಆ ಯುಗಕ್ಕೆ ಅಷ್ಟುಮಾತ್ರವೆ ಅತ್ಯಾಶ್ಚರ್ಯವೆನಿಸಿತು.

ಬಾಹುಬಲಿಸ್ವಾಮಿ ನಂದಿಗಳನ್ನು ದೇವಾಲಯದ ಮಹಾದ್ವಾರದವರೆಗೂ ಕರೆತಂದ. ಆಗ ಅಪ್ಪಾಜಿಯವರೂ, ನೀನೂ, ಚಿಕ್ಕಕ್ಕನೂ, ನಾನೂ, ನೆರೆದಿದ್ದ ಜನರೆಲ್ಲರೂ ಆನಂದದಿಂದ ಭಕ್ತಿಯಿಂದ ಕೈಗಳನ್ನು ಜೋಡಿಸಿಕೊಂಡು, ಬಾಹು ಬಲಿಸ್ವಾಮಿಗೂ ನಂದಿಗಳಿಗೂ ಅಡ್ಡಬಿದ್ದು ನಮಸ್ಕರಿಸಿದೆವು. ಮಹಾದ್ವಾರದ ಮೇಲಿನಿಂದ ಜನರು ಬಾಹುಬಲಿಸ್ವಾಮಿಗೆ ಪುಷ್ಪಗಳಿಂದ ಮಸ್ತಕಾಭಿಷೇಕ ಮಾಡಿದರು. ಆ ತಪೋದಧೀಚಿಯು ಮಹಾದೇವನಿಗೆಂದು ತಂದ ನಂದಿಗಳನ್ನು ಅಲ್ಲಿಯೆ ನಿಲ್ಲಿಸಿ ತನ್ನ ತಪೋಸ್ಥಾನವಾದ ಇಂದ್ರಗಿರಿಗೆ ವೇಗದಿಂದ ನಡೆದು ಹೋದನು. ನಂದಿಗಳು ಮಹಾದ್ವಾರದ ಒಳಗಡೆ ನಡೆದುಬಂದವು; ಎರಡು ಕೊಪ್ಪರಿಗೆಗಳ ತುಂಬ ಜನರು ಇಟ್ಟಿದ್ದ ಸೀಕರಣೆಯನ್ನು ತಿಂದು ಮುಗಿಸಿ, ನೀರನ್ನು ಕುಡಿದು, ತಮಗಾಗಿ ಕಟ್ಟಿಸಿದ್ದ ಮಂಟಪಗಳ ಕಡೆ ನಡೆದುಹೋದವು. ಮಂಟಪದೊಳಕ್ಕೆ ಹತ್ತಿಹೋಗಿ ಮಹಾದೇವನಿಗೆ ಅಭಿಮುಖವಾಗಿ, ಸುಖವಾಗಿ ಕುಳಿತುಬಿಟ್ಟವು. ಆಗ ಪೂರ್ವಾಕಾಶದಲ್ಲಿ ಒಂದು ದೊಡ್ಡ ಕರ್ಮೋಡ ಸೂರ್ಯ ಬಿಂಬವನ್ನು ಪೂರ್ತಿಯಾಗಿ ಮುಚ್ಚಿತು. ಕತ್ತಲೆಯಾದಂತಾಯಿತು. ಹಾಗೆ ಆದುದು ಒಂದೇ ಒಂದು ನಿಮಿಷ. ಆ ಕರ್ಮೋಡ ಸರಿದುಹೋಯಿತು. ಬೆಳಕು ಬಂದಿತು. ನಂದಿಗಳೆರಡೂ ಈಗ ಶಿಲೆಯಾಗಿದ್ದವು! ದೇವಾಲಯ ತನ್ನ ಪೂರ್ವಸ್ಥಿತಿಗೆ ಸಂಕುಚಿಸಿತ್ತು! ಸಕಲವೂ ಶಿಲೆಯಾಗಿ ನಿಂತಿತ್ತು. ಪರಮೇಶ್ವರನ ಇಚ್ಛೆಯಂತೆ ಪವಾಡ ಒಂದು ನಡೆದುಹೋಯಿತು.

'ಸ್ನಾನ ಮಾಡಿ, ಬೇಗ ಮಡಿಯುಟ್ಟು ಬಾ' ಎಂದು ಅಪ್ಪಾಜಿಯವರು ನಿನಗೆ ಹೇಳಿದರು. ನೀನು ಬೇಗನೆ ಸ್ನಾನಮಾಡಿ ಮಡಿಯುಟ್ಟು ಬಂದೆ. ಅಷ್ಟು ಹೊತ್ತಿಗೆ ಪ್ರತಿಷ್ಠಾಪನೆಗೆ ಆಗಬೇಕಾಗಿದ್ದ ಸಕಲ ಸಿದ್ಧತೆಗಳೂ ಆಗಿದ್ದವು.

ಮಹಾದೇವನ ಪ್ರತಿಷ್ಠಾಪನೋತ್ಸವ ಅದ್ಭುತ ವಿತರಣೆಯಿಂದ ನಡೆಯಿತು. ಮುಗಿಯಿತು . . .

§

ಕುವರವಿಷ್ಣು ತಾನು ಕಂಡ ಈ ಕನಸನ್ನು ಅಕ್ಕನಿಗೆ ಇಷ್ಟು ವಿಂಗಡವಾಗಿ ಬಣ್ಣಿಸಿ ಪೂರೈಸುವ ವೇಳೆಗೆ ಶಾಂತಲೆಯ ಕಣ್ಣುಗಳಲ್ಲಿ ನೀರು ಧಾರೆಯಾಗಿತ್ತು. ಮನಸ್ಸಿನಲ್ಲಿ ಸಂಕಟವೆ ಆಯಿತೊ! ಸುಖವೆ ಆಯಿತೊ? ಅಥವಾ ಎರಡೂ ಒಟ್ಟಾಗಿಯೆ ಬೆರೆತುವೊ! ಶಾಂತಲೆ ತನ್ನೆರಡು ಕೈಗಳನ್ನು ನೀಡಿ ಹೆತ್ತ ತಾಯಿ ಮಗುವನ್ನು ಬಿಗಿದಪ್ಪಿಕೊಳ್ಳುವಂತೆ ಕುವರನನ್ನು ಬಿಗಿದಪ್ಪಿಕೊಂಡು ಬಹಳ ಅತ್ತಳು. 'ಅಣುಗ, ನಮಗೆ ಜನ್ಮಗಳಿದ್ದರೆ, ಮುಂದೆ ನನ್ನ ಬೆನ್ನಲ್ಲಿಯಾದರೂ ಹುಟ್ಟು, ಅಥವಾ ಹೊಟ್ಟೆಯಲ್ಲಾದರೂ ಹುಟ್ಟು. ನಾನದಕ್ಕೆ ವ್ರತವಿರುತ್ತೇನೆ. ಮಹಾದೇವನು ಈ ಸೌಭಾಗ್ಯವನ್ನು ಮುಂದಿನ ಜನ್ಮಕ್ಕೆ ನನಗೆ ಕರುಣಿಸಲಿ' ಎಂದಳು. ಆ ಮಾತುಗಳನ್ನು ಕೇಳಿ ಕುವರನಿಗೂ ಕಣ್ಣೀರು ಹರಿಯಿತು. ಅವನು 'ಅಕ್ಕ, ವಿಶ್ವಾಸಕ್ಕೆ ರಕ್ತಸಂಬಂಧವೇ ಬೇಕೆ! ನಾನು ನಿನ್ನ ಬೆನ್ನಲ್ಲಿ ಹುಟ್ಟಿದವನಲ್ಲವೆಂದು ಈಗ ನಿನ್ನ ವಿಶ್ವಾಸ ಕಡಿಮೆಯಾಗಿದೆಯೆ? ಇಲ್ಲವಲ್ಲ. ಇನ್ನು ನಮಗೆ ಜನ್ಮಗಳಿದ್ದರೆ, ಪ್ರತಿಸಲಕ್ಕೂ ನೀನೆ ನನಗೆ ಅಕ್ಕನಾಗು, ಅವ್ವೆಯಾಗು. ನಾನೂ ಅದಕ್ಕಾಗಿ ಈ ಜನ್ಮವೆಲ್ಲ ತಪಸ್ಸು ನಿಂತೇನು' ಎಂದ. ಶಾಂತಲೆ ಸುಮ್ಮನಾಗಿ ತಮ್ಮನ ಮುಖವನ್ನು ನೋಡುತ್ತ ಕುಳಿತುಬಿಟ್ಟಳು. ಸ್ವಲ್ಪ ಹೊತ್ತಾದ ಮೇಲೆ ಕೇಳಿದಳು: 'ಇಷ್ಟು ವಿಶ್ವಾಸ ನೀನೇಕೆ ಬೆಳಸಿಕೊಂಡೆ ನನ್ನಯ್ಯ?'

ಕುವರವಿಷ್ಣು: 'ಪ್ರೇಮವಿಶ್ವಾಸಗಳಿಗೆ ಸ್ವಾರ್ಥದ ಸೋಂಕು ಇದ್ದರೆ, ಕೇವಲ ಬಾಹ್ಯಾಡಂಬರವಾಗಿಯೆ ಉಳಿಯುವುದು. ನೀನು ನನಗೆ ಪೂಜನೀಯಳು, ಅಕ್ಕ. ಈ ವಿಶ್ವಾಸ, ಬೇಕೆಂದು ನೆಟ್ಟು ನೀರೆರೆದು ಬೆಳೆಸಿದುದಲ್ಲ. ಇದು ತಾನಾಗಿಯೆ ಹುಟ್ಟಿಕೊಂಡು ಕೋಮಲವಾಗಿ ಬೆಳೆದು ಬಂದದ್ದು. ನಿನ್ನ ಮಧುರ ಹೃದಯವೆ ಇದಕ್ಕೆ ಕಾರಣ.'

'ಅತಿಯಾದ ಪ್ರೇಮ ವಿಶ್ವಾಸಗಳು ಸೋದರಭಾವದ್ದಾಗಲಿ, ಗುರುಶಿಷ್ಯ ಭಾವದ್ದಾಗಲಿ, ಪತಿಪತ್ನೀಭಾವದ್ದಾಗಲಿ, ಮಾತಾಪುತ್ರಭಾವದ್ದಾ

ಗಲಿ, ಅಂತ್ಯದಲ್ಲಿ ದುಃಖಭಾಜನವೆಂದು ತಿಳಿದವರು ಹೇಳುತ್ತಾರೆ, ತಮ್ಮ.'

'ಅಕ್ಕ, ಕಂಡ ಕನಸೊಂದನ್ನು ನಿನ್ನೊಡನೆ ಹೇಳಿದರೆ, ಅದಕ್ಕೆ ನೀನು ಎಷ್ಟೆಲ್ಲಾ ಹೇಳುತ್ತಿದ್ದೀಯೆ!'

'ನಾನು ಹೇಳುತ್ತೇನೆ. ಈ ಕನಸೆಲ್ಲ ನೀನು ಅಕ್ಕನ ಮೇಲೆ ಹೀಗೆ ಬೆಳಸಿಕೊಂಡಿರುವ ಅತಿ ವಿಶ್ವಾಸದ ಪರಿಣಾಮವೇ.'

'ಅಕ್ಕ, ನಿರ್ಮಲವಾದ ವಿಶ್ವಾಸವೂ ದೋಷವೆನ್ನುವುದಾದರೆ, ಮಾನವನು ಕಲ್ಲಾಗಿರುವುದು ಮೇಲು, ಮಣ್ಣಾಗಿರುವುದು ಮೇಲು.'

'ಹೋಗಲಿ, ಇನ್ನು ಮೇಲೆ ನಿದ್ರೆ ಬರಲಿಲ್ಲವೆಂದು ಆ ಲಕ್ಕಣನ ಬಳಿ ಗುಳಿಗೆಗಳನ್ನು ತೆಗೆದುಕೊಳ್ಳಬೇಡ.'

'ಇಲ್ಲ, ಅಕ್ಕ. ನಿದ್ದೆ ಬಾರದಿದ್ದ ದಿನ ಅಕ್ಕನ ನಿದ್ದೆಯನ್ನೂ ಕೆಡಿಸಿ ಹರಟೆ ಹೊಡೆಯುತ್ತಾ ಕುಳಿತುಕೊಳ್ಳುತ್ತೇನೆ.'

ಕುವರವಿಷ್ಣು ಹೋಗಲು ಎದ್ದ. ಏಳುತ್ತ ಅಕ್ಕನನ್ನು ಕುರಿತು 'ಇಗೊ, ಇದೆಲ್ಲವನ್ನೂ ಅಪ್ಪಾಜಿಯವರೊಡನೆ ಹೇಳಬೇಡ. ಅವರು ನನ್ನನ್ನು "ಇನ್ನೂ ಹುಡುಗು ಬುದ್ಧಿ" ಎಂತಲೇ ತಿಳಿದುಕೊಂಡಾರು' ಎಂದ.

'ಅವರು ತಿಳಿದುಕೊಂಡಿರುವುದೇ ಹಾಗೆ. ಇದನ್ನು ಅವರೊಂದಿಗೆ ಹೇಳದ ಮಾತ್ರದಿಂದ ನೀನೇನೂ ದೊಡ್ಡವನಾಗಿಹೋಗುವುದಿಲ್ಲ. ನೀನು ನಮಗೆ ಯಾವಾಗಲೂ ಹುಡುಗನೆ, ಹಾಗೆಯೆ ಇರು.'

ಕುವರನಿಗೆ ಸ್ವಲ್ಪ ಸಿಟ್ಟು ಬಂದಿತು. ಕೊಂಗರ ಸೇನೆಯನ್ನು ನಿರ್ಮೂಲ ಮಾಡಿ, ಅವರ ಆನೆ ಕುದುರೆಗಳನ್ನು ಹಿಡಿದು ತಂದವನನ್ನು, ಅಪ್ಪಾಜಿಯವರ ಕೈಯಿಂದ ಇಮ್ಮಡಿ ದಂಡನಾಯಕ, ಗಂಡಪೆಂಡೇರ, ಸರ್ವಾಧಿಕಾರಿ ಎಂಬ ಪ್ರಶಸ್ತಿಗಳನ್ನು ಪಡೆದವನನ್ನು ಅಕ್ಕ 'ಹುಡುಗ'ನೆಂದೇ ಸಂಬೋಧಿಸಿದುದಕ್ಕೆ ಅವನಿಗೆ ಸ್ವಲ್ಪ ಸಿಟ್ಟು ಬಂದಿತು. ಸಿಟ್ಟಿನ ಭರದಲ್ಲಿ ತಟ್ಟನೆ ಎದ್ದ. ಬಲಗಾಲಿನ ಗಂಡಪೆಂಡೇರದ ಮುತ್ತಿನ ಜೊಂಪೆಗಳು ಅಲುಗಾಡಿ ಮಧುರ ನಿನದವನ್ನುಂಟು ಮಾಡಿದುವು. ಶಾಂತಲೆಯ ದೃಷ್ಟಿ ಆ ನಿನದದ ಕಾರಣದ ಕಡೆಗೆ ಸೆಳೆಯಲ್ಪಟ್ಟಿತು. ಕುವರನ ಎಡದ ಕಾಲಿನಲ್ಲಿಯೂ ಒಂದು ಚಿನ್ನದ ತೋಡ ಇದ್ದುದನ್ನು ಶಾಂತಲೆ ಕಂಡಳು. ಆಶ್ಚರ್ಯದಿಂದ 'ಇದೇನು ತಮ್ಮ! ಈ ಎಡದ ಕಾಲಿನ ಆಭರಣ?' ಎಂದು ಕೇಳಿದಳು.

'ಒಂದೆ ಕಾಲಿಗೆ ಇರುವುದು ಚೆನ್ನ ಅಲ್ಲವೆಂದು ಎಡದ ಕಾಲಿಗೂ ನಿನ್ನೆ ಹಾಕಿಕೊಂಡೆ, ಅಕ್ಕ.'

'ಹಾಗಾದರೆ ಎರಡು ಕಾಲಿನವೂ ಒಂದೇ ತೆರನಾಗಿ ಇರಬೇಕಲ್ಲವೆ! ಇದು ಏನು ಚೆನ್ನು? ಅಕ್ಕನ ಬಳಿಯೂ ಮುಚ್ಚುಮರೆಯೆ?'

'ಬೋಕಿ ಗರುಡನಾಗಬಹುದಂತೆ. ನಾನು ಆದದ್ದಾದರೂ ಏನು ತಪ್ಪು?'

ಶಾಂತಲೆ ದಿಗ್ಭ್ರಮೆಪಟ್ಟು ಕೇಳಿದಳು: 'ತಮ್ಮ, ನೀನು ಗರುಡನಾಗುವುದಕ್ಕೆ ಅಪ್ಪಾಜಿಯವರನ್ನು ಕೇಳಿದೆಯ? ಅವರು ಸಮ್ಮತಿಸಿದರೆ?'

'ಬೋಕಿ ಅವರ ಅಯ್ಯನನ್ನು ಕೇಳಿಯೆ ಗರುಡನಾದನೆ? ಇದಕ್ಕೂ ಅಪ್ಪಾಜಿಯವರ ಒಪ್ಪಿಗೆ ಬೇಕಾಗಿದ್ದರೆ, ನಾನು ಆತ್ಮಾರ್ಪಣೆ ಮಾಡಿಕೊಂಡಂತೆ ಆಗುತ್ತಿತ್ತೆ, ಅಕ್ಕ? ಸ್ವಂತ ಮನಶ್ಶುದ್ಧಿಯಿಂದ, ಪೂರ್ಣ ಆನಂದದಿಂದ, ಮಾಡಬೇಕಾದ ಕರ್ತವ್ಯವಲ್ಲವೆ ಇದು? ನೀನು ಹೀಗೆ ಕೇಳುವುದನ್ನು ನೋಡಿದರೆ, ಅವರವರ ಪ್ರಾಣಗಳೂ ಅವರವರ ಸ್ವತ್ತಲ್ಲವೆಂದು ಕಾಣುತ್ತದೆ.'

ಆ ಮಾತಿಗೆ ಶಾಂತಲೆ ತನ್ನೆರಡು ಕೈಗಳಿಂದಲೂ ಮುಖ ಮುಚ್ಚಿಕೊಂಡಳು. ಕಣ್ಣೀರು, ಕೆರೆಯ ಕಟ್ಟೆ ಒಡೆದಂತೆ ಹೊರಟಿತು. ಕುವರನು ಅದನ್ನು ಕಾಣಬಾರದೆಂದು ಶಾಂತಲೆ ಮುಚ್ಚಿಕೊಂಡಳು.

ತಾನು ಆಡಿದ ಮಾತುಗಳಿಂದ ಅಕ್ಕನ ಮನಸ್ಸಿಗೆ ಬಹು ನೋವಾಯಿತೆಂದು ಕುವರನು ಆಗ ಅರಿತ. ಆದರೆ ತಾನು ಗರುಡನಾದುದರಲ್ಲಿ ತಪ್ಪೇನು! ಆತ್ಮಸಮರ್ಪಣೆ ಶ್ರೇಷ್ಠತರ ಯಜ್ಞವಲ್ಲವೆ? ಅಕ್ಕ ಇದಕ್ಕೆ ಸಂತೋಷಪಡಬೇಕಾಗಿದ್ದಿತಲ್ಲವೆ? ಅಕ್ಕನಿಗೆ ಏಕೆ ನೋವಾಯಿತೆಂದು ಕುವರನಿಗೆ ಆಶ್ಚರ್ಯವಾಯಿತು. ಮಾತನ್ನು ಮುಂದುವರಿಸಿ, 'ನಿನ್ನ ಮನಸ್ಸು ಏಕೆ ನೊಂದಿತಕ್ಕ?' ಎಂದು ಕೇಳಿದ.

'ಅಣುಗ, ನೀನು ನಮ್ಮಿಬ್ಬರ ಸ್ವತ್ತು.'

'ಅಂತೆ, ಅಕ್ಕ, ಅದಕ್ಕೇ ಹೀಗೆ ಮಾಡಿದೆ.'

'ಅಪ್ಪಾಜಿಯವರನ್ನಾದರೂ, ನನ್ನನ್ನಾದರೂ ನೀನು ಕೇಳಬೇಕಾಗಿದ್ದಿತಲ್ಲವೆ?'

'ಏಕೆ, ನಾನು ಹೀಗೆ ಮಾಡಿದುದರಲ್ಲಿ ತಪ್ಪೇನು? ಇದರಿಂದ ನನಗೆ ಶ್ರೇಯಸ್ಸಲ್ಲವೆ? ಯಶಸ್ಸಲ್ಲವೆ?'

'ನಿನ್ನ ದೃಷ್ಟಿಯಿಂದ ಹೌದು, ಆದರೆ ಅದು ನಮ್ಮ ದುರದೃಷ್ಟ!' ಶಾಂತಲೆ ಒಡೆದುಹೋಗುತ್ತಿದ್ದ ತನ್ನ ಹೃದಯವನ್ನು ಅದುಮಿ ಹಿಡಿದು ಮಾತ ನಾಡಿದಳು. ದುಃಖದ ಉಬ್ಬರವನ್ನು ತಡೆಯುವುದು ಅವಳಿಗೆ ಈಗ ಅಸಾಧ್ಯ ವಾಯಿತು.

'ದುರದೃಷ್ಟವೇನಕ್ಕ ಇದರಲ್ಲಿ? ನೀವು ಒಪ್ಪಿ ಮೆಚ್ಚುವಿರೆಂದೇ ಮಾಡಿದೆ. ನೀವು ನೋಡಿ ಸಂತೋಷಪಡುವಿರೆಂದೇ ಮಾಡಿದೆ. ನಾನು ಎಡದ ಕಾಲಿಗೆ ತೋಡ ತೊಟ್ಟಿದನ್ನು ಕಂಡು, ಸೋವಲೆಯೂ ತನ್ನ ಎಡಕೈಗೆ ಕಂಕಣ ಕಟ್ಟಿ ದಳು—"ನಾನೂ ಅಂದೇ ಸತಿಯಾಗುತ್ತೇನೆ" ಎಂದು. ನನ್ನನ್ನು ನೋಡಿ ನನ್ನ ಹಲವು ಮಿತ್ರರು "ನಿನ್ನೊಡನೆ ನಾವೂ ಇರುವೆವು" ಎಂದು ತಾವೂ ಕಂಕಣ ಕಟ್ಟಿದರು.'

ಶಾಂತಲೆಯ ಎದೆ ಇನ್ನು ನುಚ್ಚುನೂರಾಗುವುದು ಒಂದೇ ಉಳಿದಿತ್ತು. ಅವಳಿಗೆ ಇನ್ನು ಹೆಚ್ಚು ಕೇಳಲಾಗಲಿಲ್ಲ. ಕುವರ ಹೆಮ್ಮೆಯಿಂದ ಹೇಳಿಕೊಳ್ಳು ತ್ತಿದ್ದಾನೆ. ಅವನ ಅಭಿಪ್ರಾಯದಲ್ಲಿ ತಾನೂ, ಸೋವಲೆಯೂ, ತನ್ನ ಸ್ನೇಹಿತರೂ ಪ್ರಶಂಸನೀಯವಾದ ಕಾರ್ಯವನ್ನು ಮಾಡಿರುವೆವೆಂಬ ಹಿಗ್ಗು. ಆದರೆ ಅವನ ಅಕ್ಕನ ಮನಸ್ಸಿನಲ್ಲಿ 'ಅಯ್ಯೋ, ಇವನೇಕೆ ಹೀಗೆ ಮಾಡಿದ! ಗರುಡ ನಾಗುವ ಮುನ್ನ ನಮಗೆ ಯಾರಿಗೂ ತಿಳಿಸಲಿಲ್ಲವೇಕೆ? ನಮ್ಮನ್ನು ಕೇಳಲಿಲ್ಲ ವೇಕೆ? ಸರ್ವ ಪ್ರಯತ್ನದಿಂದಲೂ ಇದನ್ನು ನಿಲ್ಲಿಸಬಹುದಾಗಿತ್ತಲ್ಲ. ಈಗ ಎಲ್ಲವೂ ಕೈಮೀರಿಹೋಯಿತಲ್ಲ! ಇನ್ನೇನು ಮಾಡುವುದು? ಈಗ ಇನ್ನೇನು ಮಾಡುವುದು?' ಎಂದು ತಡೆಯಲಾರದ ದುಃಖ. ಶಾಂತಲೆ ಹಾಸಿಗೆಯ ಮೇಲೆ ಮುಖಮಡಿಯಾಗಿ ಬಿದ್ದುಕೊಂಡು ಸಂಕಟಪಡುತ್ತಿದ್ದಳು.

ಕುವರನಿಗೆ ಬಹು ಭಯವಾಯಿತು. 'ಅಕ್ಕನಿಗೆ ಅದೇನು ನೋವು ಬಂದಿತು! ಅಕಸ್ಮಾತ್ ಹೀಗೇಕೆ ಆಯಿತು? ನಾನು ಹೇಳಿದುದರಲ್ಲಿ, ಮಾಡಿ ದುದರಲ್ಲಿ ದೋಷವೇನು! ಆಡಬಾರದುದನ್ನು ಆಡಿದೆನೆ? ಹೇಳಬಾರದುದನ್ನು ಹೇಳಿದೆನೆ? ನನಗೆ ತಿಳಿಯದಲ್ಲ' ಎಂದು ಕಾತರನಾಗಿ, ಅಧೀರನಾಗಿ, ಅಕ್ಕನ ಬಳಿಗೆ ಬಂದು ಕೇಳಿದ: 'ಅಕ್ಕಾ, ಏನಾಯಿತು ಹೇಳಕ್ಕ? ನಿನ್ನ ಮಗುವಲ್ಲವೆ ನಾನು? ತಪ್ಪು ಮಾಡಿರುವೆನಾದರೆ ಹೇಳು, ಏನು ತಪ್ಪು! ಏತಕ್ಕೆ ತಪ್ಪು? ಕೇಳಕ್ಕ . . . ನಾನೂ ನಮ್ಮಣ್ಣನೂ ಮಕ್ಕಳಾಗಿದ್ದಾಗ, ನಮ್ಮಿಬ್ಬರನ್ನೂ ನಮ್ಮ

ಹೆತ್ತವ್ವ ರಾಜಮಾತೆಯರ ಉಡಿಯಲ್ಲಿಟ್ಟು, ತಾನು ಸತಿಯಾದಳು. ರಾಜ ಮಾತೆಯರು ತಮ್ಮೆದೆಗೆ ಕಟ್ಟಿಕೊಂಡು ಸಾಕಿದರು ನಮ್ಮಿಬ್ಬರನ್ನೂ. ಅಣ್ಣನಿಗೆ ದೊಡ್ಡ ಕಾಯಿಲೆ ಬಂದು ಏನು ಚಿಕಿತ್ಸೆ ಮಾಡಿದರೂ ಪ್ರಯೋಜನವಿಲ್ಲದೆ ಹೋಯಿತು. ಅವನು ಸತ್ತ. ರಾಜಮಾತೆಯರು ಅಪ್ಪಾಜಿಯವರನ್ನು ಸಾಕಿದಂತೆ ನನ್ನನ್ನೂ ಸಾಕಿ ಬೆಳಸಿದರು. ಅಪ್ಪಾಜಿಯವರು ಉಪನಯನ ಮಾಡಿದರು, ಉತ್ತಮ ವಿದ್ಯಾ ಬುದ್ಧಿಗಳನ್ನು ಹೇಳಿಸಿದರು. ರಾಜ್ಯದ ಗೌರವಸ್ಥಾನಗಳಿಗೆ ನನ್ನನ್ನು ನೇಮಿಸಿದರು. ತಮ್ಮ ಮಗನೆಂದೇ ಭಾವಿಸಿ, ಪ್ರೀತಿಯಿಂದ ಕಂಡರು. ಅರಮನೆಯ ಸರ್ವಾಧಿಕಾರವನ್ನೂ ನನಗೆ ಇತ್ತರು. ಇಂತಹ ಧರ್ಮಪ್ರಭುಗಳು ನನ್ನ ಅಪ್ಪಾಜಿಯವರಲ್ಲವೆ! ಈ ಪ್ರಾಣ ಅವರದಲ್ಲವೆ ಅಕ್ಕ? ಈ ದೇಹ ಅವರದಲ್ಲವೆ? ನನ್ನ ಸಕಲ ಸರ್ವಸ್ವ ಅವರದಲ್ಲವೆ? ನೀನೂ ಹಾಗೇ ಅಲ್ಲವೆ? ನೀನು ಅವರನ್ನು ಬಿಟ್ಟಿರಬಲ್ಲೆಯ, ಅಕ್ಕ? ಅಪ್ಪಾಜಿಯವರಾದರೂ ನಿನ್ನನ್ನು ಬಿಟ್ಟು ಇರಬಲ್ಲರೆ? ಇಂತಹ ಪುಣ್ಯಾತ್ಮರೊಂದಿಗೆ ಇರಲು ನಾನು ಆಣೆಮಾಡಿಕೊಂಡರೆ, ನೀನು ದುಃಖಿಸುವುದೇತಕ್ಕೆ? ದುರ್ಮರಣಕ್ಕಿಂತ ಇದು ನನಗೆ ಶ್ರೇಯಸ್ಸಲ್ಲವೆ? ತನ್ನ ದೇಶಕ್ಕಾಗಿ, ತನ್ನ ಹಿರಿಯರಿಗಾಗಿ, ತನ್ನ ರಾಜನಿಗಾಗಿ ಸಾಯುವುದಕ್ಕಿಂತ ಉತ್ತಮ ಸಾವು ಭಟನಿಗೆ ಇದೆಯೆ? ಹೇಳಕ್ಕ. ನೀನು ತಿಳಿದವಳು. ನನ್ನ ಅಯ್ಯನ ರಕ್ತ ಚೆಲ್ಲಿದವರ ರಕ್ತವನ್ನು ನಾನು ಬಸಿಯದೆ ಬಿಡುವುದೇನಕ್ಕ? ನನ್ನ ಅಪ್ಪಾಜಿಯವರೊಡನೆ, ನಿನ್ನೊಡನೆ ಯಾವಾಗಲೂ ಇರಬೇಕೆಂಬ ಆಶೆಯ ಮೇಲೆ ಹೀಗೆ ಮಾಡಿದೆನಕ್ಕ. ನಿನ್ನೊಡನೆ ಸಂತೋಷದ ಕನಸನ್ನು ಹೇಳಬಂದೆ. ನೀನು ಪ್ರಾಜ್ಞಳು. ನಾನು ಹೀಗೆ ಮಾಡಿದೆನೆಂದು ನೀನು ದುಃಖಿಸುವುದೆ? ಬೇರಾವ ಕಾರಣಕ್ಕಾದರೂ ನೀನು ದುಃಖಿಸುತ್ತಿರುವೆಯಾದರೆ ನನ್ನೊಡನೆ ಹೇಳು. ನಿನ್ನ ದುಃಖ ನಿಷ್ಕಾರಣವಾದುದಲ್ಲ. ನಾನು ಗರುಡನಾದುದಕ್ಕಂತೂ ಅಲ್ಲ. ನೀನೂ ಅಪ್ಪಾಜಿಗಳೂ ಇದಕ್ಕೆ ಸಂತೋಷಪಡುವಿರಿ, "ಭಲೆ, ಗಂಡುಗಲಿ ನೀನು" ಎಂದು ನೀನು ನನ್ನ ಬೆನ್ನು ತಟ್ಟಿ ಸಂತೋಷಪಡಿಸುವೆ ಎಂದು ಬಂದೆ. ಈ ನಿನ್ನ ದುಃಖವನ್ನು ನಾನು ನೋಡಿ ಸಹಿಸಲಾರೆ. ನನ್ನ ಮೇಲಿನ ಆಣೆ...'

ಶಾಂತಲೆ ತಟ್ಟನೆ ಎದ್ದು ಕುವರನ ಬಾಯನ್ನು ಬಲವಾಗಿ ಮುಚ್ಚಿಹಿಡಿದು 'ಶಾಂತಂ ಪಾಪಂ, ಶಾಂತಂ ಪಾಪಂ. ಏನು ಮಾತಿದು ತಮ್ಮ! ನಾನು

ಬಾಧೆಪಡುತ್ತಿರುವುದನ್ನು ನೀನು ಕಾಣುತ್ತಿಲ್ಲವೆ? ನನ್ನನ್ನು ಇನ್ನೂ ಹೆಚ್ಚಿನ ಸಂಕಟಕ್ಕೀಡುಮಾಡಲು ಆಣೆ ಭಾಷೆಗಳನ್ನು ಬೇರೆ ಇಡುತ್ತಿರುವೆಯಾ? ಹೇಳ ಬಹುದಾದ ಸಂಗತಿಗಳನ್ನು ನಿನ್ನ ಅಕ್ಕ ನಿನ್ನೊಡನೆ ಹೇಳಿಯೇ ಹೇಳುವಳು. ಹೇಳಬಾರದುದನ್ನು ಎಂದಿಗೂ ಹೇಳಳು. ಇಂದಲ್ಲ ನಾಳೆ ನನ್ನ ಈ ಸಂಕಟದ ಕಾರಣವನ್ನು ನೀನೇ ಅರಿತುಕೊಳ್ಳಬಹುದು . . . ಈಗ ಹೋಗು. ಚಿಕ್ಕಕ್ಕ ನನ್ನು ಇಲ್ಲಿಗೆ ಕಳಿಸಿಕೊಡು. ನೀನೇ ಕರೆದುಕೊಂಡು ಬರಬೇಡ, ತಿಳಿಯಿತೆ? ನಿನ್ನ ಅಕ್ಕನ ಹೃದಯದಲ್ಲಿ ನಿನ್ನ ಅಭ್ಯುದಯವೇ ಹೆಚ್ಚಿನ ಯೋಚನೆ. ನಾನು ಮತ್ತೆ ನಿನಗೆ ಹೇಳಿಕಳಿಸುವವರೆಗೂ ಮನೆಯಲ್ಲೆ ಇರು. ಹೊರಗೆ ಹೋಗಬೇಡ. ಏಕೆ ಎಂದು ಕೇಳಬೇಡ. ಯಾವ ಹೊತ್ತಿನಲ್ಲಿ ಹೇಳಿಕಳಿಸುವೆನೋ ಏನೋ! ಇಂದೊ, ನಾಳೆಯೊ, ಇನ್ನು ನಾಲ್ಕುದಿನಗಳೊ! ಅಷ್ಟರವರೆಗೂ ನೀನು ಮನೆ ಯಿಂದ ಹೊರಗೆ ಬರಬಾರದು. ನಿನ್ನ ಅಕ್ಕನ ಆಣತಿಯಿದು, ಗೌರವಿಸು. ಸೋವಲೆಯೂ ಮನೆಬಿಟ್ಟು ಹೊರಗೆ ಬಾರದಿರಲಿ. ಅವಳೊಡನೆ ಈ ಪುರಾಣ ಒಂದನ್ನೂ ನೀನು ಬಿಚ್ಚಬೇಡ. ಅಕ್ಕ ದುಃಖಿಸಿದಳೆಂದು ಹೇಳಬೇಡ. ಹೋಗು ತಮ್ಮ, ನಿನ್ನ ಅಕ್ಕ ನಿನ್ನ ಮೇಲೆ ಅಣುಮಾತ್ರವೂ ಕೋಪಗೊಂಡಿಲ್ಲ. ಯಾವುದೊ ವಿಷಯಗಳ ಸಮಸ್ಯೆ ಆಗ ನನ್ನ ಕಣ್ಣುಮುಂದೆ ಬಂದು ನಿಂತಿತು. ಅದರಿಂದ ಖಿನ್ನಳಾದೆ. ಆ ಸಮಸ್ಯೆ ಹೇಗೆ ಬಗೆ ಹರಿಯುವುದೊ? ಕುಳಿತು ಯೋಚಿಸಬೇಕಾಗಿದೆ. ಅದು ನನಗೆ ಸೇರಿದ ಕಾರ್ಯ, ನೀನು ಇದಕ್ಕಾಗಿ ಭೀತಿಗೊಳ್ಳಬೇಡ. ಅಕ್ಕನಿಗೆ ನಿನ್ನ ಮೇಲೆ ಏನೇನೂ ಸಿಟ್ಟಿಲ್ಲ. ಇಗೊ, ಇನ್ನು ಮೇಲೆ ಆ ಲಕ್ಕಣನ ಗುಳಿಗೆಗಳು ಬೇಡ, ತಿಳಿಯಿತೆ?' ಎಂದು ಮಂದಸ್ಮಿತಳಾಗಿ ಕುವರನನ್ನು ಕಳುಹಿಸಿದಳು.

ಅಕ್ಕ ನಕ್ಕುದು ಕುವರನಿಗೆ ಎಷ್ಟೋ ಸಮಾಧಾನವಾಯಿತು. ಆದರೂ ಹೋಗುತ್ತಾ ಯೋಚಿಸಿದ: 'ಅಕ್ಕ ನಕ್ಕುದು ನಗುವಲ್ಲ. ಅದು ನನಗೆ ಸಮಾ ಧಾನ ಉಂಟುಮಾಡಲು. ಅವಳ ಮನಸ್ಸಿನಲ್ಲಿ ಯಾವುದೋ ದಾವಾಗ್ನಿ ಎದ್ದಿದೆ. ಅದನ್ನು ನನ್ನೊಡನೆ ಹೇಳಳು. ನಾನು ಗರುಡನಾದುದು ಬಹುಶಃ ಅವಳ ಮನಸ್ಸಿಗೆ ಒಪ್ಪಿಬರಲಿಲ್ಲ. ಇದೇಕೆ ಹೀಗಾಯಿತು? ಇದರಲ್ಲಿ ಏನು ದೋಷ? ಸೋವಲೆಯ ಬಳಿಯೂ ಏನೂ ಉಸಿರಬೇಡವೆಂದಳು. ಹೇಳಿಕಳಿಸುವವರೆಗೂ ಮನೆ ಬಿಟ್ಟು ಹೊರಗೆ ಬರಬಾರದೆಂದು ನನಗೂ ಸೋವಲೆಗೂ ಇಬ್ಬರಿಗೂ

ಕಟ್ಟಾಜ್ಞೆ ಮಾಡಿರುವಳು. ಇದರ ಅರ್ಥವೇನು ? ಅಯ್ಯೋ ದೇವರೆ! ಇದರ ಮೂಲ ನಿನಗೆ ಗೊತ್ತು. ಅಕ್ಕನಿಗೆ ಗೊತ್ತು. ಎಲ್ಲ ವೇಳೆಗಳಲ್ಲಿ, ಭಗವಂತ, ನೀನು ಅಕ್ಕನ ಕೈಹಿಡಿದು ನಡಸಿರುವೆ, ಈಗಲೂ ನಿನ್ನ ದಯೆಯಿರಲಿ. ಅಕ್ಕನ ಮನಸ್ಸು ಬಹು ದುಃಖಕ್ಕೆ ಈಡಾಗಿದೆ. ಬೇಗ ಶಾಂತಿಯನ್ನು ಕೊಡು' ಎಂದು ಪ್ರಾರ್ಥಿಸುತ್ತ ಚಿಕ್ಕಕ್ಕನ ಬಳಿಗೆ ಹೋಗಿ, ಅವಳನ್ನು ಅಕ್ಕನ ಬಳಿಗೆ ಕೂಡಲೆ ಕಳಿಸಿ, ತಾನು ಯೋಚನೆಯಲ್ಲೆ ಮನೆಯನ್ನು ಸೇರಿ, ಸೋವಲೆಗೆ ಅಕ್ಕನ ಆಜ್ಞೆಯನ್ನು ಅರುಹಿದ. ಸೋವಲೆ ಆಶ್ಚರ್ಯ ಭೀತಿಗಳಿಂದ ಮನಕುಗ್ಗಿದವಳೂ, ತನು ಕುಗ್ಗಿದವಳೂ ಆದಳು. ಅಕ್ಕನ ಮೇಲೆ ಅವರಿಬ್ಬರಿಗೂ ಇದ್ದ ಸಮಾನ ಗೌರವವೆ ಅವರಿಬ್ಬರಲ್ಲಿ ಈ ವಿಷಯದ ಚರ್ಚೆಗೆ ಅವಕಾಶಕೊಡಲಿಲ್ಲ.

§

ಲಕ್ಷ್ಮಿ ಬೇಗನೆ ಬಂದಳು. ಶಾಂತಲೆಗೆ ಆಗ ಲಕ್ಷ್ಮಿಯಿಂದ ಆಗಬೇಕಾಗಿದ್ದ ಕಾರ್ಯವೇನೂ ಇರಲಿಲ್ಲ. ಕುವರನನ್ನು ಕಳಿಸಲು ಅದೊಂದು ನೆಪ. ಕುವರನು ಇನ್ನು ತನ್ನೊಡನೆ ಇದ್ದಷ್ಟೂ ತನ್ನ ದುಃಖದ ಕಾರಣವನ್ನು ಅರಿಯಲು ಪ್ರಯತ್ನಪಡುವನೆಂಬ ಭಯದಿಂದ ಅವನನ್ನು ಕಳಿಸಿಬಿಡಲು ಹೂಡಿದ ಹೂಟ ಅದು.

ತನ್ನ ಮನಸ್ಸಿನ ದುಃಖವನ್ನು ಲಕ್ಷ್ಮಿ ಖಂಡಿತವಾಗಿ ಅರಿಯಬಾರದು,—ಅಷ್ಟೇಕೆ—ತನ್ನ ತಾಯಿತಂದೆಗಳೂ ಅರಿಯಬಾರದೆಂದು ದೃಢಮನಸ್ಸಿನಿಂದ ದುಃಖವನ್ನು ಅದುವಿ ಹಿಡಿದು ಸಮಾಧಾನದ ಮುಖವಾಡವನ್ನು ತಾಳಿ ಕುಳಿತಿದ್ದಳು ಶಾಂತಲೆ.

ಲಕ್ಷ್ಮಿ 'ಅಕ್ಕಾ' ಎನ್ನುತ್ತ ಒಳಕ್ಕೆ ಬಂದಳು.

ಶಾಂತಲೆ: 'ಬಾ ನನ್ನವ್ವೆ, ನಿನ್ನನ್ನು ನೋಡಿ ಯುಗಗಳಾದಂತಿದೆ. ನಿನ್ನೆ ರಾತ್ರಿ ನಾನು ಊರಿಗೆ ಬಂದಾಗಲೆ ಬಹಳ ಹೊತ್ತಾಗಿತ್ತು. ನಿನ್ನ ನಿದ್ದೆ ಕೆಡಿಸುವುದಕ್ಕೆ ನನಗೆ ಮನಸ್ಸು ಬರಲಿಲ್ಲ.'

'ನನಗೂ ಹಾಗೆಯೆ ಎನ್ನಿಸಿತು. ನೀನು ಊರಿಗೆ ಬಂದ ಸಮಾಚಾರವೇನೊ ತತ್‌ಕ್ಷಣವೆ ತಿಳಿಯಿತು. ಅಕ್ಕನಿಗೆ ಮಾರ್ಗಾಯಾಸವಾಗಿರಬೇಕು. ನಿದ್ರೆಯ ಆವಶ್ಯಕತೆ ಇದೆ. ನಾನು ಈಗ ಕಾಣಲು ಹೋದರೆ ಇನ್ನು ರಾತ್ರಿ

ಯೆಲ್ಲ ಮಾತುಗಳಲ್ಲಿ ಕಳೆದುಹೋಗುತ್ತೆ. ಯಾವಾಗ ಬೆಳಗಾದೀತು! ಯಾವಾಗ ನಿನ್ನನ್ನು ಕಂಡೇನು? ಎಂದು ರಾತ್ರಿಯೆಲ್ಲ ಜಾಗರವಮಾಡಿದೆ.'

'ಅವನ ಜೊತೆಗೆ ನೀನೊಬ್ಬಳು ಹುಚ್ಚಿ.'

'ಯಾರ ಜೊತೆಗೆ?'

'ಇನ್ನಾರ ಜೊತೆಗೆ! ನಿನ್ನ ತಮ್ಮನ ಜೊತೆಗೆ. ಅವನೂ ರಾತ್ರಿಯೆಲ್ಲ ನಿದ್ರೆಯಿಲ್ಲದೆ ಅಕ್ಕನ ಪರವಾಗಿ ಚಿತ್ರವಿಚಿತ್ರಗಳಾದ ಕನಸುಗಳನ್ನು ಕಾಣುತ್ತಿದ್ದ.'

'ಕನಸು ಕಂಡನೆ! ಏನೇನು? ಎಂತೆಂತಹ ಕನಸುಗಳನ್ನು ಕಂಡನಂತೆ?'

'ನಾನು ಹೇಳುವುದಕ್ಕಿಂತ ಅವನೇ ನಿನ್ನೊಡನೆ ಹೇಳಿದರೆ ಚೆನ್ನು. ನೀನೇ ಕೇಳು. ಬಹು ವಿಚಿತ್ರ ಕನಸುಗಳು, ಲಕ್ಷ್ಮಿ. ಕೇಳಿ ನನಗೆ ಕಣ್ಣೀರು ಬಂದಿತು. ಅದನ್ನು ನೋಡಿ ಅಕ್ಕ ದುಃಖಪಡುತ್ತಿರುವಳೆಂಬ ಭಾವನೆ ಅವನಿಗೆ ಉಂಟಾಯಿತು.'

'ದುಃಖದ ಕನಸೆ, ಅಕ್ಕ! ದುಃಖದ ಕನಸು ಕಂಡನೆ? ಅದು ಒಳ್ಳೆಯ ದಲ್ಲ. ಅದನ್ನೇಕೆ ನಿನ್ನೊಡನೆ ಹೇಳಿದ?'

'ದುಃಖದ ಕನಸಲ್ಲ, ಲಕ್ಷ್ಮಿ, ಅದೊಂದು ಮಹಾ ವಿಚಿತ್ರ ಕನಸು. ಅದನ್ನು ಕೇಳಿ ನನಗೆ ದುಃಖವಾಯಿತು . . .'

ಶಾಂತಲೆಗೆ ಮನಸ್ಸು ತಡೆಯಲಿಲ್ಲ. ಕನಸನ್ನು ಲಕ್ಷ್ಮಿಗೆ ವಿವರಿಸುತ್ತ ಕುಳಿತಳು. ಲಕ್ಷ್ಮಿ ಬಿಚ್ಚುಗಣ್ಣು ಬಿಚ್ಚುಬಾಯಿಂದ ಕೇಳುತ್ತ ಕುಳಿತಳು. ಎಲ್ಲ ಕೇಳಿದ ಮೇಲೆ ಲಕ್ಷ್ಮಿಯ ಕಣ್ಣುಗಳಲ್ಲೂ ನೀರೂರಿತು. 'ಅಕ್ಕಾ, ಕುವರನದು ಎಷ್ಟು ಸುಂದರ ಹೃದಯ! ಎಂತಹ ಸೊಗಸಿನ ಕನಸಿದು! ಸ್ವರ್ಗವನ್ನೇ ಭೂಮಿಗೆ ಇಳಿಸಿತಲ್ಲ ಅವನ ವಿಶ್ವಾಸ! ಅವನು ನೂರು ವರ್ಷಗಳು ಚೆನ್ನಾಗಿ ಬದುಕಲಿ. ಸೋವಲೆಗೆ ಹತ್ತು ಗಂಡುಮಕ್ಕಳಾಗಲಿ' ಎಂದಳು ಲಕ್ಷ್ಮಿ.

'ಅದು ನನ್ನ ತಂಗಿಗೂ ಆಗಲಿ.'

'ಮೊದಲು ಅಕ್ಕನಿಗೇ ಆಗಲೆಂದು ನಾನು ವ್ರತ ನಿಂತಿದ್ದೇನೆ.'

'ಆ ವ್ರತದ ಫಲ ನಿನಗೇ ಆಗಲಿ. ಲಕ್ಷ್ಮಿ, ನಿನಗೆ ಮಗುವಾದರೆ, ಅದು ನನ್ನ ಮಗುವಾಗುವುದಲ್ಲವೆ?'

'ಅಕ್ಕನ ವಿಶ್ವಾಸಕ್ಕೆ ಅಳವಿಲ್ಲ. ಅಕ್ಕನ ಮಗು ನನ್ನ ಮಗುವೂ ಆಗದೇನು!'

'ಸಂದೇಹವಿಲ್ಲ ಲಕ್ಷ್ಮಿ, ಸಂದೇಹವಿಲ್ಲ.'

ಹೀಗೆ ಪರಸ್ಪರ ಮಾತುಕತೆಗಳಲ್ಲಿ ಶಾಂತಲೆ ದಿನವೆಲ್ಲ ಕಳೆದಳು. ರಾತ್ರಿ ಅಕ್ಕತಂಗಿಯರು ಒಂದೇ ಕೋಣೆಯಲ್ಲಿ ಮಾತನಾಡುತ್ತ ಮಲಗಿದರು. ನಿದ್ರೆ ಬರುವ ತನಕ ಲಕ್ಷ್ಮಿ ಅಕ್ಕನೊಡನೆ ಮಾತನಾಡುತ್ತಲೇ ಇದ್ದಳು. ಶಾಂತಲೆಗೆ ನಿದ್ರೆ ಬಾರದು. ಮನಸ್ಸಿನ ಯೋಚನೆಗಳು ಮತ್ತೊಮ್ಮೆ ಕೆರಳಿದವು. 'ಏನು ದಾರಿ? ಇದು ಹೇಗೆ ಕೊನೆಗಾಣುವುದು?' ಎಂದು ಶಾಂತಲೆ ನಿಧಾನವಾಗಿ ಯೋಚಿಸಿದಳು. ಬಗೆಹರಿವ ದಾರಿಯೆ ಅವಳ ಮನಸ್ಸಿಗೆ ತೋರದಾಯಿತು. ಕುವರನು ಗರುಡನಾದುದೆ ಈ ಎಲ್ಲ ಇಕ್ಕಟ್ಟಿಗೂ ಕಾರಣವಾಗಿತ್ತು. ಪ್ರಭುಗಳು ಕುವರನಿಗೆ ಯುವರಾಜ ಪಟ್ಟವನ್ನು ಕಟ್ಟಬೇಕೆಂದು ನಿರ್ಧರಿಸಿದ್ದರು. ಇದಕ್ಕಾಗಿ ಪ್ರಭುಗಳು ಅವಸರದಿಂದ ರಾಜಧಾನಿಗೆ ಬರುವವರಾಗಿದ್ದರು. ಇದಕ್ಕಾಗಿಯೆ ಶಾಂತಲೆಯನ್ನು ಮುಂದಾಗಿ ರಾಜಧಾನಿಗೆ ಕಳಿಸಿಕೊಟ್ಟಿದ್ದರು. ಇಷ್ಟರೊಳಗೆ ಕುವರನು ಯಾರೊಬ್ಬರಿಗೂ ತಿಳಿಸದೆ, ಯಾರನ್ನೂ ಕೇಳದೆ ಗರುಡನಾಗಿಬಿಟ್ಟಿದ್ದ. ಅದನ್ನು ಕಂಡು ಶಾಂತಲೆಗೆ 'ಅಯ್ಯೋ! ಇನ್ನೇನು ಗತಿ' ಎನ್ನಿಸಿತು. 'ಪ್ರಭು ಗಳಿಗೆ ಈ ಸಮಾಚಾರ ತಿಳಿದುಬಂದರೆ, ಅವರ ಮನಸ್ಸು ಬಹು ನೊಂದೀತು, ಪರಿಣಾಮ ಘೋರವಾದೀತು. ಜೊತೆಗೆ ಸೋವಲೆಯೂ ಸತಿಕಂಕಣ ತೊಟ್ಟು ಬಿಟ್ಟಳು. ಇವರ ಜೊತೆಗೆ ಸೈನ್ಯದ ನಾಯಕರು ಕೆಲವರೂ ಕುವರನೊಡನೆ ಸಹಗಮಿಸುವವರಾದರು' ಎಂದು ಶಾಂತಲೆ ಯೋಚನೆ ಮಾಡಿದಷ್ಟೂ ಸಮಸ್ಯೆ ಕಠಿಣವಾಗುತ್ತಹೋಯಿತು. 'ಕುವರನು ಮಾಡಿರುವ ಈ ಪ್ರಮಾಣವನ್ನು ಪ್ರಭುಗಳು ಅನೃತವನ್ನಾಗಿ ಮಾಡಿಸರು. ಕುವರನೂ ಧರ್ಮಭ್ರಷ್ಟನಾಗುವವನಲ್ಲ. ತಾನು ಈಗ ಎಂತಹ ಸಂಕಟದಲ್ಲಿ ಸಿಕ್ಕಿರುವೆನೊ ಅಂಥದೇ ಸಂಕಟದಲ್ಲಿ ಪ್ರಭು ಗಳೂ ಸಿಕ್ಕಿಬೀಳುವರು. ಸಿಂಹಾಸನಕ್ಕೆ ಮುಂದಿನ ಅಧಿಕಾರ ಯಾರಿಗೆ? ತನಗೆ ಸಂತತಿಯಿಲ್ಲ. ತಾನು ಬದುಕಿರುವವರೆಗೂ ಪ್ರಭು ಇನ್ನಾರನ್ನೂ ಪಟ್ಟಕ್ಕೆ ತಂದು ಕೊಳ್ಳರು. ಲಕ್ಷ್ಮಿಯನ್ನು ಪಟ್ಟಮಹಿಷಿಯಾಗಿ ಮಾಡಿಕೊಳ್ಳಿರೆಂದು ಪ್ರಭು ಗಳನ್ನು ಬೇಡಿ, ಬೇಡಿ, ಅವರು ಆ ಮಾತಿಗೆ ಖಂಡಿತ ಒಪ್ಪೆವೆಂದುಬಿಟ್ಟರು. ಈಗ ಉಳಿದುದು ದತ್ತಸ್ವೀಕಾರ ಒಂದೇ. ಅಂತಹ ಮಕ್ಕಳು ಯಾರನ್ನೂ ಕಾಣೆವು. ಹಾಗೆ ತೆಗೆದುಕೊಂಡು ಅವನಿಗೆ ಪಟ್ಟಕಟ್ಟಿದರೂ, ನಾಳೆ ಲಕ್ಷ್ಮಿಗೆ ಒಂದು ಗಂಡುಮಗುವಾದರೆ ಆ ಮಗುವಿನ ಸ್ಥಾನಮಾನ ಏನು? ಅಯ್ಯೋ

ದೈವವೆ! ಇದೆಂತಹ ಕಠಿಣ ಸಮಸ್ಯೆಯನ್ನು ತಂದಿಟ್ಟೆ? ಇದರ ಪರಿಹಾರವಾಗಲಿ, ಇದು ಇನ್ನು ಮುಂದೆ ಯಾವ ಸ್ವರೂಪವನ್ನು ತಾಳುವುದೆಂಬುದಾಗಲಿ ನಿನಗೊಬ್ಬನಿಗೇ ಬೆಳಕು' ಎಂದು ಶಾಂತಲೆ ರಾತ್ರಿಯೆಲ್ಲ ಸಂಕಟದಲ್ಲಿ ಕಳೆದಳು.

ಬೆಳಗಾಯಿತು. ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿ, ಸ್ನಾನಮಾಡಿ, ಮಡಿಯುಟ್ಟು ಶಾಂತಲೆ ತನ್ನ ಶಾರದೆಯ ಪೂಜೆಯಲ್ಲಿ ನಿರತಳಾದಳು. ಮಧ್ಯಾಹ್ನದ ವರೆಗೂ ಧ್ಯಾನದಲ್ಲಿಯೇ ಕುಳಿತ್ತಿದ್ದಳು. ಅಕ್ಕ ಊಟಕ್ಕೆ ಬಾರದುದನ್ನು ಕಂಡು, ಲಕ್ಷ್ಮಿಯೆ ಬಂದು ಅಕ್ಕನನ್ನು ಬಲವಂತದಿಂದ ಊಟಕ್ಕೆ ಎಬ್ಬಿಸಿಕೊಂಡುಹೋದಳು. ಚಿಂತೆ ಹಿಡಿದ ಜೀವಕ್ಕೆ ಊಟ ಬೇಕೆ? ನಿದ್ದೆ ಬೇಕೆ? ಅಕ್ಕನ ಮನಸ್ಸು ಯಾವುದೊ ಮಹಾಸಂಕಟದಲ್ಲಿ ಸಿಲುಕಿರುವುದನ್ನು ಲಕ್ಷ್ಮಿ ಈಗ ಅರಿತಳು. 'ಅಕ್ಕಾ, ನನಗೂ ತಿಳಿಸಬಾರದಂತಹ ಸಂಗತಿಯೆ! ನಿನ್ನೆಯಿಂದ, ಬಹುಶಃ ಕುವರನನ್ನು ನೋಡಿದಾಗಿನಿಂದ ನಿನ್ನ ಮನಸ್ಸು ಯಾವುದೊ ದೊಡ್ಡ ಸಂಕಟದಲ್ಲಿ ಬೇಯುತ್ತಿದೆ. ನಾನದನ್ನು ತಿಳಿಯಬಾರದಾಗಿದ್ದರೆ ನೀನು ಹೇಳಬೇಡ ಅಕ್ಕ' ಎಂದಳು ಲಕ್ಷ್ಮಿ.

'ನೀನು ಕಾತರಳಾಗಬೇಡ, ಲಕ್ಷ್ಮಿ. ಅದು ಕ್ರಮೇಣ ನಿನಗೆ ತಿಳಿದೇ ತಿಳಿಯುವುದು. ಕಠಿಣ ಸಮಸ್ಯೆಯೇನೊ ಹೌದು. ಶಾರದೆಗೆ ಶರಣುಹೋಗಿದ್ದೇನೆ. ನನ್ನ ತಾಯಿ ನನಗೆ ದಾರಿ ತೋರದಿದ್ದರೆ ಇನ್ನಾರು ತೋರುವರು?'

ಶಾಂತಲೆಗೆ ಆ ರಾತ್ರಿಯೂ ಹಿಂದಿನ ರಾತ್ರಿಯಂತೆಯೆ ಸಂಕಟಕರವಾಯಿತು. ಅವಳ ಮನಸ್ಸು ಈಗ ತೀರ ಬೆಂದುಹೋಗಿತ್ತು. ಲಕ್ಷ್ಮಿಯೊಡನೆಯೂ ರಾತ್ರಿ ಹೆಚ್ಚು ಹೊತ್ತು ಮಾತನಾಡಲಿಲ್ಲ. ಲಕ್ಷ್ಮಿ ನಿದ್ದೆ ಮಾಡಿದಳೆಂದು ಭಾವಿಸಿ ತನ್ನ ಸಂಕಟಗಳನ್ನು ಪುನಃ ಒಂದೊಂದಾಗಿ ತೋಡಿಕೊಂಡು ಯೋಚಿಸಿ, ಯೋಚಿಸಿ, ಬಗೆ ಕಾಣದಾದಳು. ಕಟ್ಟಕಡೆಗೆ ಅವಳ ಮನಸ್ಸು ಒಂದು ನಿರ್ಧಾರಕ್ಕೆ ಮುಟ್ಟಿತು. 'ಏಕೆ ಆಗಬಾರದು' ಎಂಬುದೊಂದು ಪ್ರಶ್ನೆಯೂ ಆಗ ಅವಳ ಮನಸ್ಸಿನಲ್ಲಿ ಉದ್ಭವಿಸಿತು. 'ಬೇರಾವ ಮಾರ್ಗವೂ ಇಲ್ಲ' ವೆಂದು ಮನಸ್ಸು ಪುನಃ ನಿರ್ಧರಿಸಿತು. 'ಸರಿ, ದೈವವೆ ತೋರಿದ ಮಾರ್ಗ ಇದು, ಇದನ್ನೇ ಅನುಸರಿಸತಕ್ಕುದು' ಎಂದು ದೃಢಮಾಡಿಕೊಂಡಳು ಶಾಂತಲೆ. ಅವಳ ಮನಸ್ಸಿಗೆ ಆಗ ಹೆಚ್ಚಿನ ಧೈರ್ಯ ಉಂಟಾಯಿತು. ಯಾವುದನ್ನು

ಅಸಾಧ್ಯವೆಂದುಕೊಂಡಿದ್ದಳೋ, ಅದನ್ನು ಸಾಧ್ಯಮಾಡಿಕೊಳ್ಳಲು ಇದೊಂದೇ ಮಾರ್ಗ ಕಂಡಿತು.

ಕುದಿಯುತ್ತಿದ್ದ ಮನಸ್ಸಿಗೆ ಈಗ ನೆಮ್ಮದಿ ಒದಗಿತು. ಪಕ್ಕಕ್ಕೆ ತಿರುಗಿ 'ಲಕ್ಷ್ಮಿ, ನಿದ್ದೆ ಮಾಡಿದೆಯ?' ಎಂದು ಕೇಳಿದಳು. ಲಕ್ಷ್ಮಿ, ನಿದ್ದೆ ಮಾಡಿದ್ದಳು. ನಿದ್ದೆ ಮಾಡುತ್ತಿದ್ದ ತನ್ನ ತಂಗಿಯ ಶಾಂತ ಮುಖಭಾವನನ್ನು ಬಹಳ ಹೊತ್ತು ನೋಡುತ್ತಿದ್ದಳು ಶಾಂತಲೆ. ಅನಂತರ ತನ್ನ ಮನಸ್ಸಿನಲ್ಲಿ ಅಂದುಕೊಂಡಳು: 'ನನ್ನವ್ವೆ, ಇಂತಹ ಕಠಿಣ ಸಮಸ್ಯೆಗಳು ನಿನಗೆ ಎಂದೆಂದಿಗೂ ಬಾರದಿರಲಿ. ನೂರು ವರ್ಷಗಳು ಸುಖವಾಗಿ ಯೋಚನೆಯಿಲ್ಲದೆ ಇರು' ಎಂದು ಹರಸಿ, ಶಾಂತಲೆ ನಿಶ್ಚಿಂತೆಯಿಂದ ನಿದ್ದೆ ಮಾಡಿದಳು.

'ಅಕ್ಕ ನಿದ್ದೆ ಮಾಡಿದಳೊ ಅಥವಾ ಇನ್ನೂ ಯೋಚಿಸುತ್ತಲೆ ಇರುವಳೊ' ಎಂದು ಲಕ್ಷ್ಮಿ ಒಮ್ಮೆ ಎಚ್ಚತ್ತು, ಶಾಂತಲೆ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಿರುವುದನ್ನು ಕಂಡು ತುಂಬ ಸಮಾಧಾನಪಟ್ಟುಕೊಂಡಳು. ನಿದ್ರಿಸುತ್ತಿರುವ ಮಗುವಿಗೆ ಎಚ್ಚರವಾಗದ ಹಾಗೆ ಹೆತ್ತತಾಯಿ ಮೇಲುಹೊದಿಕೆಯನ್ನು ಹೊದಿಸುವಂತೆ ಅಕ್ಕನಿಗೆ ಹೊದಿಕೆಯನ್ನು ಹೊದಿಸಿ, ದೀಪದ ಸೊಡರನ್ನು ಕಿರಿದು ಮಾಡಿ ಮಲಗಿ ತಾನೂ ನಿದ್ದೆಹೋದಳು.

ಮರುದಿನ ಮಧ್ಯಾಹ್ನದ ಮೇಲೆ ಶಾಂತಲೆ ಕುವರನನ್ನು ಕರಸಿಕೊಂಡು, ಹಿಂದಿನ ಎರಡು ದಿನಗಳಿಂದ ಅವನ ಮನಸ್ಸಿನಲ್ಲಿ ಉಂಟಾಗಿರಬಹುದಾದ ಭಯ, ಸಂಶಯಗಳ ನಿವಾರಣಾರ್ಥವಾಗಿ ಸಂತೋಷ ಉತ್ಸಾಹಗಳಿಂದ ಮಾತನಾಡಿ, 'ಇನ್ನೇನೇನು ಕನಸು ಕಂಡೆ!' ಎಂದು ಕುಶಾಲಿನಿಂದ ಕೇಳಿ, ಹಣ್ಣು ಹಾಲುಗಳನ್ನು ತರಿಸಿ ಒಟ್ಟಾಗಿ ತೆಗೆದುಕೊಂಡು, ಅನಂತರ ಕುವರನೊಡನೆ ತಾನು ಶಿವಗಂಗಾ ಯಾತ್ರೆ ಮಾಡಬೇಕೆಂದು ಉದ್ದೇಶಪಟ್ಟಿರುವೆನೆಂದಳು. ಅದಕ್ಕಾಗಿ ಕುವರನು ನಾಳೆಯೆ ಎಲ್ಲ ಏರ್ಪಾಡುಗಳನ್ನು ಮಾಡಬೇಕೆಂದು ಹೇಳಿ, ಶಿವಗಂಗೆ ಹತ್ತು ಗಾವುದಗಳ ದೂರವಿರುವುದರಿಂದ, ಗಾವುದ ಗಾವುದಕ್ಕೊ ಒಂದೊಂದು ಜೋಡಿ ಕುದುರೆಗಳನ್ನು ಬದಲಾಯಿಸಲು ಆಗುವ ಹಾಗೆ ಹತ್ತು ಹನ್ನೊಂದು ಜೊತೆ ಕುದುರೆಗಳನ್ನು ದಾರಿಯಲ್ಲಿ ಅಲ್ಲಲ್ಲಿ ತಕ್ಕ ಸಿಬ್ಬಂದಿಯೊಡನೆ ನಿಲ್ಲಿಸಿರಲು ಅನುಕೂಲಮಾಡಿ, ಶಿವಗಂಗೆಗೂ ಹೋಗಿ ಅಲ್ಲಿ ಒಂದೆರಡು ದಿನ ತಂಗುವುದಕ್ಕೆ ಸ್ಥಳ ಏರ್ಪಡಿಸಿ ಬರಬೇಕೆಂದು ಕುವರನಿಗೆ ಹೇಳಿದಳು. ಪ್ರಭು

ಗಳು ಊರಿಗೆ ಬಂದ ಒಂದೆರಡು ದಿನಗಳಲ್ಲಿ ತಾನು ಹೊರಡುವೆನೆಂದೂ ತಿಳಿಸಿದಳು.

ಕುವರನಿಗೆ ಆಶ್ಚರ್ಯವಾಯಿತು! ಅವನು 'ಏಕೆ ಅಕ್ಕ, ನೀನೊಬ್ಬಳೇ ಏಕೆ ಹೋಗಬೇಕು? ನಿನ್ನೊಡನೆ ಯಾರೂ ಬರಕೂಡದೆ? ಅಥವಾ ಬರುವವರು ಯಾರೂ ಇಲ್ಲವೊ?' ಎಂದು ಕೇಳಿದ.

ಶಾಂತಲೆ: 'ಅವರವರ ಕೆಲಸಕಾರ್ಯಗಳು ಎಷ್ಟೋ ಇರಬಹುದು.'

'ಇದೇನಕ್ಕ, ಹೀಗೆ ಮಾತನಾಡುತ್ತೀಯೆ! ನಿನ್ನೊಡನೆ ಯಾರು ಬರುವುದಿಲ್ಲವೆನ್ನುತ್ತಾರೆ? ಚಿಕ್ಕಕ್ಕ ಬರುವುದಿಲ್ಲವೆ? ನಾನೂ ಸೋವಲೆಯೂ ಬರುವುದು ಬೇಡವೆ?'

'ಏನು ಮಹಾಯಾತ್ರೆಗೆಂದು ನಿಮ್ಮನ್ನೆಲ್ಲ ಕರೆದುಕೊಂಡು ಹೋಗಲಿ?'

'ಅಕ್ಕ, ನೀನು ಎಲ್ಲಿಗೂ ಒಂಟಿಯಾಗಿ ಹೋದವಳಲ್ಲ, ಜೊತೆಗೆ ಚಿಕ್ಕಕ್ಕನಾದರೂ ಯಾವಾಗಲೂ ಇದ್ದೇ ಇರಬೇಕು. ಈಗ ಮಾತ್ರ ಅವರವರ ಕೆಲಸ ಅವರವರಿಗೆ ಎನ್ನುತ್ತಿರುವೆ! ನೋಡು, ನನಗೆ ಏನೂ ಕೆಲಸವಿಲ್ಲ. ಚಿಕ್ಕಕ್ಕನಿಗಾಗಲಿ, ಸೋವಲೆಗಾಗಲಿ ಅಂತಹ ಕೆಲಸವೇನು? ನಾನಾದರೂ ನಿನ್ನ ಜೊತೆಯಲ್ಲಿ ಬರುವೆ ಅಕ್ಕ. ಅಪ್ಪಾಜಿಯವರು ನಿನ್ನೊಬ್ಬಳನ್ನೇ ಖಂಡಿತ ಕಳಿಸರು.'

'ನಿನ್ನ ಅಪ್ಪಾಜಿಯವರು ಊರಿಗೆ ಬರುವರು. ನೀನೂ ಅವರೂ ಕಲೆತು ಮಾತನಾಡುವುದು ಒಂದು ನೂರು ಇದ್ದೀತು.'

'ಅಂತಹ ಅವಸರದ ಪ್ರಸಂಗಗಳೇನೂ ನನಗೆ ತಿಳಿದ ಮಟ್ಟಿಗೆ ಇಲ್ಲ. ಅಪ್ಪಾಜಿಯವರು ಏನಾದರೂ ಹೇಳುವುದಿದ್ದರೆ, ಒಂದೆರಡು ದಿನ ತಡವಾಗುವುದರಿಂದ ಬಾಧಕವೇನು? ಅಂತಹ ಆವಶ್ಯಕ ಪ್ರಸಂಗಗಳಿದ್ದರೆ ನಿನ್ನೊಡನೆಯೆ ಹೇಳಿ ಕಳಿಸುತ್ತಿರಲಿಲ್ಲವೆ?'

'ನಿನ್ನ ಅಪ್ಪಾಜಿಯವರು ನನ್ನೊಡನೆ ಯಾರಾದರೂ ಹೋಗಲೇಬೇಕೆನ್ನುವುದಾದರೆ ಆಗ ನಿನ್ನನ್ನು ಜೊತೆಗೆ ಕರೆದುಕೊಂಡು ಹೋಗುತ್ತೇನೆ. ಈಗ ಇನ್ನಾರೂ ಬೇಡ.'

'ಅಪ್ಪಾಜಿಯವರು ನಾಳೆ, ನಾಡಿದ್ದು ಊರಿಗೆ ಬರಬಹುದು, ಅಕ್ಕ. ಆಗ ನಾನು ಊರಲ್ಲಿ ಇಲ್ಲದಿದ್ದರೆ . . . ?'

'ಚಿಂತೆಯಿಲ್ಲ. ಈ ಕೆಲಸಕ್ಕಾಗಿ ನಿನ್ನನ್ನು ಕೊಟ್ಟು ಕಳಿಸಿರುವೆನೆಂದು

ನಿನ್ನ ಅಪ್ಪಾಜಿಯವರಿಗೆ ನಾನು ಹೇಳುತ್ತೇನೆ. ನೀನು ಮಾತ್ರ ನಾಳೆಯೆ ಈ ಎಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ನೀನೆ ಶಿವಗಂಗೆಗೂ ಹೋಗಿ ಅಲ್ಲಿಯ ಏರ್ಪಾಡುಗಳನ್ನು ಮಾಡಿಬರಬೇಕು. ಈ ಕಾರ್ಯಗಳನ್ನು ಇನ್ನೊಬ್ಬರಿಗೆ ವಹಿಸಬೇಡ. ಈ ಪ್ರಯಾಣದ ಸಂಗತಿಯನ್ನೂ ಯಾರೊಡನೆಯೂ ಉಸಿರಬೇಡ. ಇದೆಲ್ಲವನ್ನೂ ಮುಗಿಸಿಕೊಂಡು ತತ್‌ಕ್ಷಣವೆ ನನಗೆ ಬಂದು ತಿಳಿಸು. ನನ್ನನ್ನು ನೋಡುವ ಮೊದಲು ಇಲ್ಲಿ ನೀನು ಯಾರನ್ನೂ ನೋಡಬೇಡ. ಯಾರೊಡನೆಯೂ ಮಾತನಾಡಬೇಡ.'

'ಯಾಕೊ ಅಕ್ಕ! ನೀ ಹೇಳುವುದೊಂದು ನನಗೆ ಅರ್ಥವೇ ಆಗುತ್ತಿಲ್ಲ . . . ಹಾಗೆಯೆ ಆಗಲಿ ಅಕ್ಕ' ಎಂದು ಹೇಳಿ, ಕುವರ ಎದ್ದು ಅಕ್ಕನಿಗೆ ನಮಸ್ಕಾರಮಾಡಿಹೋದ. ಹೋಗುತ್ತ ಅನೇಕ ವಿಚಾರಗಳು ಅವನ ತಲೆಯನ್ನು ಹೊಕ್ಕವು. 'ಇಲ್ಲಿರುವ ಶಿವಗಂಗೆಗೆ ಹೋಗಿಬರಲು ಅಕ್ಕ ಇಷ್ಟು ಆತುರದ ಏರ್ಪಾಡುಗಳನ್ನು ಏಕೆ ಮಾಡಿಸುತ್ತಿದ್ದಾಳೆ? ಶಿವಗಂಗೆಯನ್ನು ಆದಷ್ಟು ಜಾಗ್ರತೆ ಸೇರಲು ಗಾವುದ ಗಾವುದಕ್ಕೂ ಕುದುರೆಗಳನ್ನು ಬದಲಾಯಿಸಬೇಕಂತೆ! ಇಷ್ಟು ಅವಸರವಾಗಿ ಹೋಗುವ ಕಾರಣವೇನು? ಶಿವಗಂಗೆಯಲ್ಲಿ ನಾಳೆ ನಾಡಿದ್ದು ಏನಾದರೂ ಪರ್ವಕಾಲವೆ? ಅಲ್ಲಿ ಅಕ್ಕನಿಗೆ ಯಾರಾದರೂ ಬಂಧುಗಳು ಇದ್ದಾರೆಯೆ? . . . ಏನೆ ಆಗಲಿ, ಹೇಳಿದ ಹಾಗೆ ಮಾಡಿಬಿಡುವುದು' ಎಂದುಕೊಂಡು ಕಾರ್ಯಗಳಲ್ಲಿ ನಿರತನಾದ. ಕುವರನಿಗೆ ಅಕ್ಕನ ಆಜ್ಞೆ, ಅಪ್ಪಾಜಿಯವರ ಆಜ್ಞೆ, ಎರಡೂ ದೈವಾಜ್ಞೆ.

ಆ ದಿನ ಸಂಜೆಯಾಗುತ್ತಿದ್ದಾಗ ಪ್ರಭುಗಳು ನಾಳೆ ಮಧ್ಯಾಹ್ನಕ್ಕೆ ಮುಂಚೆ ರಾಜಧಾನಿಗೆ ಬರುವರೆಂಬ ಸುದ್ದಿ ಬಂದಿತು. ಈ ಎರಡು ಮೂರು ದಿನಗಳ ಚಿಂತೆಯಲ್ಲಿ ಅರ್ಧವಾಗಿದ್ದಳು ಶಾಂತಲೆ. 'ಪ್ರಭುಗಳು ತನ್ನನ್ನು ಈಗಿರುವ ಸ್ಥಿತಿಯಲ್ಲಿ ಕಂಡರೆ, ನಿರುತ್ಸಾಹಪಟ್ಟಾರು, ಅಧೈರ್ಯಪಟ್ಟಾರು' ಎಂದು ಪ್ರಭುಗಳು ಬರುವ ವೇಳೆಗೆ ಒಂದು ಸಂತೋಷದ ಮುಖವಾಡವನ್ನು ಏರ್ಪಡಿಸಿಕೊಳ್ಳಲು ತೊಡಗಿದಳು. ಉಡುಗೆ ತೊಡುಗೆಗಳಿಂದ ಹಸನ್ಮುಖಳಾಗಿ ಕಾಣಿಸಿಕೊಳ್ಳುವುದೆಂದು ನಿರ್ಧರಿಸಿದಳು. ಅರಮನೆಯಲ್ಲಿ ಮನರಂಜನೆಯ ಕಾರ್ಯಕಲಾಪಗಳಿಗೆ ತತ್‌ಕ್ಷಣವೆ ಏರ್ಪಾಡುಗಳನ್ನು ಮಾಡಿದಳು. ನಾಟಕ, ನೃತ್ಯ, ಗಾಯನ ಇವುಗಳಿಗೆ ಮಿಂಚಿನಂತೆ ಸಿದ್ಧತೆಗಳು ನಡೆದವು. ಸುಮಂಗಲಿಯರಿಗೆ

ಅರಮನೆಯಲ್ಲಿ ಔತಣ, ಹೂ ವೀಳೆಯ ನಾಳೆಯೆ ನಿರ್ಧರವಾಯಿತು.

ಮಧ್ಯಾಹ್ನಕ್ಕೆ ಮೊದಲೆ ವಿಷ್ಣುವರ್ಧನ ಪ್ರಭುವು ವಿಜಯೋತ್ಸವದಲ್ಲಿ ಪುರಪ್ರವೇಶ ಮಾಡಿ, ಪುರಜನರ ಪ್ರೀತ್ಯಾದರಗಳನ್ನು ಕೈಗೊಂಡು ಅರಮನೆಗೆ ಬಂದರು. ಪದ್ಧತಿಯ ಪ್ರಕಾರ ಕುವರವಿಷ್ಣು ರಾಜಧಾನಿಯ ಗಡಿಯಲ್ಲಿ ಅಪ್ಪಾಜಿಯವರನ್ನು ಎದುರುಗೊಂಡು ಕರೆತರಬೇಕಾಗಿದ್ದಿತು. 'ಯಾವ ಕಾರ್ಯ ದಲ್ಲಿಯೊ ನಿರತನಾಗಿರಬೇಕು, ಆದುದರಿಂದ ಬರಲಾಗಲಿಲ್ಲವೇನೊ' ಎಂದು ಪ್ರಭುಗಳು ಸುಮ್ಮನಾದರು.

ಅರಮನೆಯನ್ನು ಸೇರಿ ಶಾಂತಲೆ ಲಕ್ಷ್ಮಿಯರನ್ನು ಮೊದಲು ಕಂಡರು. ಶಾಂತಲೆ ಅಲಂಕೃತೆಯಾಗಿ ಹಸನ್ಮುಖಿಯಾಗಿದ್ದರೂ, ಆಕೆಯ ಮುಖವೂ ಕಣ್ಣುಗಳೂ ಬಾಡಿರುವುದನ್ನು ಪ್ರಭುವು ಕಾಣದೆ ಇರಲಿಲ್ಲ. ಅರಮನೆಯಲ್ಲಿ ಅಂದು ಮನರಂಜನೆಯ ದೃಶ್ಯಗಳು ತುಂಬ ಇದ್ದುವು. ಶಾಂತಲೆಯೊಡನೆ ನಾಲ್ಕು ಮಾತುಗಳನ್ನು ಆಡಲು ಕೂಡ ಪ್ರಭುಗಳಿಗೆ ಅವಕಾಶ ದೊರೆಯಲಿಲ್ಲ. ಆ ಸನ್ನಿವೇಶದಲ್ಲಿ ಕುವರನ ನೆನಪು ಸಹ ಬರುವುದಕ್ಕೆ ಸಮಯವಿಲ್ಲದಂತೆ, ಪ್ರಭು ಗಳಿಗೆ ನಿಧಾನವಾಗಿ ಉಸಿರಾಡಿಸಲೂ ಸಮಯವಿಲ್ಲದಂತೆ ಕಾರ್ಯಕಲಾಪ ಗಳನ್ನು ಏರ್ಪಡಿಸಿಟ್ಟಿದ್ದಳು ಜಾಣೆ ಶಾಂತಲೆ.

ಮಧ್ಯಾಹ್ನವೆಲ್ಲ ಇವುಗಳಲ್ಲಿಯೆ ಕಳೆದುಹೋಯಿತು. ಮುತ್ತೈದೆಯರ ಊಟ ಉಪಚಾರ, ಹೂ ವೀಳೆಯ ಎಲ್ಲವೂ ಸ್ವತಃ ಮಹಾರಾಣಿಯೂ ಲಕ್ಷ್ಮೀ ದೇವಿಯೂ ವಹಿಸಿ ಮಾಡುತ್ತಿದ್ದುದರಿಂದ, ಊಟವಾದ ಮೇಲೂ ಪ್ರಭುಗಳು ದೇವಿಯರನ್ನು ಕಾಣಲಾಗಲಿಲ್ಲ. ಅಷ್ಟುಹೊತ್ತಿಗೆ ಮಧ್ಯಾಹ್ನವೂ ಮುಗಿಯಿತು. ಇನ್ನು ಸಂಜೆಯ ಸಂತೋಷ ದೃಶ್ಯಗಳು ಬಿಡುವಿಲ್ಲದಂತೆ ಒಂದರ ಹಿಂದೆ ಒಂದು.

ರಾತ್ರಿ ಪ್ರಭುವು ಊಟ ಮುಗಿಸಿ, ಚಂದ್ರಶಾಲೆಯಲ್ಲಿ ಕುಳಿತುಕೊಂಡರೊ ಇಲ್ಲವೊ, ಆಪ್ತರೂ ಸಚಿವರೂ ಎಲ್ಲರೂ ಬಂದು ಸೇರಿದರು. ರಾಜ್ಯದ ವಿಷಯ ಗಳನ್ನು ಪರ್ಯಾಲೋಚಿಸುತ್ತಿರುವಲ್ಲಿ ನಿದ್ರಾಸಮಯವೂ ಸಮೀಪಿಸಿತು. ಪ್ರಭುಗಳು ಎಲ್ಲರನ್ನು ಕಳಿಸಿಕೊಟ್ಟಮೇಲೆ ಶಾಂತಲೆ ಲಕ್ಷ್ಮಿಯರನ್ನು ಬರ ಮಾಡಿಕೊಂಡರು. ಪ್ರಭುಗಳೆ ಮಾತಿಗೆ ಮೊದಲಿಟ್ಟು, 'ದೇವಿ, ಇಷ್ಟೆಲ್ಲ ಆನಂದ ಉತ್ಸವಗಳಿಗೆ ಕಾರಣವೇನು?' ಎಂದು ಕೇಳಿದರು. ಒಡನೆಯೇ

ಉತ್ತರ ಕೊಡಲು ಶಾಂತಲೆಗೆ ಸ್ವಲ್ಪ ಇಕ್ಕಟ್ಟೇ ಆಯಿತು. ಅನಂತರ ಹೇಳಿದಳು, ' ಪ್ರಭುಗಳು ಊರಿಗೆ ಬರುವುದನ್ನು ಕೇಳಿದೆವು ' ಎಂದು.

' ನಿನ್ನ ಆರೋಗ್ಯ ಚೆನ್ನಾಗಿಲ್ಲವೆ? ಇಷ್ಟರೊಳಗೆ ಆದುದೇನು ? '

ಶಾಂತಲೆ: ' ಯಾವುದೊ ಬಗೆಹರಿಯದ ಯೋಚನೆ ತಲೆಹೊಕ್ಕು ನಿದ್ದೆ ಕೆಡಿಸಿತು.'

' ಬಗೆಹರಿಯದ ಯೋಚನೆಗಳು ನಮ್ಮ ಪಾಲಿಗೆ ಇರಲಿ. ನಮ್ಮೊಡನೆ ಹೇಳಬಹುದಲ್ಲ. ನೀನೂ, ನಾನೂ, ಲಕ್ಷ್ಮಿಯೂ ಮೂವರೂ ಸೇರಿ ಬಗೆಹರಿಸ ಬಹುದು. ರಾಜ್ಯಕ್ಕೆ ಸಂಬಂಧಪಟ್ಟುದಾದರೆ, ಅಮಾತ್ಯರುಗಳಿಲ್ಲವೆ? ದೇವಿ, ನಿನ್ನ ಯೋಚನೆಗಳು ನಿನ್ನ ಆರೋಗ್ಯದ ಮೇಲೂ ಪರಿಣಾಮಕಾರಿಯಾಗುತ್ತಿರು ವುವು. ನನ್ನಲ್ಲಿ ಹೇಳಬೇಕು. ನಾನು ಎಲ್ಲದರಲ್ಲಿಯೂ ನಿನಗೆ ಸಮಭಾಗಿ ಯಲ್ಲವೆ ? '

' ಬಲ್ಲೆದೇವ. ಕೆಲವು ವಿಷಯಗಳಂತೂ ನಮಗೆ ಸಂಬಂಧಪಟ್ಟಿರುತ್ತವೆ, ಹೆಂಗಸಿನ ಮನೋಭಾವದಿಂದಲೇ ತೂಕಮಾಡಬೇಕಾಗುತ್ತದೆ.'

' ದಾಂಪತ್ಯಧರ್ಮವು ಅದನ್ನು ಸರ್ವಥಾ ಒಪ್ಪದು. ಎಲ್ಲ ವಿಚಾರ ಗಳನ್ನೂ ಸೇರಿಯೆ ಯೋಚಿಸಬೇಕು, ಸೇರಿಯೆ ನಿರ್ಧರಿಸಬೇಕು. ದಂಪತಿಗಳಲ್ಲಿ ಯಾರೊಬ್ಬರೂ ಸ್ವಾತಂತ್ರ್ಯ ವಹಿಸಬಾರದು; ಇದು ಸಪ್ತಪದಿಯ ಒಂದು ಪ್ರಮಾಣ. ಇದನ್ನು ಮರೆತೆಯ ? ವಿಷಯ ತಿಳಿಸಬಹುದು, ಅಥವಾ ತಿಳಿಸ ಬಾರದು ಎಂದು ನಿರ್ಧರಿಸಬಹುದಾದ ವಿವೇಚನೆ ನಿನಗಿರುವುದೆಂದು ನಾ ಬಲ್ಲೆ. ನಿನ್ನ ಮನಸ್ಸಿಗೆ ನೋವನ್ನುಂಟುಮಾಡುವ ವಿಷಯ ನನಗೂ ಒಂದಲ್ಲ ಒಂದು ವಿಧವಾಗಿ ನೋವನ್ನುಂಟುಮಾಡಿಯೆ ಮಾಡುವುದು. ಈಗ ನನ್ನ ಮನಸ್ಸು ನೋಯುತ್ತಿಲ್ಲವೆ? ಪತಿಯು ಸಹೃದಯನಲ್ಲವೆ ದೇವಿ ? '

' ಪ್ರಭೂ, ನನ್ನ ಮನಶ್ಶಾಂತಿಗಾಗಿ ನಾನು ಶಿವಗಂಗೆಗೆ ಯಾತ್ರೆ ಹೋಗು ವವಳಾಗಿದ್ದೇನೆ.'

' ಹೋಗಿ ಬಾ ದೇವಿ, ಖಂಡಿತವಾಗಿ ಹೋಗಿ ಬಾ. ಗಂಗಾಧರೇಶ್ವರನ ದರ್ಶನ ಅಗತ್ಯವಾಗಿ ಮಾಡಿ ಬಾ. ದೂರವೇನೂ ಇಲ್ಲ. ಯಾವಾಗ ಬೇಕಾ ದರೂ ಹೋಗಿ ಬಾ.'

' ನಾಳೆಯೆ ಹೊರಡಬೇಕೆಂದು ಮನಸ್ಸಾಗಿರುವುದು. ಹೋಗಿಬರುತ್ತೇನೆ,

ಆಶೀರ್ವಾದ ಮಾಡಿ' ಎನ್ನುತ್ತ ಶಾಂತಲೆ ಪ್ರಭುಗಳ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದಳು. ನಮಸ್ಕರಿಸಿದ ಪತ್ನಿಯನ್ನು ಪ್ರಭುಗಳು ಹಿಡಿದೆತ್ತಿ, 'ಇದಕ್ಕೆ ಇಷ್ಟು ದೈನ್ಯವೇಕೆ, ದೇವಿ! ನಾನು ಯಾವಾಗಲಾದರೂ ನಿನ್ನ ಮನೋಭಿಲಾಷೆಯನ್ನು ಉಪೇಕ್ಷಿಸಿದ್ದೇನೆಯೆ? ಇದುವರೆಗೆ ನೀನಾದರೂ ನಾನು ಒಪ್ಪದ, ಒಪ್ಪಲಾಗದ ಮನೋಭಿಲಾಷೆಯನ್ನು ವ್ಯಕ್ತಪಡಿಸಿದವಳಲ್ಲವಲ್ಲ. ಶಿವಗಂಗೆಗೆ ಅಗತ್ಯವಾಗಿ ಹೋಗಿ ಬಾ, ನಾಳೆಯೆ ಹೋಗಿ ಬಾ, ಲಕ್ಷ್ಮಿಯನ್ನೂ ಕರೆದುಕೊಂಡು ಹೋಗು. ಸೋವಲೆಯನ್ನೂ ಕರೆದುಕೊಂಡು ಹೋಗು. ಯಾರಾರು ಬರುತ್ತಾರೆ? ನಾನು ಬರಬೇಡವೆ?' ಎಂದರು.

ಶಾಂತಲೆ ಮೃದುವಾಗಿ ನಕ್ಕು 'ನಾನೊಬ್ಬಳೆ ಹೋಗಿಬರುತ್ತೇನೆ. ಲಕ್ಷ್ಮಿ ನಿಮ್ಮೊಡನೆ ಇಲ್ಲಿಯೆ ಇರಲಿ. ತಾವು ಈಗ ತಾನೆ ಊರಿಗೆ ಬಂದಿರುವಿರಿ. ಆದ್ದರಿಂದ ಲಕ್ಷ್ಮಿ ನಿಮ್ಮೊಡನೆಯೆ ಇರಲಿ' ಎಂದಳು.

'ಒಬ್ಬಳೆ ಹೋಗುವೆಯ? ಮೈಗಾವಲಿಗಾದರೂ, ಕಡೆಗೆ ದಾರಿಯಲ್ಲಿ ಹರಟುವುದಕ್ಕಾದರೂ ಒಬ್ಬರು? ಬಿಡದಿ ಏರ್ಪಾಡಿನವರು?'

'ಬೇಡ. ದೇವತಾದರ್ಶನಕ್ಕೆ, ಗುರುಸನ್ನಿಧಿಗೆ ಹೋಗುವಾಗ ಆಡಂಬರ ಕೂಡದೆಂದು ನನ್ನ ಅವ್ವೆ ನನಗೆ ಎಷ್ಟೋ ಬಾರಿ ಹೇಳಿದ್ದಾರೆ.'

'ಅದು ಸರಿ. ನಿನ್ನ ಮನಸ್ಸು ಒಪ್ಪಿದಂತೆ ಮಾಡು. ಮೇನೆಯ ಪ್ರಯಾಣ ಪ್ರಯಾಸ. ರಥಪ್ರಯಾಣ ಆದೀತು. ಜಾಗ್ರತೆ ಸೇರಬೇಕಾದರೆ ದಾರಿಯಲ್ಲಿ ಅಲ್ಲಲ್ಲಿ ಕುದುರೆಗಳನ್ನು ಬದಲಾಯಿಸಬೇಕಾಗುವುದು. ಅದಕ್ಕೆ ಎಲ್ಲ ಏರ್ಪಾಡುಗಳನ್ನು ನಾಳೆಯೆ ಮಾಡಿಕೊಂಡು, ನಾಡಿದ್ದು ಹೊರಡಲು ಸಾಧ್ಯ. ನಾನೂ ಲಕ್ಷ್ಮಿಯೊಡನೆ ವೇಲಾಪುರಿಗೆ ಹೋಗಿಬರುತ್ತೇನೆ. ನೀನು ಜೊತೆಗೆ ಯಾರನ್ನು ಕರೆದುಕೊಂಡು ಹೋಗುವೆಯೆಂದು ಕೊನೆಗೂ ಹೇಳಲಿಲ್ಲವಲ್ಲ? ನಿನ್ನ ಅವ್ವೆ? ಅಯ್ಯ? ಯಾರಾದರೂ ಗಂಡಸರು . . . ನಿನ್ನ ತಮ್ಮ?'

'ತಮ್ಮನನ್ನು ಕರೆದುಕೊಂಡು ಹೋಗಲೆ?'

'ಅದು ಸರಿ. ಎಲ್ಲಿ? ಅವನೆಲ್ಲಿ? ನನ್ನನ್ನು ನೋಡಲು ಸಹ ಬರಲಿಲ್ಲ. ಊರಲ್ಲಿರುವನೆ? ಸೋವಲೆಯನ್ನೂ ಕಾಣಲಿಲ್ಲ.'

'ಸೋವಲೆ ಸೌಖ್ಯವಾಗಿದ್ದಾಳೆ. ತಮ್ಮ, ನನ್ನ ಯಾತ್ರಾಪ್ರಯಾಣಕ್ಕೆ ಅಣಿಮಾಡುವುದಕ್ಕೆ ನಿನ್ನೆ ಶಿವಗಂಗೆಗೆ ಹೋದ.'

'ಓಹೋ! ಅದಕ್ಕಾಗಿಯೆ ನಾನು ಅವನನ್ನು ಕಾಣಲಿಲ್ಲ. ಏನೊ ಅಸ್ವಸ್ಥತೆ ಇರಬಹುದೆಂದೆಣಿಸಿದ್ದೆ. ಇನ್ನೇನು? ಎಲ್ಲಾ ಏರ್ಪಾಡೂ ನಡೆದೇ ಇವೆ. ಹೋಗಿ ಬಾ ದೇವಿ. ನಿನ್ನದಾರಿ ಸುಗಮವಾಗಲಿ.'

'ನಿಮ್ಮ ಆಶೀರ್ವಾದ. ಅಂತೆಯೇ ಆಗಲಿ.'

ಪ್ರಭುಗಳು ಸುಮ್ಮಾನದಿಂದ ಎದ್ದು ಶಯ್ಯಾಗೃಹದ ಕಡೆಗೆ ನಡೆದರು.

§

ಮರುದಿನ ಪ್ರಾತಃಕಾಲ ಪ್ರಭು ತಮ್ಮ ವೇಲಾಪುರದ ಪ್ರಯಾಣದ ಸಿದ್ಧತೆಗಳಿಗೆ ಆಜ್ಞೆಮಾಡಿದರು. ಶಾಂತಲೆಯ ಶಿವಗಂಗೆಯ ಯಾತ್ರೆಗೆ ಕುವರನು ಸಮರ್ಪಕವಾದ ಏರ್ಪಾಡುಗಳನ್ನು ಮಾಡಿಕೊಡುವನೆಂದು ಪ್ರಭುಗಳು ಆ ಕಡೆ ಗಮನಕೊಡಲಿಲ್ಲ. ಪ್ರಾತಃಕಾಲವೆಲ್ಲ ಸಚಿವರೊಡನೆಯೂ ಇತರ ಅಧಿಕಾರಿಗಳೊಡನೆಯೂ ಮಾತುಕತೆಗಳಲ್ಲಿ ಕಳೆದುಹೋಯಿತು.

ಲಕ್ಷ್ಮಿ ಅಷ್ಟುಹೊತ್ತೂ ಅಕ್ಕನ ಜೊತೆಯಲ್ಲಿಯೆ ಇದ್ದಳು. ದೇಶಾಡಳಿತದಲ್ಲಿ, ದೇಶರಕ್ಷಣೆಯಲ್ಲಿ ಮಹಾರಾಜ್ಞಿಯ ಪಾತ್ರವೂ ಎಷ್ಟು ಅಗತ್ಯವಾದುದೆಂಬುದನ್ನು ಅಕ್ಕನನ್ನು ನೋಡಿ ಕಲಿಯುತ್ತಿದ್ದಳು. ಈ ವಿಷಯದಲ್ಲಿ ಶಾಂತಲೆಯೂ ಆಗಾಗ್ಗೆ ತಂಗಿಗೆ ಎಷ್ಟೋ ಸೂಕ್ಷ್ಮಗಳನ್ನು ಹೇಳುತ್ತಲೆ ಇದ್ದಳು. ಸಾಮಂತರ, ಶ್ರೀಮಂತರ ಪತ್ನಿಯರೊಂದಿಗೆ ಸ್ನೇಹ ವಿಶ್ವಾಸಗಳಿಂದಿರುವುದು, ಸೂಕ್ತಸಮಯಗಳಲ್ಲಿ ಉಪಚಾರ ಸನ್ಮಾನಗಳಿಂದ ಅವರನ್ನು ಗೌರವಿಸಿ ನಡೆದುಕೊಳ್ಳುವುದು, ಮುಂತಾದ ಅನೇಕ ವಿಷಯಗಳನ್ನು ಲಕ್ಷ್ಮಿ ಅಕ್ಕನಿಂದ ಕಲಿತಿದ್ದಳು, ಕಲಿಯುತ್ತಿದ್ದಳು. ತನಗೆ ತಿಳಿಯದ ವಿಷಯಗಳಲ್ಲಿ 'ಇದೇಕೆ ಅಕ್ಕ?', 'ಹೀಗೇಕೆ ಅಕ್ಕ?' ಎಂದು ಲಕ್ಷ್ಮಿ ಕೇಳುತ್ತಿದ್ದಳು, ಶಾಂತಲೆ ಹೇಳುತ್ತಿದ್ದಳು. ಅನೇಕ ವೇಳೆಗಳಲ್ಲಿ 'ಮುಂದಕ್ಕೆ ಇದು ಹೀಗೆಯೆ ಆಗುವುದು, ಹೀಗೆಯೆ ನಡೆಯುವುದು' ಎಂಬ ನಿಶ್ಚಯದ ಮೇಲೆ ಶಾಂತಲೆ ಕೆಲಸಗಳನ್ನು ನಡಸಿ, ಅದು ಹಾಗೆಯೆ ನಡೆದುದನ್ನು ಕಂಡು ಲಕ್ಷ್ಮಿ ಬೆರಗಾಗಿ 'ಅಕ್ಕ, ಇಷ್ಟೆಲ್ಲ ಯೋಚನೆ ಮಾಡುವುದಕ್ಕೆ ನಿನಗೆ ಸಮಯವೆಲ್ಲಿ! ಎಷ್ಟು ದೂರದ ಯೋಚನೆಗಳನ್ನು ಮಾಡಿ ಕಾರ್ಯಗಳನ್ನು ಹೊಂದಿಸುತ್ತೀಯೆ!' ಅಂದದ್ದೂ ಉಂಟು.

ಶಾಂತಲೆಯ ಮನಸ್ಸು ಎರಡು ದಿನಗಳ ಹಿಂದೆ ಇದ್ದುದಕ್ಕಿಂತ ಈಗ

ಎಷ್ಟೋ ಪ್ರಫುಲ್ಲವಾಗಿತ್ತು. 'ಲಕ್ಷ್ಮಿಯನ್ನೂ ಕರೆದುಕೊಂಡು ಎರಡು ದಿನ ವೇಲಾಪುರಕ್ಕೆ ಹೋಗಿಬರುತ್ತೇನೆ' ಎಂದು ಪ್ರಭುಗಳು ಅಂದಾಗ, ಶಾಂತಲೆ ತನ್ನ ಉದ್ಯಮಕ್ಕೆ ದೈವವೇ ಸಹಾಯ ಮಾಡುತ್ತಿದೆಯೆಂದು ಆನಂದಪಟ್ಟಳು. 'ಏಕೆ? ಏನು?' ಎಂದು ಕೇಳದೆ ತನ್ನ ಶಿವಗಂಗೆಯ ಯಾತ್ರೆಗೆ ಪ್ರಭುಗಳು ಒಡನೆ ಒಪ್ಪಿಗೆಯಿತ್ತುದನ್ನು ಕಂಡು ಶಾಂತಲೆಗೆ ಈ ನಂಬಿಕೆ ಇನ್ನೂ ದೃಢ ಪಟ್ಟಿತು. ಆಕೆಗೆ ಉತ್ಸಾಹ ತುಂಬಿತು. ಮನಸ್ಸಿನ ದಾರುಣ ಚಿಂತೆ ದೂರ ವಾಯಿತು.

ಪ್ರಭುಗಳೂ, ಶಾಂತಲೆ ಲಕ್ಷ್ಮಿಯರೂ, ಇತರ ರಾಣಿಯರೂ ಆ ಮಧ್ಯಾಹ್ನ ಒಟ್ಟಿಗೆ ಕುಳಿತು ಊಟಮಾಡಿದರು. ಊಟವಾದ ಸ್ವಲ್ಪಹೊತ್ತಿನ ಮೇಲೆ ಪ್ರಭುಗಳು ಲಕ್ಷ್ಮಿಯೊಡನೆ ವೇಲಾಪುರಕ್ಕೆ ಹೊರಟರು. ತನ್ನ ಅಯ್ಯನ ನೆನಪಿಗೆ ಬೃಂದಾವನ ಒಂದನ್ನು ವೇಲಾಪುರಿಯಲ್ಲಿ ಕಟ್ಟಿಸಬೇಕೆಂದು ಲಕ್ಷ್ಮಿ ಪ್ರಭುಗಳನ್ನು ಕೇಳಿದಳು. 'ಅದನ್ನು ನೀನು ಹೇಳಬೇಕಾದುದೇ ಇಲ್ಲ. ಅದು ನನ್ನ ಕರ್ತವ್ಯ' ಎಂದಿದ್ದರು ಪ್ರಭುಗಳು. ಆ ಕಾಲ ಈಗ ಬಂದೊದಗಿತು. ಲಕ್ಷ್ಮಿ ವೇಲಾಪುರಿಗೆ ಹೊರಡುವ ಮುನ್ನ ಶಾಂತಲೆ ತಂಗಿಯನ್ನು ಅಪ್ಪಿಕೊಂಡು 'ಲಕ್ಷ್ಮಿ, ನನ್ನ ಪೂಜೆಗಳೆಲ್ಲವನ್ನೂ ಕೇಶವನಿಗೆ ಅರ್ಪಿಸಿ ಬಾ. ಬರುವ ಸೋಮವಾರ ಪ್ರಾತಃಕಾಲ ನನ್ನ ಹೆಸರಿನಲ್ಲಿ ವಿಜಯನಾರಾಯಣನಿಗೆ, ನನ್ನ ಚೆನ್ನಕೇಶವನಿಗೆ ವಿಶೇಷ ಪೂಜೆಯಾಗಲಿ, ಇದನ್ನು ಮರೆಯಬೇಡ' ಎಂದಳು. 'ಅಗತ್ಯವಾಗಿ ಮಾಡಿಸುವೆನಕ್ಕ' ಎಂದಳು ಲಕ್ಷ್ಮಿ.

ಪ್ರಭುಗಳು ಹೊರಟ ಸ್ವಲ್ಪ ಹೊತ್ತಿನ ಮೇಲೆ ಕುವರವಿಷ್ಣು ಶಿವಗಂಗೆ ಯಿಂದ ಹಿಂದಿರುಗಿ, ಆ ಕ್ಷಣವೆ ಅಕ್ಕನನ್ನು ಕಾಣಲು ಬಂದ. 'ನೀನು ಬಂದುದು ಯಾವಾಗ? ಎಷ್ಟು ಹೊತ್ತಾಯಿತು?' ಎಂದು ಶಾಂತಲೆ ಮೊದಲು ಕೇಳಿದಳು.

'ಕಾಣುವುದಿಲ್ಲವೆ ಅಕ್ಕ, ಈ ದೂಳು, ಈ ಕೊಳೆ, ಈ ಕೆದರಿದ ತಲೆ ಗೂದಲು? ಎಲ್ಲ ಏರ್ಪಾಡುಗಳನ್ನು ಮಾಡಿ ಎಷ್ಟು ಬೇಗ ಬಂದಿರುವೆ ನೋಡು. ಬಂದ ಕ್ಷಣವೇ ನನ್ನನ್ನು ನೋಡು ಎಂದು ನೀನು ಹೇಳಿದ್ದುದರಿಂದ ಹೀಗೆಯೇ ಬಂದೆ. ಇನ್ನು ಹೋಗಿ ಸ್ನಾನ ಮಾಡಿ ಬಟ್ಟೆಗಳನ್ನು ಬದಲಾಯಿಸಿ, ಅಪ್ಪಾಜಿ ಯವರನ್ನು ಮೊದಲು ಕಾಣಬೇಕು . . . . ಎಲ್ಲಿದ್ದಾರೆ ಅಪ್ಪಾಜಿಯವರು? ಏನೆಂದರು?' ಎಂದು ಕೇಳಿದ ಕುವರವಿಷ್ಣು.

ಶಾಂತಲೆ ತನ್ನ ಎದೆಯ ಮೇಲೆ ಕೈಯಿರಿಸಿಕೊಂಡು, ಅರೆಕ್ಷಣ ಕಣ್ಣು ಮುಚ್ಚಿ, ಮನಸ್ಸಿನಲ್ಲೆ 'ನಾರಾಯಣ, ನೀನು ನನಗೆ ಸಹಾಯಕನಾಗಿರುವೆ ಯೆಂಬುದಕ್ಕೆ ಇದು ಮೂರನೆಯ ನಿದರ್ಶನ. ಇನ್ನು ನನಗೆ ಸಂಶಯವೇ ಇಲ್ಲ' ಎಂದುಕೊಂಡು, ಕಣ್ತೆರೆದು, 'ಹಾಂ! ಏನು ಕೇಳಿದೆ? ಅಪ್ಪಾಜಿಯವರೆ? ನಿನ್ನ ಅಪ್ಪಾಜಿಯವರೂ ಚಿಕ್ಕಕ್ಕನೂ ಇದೇತಾನೆ ವೇಲಾಪುರಿಗೆ ಹೋದರು. ನಿನ್ನನ್ನೂ ಸೋವಲೆಯನ್ನೂ ಕೇಳಿದರು' ಎಂದಳು.

'ಅಪ್ಪಾಜಿಯವರು ಏನೆಂದರು?'

'ನಾನೇ ನಿನ್ನನ್ನು ಶಿವಗಂಗೆಗೆ ಕಳಿಸಿರುವೆನೆಂದು ಹೇಳಿದೆ.'

'ನೋಡಕ್ಕ! ಅಪ್ಪಾಜಿಯವರನ್ನು ಸಂಜೆಗೆ ಮೊದಲೆ ಕಾಣಬೇಕೆಂದು, ಹತ್ತು ಗಂಟೆಗಳ ಪ್ರಯಾಣವನ್ನು ಎಂಟೇ ಗಂಟೆಗಳೊಳಗೆ ಮುಗಿಸಿಕೊಂಡು, ಪಾಪ! ಕುದುರೆಗಳನ್ನೂ ಅಷ್ಟು ದಣಿಸಿ, ಇಷ್ಟು ಅವಸರವಸರವಾಗಿ ಬಂದರೂ ಅಪ್ಪಾಜಿಯವರು ವೇಲಾಪುರಕ್ಕೆ ಹೊರಟುಹೋಗಿರಬೇಕೆ! ಅಯ್ಯೋ ನನ್ನ ದುರದೃಷ್ಟವೆ!'

'ಅದು ನನ್ನ ಅದೃಷ್ಟ' ಎಂದು ಮನಸ್ಸಿನಲ್ಲೆ ಅಂದುಕೊಳ್ಳುತ್ತ, 'ಈಗ ಆದುದೇನು? ಅಂತಹ ಅವಸರದ ಸಂಗತಿ ಯಾವುದಾದರೂ ನೀನು ಅವರಿಗೆ ತಿಳಿಸಬೇಕಾಗಿದ್ದಿತೆ?' ಎಂದು ಕೇಳಿದಳು ಶಾಂತಲೆ.

ಕುವರ: 'ನಿಮಗೆ ನಿಮ್ಮ ಕೆಲಸ ದೊಡ್ಡದು, ನಮಗೆ ನಮ್ಮ ಕೆಲಸ ದೊಡ್ಡದು. ಅವರವರಿಗೆ ಅವರವರ ಕೆಲಸ ದೊಡ್ಡದು. ನಾನು ಸ್ನಾನ ಮಾಡಿ ಬೇರೆ ಬಟ್ಟೆಗಳನ್ನುಟ್ಟು, ಹೋಗಿ ಅಪ್ಪಾಜಿಯವರನ್ನು ಕಂಡುಬರುತ್ತೇನೆ.'

ಶಾಂತಲೆ ಅಂಜಿ, ಅದನ್ನು ತೋರ್ಪಡಿಸಿಕೊಳ್ಳದೆ 'ನೀನು ನನ್ನೊಡನೆ ಶಿವಗಂಗೆಗೆ ಬರುವೆಯ? ನಾನೊಬ್ಬಳೆ ಹೋಗುಲು ನಿನ್ನ ಅಪ್ಪಾಜಿಯವರು ಸಮ್ಮತಿಸಡಲಿಲ್ಲ, ನಿನ್ನನ್ನೂ ಜೊತೆಗೆ ಕರೆದುಕೊಂಡು ಹೋಗುತ್ತೇನೆಂದು ಹೇಳಿದ ಮೇಲೆ ಸಮ್ಮತಿಸಿದರು' ಎಂದಳು.

'ನಾನು ಮೊದಲೆ ಹೇಳಿದೆನಲ್ಲವೆ! ನಿನ್ನೊಬ್ಬಳನ್ನೆ ಕಳಿಸಲು ಅಪ್ಪಾಜಿ ಯವರು ಖಂಡಿತ ಒಪ್ಪುವುದಿಲ್ಲವೆಂದು.'

'ನಾಳೆ ಪ್ರಾತಃಕಾಲವೆ ಹೊರಟರೆ, ಮಧ್ಯಾಹ್ನದ ಮೇಲೆ ಅಥವಾ ಸಂಜೆಗೆ ಸ್ವಲ್ಪ ಮುನ್ನ ಶಿವಗಂಗೆಯನ್ನು ಸೇರಬಹುದಲ್ಲವೆ? ಮಾರನೆ ಬೆಳಗ್ಗೆ

ಬೆಟ್ಟಕ್ಕೆ ಹೋಗಬಹುದು. ಶಿವಗಂಗೆಯ ಬೆಟ್ಟ ಬಹು ಸುಂದರವಾದುದು. ನಾನು ಚಿಕ್ಕಂದಿನಲ್ಲಿ ಎಂದೊ ಒಮ್ಮೆ ನೋಡಿದ ನೆನಪು. ಬೆಟ್ಟದ ಗುಹೆಗಳಲ್ಲಿ ಗಂಗಾಧರೇಶ್ವರ, ಹೊನ್ನಾದೇವಿಯವರ ದೇವಾಲಯಗಳುಂಟು. ಸುತ್ತ ಸುಂದರ ವಾದ ದೃಶ್ಯಗಳುಂಟು.'

'ಅಷ್ಟು ದೊಡ್ಡ ಬೆಟ್ಟವನ್ನು ನೀನು ಹತ್ತುವುದಕ್ಕಾಗುತ್ತದೆಯೇ?'

'ನೋಡುವೆಯಂತೆ.'

'ನಾಳೆಯಲ್ಲವೆ ನಾವು ಹೊರಡುವುದು? ಅಪ್ಪಾಜಿಯವರನ್ನು ಕಂಡು, ರಾತ್ರಿಯೆ ಬಂದು ಬಿಡುತ್ತೇನೆ, ಅಕ್ಕ.'

'ಇಷ್ಟುದೂರ ಪ್ರಯಾಣಮಾಡಿ, ನಾಳೆ ಮತ್ತೆ ಪ್ರಯಾಣವಿಟ್ಟು ಕೊಂಡು, ಇಷ್ಟು ಆತುರದಿಂದ ಏಕೆ ಬರಬೇಕಿದ್ದಿತು? ಎಂದು ನಿನ್ನ ಅಪ್ಪಾಜಿ ಯವರು ಕೇಳುವರು. ನೀನು ಈಗ ಹೋದರೆ ಅರ್ಧರಾತ್ರಿಯಾದ ಮೇಲೆ ಬರುತ್ತೀಯೆ. ಊಟಮಾಡಿಕೊಂಡು ಹೋಗದೆ ನಿನ್ನ ಅಪ್ಪಾಜಿಯವರು ಬಿಡು ವುದಿಲ್ಲ. ಹರಟೆಗಳಿಗೆ ಮೊದಲಾಗುತ್ತದೆ. ನಾಳೆ ನನ್ನೊಡನೆ ನೀನು ರಥದಲ್ಲಿ ಆಕಳಿಸುತ್ತ, ನಿದ್ರಿಸುತ್ತ ಕುಳಿತಿರು. ನಾನೊಬ್ಬಳೆ ಮಿಕಿಮಿಕಿ ನೋಡುತ್ತ ಕುಳಿತಿರುತ್ತೇನೆ. ನಿನ್ನ ನಮಸ್ಕಾರಗಳನ್ನು ನಾನು ಅಪ್ಪಾಜಿಯವರಿಗೆ ತಿಳಿಸಿ ದ್ದೇನೆ. ನೀನು ಈಗಲೇ ಆಯಾಸಪಟ್ಟಿದ್ದೀಯೆ. ನಾಳೆ ನೀನು ಆಯಾಸದಿಂದಿ ದ್ದರೆ ಪ್ರಯಾಣವು ಸೊಗಸದು. ಆದ್ದರಿಂದ ನೀನು ಈಗ ಎಲ್ಲಿಗೂ ಹೋಗದೆ, ಸ್ನಾನಮಾಡಿ ವಿಶ್ರಮಿಸಿಕೊ. ಏನಾದರೂ ಸಮಾಚಾರವಿದ್ದರೆ ಕೂಡಲೆ ಹೇಳಿ ಕಳಿಸುತ್ತೇನೆ. ಮನೆಯಲ್ಲಿಯೆ ಇರು.'

'ಆಗಲಿ ಅಕ್ಕ, ನೀನು ಹೇಳಿದಂತೆಯೆ ಆಗಲಿ. ನೀನು ಬೇಡವೆಂದ ಮೇಲೆ ನಾನು ಹೋಗುವುದಿಲ್ಲ. ಮನೆಯಲ್ಲೆ ಇರುತ್ತೇನೆ. ನಾಳೆ ಪ್ರಾತಃಕಾಲ ಸ್ನಾನ ಪೂಜೆಗಳನ್ನು ಮುಗಿಸಿಕೊಂಡು ಹೊರಟರಾಯಿತು. ಸೋವಲೆಗೆ ಏನಾ ದರೂ ಹೇಳುವದಿದೆಯೆ? ಉಪಾಹಾರಗಳನ್ನು ಚೆನ್ನಾಗಿ ಮಾಡಬಲ್ಲಳು. ಪ್ರಯಾಣಕ್ಕೆ ಏನಾದರೂ ಅವಳ ಕೈಯಿಂದ ಮಾಡಿಸಲೆ? ಅವಳ ಮನಸ್ಸಂತೋ ಷಕ್ಕಾದರೂ ಏನಾದರೂ ಮಾಡೆಂದು ಹೇಳಕ್ಕ. ಹಿಗ್ಗಿ ಹಿಗ್ಗಿ ಮಾಡಿಯಾಳು.'

'ಒಳ್ಳೆಯದು, ಏನು ಮಾಡಬೇಕೆಂಬುದನ್ನು ಅವಳ ಇಷ್ಟಕ್ಕೆ ಬಿಟ್ಟಿರುವೆ ನೆಂದು ಹೇಳು. ಹೆಚ್ಚೇನೂ ಮಾಡಿಸಬೇಡ.'

ಕುವರ ಅಕ್ಕನಿಗೆ ನಮಸ್ಕರಿಸಿ ತನ್ನ ನಿವಾಸಕ್ಕೆ ಹೋದ. ಅಕ್ಕನ ಇಷ್ಟು ಅವಸರದ ಪ್ರಯಾಣಕ್ಕೆ ಕಾರಣವೇನೆಂದು ಅವನ ಮನಸ್ಸು ಇನ್ನೂ ಪ್ರಶ್ನೆಮಾಡುತ್ತಲೆ ಇತ್ತು.

ಮಧ್ಯಾಹ್ನವಾದ ಮೇಲೆ ಶಾಂತಲೆ ತಾಯಿತಂದೆಯರನ್ನು ಕಾಣಲು ತವರಿಗೆ ಹೋದಳು. ಮಗಳು ಬಂದುದು ಮಾಚಿಕಬ್ಬೆಗೆ ಮಿಗಿಲು ಆನಂದ ವಾಯಿತು. ಮಾರಸಿಂಗಮಯ್ಯನವರೂ ಮನೆಯಲ್ಲಿದ್ದರು. ಮನೆಯಲ್ಲಿ ತನ್ನಷ್ಟೆ ಚೆಲುವೆಯಾದ ಕೇತಮಲ್ಲನಾಯಕರ ಮಗಳು ಚಂದಲೆ ಇದ್ದಳು. ಮಾಚಿಕಬ್ಬೆಯ ತಾಯಿಕರಳು ಚಂದಲೆಯನ್ನೂ 'ಶಾಂತಲೆ'ಯೆಂತಲೇ ಕರೆ ಯಿತು. ಕೇತಮಲ್ಲನಾಯಕ, ಜಕ್ಕಿಯಬ್ಬೆಯರು ಈಗ ಎದುರುಮನೆಯಲ್ಲಿ ವಾಸವಿದ್ದರು. ಚಂದಲೆ ಎರಡು ಮನೆಗೂ ಮಗಳಾಗಿದ್ದಳು. ಶಾಂತಲೆಯ ಉಪಾಸ್ಯದೇವತೆಯ ಗೃಹವನ್ನು ಮಾಚಿಕಬ್ಬೆ ಚಂದಲೆ ಇಬ್ಬರು ಚೊಕ್ಕಟ ವಾಗಿಟ್ಟುಕೊಂಡು, ನಿತ್ಯಪೂಜೆಗಳನ್ನು ನಡಸಿಕೊಂಡು ಬರುತ್ತಿದ್ದರು. ಚಂದ ಲೆಯೂ ಶಾರದೆಯ ಭಕ್ತಳಾದಳು. 'ಅವ್ವೆ, ಇವಳಿಗೂ ನಾಲ್ಕಕ್ಷರ ಹೇಳಿಸು' ಎಂದು ಮಗಳು ಹೇಳಿದುದನ್ನು ಮಾಚಿಕಬ್ಬೆ ಮರೆಯದೆ, ಚಂದಲೆಗೂ ಒಳ್ಳೆಯ ವಿದ್ಯಾಗುರುಗಳೊಬ್ಬರನ್ನು ಗೊತ್ತುಮಾಡಿದ್ದರು. ಚಂದಲೆ ಆಸಕ್ತಿಯಿಂದ ಕಲಿಯುತ್ತಲೂ ಇದ್ದಳು.

ಶಾಂತಲೆ ಲಕ್ಷ್ಮಿಯರು ಅರಮನೆಗೆ ಹೋದ ಮೇಲೆ, ಶಾರದೆಯ ಆಲಯ ವನ್ನು ಶುಚಿಯಾಗಿಟ್ಟುಕೊಂಡು, ಪೂಜೆಯನ್ನು ಕ್ರಮತಪ್ಪದಂತೆ ನಡಸಿಕೊಂಡು ಬರುತ್ತಿರುವುದನ್ನು ಕಂಡು, ಶಾಂತಲೆಗೆ ಆನಂದವಾಗಿ, ಚಂದಲೆಯನ್ನು ಕರೆದು ಪ್ರೀತಿಯಿಂದ ಅಪ್ಪಿಕೊಂಡು, 'ಆ ಮಹಾತಾಯಿ ನಿನಗೆ ಒಳ್ಳೆಯದನ್ನು ಮಾಡುತ್ತಾಳೆ, ನಿನ್ನ ಶ್ರದ್ಧೆ ಅಚಲವಾಗಿರಲಿ' ಎಂದು ಹರಸಿದಳು. ಅನಂತರ ತಾಯಿತಂದೆಯರಿಗೆ ನಮಸ್ಕರಿಸಿ ಆಶೀರ್ವಾದಪಡೆದಳು. ಆ ದಿನ ಪೆದ್ದದೇಚನ ಆನಂದವಂತೂ ಹೇಳತೀರದು. ಅರಮನೆಯಿಂದ ಬರುವಾಗ ಶಾಂತಲೆ ದೇಚ ನನ್ನು ಮರೆಯದೆ, ಅವನಿಗೆ ಸಂತೋಷವಾಗುವಂತಹ ಉಡುಗೆಗಳನ್ನು ತಂದಿ ದ್ದಳು. ಈಗ ಅದನ್ನು ಅವನಿಗಿತ್ತು ಅವನಿಗಿಂತ ತಾನೆ ಹೆಚ್ಚು ಸಂತೋಷ ಪಟ್ಟಳು. ತಾನು ಶಿವಗಂಗೆಗೆ ನಾಳೆ ಹೋಗುವುದಾಗಿ ತಾಯಿತಂದೆಯರಿಗೆ ತಿಳಿಸಿದಳು. ಕುವರನೂ ತನ್ನೊಡನೆ ಬರುತ್ತಾನೆಂದು ತಿಳಿಸಿದಳು. ಅವಸರದ

ಯಾತ್ರೆ ಇದೇನೆಂದು ತಾಯಿತಂದೆಯರು ಕೇಳದೆ ಇರಲಿಲ್ಲ. 'ನನ್ನ ಮನಸ್ಸಿನ ನೆಮ್ಮದಿಗಾಗಿ ಹೊರಟಿರುವೆನವ್ವ' ಎಂದಳು ಶಾಂತಲೆ.

ಬಳಿಕ ಆಕೆ ಮಡಿಯುಟ್ಟು ತನ್ನ ಉಪಾಸ್ಯದೇವತೆಯ ಗೃಹಕ್ಕೆ ಹೋಗಿ, ಭಕ್ತಿಯಿಂದ ಪೂಜೆಮಾಡಿ, ಗಂಟೆಗಳ ಕಾಲ ಪದ್ಮಾಸನಸ್ಥೆಯಾಗಿ ಧ್ಯಾನದಲ್ಲಿ ಕುಳಿತಳು. ಆರೋಗಣೆಯ ಸಮಯಕ್ಕೆ ತಾಯಿಯೇ ಬಂದು ಮಗಳನ್ನು ಎಬ್ಬಿಸಿ ಕರೆದುಕೊಂಡುಹೋದರು. ತಾಯಿತಂದೆಯರೊಡನೆ, ಚಂದಲೆಯೊಡನೆ ಕುಳಿತು ಶಾಂತಲೆ ಊಟ ಮಾಡಿದಳು. ಅನಂತರ ಸ್ವಲ್ಪ ಹೊತ್ತು ಉಪ್ಪರಿಗೆಯ ಚಂದ್ರಶಾಲೆಯಲ್ಲಿ ಕುಳಿತು ತಾಯಿತಂದೆಯರೊಡನೆ ಸಂತೋಷದಿಂದ ಸಲ್ಲಾಪಿಸುತ್ತಿದ್ದಳು.

ಪೆದ್ದದೇಚ ಆಗ ತನ್ನ ಊಟ ಮುಗಿಸಿ, ಶಾರದೆಯ ಪೂಜಾಗೃಹದಲ್ಲಿ ದೇವಿಯದೆಂದೇ ಇಟ್ಟಿದ್ದ, ಹಿಂದೆ ಶಾಂತಲೆ ನುಡಿಸಿ ಹಾಡುತ್ತಿದ್ದ ವೀಣೆಯನ್ನು ಜಾಗರೂಕತೆಯಿಂದ ಹೊತ್ತು ತಂದು, ಶಾಂತಲೆಯ ಮುಂದಿಟ್ಟು ಕೈಮುಗಿದ. ಶಾಂತಲೆ ಕಣ್ಣೆತ್ತಿ ದೇಚನನ್ನು ನೋಡಿದಳು. ದೇಚನ ಕಣ್ಣುಗಳಲ್ಲಿ ನೀರು ಧಾರೆಯಾಗಿತ್ತು. ಶಾಂತಲೆ ಅರಿತಳು. 'ನುಡಿಸಲೇನೊ ದೇಚ?' ಎಂದು ಕೇಳಿದಳು. ಅವನು ನಾಚಿಕೆಯಿಂದ ಸರ್ರನೆ ಕಣ್ಣೊರಸಿಕೊಂಡು 'ಹುಂ' ಎಂದು ಅರ್ಥ ಬರುವಂತೆ ತಲೆಯಾಡಿಸಿ, ಹೋಗಿ ಒಂದು ಮೂಲೆಯಲ್ಲಿ ತಲೆ ತಗ್ಗಿಸಿಕೊಂಡು ಕುಳಿತುಬಿಟ್ಟ.

ಶಾಂತಲೆಗೆ ಕರುಳು ಹಿಂಡಿದ ಹಾಗಾಯಿತು. ಮಾಚಿಕಬ್ಬೆಗೂ ಹಾಗೆಯೆ ಆಯಿತು. ಮಾಚಿಕಬ್ಬೆ ಮಗಳನ್ನು ಕುರಿತು 'ನೀನು ಅರಮನೆಗೆ ಹೋದ ಮೇಲೆ ಬಹಳ ದಿನಗಳು ಈ ದೇಚ ಮೂಕನಾಗಿಬಿಟ್ಟಿದ್ದ. ಗಂಟೆಗಳ ಕಾಲ ದೇವಿಯ ಪೂಜಾಗೃಹದಲ್ಲಿ ಕುಳಿತುಬಿಡುತ್ತಿದ್ದ. ಈಗ ನಿನ್ನ ಜೀವವೆಲ್ಲ ಆ ವೀಣೆಯಲ್ಲಿಯೆ ಇದೆಯೆಂದು ತಿಳಿದುಕೊಂಡಿದ್ದಾನೆ. ದಿನಕ್ಕೆ ಎರಡು ಬಾರಿ ಅದನ್ನು ಶುಭ್ರವಾಗಿ ಒರಸಿಡುತ್ತಾನೆ. ಚೆನ್ನಾಗಿರುವ ಹೂಗಳನ್ನು ತಂದು ಅದನ್ನು ಅಲಂಕರಿಸುತ್ತಾನೆ. ಮಳೆ, ಗಾಳಿ, ದೂಳಿನಿಂದ ಅದನ್ನು ರಕ್ಷಿಸಲು ಹೊದಿಸಿಡುತ್ತಾನೆ. ನಿನ್ನಲ್ಲಿಟ್ಟಿದ್ದ ಭಕ್ತಿವಿಶ್ವಾಸಗಳೆಲ್ಲವನ್ನೂ ಈಗ ನಿನ್ನ ವೀಣೆಯ ಮೇಲಿಟ್ಟಿದ್ದಾನೆ. ಇಲ್ಲದಿದ್ದರೆ ಅವನ ಎದೆಯೂ ಬರಿದಾಗಿಬಿಡುತ್ತಿದ್ದಿತೊ ಏನೊ!' ಎಂದರು ಮಾಚಿಕಬ್ಬೆ.

ಶಾಂತಲೆ ಅರಮನೆಗೆ ಹೊರಟುಹೋದಂದಿನಿಂದ ದೇಚನಿಗೆ ಮನೆ ಶೂನ್ಯ ವಾಯಿತು. ಅವನು ಸಂಗೀತಶಾಸ್ತ್ರವನ್ನು ಬಲ್ಲವನಲ್ಲದಿದ್ದರೂ, ಶಾಂತಲೆ ವೀಣೆ ನುಡಿಸಿದಾಗ ಅದರ ಸುನಾದ ಅವನ ಎದೆಯಲ್ಲಿ ಆನಂದ ತರಂಗಗಳನ್ನು ಎಬ್ಬಿಸು ತ್ತಿತ್ತು. ಈಗ ಆ ವೀಣೆಯನ್ನು ನುಡಿಸುವರಿಲ್ಲದೆ, ಅದು ಪೂಜಾಗೃಹದ ಮೂಲೆಯಲ್ಲಿ ಕುಳಿತಿರುತ್ತಿತ್ತು. ದೇಚ ಅದನ್ನು ನೋಡಿದಷ್ಟೂ ಸಂಕಟಪಡು ತ್ತಿದ್ದ. ಗಂಟೆ ಗಂಟೆ ಕಾಲ ದೇಚ ಮಂಕು ಬಡಿದವನಂತೆ ಪೂಜಾಗೃಹದಲ್ಲಿ ಶಾರದೆಯನ್ನು ನೋಡುತ್ತ ಚಿಕ್ಕ ಯಜಮಾನಿಯನ್ನು ನೆನೆನೆನೆದು ಕಣ್ಣೀರ ಕೋಡಿಯನ್ನು ಹರಿಸಿದುದುಂಟು. ಅವನ ಮೂಕ ಸಂಕಟವನ್ನು ನೋಡಲಾರದೆ ಮಾಚಿಕಬ್ಬೆ ದೇಚನನ್ನು ಕರೆದು 'ಇಗೊ, ಇದನ್ನು ಶಾಂತಲವ್ವೆಗೆ ಕೊಟ್ಟು ಬಾ' ಎಂಬ ನೆಪದಲ್ಲಿ ಅವನನ್ನು ಅರಮನೆಗೆ ಕಳಿಸಿ, ಶಾಂತಲೆಯನ್ನು ನೋಡಿ ಬರು ವಂತೆ ಮಾಡಿದುದುಂಟು. ಆದರೆ ಎಷ್ಟು ಸಲ ಹಾಗೆ ಮಾಡಲಾದೀತು? ಅದು ಸಾಧ್ಯವೂ ಅಲ್ಲ, ನೀತಿಯೂ ಅಲ್ಲ. ಹೀಗಾಗಿ ದೇಚ ತಾಯನ್ನು ಕಳೆದು ಕೊಂಡ ತಬ್ಬಲಿಯಂತೆ ಸೊರಗಿಹೋದ. ಹಂಬಲಿಸುತ್ತಿದ್ದ ಅವನ ಜೀವಕ್ಕೆ ಆಗ ಶಾಂತಲೆಯ ವೀಣೆಯೆ ಒಂದು ನಂಬುಗೆಯ ವಸ್ತುವಾಯಿತು, ಅವನ ಚಿತ್ತಕ್ಕೂ ಏನೊ ಒಂದು ವಿಧವಾದ ಸಮಾಧಾನ ಸಿಕ್ಕಿತು. ವೀಣೆಯ ಆರೈಕೆ ಯನ್ನು ಹೊತ್ತು ತನ್ನ ಚಿಕ್ಕ ಯಜಮಾನಿಯ ಸೇವೆ ಮಾಡುತ್ತಿರುವೆನೆಂದೇ ಮನಸ್ಸಿಗೆ ಸ್ವಲ್ಪ ಸಮಾಧಾನ ತಂದುಕೊಂಡ.

ಶಾಂತಲೆ ವೀಣೆಯನ್ನು ಮುಟ್ಟಿ ಕಣ್ಣಿಗೊತ್ತಿಕೊಂಡು, ತೊಡೆಯ ಮೇಲಿಟ್ಟು ಮಾತನಾಡಿದಳು. ನಗುನಗುತ್ತ ಅದು ನುಡಿಯಿತು. ತನಗೂ ದೇಚನಿಗೂ ಎಲ್ಲರಿಗೂ ತೃಪ್ತಿಯಾಗುವವರೆಗೂ ನುಡಿಸಿ, ಅನಂತರ ಅದನ್ನು ದೇಚನ ಕೈಯಲ್ಲಿ ಪೂಜಾಗೃಹಕ್ಕೆ ಕಳಿಸಿಕೊಟ್ಟು, ತಾಯಿತಂದೆಯರಿಗೆ ನಮ ಸ್ಕರಿಸಿ, ಅರಮನೆಗೆ ಹಿಂದಿರುಗಿ ಆ ರಾತ್ರಿ ಸುಖವಾಗಿ ನಿದ್ದೆಮಾಡಿದಳು.

ಅರುಣೋದಯಕ್ಕೆ ಹೊತ್ತಿರುವಾಗಲೆ ಎದ್ದಳು. ಪ್ರಾತಃಕರ್ಮಗಳನ್ನು ಮುಗಿಸಿ, ಸ್ನಾನಮಾಡಿ, ದೇಹಶುಚಿ, ಮನಶ್ಶುಚಿಗಳಿಂದ ಕೂಡಿದವಳಾಗಿ, ಇಷ್ಟದೇವತೆಗಳನ್ನು ಪೂಜಿಸಿ, ಅನಂತರ ಅರಮನೆಗೆ ಕರಸಿಕೊಂಡಿದ್ದ ಬ್ರಾಹ್ಮಣ ರನ್ನೂ ಸುಮಂಗಲಿಯರನ್ನೂ ಪೂಜಿಸಿ, ದಾನಬಾಗಿನಗಳನ್ನು ಕೊಟ್ಟು ನಮ ಸ್ಕರಿಸಿ ಆಶೀರ್ವಾದ ಪಡೆದಳು. ಅದಾದಮೇಲೆ ಅರಮನೆಯ ಎಲ್ಲ ದಾಸದಾಸಿ

ಯರ ವರ್ಗಕ್ಕೆ ಉಡುಗೊರೆಗಳನ್ನು ಕೊಟ್ಟು ತೃಪ್ತಿಪಡಿಸಿದಳು. ಅನಂತರ ಕುವರನನ್ನೂ ಸೊಸೆಯನ್ನೂ ಕರಸಿಕೊಂಡು ಒಟ್ಟಿಗೆ ಕುಳಿತು ಉಪಾಹಾರ ತೆಗೆದುಕೊಂಡಳು. ಅಷ್ಟುಹೊತ್ತಿಗೆ ಉತ್ತಮ ಅಶ್ವಗಳನ್ನು ಹೂಡಿದ ರಥ ಅರ ಮನೆಯ ಮಹಾದ್ವಾರದ ಬಳಿ ಬಂದು ನಿಂತಿತ್ತು. ಶಾಂತಲೆ ರಥವೇರುವ ಮುನ್ನ ಸೋವಲೆ ಅತ್ತೆಯ ಪಾದಗಳಿಗೆ ನಮಸ್ಕರಿಸಿದಳು. ಶಾಂತಲೆ ಅವಳನ್ನು ಆಶೀರ್ವದಿಸಿ ಅಪ್ಪಿಕೊಂಡು, 'ಭಗವಂತನು ನಿನ್ನನ್ನು ಸದಾ ಸುಖಿಯಾಗಿ ಇರಿಸಲಿ' ಎಂದು ಹರಸಿ ರಥವನ್ನು ಹತ್ತಿದಳು. ಹಿಂದೆಯೆ ಕುವರನೂ ಹತ್ತಿದನು.

ಸಾರಥಿ ಮಹಾರಾಜ್ಞಿಯವರಿಗೆ ನಮಸ್ಕರಿಸಿ, ಅವರ ಅಪ್ಪಣೆಯನ್ನು ಕೇಳಿ ಕುದುರೆಗಳಿಗೆ ಚಬಕನ್ನು ತಾಗಿಸಿದ. ರಥವು ವೇಗದಿಂದ ಶಿವಗಂಗೆಯ ಮಾರ್ಗವನ್ನು ಹಿಡಿಯಿತು.

ವಸಂತಋತು ಆಗತಾನೆ ಪ್ರಾರಂಭವಾಗಿತ್ತು. ಆ ಪ್ರಾಂತದಲ್ಲೆಲ್ಲ ಮುಂಗಾರು ಚೆನ್ನಾಗಿ ಆಗಿದ್ದಿತು. ಗುಡ್ಡ, ಬಯಲು ಎಲ್ಲವೂ ಇನ್ನೂ ಹಚ್ಚಗೆ ಇದ್ದುವು. ಮಾಂದಳಿರು ಆಗತಾನೆ ಅಲ್ಲಲ್ಲಿ ಎದ್ದು ಕಾಣುತ್ತಿತ್ತು. ವರ್ಷಾ ಕಾಲಕ್ಕೆ ಮೊದಲೆ ಪೈರಾಗುವ ಧಾನ್ಯಗಳು ಹೊಲಗಳಲ್ಲಿ ಕುಯ್ಲಿಗೆ ನಿಂತಿದ್ದುವು. ಹಕ್ಕಿಗಳ ತಂಡಗಳು ಅವುಗಳನ್ನು ತಿಂದು ತೃಪ್ತಿಹೊಂದುತ್ತಿದ್ದುವು. ಗುಡ್ಡಗಳ ಮೇಲೆ, ಬಯಲುಗಳಲ್ಲಿ ಸೊಂಪಾಗಿ ಮೇಯುತ್ತಿದ್ದ ಕಾಲ್ನಡೆಗಳನ್ನೂ, ಹೊಲ ಗದ್ದೆಗಳಲ್ಲಿ ಉಲ್ಲಾಸವಾಗಿ ಹಾಡಿಕೊಂಡು ಕೆಲಸ ಮಾಡುತ್ತಿದ್ದ ಕೃಷಿಕರನ್ನೂ, ಅವರ ಸಂಸಾರಗಳನ್ನೂ, ದಾರಿಯಲ್ಲಿ ಅಲ್ಲಿಗಲ್ಲಿಗೆ ಸಿಗುತ್ತಿದ್ದ ಗ್ರಾಮಗಳಲ್ಲಿ, ಊರುಗಳಲ್ಲಿ, ಸಂತೋಷದಿಂದ ನಲಿದಾಡುತ್ತಿದ್ದ, ಕಲಿಯುತ್ತಿದ್ದ ಮಕ್ಕಳನ್ನೂ ಶಾಂತಲೆ ನೋಡಿ ಆನಂದಪಟ್ಟಳು. ಕುವರನು ದಾರಿಯಲ್ಲಿ ಸಿಕ್ಕಿದ ಹಳ್ಳಿಗಳ, ಊರುಗಳ, ಪಟ್ಟಣಗಳ ಪರಿಚಯವನ್ನು ಮಾಡಿಕೊಡುತ್ತ, ಅವುಗಳು ಯಾವ ಸಾಮಂತರ, ಹೆಗ್ಗಡೆಗಳ, ಗವುಂಡರ ರಕ್ಷಣೆಯಲ್ಲಿವೆ, ಅಲ್ಲಿನ ಇತರ ಅಧಿಕಾರ ವರ್ಗದವರು ಯಾರು ಯಾರು ಎಂಬ ವಿಷಯಗಳನ್ನು ಅಕ್ಕನಿಗೆ ತಿಳಿಸುತ್ತಿದ್ದ. 'ಇಷ್ಟೆಲ್ಲ ಇವನು ಹೇಗೆ ತಿಳಿದುಕೊಂಡ! ನಮ್ಮ ದೇಶವೆಲ್ಲ ಇವನಿಗೆ ಕರತಲಾ ಮಲಕದಂತೆ ಇದೆಯಲ್ಲ! ಇಂತಹನಲ್ಲವೆ ಈ ಭೂಮಿಗೆ ಪ್ರಭುವಾಗಬೇಕು! ಅಯ್ಯೋ ವಿಧಿಯೆ! ಇಂತಹವನನ್ನು ಗರುಡನನ್ನಾಗಿ ಏಕೆ ಮಾಡಿದೆ?

ನಿನ್ನ ಸಂಕಲ್ಪದ ಅರ್ಥವೇನಿರುವುದೊ?' ಎನ್ನುತ್ತ ಶಾಂತಲೆ ಮನದಲ್ಲೆ ಮರುಗಿದಳು.

ಅಕ್ಕ ಮೌನತಾಳಿದುದನ್ನು ಕಂಡು ಕುವರ 'ಅಕ್ಕ, ಏನು ಯೋಚನೆ ಮಾಡುತ್ತಿರುವೆ? ಅದು ನೋಡು! ಹಿಂಡು ಜಿಂಕೆಗಳು, ನಮ್ಮ ರಥದ ಶಬ್ದಕ್ಕೆ ಅಂಜಿ, ಕಾಲುಗಳು ನೆಲವನ್ನು ಸೋಕಿದವೊ ಇಲ್ಲವೊ ಎನ್ನುವಹಾಗೆ, ಚಂಗ ಚಂಗನೆ ಪುಟ ನೆಗೆದು ಓಡುತ್ತಿರುವುದನ್ನು! ಆ ಚಿಕ್ಕ ಮರಿಗಳು ಎಷ್ಟು ವೇಗ ದಿಂದ ತಾಯನ್ನು ಅನುಸರಿಸುತ್ತಿವೆ! ಅದು ನೋಡು, ಕೊರಳನ್ನು ಕೊಂಕಿಸಿ ಕೊಂಡು ನಮ್ಮನ್ನು ನೋಡುತ್ತಿರುವುದನ್ನು! ಅಕ್ಕಾ, ನೀನು ಸಾಕುವೆಯಾದರೆ, ಚೆಲುವಾದ ಹುಲ್ಲೆಯ ಕರುವೊಂದನ್ನು ತಂದುಕೊಡುತ್ತೇನೆ' ಎಂದು ಅಕ್ಕನ ಮನಸ್ಸನ್ನು ಸುಂದರವಾದ ನೋಟದ ಕಡೆಗೆ ಎಳೆಯಲು ಪ್ರಯತ್ನಿಸಿದ. 'ಬೇಡ ತಮ್ಮ. ಪಾಪ! ಎಳೆಯ ಕರುವನ್ನು ತಾಯಿಂದ ಅಗಲಿಸಿ ಕದ್ದುತರು ವುದೆ? ಅವು ಎಲ್ಲಿ ಇದ್ದು ಬೆಳೆಯಬೇಕೆಂದು ದೈವನಿಯಾಮಕವೊ ಅಲ್ಲಿಯೆ ಇದ್ದರೆ ಚೆನ್ನು' ಎಂದಳು ಶಾಂತಲೆ.

'ಇಲ್ಲಿ ನೋಡಕ್ಕ, ಈ ನೇರಿಲ ಗಿಡ! ತುಂಬಿ ಬೆಳೆದ ಹಣ್ಣು ಹೇಗೆ ಜೊಂಪೆಜೊಂಪೆಯಾಗಿ ಜಗ್ಗುತ್ತಿವೆ! ಕೆಳಗೆ ನೋಡು, ಗಾಳಿಗೆ ಉದುರಿರುವ ಹಣ್ಣುಗಳಿಂದ, ಕಪಿಗಳು ಕಿತ್ತೆಸೆದ ಹಣ್ಣುಗಳಿಂದ, ದಾರಿಗರು ಕಿತ್ತು ತಿಂದುಳಿದ ಹಣ್ಣುಗಳಿಂದ, ಕಾಲ್ನಡೆಗಳು ಅವುಗಳನ್ನು ತುಳಿದು ನಡೆದಿರುವುದರಿಂದ ನೆಲಕ್ಕೆ ನೀಲಿಯ ಬಣ್ಣವನ್ನು ಬಳಿದಂತಿದೆ. ನೇರಿಲೆಹಣ್ಣು ಬಾಯಾರಿಕೆಗೆ ಒಳ್ಳೆಯದು' ಎಂದು ರಥವನ್ನು ನಿಲ್ಲಿಸಹೇಳಿ ಕೊಂಬೆಗಳಿಂದ ಒಳ್ಳೆಯ ಹಣ್ಣುಗಳನ್ನು ಬಿಡಿಸಿ ಅಕ್ಕನಿಗೆ ಕೊಟ್ಟು ತಾನೂ ತಿಂದ.

ಗಾವುದಗಾವುದಕ್ಕೂ ಕುದುರೆಗಳನ್ನು ಬದಲಾಯಿಸುತ್ತಿದ್ದುದರಿಂದ ದಾರಿ ಬಹು ಬೇಗ ಸಾಗಿತು. ಕುದುರೆಗಳಿಗೂ ದಣಿವಾಗಲಿಲ್ಲ. ವೇಗವಾಗಿ ಹೋಗು ತ್ತಿದ್ದ ರಥದಲ್ಲಿ ಕುಳಿತಿದ್ದ ಇವರಿಗೆ ಬಿಸಿಲ ಬಾಧೆಯೂ ಹೆಚ್ಚು ಅನುಭವವಾಗ ಲಿಲ್ಲ. ಮಧ್ಯಾಹ್ನ ಸಮಯಕ್ಕೆ ಕಾಡಿನ ರಮ್ಯವಾದ ಒಂದು ಸರೋವರದ ತೀರದಲ್ಲಿ, ಮರಗಳ ನೆರಳಿದ್ದ ಕಡೆ, ರಥವನ್ನು ನಿಲ್ಲಿಸಿ ಕೆಳಗಿಳಿದು, ತಣ್ಣನೆಯ ನೀರಿನಲ್ಲಿ, ಮುಖಪ್ರಕ್ಷಾಳನ, ಪಾದಪ್ರಕ್ಷಾಳನಗಳನ್ನು ಮಾಡಿ, ಸೋವಲೆ ಮಾಡಿರಿಸಿದ್ದ ದಿವ್ಯವಾದ ಅಡುಗೆಯನ್ನು ವನಭೋಜನ ಮಾಡಿ, ರಥ ನಡಸು

ವವನಿಗೂ ಇಟ್ಟು, ಅವನು ಉಂಡು ಕುದುರೆಗಳನ್ನು ಮೇವಿಗೆ, ನೀರಿಗೆ ಬಿಡುವ ವರೆಗೂ ನೆರಳಲ್ಲಿ ವಿಶ್ರಮಿಸಿಕೊಂಡು ಅನಂತರ ಪ್ರಯಾಣವನ್ನು ಮುಂದು ವರಿಸಿದರು. ಸಂಜೆಗೆ ಇನ್ನೂ ಸ್ವಲ್ಪ ಸಮಯವಿರುವಾಗಲೆ ಶಿವಗಂಗೆಯನ್ನು ಸೇರಿದರು.

§

ಮರುದಿನ ಬಿಸಿಲೇರುವುದಕ್ಕೆ ಮೊದಲೆ ಶಾಂತಲೆ ಬೆಟ್ಟವನ್ನು ಹತ್ತಲು ಸಿದ್ಧಳಾದಳು. ಕುವರನೂ ಸಿದ್ಧನಾದ. ಗಿರಿಗೆ ಕೈಮುಗಿದು ಬೆಟ್ಟವನ್ನು ಹತ್ತಲು ಉಪಕ್ರಮಿಸಿದರು. ಸ್ವಲ್ಪ ದೂರ ಹತ್ತುವುದರಲ್ಲಿ ಗಂಗಾಧರೇಶ್ವರ ಗುಹಾಂತ ರ್ದೇವಾಲಯ ಸಿಕ್ಕಿತು. ವಿಘ್ನೇಶ್ವರ, ನಂದಿಗಳಿಗೆ ನಮಸ್ಕರಿಸಿ ಒಳಹೊಕ್ಕು, ಮಹಾದೇವನಿಗೆ ಭಕ್ತಿಯಿಂದೆರಗಿ, ಅನಂತರ ಗಿರಿಶಿಖರಕ್ಕೆ ನಡೆದರು. ಹಾದಿ ಬಹು ಇಕ್ಕಟ್ಟು, ಕಡಿದು. ಮೆಟ್ಟಲು ಸಣ್ಣವು, ಅಲ್ಲಲ್ಲಿ ಜಾರಿಬೀಳುವ ಸ್ಥಿತಿ. ಇಷ್ಟು ಕಠಿಣವಿದ್ದರೂ ಶಾಂತಲೆಯ ಮನಸ್ಸು ಶಾಂತವಾಗಿಯೆ ಇತ್ತು. 'ಅವಸರ ಬೇಡ ಅಕ್ಕ, ನಿಧಾನಮಾಡು. ಪಕ್ಕದ ಬಂಡೆಯನ್ನು ಹಿಡಿದುಕೊ. ಅಷ್ಟು ಸಣ್ಣ ಕಲ್ಲಿನ ಮೇಲೆ ಕಾಲಿಡಬೇಡ, ಜಾರೀತು, ಹೊರಳೀತು. ಅಲ್ಲಿ ಜಾಗು ಹೆಚ್ಚು, ಪಾಚಿ ಕಟ್ಟಿದೆ, ಎಚ್ಚರಿಕೆ!' ಎನ್ನುತ್ತ ಕುವರವಿಷ್ಣು ಅಕ್ಕನ ಕೈಹಿಡಿದು ಕೊಂಡು ಮೆಲ್ಲಮೆಲ್ಲನೆ ಹತ್ತಿಸಿಕೊಂಡು ಹೋದ. ದಣಿವನ್ನು ತೀರಿಸಿಕೊಳ್ಳಲು ಅಲ್ಲಲ್ಲಿ ಕುಳಿತು, ಆಯಾಸ ಪರಿಹಾರ ಮಾಡಿಕೊಂಡು, ಮುಂದುವರಿದರು. ದಾರಿಯುದ್ದಕ್ಕೂ ಮಂಟಪಗಳು, ಸೋಪಾನಗಳು, ಚಿಕ್ಕ ದೊಡ್ಡ ಗುಡಿಗಳು, ವಿನಾಯಕನ ನಂದಿಗಳ ಮೂರ್ತಿಗಳು ಇದ್ದವು. ಬೆಟ್ಟದ ಗಾಳಿ ತಣ್ಣಗೆ ಬೀಸು ತ್ತಿದ್ದರೂ, ಚೈತ್ರಮಾಸದ ಬಿಸಿಲು ಚುರುಕಾಗಿದ್ದಿತು.

ಅಂದು ಚೈತ್ರ ಶುದ್ಧ ಪಂಚಮಿ, ಸೋಮವಾರ. ಸೋಮಧರನ ದಿನದಲ್ಲೆ ಆತನ ದರ್ಶನ ಪಡೆದು, ಆತನನ್ನೆ ಧ್ಯಾನಿಸುತ್ತ ಬೆಟ್ಟವನ್ನು ಹತ್ತುತ್ತಿದ್ದಳು ಶಾಂತಲೆ. ಬೆಟ್ಟದ ಕಿಬ್ಬಿಯನ್ನು ಸೇರಿದಾಗ ಆಕೆಗೆ ಹೆಚ್ಚು ದಣಿವಾಗಿತ್ತು. ತೀರ್ಥೋದ್ಭವ ಹೊಂಡದ ಬಳಿ ಇಬ್ಬರೂ ಕುಳಿತರು. 'ಅಕ್ಕ, ಈ ಬೆಟ್ಟ ಇಷ್ಟು ಕಡಿದು ಎಂದು ಬಲ್ಲೆಯಾದರೂ ಹತ್ತಿ ಬಂದೆಯಲ್ಲ!' ಎಂದ ಕುವರ. 'ನಾನು ಚಿಕ್ಕವಳಿದ್ದಾಗ ಓಡಿ ಓಡಿ ಹತ್ತಿದೆನೆಂದು ಅವ್ವೆ ಹೇಳಿದರು. ಅದೀಗ ಸಾಧ್ಯವೆ!' ಎಂದಳು ಶಾಂತಲೆ.

ಸ್ವಲ್ಪ ಹೊತ್ತು ಕುಳಿತು ದಣಿವಾರಿದ ಮೇಲೆ ಶಾಂತಲೆ 'ತಮ್ಮ, ಬಾಯಾರುತ್ತಿದೆ, ಹತ್ತಿರದಲ್ಲಿ ಜಲವಿಲ್ಲ. ನಾವು ಜೊತೆಯಲ್ಲೆ ತರಬೇಕಾಗಿತ್ತು. ನಾವು ಬಂದ ದಾರಿಯಲ್ಲಿ ವಿಘ್ನೇಶ್ವರನ ಮಂಟಪದ ಎದುರಿನ ದೋಣೆಯಲ್ಲಿ ತಿಳಿ ನೀರಿದ್ದುದನ್ನು ಕಂಡೆವಲ್ಲವೆ; ಪಕ್ಕದಲ್ಲೆ ಅರ್ಚಕರ ಮನೆ ಇದೆ. ಕೇಳಿ ಒಂದು ಪಾತ್ರೆಯಲ್ಲಿ ನೀರು ತೆಗೆದು ಕೊಂಡು ಬಾ' ಎಂದಳು. 'ತರುವೆನಕ್ಕ, ಇಲ್ಲಿಯೆ ಕುಳಿತಿರು' ಎಂದು ಹೇಳಿ ಕುವರ ನಿಮಿಷಮಾತ್ರದಲ್ಲಿ ಇಳಿದುಹೋದ.

ಕುವರನು ಅಲ್ಲಿಂದ ಇಳಿದು ಹೋದಮೇಲೆ ಶಾಂತಲೆ ಎದ್ದು ಸುತ್ತ ನೋಡಿದಳು. ಸುಂದರವಾದ ದೃಶ್ಯ: ಬೆಟ್ಟದ ತಪ್ಪಲಿನಲ್ಲಿ ಶಿವಗಂಗೆ ಊರು ತೀರ ಪುಟ್ಟದಾಗಿ ಕಂಡಿತು. ಚಿಕ್ಕಂದಿನ ನೆನಪು, ಅಲ್ಲಿಯೆ ಎಲ್ಲೊ ಹತ್ತಿರ ದಲ್ಲಿಯೆ 'ಕೋಡುಗಲ್ಲು ಬಸವ' ಎಂಬ ಹೆಸರಿನ ಒಂದು ನಂದಿ ವಿಗ್ರಹ ಇದ್ದುದು. ಕಡೆಗೆ ಅದು ಇದ್ದ ದಿಕ್ಕನ್ನು ಹುಡುಕಿ ಕಂಡುಹಿಡಿದು ಆ ಕೋಡುಗಲ್ಲು ಬಸವ ನಿರುವೆಡೆಗೆ ಹೋದಳು. ಕೋಡುಗಲ್ಲು ಬಸವ ಸಿಕ್ಕಿತು. ಅದರ ಸುತ್ತು ಪ್ರದಕ್ಷಿಣಕ್ಕೆ ಸ್ಥಳ ಬಹು ಇಕ್ಕಟ್ಟು. ಕಾಲುಜಾರಿದರೆ ಮೈಮೂಳೆ ಉಳಿಯುವ ಸಂಭವವೆ ಇಲ್ಲ. ಬಹಳ ಎಚ್ಚರದಿಂದ ಪ್ರದಕ್ಷಿಣೆ ಬರಬೇಕು. ಹೆಂಗಸರು ಮಕ್ಕಳಿಗಂತೂ ಅದು ಸಾಧ್ಯವೇ ಅಲ್ಲ.

ಶಾಂತಲೆ ಧೈರ್ಯದಿಂದ ಒಂದು ಸಲ ಆ ಬಸವನನ್ನು ಬಲವಂದಳು, ಕೈಮುಗಿದಳು. ತರುವಾಯ ಮಧ್ಯಆಕಾಶವನ್ನು ಸಮೀಪಿಸುತ್ತಿದ್ದ ಭಾಸ್ಕರ ನನ್ನು ನೋಡಿ ಕೈಮುಗಿದು 'ಭಗವನ್ ನಾರಾಯಣ, ಇನ್ನು ನನಗೆ ನೀನೇ ದಿಕ್ಕು, ನೀನೇ ಸಾಕ್ಷಿ. ಇಹಜನ್ಮದ ಕೊನೆಯ ಕರ್ತವ್ಯವಿದೆಂದು ಮಾಡುತ್ತಿ ದ್ದೇನೆ. ನಿನಗೆ ನನ್ನ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದೇನೆ. ನನಗೆ ಬೇರೆ ಯಾವ ಮಾರ್ಗವನ್ನೂ ನೀನು ತೋರಲಿಲ್ಲ. ನಮ್ಮ ರಾಜ್ಯಕ್ಕೆ ಒಳಿತಾಗಲಿ. ಲಕ್ಷ್ಮಿ ಪಟ್ಟಮಹಿಷಿಯಾಗಲಿ. ಅವಳಿಗೆ ಪುತ್ರಸಂತಾನವನ್ನೂ ದೇಶಕ್ಕೆ ಒಡೆಯನನ್ನೂ ಕೊಡು. ಪ್ರಭುಗಳ ಮನಸ್ಸನ್ನು ಹೇಗಾದರೂ ಸಂತೈಸು. ಅವರ ನನ್ನ ಮೇಲಿನ ಅನುರಾಗವೆಲ್ಲ ಲಕ್ಷ್ಮಿಗೆ ದೊರೆಯಲಿ. ಭಗವಂತ, ಕ್ಷಮಿಸು, ಕರುಣಿಸು' ಎನ್ನುತ್ತ ಶಾಂತಲೆ ಕಣ್ಣುಮುಚ್ಚಿದಳು. ಅಷ್ಟೆ. ಶಾಂತಲೆಯ ಶರೀರ ಅಲ್ಲಿಂದ ನೆಟ್ಟಗೆ ಕೆಳಕ್ಕೆ ಬಿದ್ದು ಬಂಡೆಗಳಮೇಲೆ ಉರುಳಿ ಉರುಳಿ ನೂರಡಿ ದೂರಕ್ಕೆ ಬಿದ್ದಿತು. ರಮ್ಯವಾದ ನಕ್ಷತ್ರವೊಂದು ಮೂಡಿ,

ಧರೆಗೆ ಬೆಳಕಿತ್ತು ಕಣ್ಮರೆಯಾಯಿತು. ಶಕವರ್ಷ ೧೦೫೩ (ಕ್ರಿ. ಶ. 1131) ವಿರೋಧಿಕೃತು ಸಂವತ್ಸರದ ಚೈತ್ರ ಶುದ್ಧ ಪಂಚಮಿ ಸೋಮವಾರ, ಪೂರ್ವಾಹ್ನ ಶಾಂತಲದೇವಿ ಶಿವಗಂಗೆ ಪುಣ್ಯಕ್ಷೇತ್ರದಲ್ಲಿ ದೇಹವನ್ನು ಮುಡುಪಿದಳು.

ಅದೇ ಸಮಯದಲ್ಲಿ ಪ್ರಭುಗಳೂ ಲಕ್ಷ್ಮಿಯೂ ವೇಲಾಪುರದಲ್ಲಿ ಚೆನ್ನ ಕೇಶವನಿಗೆ ಶಾಂತಲದೇವಿಯ ಹೆಸರಿನಲ್ಲಿ ಪೂಜೆಯನ್ನು ಅರ್ಪಿಸುತ್ತಿದ್ದರು. ಅರ್ಚಕರು ಹೂವು ತುಂಬಿದ್ದ ತಟ್ಟೆಯ ನಡುವೆ ತುಪ್ಪದ ದೀಪವನ್ನಿಟ್ಟು ದೇವನಿಗೆ ಬೆಳಗುತ್ತಿದ್ದರು. ತಟ್ಟೆ ಪೂಜಾರಿಯ ಕೈಯಿಂದ ಅಕಸ್ಮಾತ್ತಾಗಿ ಜಾರಿ, ದೀಪದೊಡನೆ ನೆಲಕ್ಕುರುಳಿತು. ದೀಪ ನಂದಿಹೋಗುವುದರಲ್ಲಿತ್ತು. ಆರಿಹೋಗುತ್ತಿದ್ದ ಬತ್ತಿಯನ್ನು ಪ್ರಭುಗಳೆ ತತ್‌ಕ್ಷಣ ಕೈಯಿಂದ ಎತ್ತಿ, ಜ್ಯೋತಿ ಯನ್ನು ಉದ್ಧಾರಗೊಳಿಸಿದರು. ಆರಿಹೋಗುತ್ತಿದ್ದ ಆ ಸೊಡರು ಮತ್ತೆ ಪ್ರಜ್ವಲಿಸಿತು. ಪ್ರಭುವಿಗೆ ಇದು ಏನೋ ಅಶುಭಸೂಚನೆ ಎನ್ನಿಸಿತು. ಆ ಕ್ಷಣದಲ್ಲಿಯೆ ಎದೆಯ ಪಾರ್ಶ್ವದಲ್ಲಿ ಏನೋ ವಿಕಾರ ಅನುಭವವಾಯ್ತು. ಅರ್ಚಕನು ಅಂಜಿದನು. 'ಕೈ ಒದ್ದೆಯಾಗಿದ್ದುದರಿಂದ ತಟ್ಟೆ ಜಾರಿತು. ಸಹಸ್ರ ಅಪರಾಧವಾಯ್ತು. ದೇವರು ಮನ್ನಿಸಬೇಕು' ಎಂದು ಕೈ ಜೋಡಿಸಿ ದೈವವನ್ನೂ ಪ್ರಭುಗಳನ್ನೂ ಬೇಡಿ, ದೇವನಿಗೆ ಮತ್ತೆ ಹೊಸ ದೀಪಾರತಿಯನ್ನು ಬೆಳಗಿದನು.

ದೀಪಾರತಿ ಕೆಳಗುರುಳಿದಾಗ ಲಕ್ಷ್ಮಿಗೂ ಹೊಟ್ಟೆಯಲ್ಲಿ ಕಿವಿಚಿ ಹಿಂಡಿ ದಂತೆ ಸಂಕಟವಾಯಿತು. ನಿಟ್ಟುಸಿರೊಂದು ಅವಳ ಎದೆಯಿಂದ ತಾನಾಗಿ ಹೊರಟಿತು. ಪ್ರಭುಗಳು ಲಕ್ಷ್ಮಿಯೊಡನೆ ಗರ್ಭಗುಡಿಯಿಂದ ಈಚೆಗೆ ಬಂದು 'ಲಕ್ಷ್ಮಿ ಇದೇನೋ ಅಶುಭಸೂಚಕವಾಗಿದೆ, ಮನಸ್ಸಿಗೆ ಕಳವಳಕಾರಣ ವಾಗಿದೆ' ಎಂದರು. ಲಕ್ಷ್ಮಿಯು 'ಸ್ವಾಮಿ, ನನಗೂ ಏಕೊ ಭಯವಾಗುತ್ತಿದೆ. ಆರತಿ ಜ್ಯೋತಿಯು ಹಾಗೆ ನೆಲಕ್ಕೆ ಉರುಳಬಾರದು. ನಮ್ಮ ತಪ್ಪೇನಿದ್ದರೂ ಚೆನ್ನಕೇಶವನು ಮನ್ನಿಸಲಿ. ಪ್ರಜ್ಞೆ ಇದ್ದು ನಾನು ಯಾವ ದೋಷವನ್ನೂ ಆಚರಿಸಿಲ್ಲ. ದೇವನು ಕಾಪಾಡಬೇಕು' ಎಂದಳು. ಪ್ರಭುಗಳೂ ಲಕ್ಷ್ಮಿಯೂ ದೇವನ ಕ್ಷಮೆ ಬೇಡುತ್ತ ಸೋಪಾನಗಳ ಮೇಲೆ ಸ್ವಲ್ಪಕಾಲ ಕುಳಿತರು.

ಅತ್ತ, ಕುವರ ಬೆಟ್ಟವನ್ನು ಸರಸರನೆ ಇಳಿದು, ಪೂಜಾರಿಯ ಮನೆಯಲ್ಲಿ ಒಂದು ಶುಭ್ರವಾದ ಪಾತ್ರೆಯನ್ನು ಈಸಿಕೊಂಡು, ವಿಘ್ನೇಶ್ವರನ ದೋಣೆಯಲ್ಲಿ

ನೀರನ್ನು ತುಂಬಿಕೊಂಡು, ಪುನಃ ಮೇಲಕ್ಕೆ ಹತ್ತಿ ಬಂದ. ಅಕ್ಕನನ್ನು ಬಿಟ್ಟು ಹೋಗಿದ್ದೆಡೆಯಲ್ಲಿ ಅಕ್ಕನಿರಲಿಲ್ಲ. 'ಅಕ್ಕ, ಅಕ್ಕ!' ಎಂದು ಕೂಗಿದ, ಸುತ್ತ ನೋಡಿದ. ಉತ್ತರ ಬರಲಿಲ್ಲ, ಅಕ್ಕ ಕಣ್ಣಿಗೂ ಬೀಳಲಿಲ್ಲ. 'ದೂರ ಏನಾದರೂ ಹೋಗಿರುವಳೊ?' ಎಂದು, ಧ್ವನಿಯನ್ನು ಎತ್ತರಿಸಿ 'ಅಕ್ಕಾ, ಅಕ್ಕಾ!' ಎಂದು ಕೂಗಿದ. ಉತ್ತರ ಬರಲಿಲ್ಲ. ಕುವರನಿಗೆ ಆಶ್ಚರ್ಯವಾಯಿತು, ಭಯವಾಯಿತು. ತಂದಿದ್ದ ಉದಕಪಾತ್ರೆಯನ್ನು ತೀರ್ಥೋದ್ಭವ ಹೊಂಡದ ಒಳಗೆ ಇಟ್ಟು, ಬಂಡೆಯೊಂದರ ಮೇಲೆ ಏರಿ ಇನ್ನೂ ಗಟ್ಟಿಯಾಗಿ 'ಅಕ್ಕಾ! ಅಕ್ಕಾ!!' ಎಂದು ಸುತ್ತಲೂ ತಿರುಗಿ ಕರೆದ. ಬೆಟ್ಟದ ಬೋರೆಗಲ್ಲುಗಳಿಂದ ಪ್ರತಿಧ್ವನಿ ಹೊರಟಿತು. ಉತ್ತರ ಬರಲಿಲ್ಲ. 'ಅಕ್ಕ ಇಷ್ಟರಲ್ಲಿ ಎಲ್ಲಿಗೆ ಹೋದಳು? ನನ್ನ ಕೂಗು ಕೇಳ ಬರದಷ್ಟು ದೂರ ಎಲ್ಲಿ ಹೋಗಿರಬಹುದು?' ಎಂದು ಕುವರನಿಗೆ ಭಯವಾಯಿತು. ಇನ್ನೊಂದುಸಲ ತನ್ನ ದೇಹಶಕ್ತಿಯನ್ನೆಲ್ಲ ಗಂಟಲಿಗೆ ಕೊಟ್ಟು 'ಅಕ್ಕಾ! ಅಕ್ಕಾ!' ಎಂದು ಅರಚಿದ. ಎರಡು, ಮೂರು, ನಾಲ್ಕೈದು ಪ್ರತಿಧ್ವನಿಗಳುಂಟಾದವು. ಬೆಟ್ಟವೆಲ್ಲ ಕೇಳಿಸಿತು ಆ ಧ್ವನಿ. ಉತ್ತರ ಮಾತ್ರ ಇಲ್ಲ.

ಸೋಮವಾರದ ಗಿರಿಪೂಜೆಗೆಂದು, ಇವರಿಗಿಂತ ಮುಂಚಿತವಾಗಿಯೆ ಬೆಟ್ಟವನ್ನು ಹತ್ತಿಬಂದು, ಪೂಜೆ ಮುಗಿಸಿ, ಕಾಯಿಹಣ್ಣುಗಳನ್ನು ತಿನ್ನುತ್ತ ಕುಳಿತಿದ್ದ ಒಂದು ತಂಡ ಗ್ರಾಮವಾಸಿಗಳು, ಕುವರನ ಕಾತರಧ್ವನಿಗೆ ಬೆಚ್ಚಿದವರಾಗಿ 'ಅಯ್ಯ, ಯಾರೊ ಭಾಗ್ಯವಂತೆ, ನಿಮ್ಮ ಅಕ್ಕನೆ ಇರಬಹುದು, ಆಕೆ, ಈಗ ಸ್ವಲ್ಪ ಹೊತ್ತಿಗೆ ಮುಂಚೆ, ಆ ಕೋಡುಗಲ್ಲು ಬಸವನಿರುವ ಕಡೆಗೆ ನಡೆದು ಹೋದರು' ಎಂದರು. 'ಅದೆಲ್ಲಿ?' ಎಂದು ಕೇಳಿದ ಕುವರ. 'ಅದೊ ಆ ಕಡೆ' ಎಂದು ಅವರು ಬೆರಳುಮಾಡಿ ತೋರಿದರು. ಕುವರ ಆ ಕಡೆ ಓಡಿದ. ಕುವರನ ಭೀತಿ ಕಾತರತೆಗಳನ್ನು ಕಂಡು ಆ ಗ್ರಾಮವಾಸಿಗಳು 'ಆ ಹೆಂಗಸಿಗೆ ಏನಾಯಿತೊ?' ಎಂದು ಅಂಜಿ, ಕುವರನ ಹಿಂದೆಯೆ ತಾವೂ ಓಡಿದರು.

ಕೋಡುಗಲ್ಲ ಬಸವನಿರುವಲ್ಲಿಗೆ ಬಂದ ಕುವರ. ಅಲ್ಲಿಯೂ ಸುತ್ತ ನೋಡಿದ. ಗಿರಿಯೆ ಅದಿರುವಂತೆ 'ಅಕ್ಕಾ—ಅಕ್ಕಾ—ಅಕ್ಕಾ' ಎಂದು ಅರಚಿದ. ಆ ಕೂಗಿಗೆ ಬೆಟ್ಟದ ಪ್ರತಿಯೊಂದು ಬಿರುಕಿನಲ್ಲಿಯೂ, ಬಂಡೆಗಳ ನಡುವೆಯೂ, ಕೆಳಗಿನ ಊರುಗಳಲ್ಲಿಯೂ, ಬಯಲಿನಲ್ಲಿಯೂ ಪ್ರತಿಧ್ವನಿಗಳು ಹೊರಟವು. ಉತ್ತರ ಮಾತ್ರ ಬರಲಿಲ್ಲ. ಆಗ ಕುವರನ ಧೈರ್ಯ ಒಡೆಯಿತು.

ನಡುಗುತ್ತಿರುವ ಧ್ವನಿಯಲ್ಲಿ 'ಇತ್ತ ಕಡೆ ಬಂದಳೆ? ನೀವು ನೋಡಿದಿರಾ?' ಎಂದು ಗ್ರಾಮವಾಸಿಗಳನ್ನು ಕೇಳಿದ. 'ಹೌದು ಅಯ್ಯಾ, ಈ ಕಡೆಗೇ ಬಂದರು, ನಿಮ್ಮ ಈ ಕೂಗು ಅವರೆಲ್ಲಿದ್ದರೂ ಕೇಳಿಸಿರಬೇಕು' ಎಂದರು ಗ್ರಾಮವಾಸಿಗಳು. ಕುವರನಿಗೆ ತಲೆ ತಿರುಗಿತು, ಕಾಲು ಕುಸಿಯಿತು. ಅವನು ಅವರನ್ನು ಕುರಿತು 'ಈ ಬೆಟ್ಟದಲ್ಲಿ ಕ್ರೂರ ಮೃಗಗಳಿವೆಯೆ?' ಎಂದು ಪ್ರಶ್ನೆ ಮಾಡಿದ. 'ಅಂತಹವು ಏನಿಲ್ಲ ಅಯ್ಯ, ಇದ್ದರೂ ಇಷ್ಟು ಹೊತ್ತಿನಲ್ಲಿ ಅವು ಹೊರಗೆ ಬಾರವು' ಎಂದರವರು. ಕುವರನಿಗೆ ಸಹನೆ ತಪ್ಪಿತು, ಬಹು ಭಯವುಂಟಾಯಿತು. 'ಅಕ್ಕ ಎಲ್ಲಿಗೆ ಹೋದಳು?' ಎಂದು ಬಂಡೆಯಿಂದ ಬಂಡೆಗೆ ಓಡುತ್ತ ದಿಕ್ಕುದಿಕ್ಕುಗಳಲ್ಲಿಯೂ ಎದೆ ಬಿರಿದುಹೋಗುವಂತೆ ಕೂಗಿದ. ಈಗ ಗ್ರಾಮವಾಸಿಗಳಿಗೂ 'ಆ ಹೆಂಗಸು ಏನಾದಳೊ!' ಎಂದು ಭಯ ಹುಟ್ಟಿತು. ಕುವರವಿಷ್ಣು ಬಂಡೆಯಿಂದ ಬಂಡೆಗೆ ಓಡಿದಾಗ ಗ್ರಾಮವಾಸಿಗಳು ಕುವರನ ಕಾಲುಗಳಲ್ಲಿದ್ದ ಚಿನ್ನದ ತೋಡಗಳನ್ನು ಕಂಡರು, ಬಲಗಾಲಿನ ತೋಡದಲ್ಲಿ ಜಗ್ಗುತ್ತಿದ್ದ ಮುತ್ತಿನ ಗೊಂಚಲುಗಳನ್ನು ಕಂಡರು. ಆಗ ಅವರಿಗೆ 'ಇವರು ಮಹಾರಾಜರೆ ಇರಬೇಕು' ಎಂದು ತೋರಿತು. ಭಯಭಕ್ತಿಗಳಿಂದ ಕುವರನಿಗೆ ನಮಸ್ಕರಿಸಿ ಅವನೊಡನೆ ತಾವೂ ಹುಡುಕುವುದರಲ್ಲಿ ತೊಡಗಿದರು.

ಗ್ರಾಮವಾಸಿಗಳ ಗುಂಪಿನಲ್ಲಿದ್ದ ಒಬ್ಬ ಹುಡುಗನ ಸೂಕ್ಷ್ಮದೃಷ್ಟಿಗೆ, ಕೆಳಗೆ ನೂರು ಅಡಿಗಳ ದೂರದಲ್ಲಿ ಬಿದ್ದಿದ್ದ ಹೆಂಗಸಿನ ಶರೀರ ಒಂದು ಕಂಡಿತು. ಆಗ ಅವನು 'ಅಗೊ! ಅಗೋ! . . . ಅಲ್ಲಿ!' ಎಂದು ಕೆಳಗಡೆ ಕೈಮಾಡಿ ತೋರಿಸಿದ. ಎಲ್ಲರ ದೃಷ್ಟಿ ಆ ಕಡೆ ಓಡಿತು. ಗ್ರಾಮವಾಸಿಗಳೂ, ಉತ್ತಮ ವಸ್ತ್ರಗಳಿಂದ ಒಪ್ಪುತ್ತಿದ್ದ ಹೆಂಗಸೊಬ್ಬಳ ದೇಹ ಅಲ್ಲಿ ಬಿದ್ದಿರುವುದನ್ನು ಕಂಡರು. ಕುವರವಿಷ್ಣುವೂ ಕಂಡ. 'ತನ್ನ ಅಕ್ಕ ಹೋದಳು' ಎಂದು ಅವನ ಹೃದಯ ಅಲ್ಲಿಯೆ ನಿರ್ಧರಿಸಿತು. ಆ ಕ್ಷಣವೆ 'ಅಕ್ಕಾ, ಇದೊ ನಾನೂ ಬಂದೆ' ಎನ್ನುತ್ತ ಒಂದೇ ಹಾರಿಗೆ ತನ್ನ ಅಕ್ಕನನ್ನು ಹೋಗಿ ಸೇರಿದ ಕುವರ.

ಗ್ರಾಮವಾಸಿಗಳು ಮೂಕರಾದರು. ಕಣ್ಮುಚ್ಚಿ ತೆಗೆಯುವುದರೊಳಗೆ ಈ ದುರಂತ ಅವರ ಕಣ್ಣುಮುಂದೆ ನಡೆದುಹೋಯಿತು. ಕುವರ ನಿಧಾನಿಸಲಿಲ್ಲ, ನಿಂತು ಯೋಚಿಸಲಿಲ್ಲ, ಹಿಂದು ಮುಂದು ನೋಡಲಿಲ್ಲ. ಅಕ್ಕ ಹೋದಳೆಂದು ಅವನ ಮನಸ್ಸಿಗೆ ತಿಳಿದ ಕ್ಷಣವೇ ಅವನೂ ಹೋಗಿಬಿಟ್ಟ. 'ಹೆಂಗಸು, ಪಾಪ!

ಕಾಲು ಜಾರಿ ಬಿದ್ದು ಸತ್ತಿರಬೇಕು, ಆಕೆಯ ತಮ್ಮಂದಿರಾದ ಈ ರಾಜರು ಆ ದುಃಖದಿಂದ ತಾವೂ ದುಮುಕಿ ಪ್ರಾಣ ಕಳೆದುಕೊಂಡರು!' ಎಂದುಕೊಂಡರು ಗ್ರಾಮವಾಸಿಗಳು. ಅವರಿಗೆಲ್ಲ ಬಹು ದುಃಖವಾಯಿತು, ಬಹು ಸಂಕಟವಾಯಿತು. 'ಅಯ್ಯೋ! ಅಯ್ಯೋ!' ಎಂದು ದುಃಖದಿಂದ, ಭಯದಿಂದ, ಅರಚುತ್ತ ಅವರು ದಡದಡನೆ ಬೆಟ್ಟವಿಳಿದು ಶಿವಗಂಗೆ ಊರಿಗೆ ಓಡಿದರು. ಗ್ರಾಮವಾಸಿಗಳ ಪೈಕಿ ಇಬ್ಬರು ಗಂಡಸರು, ಮೆಲ್ಲಗೆ ಆ ಇರುಕುಗಳಲ್ಲಿ ಇಳಿದು, ಆ ಎರಡು ಶರೀರಗಳೂ ಬಿದ್ದಿದ್ದ ಸ್ಥಳವನ್ನು ಸೇರಿ, 'ಯಾರಿಗಾದರೂ ಜೀವವಿದೆಯೇ?' ಎಂದು ನೋಡಿದರು. ಸತ್ತಿದ್ದ ಹೆಂಗಸು ಶ್ರೀ ಮಹಾಲಕ್ಷ್ಮಿಯಂತೆ ಇದ್ದರು. ತಲೆಯ ಒಂದು ಪಾರ್ಶ್ವ ಜಜ್ಜಿಹೋಗಿ, ರಕ್ತಸ್ರಾವವಾಗಿತ್ತು. ರಾಜರೂ ಬಿದ್ದೊಡನೆಯೆ ಒಂದೆರಡಾವರ್ತಿ ಕೈಕಾಲುಗಳನ್ನು ಝಾಡಿಸಿ ತಣ್ಣಗಾಗಿದ್ದರು. ಅಕ್ಕನ ಕಳೇಬರಕ್ಕೆ ಹತ್ತೇ ಅಡಿ ದೂರದಲ್ಲಿ ರಾಜರ ಶವವೂ ಬಿದ್ದಿದ್ದಿತು. ಆ ಇಬ್ಬರು ಗ್ರಾಮವಾಸಿಗಳು ಆ ಘೋರ ದೃಶ್ಯವನ್ನು ಕಂಡು ಎದೆಯೊಡೆದು ಕಣ್ಣೀರು ಸುರಿಸುತ್ತ ಮೂಕರಂತೆ ನಿಂತುಬಿಟ್ಟರು.

ಬೆಟ್ಟವಿಳಿದ ಗ್ರಾಮವಾಸಿಗಳು 'ರಾಜರೂ ಅವರ ಅಕ್ಕದಿರೂ ಬೆಟ್ಟದ ಮೇಲಿನಿಂದ ಬಿದ್ದು ಸತ್ತರು' ಎಂದು ಶಿವಗಂಗೆಯ ಊರಲ್ಲೆಲ್ಲ ಸುದ್ದಿ ಹರಡಿದರು. ರಥ ನಡಸಿಕೊಂಡು ಬಂದಿದ್ದ ಸಾರಥಿ ಆ ಸುದ್ದಿಯನ್ನು ಕೇಳಿ ಅಲ್ಲಿಯೇ ಕುಸಿದ. 'ಅಯ್ಯೋ! ಅದು ನಮ್ಮ ಶಾಂತಲಾ ಮಹಾರಾಣಿಯವರು, ಕುವರ ವಿಷ್ಣು ಅವರು' ಎಂದು ದೊಡ್ಡ ದನಿಯಿಂದ ಗೋಳಿಟ್ಟ. ಬಿಡದಿಯ ಅಧಿಕಾರಿ ಓಡಿಬಂದ. ಒಂದೆ ನಿಮಿಷದಲ್ಲಿ ಊರ ಜನರೆಲ್ಲ ಓಡಿ ಓಡಿ ಬಂದರು. ಹೆಗ್ಗಡೆ, ನಗರ ರಕ್ಷಕರು, ಇತರ ಸಣ್ಣ ಪುಟ್ಟ ಅಧಿಕಾರಿಗಳು ಎಲ್ಲರೂ ಓಡಿಬಂದರು. 'ಎಲ್ಲಿ? ಯಾವ ಕಡೆ? ಇಬ್ಬರೂ ಕಾಲು ಜಾರಿದರೆ! ಅಯ್ಯೋ! ಇನ್ನೇನು ಗತಿ?' ಎನ್ನುತ್ತ ಬೆಟ್ಟವನ್ನು ಹತ್ತಿ ಕಳೇಬರಗಳಿದ್ದೆಡೆಗೆ ಓಡಿದರು. ಆ ಗ್ರಾಮವಾಸಿಗಳಿಬ್ಬರೂ ಅಲ್ಲಿಯೆ ದುಃಖಿಸುತ್ತ ಕಾಯ್ದು ಕೂತಿದ್ದರು.

ಅತಿ ಪರಿತಾಪಕರವಾದ ಈ ದೃಶ್ಯವನ್ನು ಕಂಡು, ಮಕ್ಕಳು ಮರಿ ಮೊದಲುಗೊಂಡು ಎಲ್ಲರಿಗೂ ದುಃಖ ಉಕ್ಕಿಬಂದಿತು. 'ಶಾಂತಲಾ ಮಹಾರಾಣಿಯವರು ಕಾಲುಜಾರಿ ಬಿದ್ದು ಸತ್ತರೆ! ಅಯ್ಯೋ, ದೇಶಕ್ಕೇ ಎಂತಹ ದುರ್ದಿನವಿದು! ಅಕ್ಕ ಸತ್ತುದನ್ನು ಕಂಡು ಈ ಪುಣ್ಯಾತ್ಮನೂ ಪ್ರಾಣ ಕಳೆದು

ಕೊಂಡನೆ? ಗಂಗಾಧರೇಶ್ವರ, ನಿನ್ನ ಸೇವೆಗೆಂದು ಬಂದ ಇವರಿಗೆ ಈ ಫಲವೆ? ಈ ಪ್ರಾಪ್ತಿಯೆ! ಅಯ್ಯೊ! ಪ್ರಭು ವಿಷ್ಣುವರ್ಧನರು ಈ ದುಃಖವನ್ನು ಇನ್ನು ಹೇಗೆ ತಾನೆ ಸಹಿಸುವರು!' ಎಂದು ಗೋಳಿಟ್ಟರು. ಹೆತ್ತ ತಾಯಿತಂದೆಗಳನ್ನು ಕಳೆದುಕೊಂಡಂತೆ ದುಃಖಪಟ್ಟರು ಆ ಜನರು.

ಇಷ್ಟರಲ್ಲಿ ಸಾರಥಿಯೂ, ಬಿಡದಿಯವನೂ,—ಮಾತನಾಡುತ್ತಿದ್ದವರು—ತತ್‌ಕ್ಷಣ ಬೆಟ್ಟದ ಶಿಖರಕ್ಕೆ ನಡೆದರು. ಆ ಕಡೆ ನಿಂತಿದ್ದ ಇಬ್ಬರು ಗ್ರಾಮ ವಾಸಿಗಳು ಅವರ ಸಂಕಲ್ಪವನ್ನು ಊಹಿಸಿ, ಅವರನ್ನು ತಡೆದು 'ಅಯ್ಯ, ನೀವೆಲ್ಲಿಗೆ?' ಎಂದು ಕೇಳಿದರು. ಉತ್ತರ ಬಾರದಿರಲು ಆ ಗ್ರಾಮವಾಸಿಗಳು ಅವರನ್ನು ಬಲವಾಗಿ ಹಿಡಿದುಕೊಂಡು, ನಿಲ್ಲಿಸಿ, ಅಲ್ಲಿದ್ದ ಇತರರಿಗೆ ಕೇಳಿಬರು ವಂತೆ ದೊಡ್ಡ ಧ್ವನಿಯಲ್ಲಿ 'ಅಯ್ಯ, ಅಯ್ಯ, ಇವರೂ ಪ್ರಾಣ ಕಳೆದುಕೊಳ್ಳಲು ಹೋಗುತ್ತಿದ್ದಾರೆ, ನಿಲ್ಲಿಸಿ' ಎಂದು ಕೂಗಿಕೊಂಡಾಗ, ಜನರು ಓಡಿಬಂದು ಅವರನ್ನು ತಡೆದರು. ಸಾರಥಿಯೂ, ಬಿಡದಿಯ ಅಧಿಕಾರಿಯೂ 'ನಮ್ಮನ್ನು ಬಿಡಿ. ಇನ್ನು ನಾವು ಹಿಂದಕ್ಕೆ ಹೋಗಿ ಪ್ರಭುಗಳಿಗೆ ನಮ್ಮ ಮುಖಗಳನ್ನು ತೋರಲಾರೆವು. ನಮ್ಮನ್ನು ತಡೆಯಬೇಡಿ. ನಿಮಗೆ ಕೋಟಿ ಪುಣ್ಯ ಉಂಟು' ಎಂದು ಬೇಡಿಕೊಂಡರು. ಹೆಗ್ಗಡೆಗಳು 'ಸಾಕು, ಸಾಕು. ಈ ಅನಾಹುತಗಳು ಇನ್ನು ಸಾಕು. ಇದನ್ನು ನಾವು ನಿರೋಧಿಸುತ್ತೇವೆ, ಖಂಡಿತ ಆಸ್ಪದ ಕೊಡೆವು. ಹೇಳಿರಿ, ನಿಮಗೆ ಏನಾದರೂ ಈ ವಿಷಯದಲ್ಲಿ ತಿಳಿದಿದ್ದರೆ' ಎಂದು ಪ್ರಶ್ನಿಸಿದರು. ಅವರು 'ಇಲ್ಲ . . . ಇಲ್ಲ . . . ಯಾತ್ರೆಗೆಂದು ನಗುನಗುತ್ತ ಸಂತೋಷದಿಂದ ಬಂದರು, ಈಗ . . .' ಎಂದರು.

'ಮಹಾರಾಣಿಯರು ಕೋಡುಗಲ್ಲು ಬಸವನ ಪ್ರದಕ್ಷಿಣೆ ಮಾಡುತ್ತಿರು ವಾಗ, ಕಾಲು ಜಾರಿಯೊ, ಅಥವಾ ಬಿಸಿಲಿನಿಂದ ತಲೆ ತಿರುಗಿ ಕಣ್ಣು ಕತ್ತಲೆ ಬಂದೊ ಈ ಅನ್ಯಾಯವಾಗಿರಬೇಕು. ಅಕ್ಕನವರು ಹೀಗಾದುದನ್ನು ಕಂಡು, ಕುವರರೂ ಒಟ್ಟಿಗೆ ಬಂದವರು ಒಟ್ಟಿಗೇ ಹೋದರು' ಎಂದು ಜನ ಗಳೆಲ್ಲ ನಂಬಿದರು. ಗ್ರಾಮಾಧಿಕಾರಿಗಳು ತಮ್ಮ ಮುಂದಿನ ಕರ್ತವ್ಯವೇ ನೆಂದು ಯೋಚಿಸಿದರು. ದುಃಖಭರಿತವಾಗಿದ್ದ ಆ ಹೃದಯಗಳಿಗೆ ಯಾವ ಯೋಚನೆಯೂ ಹೊಳೆಯಲಿಲ್ಲ. ಅಲ್ಲಿದ್ದ ವಯೋವೃದ್ಧನೊಬ್ಬ 'ಅಯ್ಯಾ, ನಾವು ಏನನ್ನೂ ಮಾಡಬಾರದು. ಯಾವುದಕ್ಕೂ ನಮಗೆ ಅಧಿಕಾರವಿಲ್ಲ.

ಪ್ರಭುಗಳಿಗೆ ಈ ಸಂಗತಿಯನ್ನು ಕಳಿಸುವ ಹೊತ್ತಿಗೆ ಈ ಕಳೇಬರಗಳನ್ನೇ ಅಲ್ಲಿಗೆ ಕಳಿಸಬಹುದು. ಅದು ಸಾಧ್ಯವೆ ಎಂಬುದನ್ನು ಯೋಚಿಸಿರಿ' ಎಂದನು. ಇದೇ ಸರಿಯಾದ ಯೋಚನೆಯೆಂದು ಎಲ್ಲರೂ ಒಪ್ಪಿದರು. ಆಗ ಹೆಗ್ಗಡೆಯು, ಸಾರಥಿಯನ್ನೂ ಬಿಡದಿಯ ಅಧಿಕಾರಿಯನ್ನೂ ಕುರಿತು 'ಇಗೋ, ಈ ಕಳೇಬರ ಗಳನ್ನು ಆದಷ್ಟು ಶೀಘ್ರವಾಗಿ ಒಯ್ದು ಪ್ರಭುಗಳಿಗೆ ಒಪ್ಪಿಸಿಬಿಡಿರಿ. ಅನಂತರ ನಿಮ್ಮ ಅಂತರಾತ್ಮ ಹೇಗೆ ಸೂಚಿಸಿದರೆ ಹಾಗೆ ಮಾಡಿರಿ. ಇದು ನಿಮ್ಮ ಕರ್ತವ್ಯ. ಇದನ್ನು ನೆರವೇರಿಸದಿದ್ದರೆ, ರಾಜಶಾಪ ನಿಮ್ಮನ್ನು ಜನ್ಮಜನ್ಮ ಗಳಿಗೂ ಅನುಸರಿಸುವುದು. ಇದನ್ನು ದೇವನೂ ಒಪ್ಪನು. ಮೃತರ ಶರೀರ ಗಳನ್ನು ಪ್ರಭುಗಳಿಗೆ ಒಪ್ಪಿಸಿಬಿಡಿ. ಮೃತರ ಬಂಧುಮಿತ್ರರಿಗೂ ಸಮಾಚಾರ ತಿಳಿಸಿಬಿಡಿ' ಎಂದನು. ಇದಕ್ಕೆ ಅವರಿಬ್ಬರೂ ಒಪ್ಪಲೆಬೇಕಾಯಿತು.

ಊರಿನಿಂದ ಎರಡು ತೊಟ್ಟಿಲುಗಳನ್ನೂ ಬೋಯಿಗಳನ್ನೂ ಕರಸಿದರು. ಹೊನ್ನಾದೇವಿಯ ಗುಡಿಯಿಂದ ಒಂದು ಉತ್ತಮ ದುಕೂಲವನ್ನು ತರಿಸಿದರು. ಮುತ್ತೈದೆಯರು ಅರಿಸಿನ ಕುಂಕುಮ, ಪುಷ್ಪಗಳಿಂದ ಮಹಾರಾಣಿಯ ಕಳೇಬರ ವನ್ನು ಅಲಂಕಾರ ಮಾಡಿ ಆ ಉತ್ತಮ ದುಕೂಲದಲ್ಲಿ ಸುತ್ತಿ ಕಣ್ಣೀರು ಪುಷ್ಪ ಗಳೊಡನೆ ತೊಟ್ಟಿಲಲ್ಲಿಟ್ಟರು; ನಮಸ್ಕಾರ ಮಾಡಿದರು. ಗಂಡಸರು ಕುವರನ ಕಳೇಬರವನ್ನು ತೊಟ್ಟಿಲಲ್ಲಿ ಇಟ್ಟು ಕೈಮುಗಿದರು. ಬೋಯಿಗಳು ಕೈಮುಗಿದು ತೊಟ್ಟಿಲ ಹಗ್ಗಗಳಿಗೆ ಬಿದಿರು ಬೊಂಬುಗಳನ್ನು ಪೋಣಿಸಿಕೊಂಡು ಊರು ಗೋಲುಗಳನ್ನು ಹಿಡಿದು, ಜಾಗರೂಕತೆಯಿಂದ ಹೆಜ್ಜೆಯಿಡುತ್ತ ಮೆಲ್ಲಗೆ ಬೆಟ್ಟವ ನ್ನಿಳಿಯಲು ಆರಂಭಿಸಿದರು. ಎಲ್ಲರೂ ಬೆಟ್ಟವನ್ನಿಳಿದರು.

ಇವರು ಶಿವಗಂಗೆಯನ್ನು ಸೇರಿದಾಗ ಊರಿಗೆ ಊರೇ ಬಂದು ಬಾಷ್ಪಾಂಜಲಿಯನ್ನು ಸಲ್ಲಿಸಿತು. ಕಾಲ ವಿಳಂಬವಾಗದಂತೆ, ಕಳೇಬರಗಳನ್ನು ರಥದ ಮೇಲಕ್ಕೆ ಹತ್ತಿಸಿ, ಉರುಳಿಬೀಳದಂತೆ ಬಿದಿರುಕಟ್ಟೆಗಳನ್ನು ಕಟ್ಟಿದರು. ಹೆಗ್ಗಡೆಗಳು ಸಾರಥಿಯನ್ನು ನೋಡಿ 'ಆದಷ್ಟು ಬೇಗನೆ, ಕತ್ತಲಾಗುವುದ ರೊಳಗೆ ನೀನು ಊರನ್ನು ಸೇರಬೇಕು. ಗಾವುದ ಗಾವುದಕ್ಕೂ ಕುದುರೆಗಳನ್ನು ಬದಲಾಯಿಸುವ ಏರ್ಪಾಡು ಇದೆಯೆಂದು ಬಿಡದಿಯ ಅಧಿಕಾರಿ ಹೇಳಿದ. ನಾವೂ ಇನ್ನೊಂದು ರಥದಲ್ಲಿ ನೀವು ಬಿಟ್ಟುಹೋಗುವ ಕುದುರೆಗಳಿಗೆ ದಣಿವು ಆರುವಷ್ಟು ಸಮಯ ಕೊಡುತ್ತ ನಿಮ್ಮ ಹಿಂದೆಯೇ ಬರುತ್ತೇವೆ' ಎಂದು ಹೇಳಿ

ದರು. ಬಿಡದಿಯ ಅಧಿಕಾರಿ ರಥವನ್ನು ಹತ್ತಿ, ಕಣ್ಣುಮುಂದಿನ ದುಃಖದೃಶ್ಯ ವನ್ನು ನೋಡಲಾರದೆ, ಮುಖದ ಮೇಲೆ ಒಟ್ಟೆಯನ್ನು ಎಳೆದುಕೊಂಡು ಕುಳಿತು ಕೊಂಡ. ರಥವು ವೇಗದಿಂದ ಹೊರಟಿತು. ಗಾವುದ ದೂರ ಹೋದನಂತರ, ಅಲ್ಲಿದ್ದ ಹೊಸ ಕುದುರೆಗಳನ್ನು ರಥಕ್ಕೆ ಹೂಡಲಾಯಿತು. ಅಲ್ಲಿದ್ದ ಕುದುರೆಯ ಕಾವಲಿನವ 'ಊರಿಗೆ ಬರಲು ಅಪ್ಪಣೆಯಾಯಿತೆ?' ಎಂದು ಕೇಳಿದ. ಅವಸರ ದಲ್ಲಿದ್ದ ಸಾರಥಿ 'ಪ್ರಭುಗಳಿಂದ ಉತ್ತರ ಬರುವ ತನಕ ಇಲ್ಲಿಯೆ ಕುದುರೆಗಳನ್ನು ಕಾಯ್ದಿರು' ಎಂದು ಹೇಳುತ್ತ ರಥವನ್ನು ವೇಗವಾಗಿ ಕೊಂಡುಹೋದ.

ವೇಲಾಪುರ ಹತ್ತಿರವಾಗುತ್ತ ಆಗುತ್ತ ಸಾರಥಿಯ ದುಃಖ ಹೆಚ್ಚಾಯಿತು. ತನ್ನ ಹಣೆಯ ಬರಹವನ್ನು ನಿಂದಿಸಿದ. 'ಪಾಪಿ ಕುದುರೆಗಳೆ, ನೀವು ಜನ್ಮಾಂತರಗಳಲ್ಲಿ ಏನು ಪಾಪ ಮಾಡಿ ಈ ಜನ್ಮಕ್ಕೆ ಬಂದಿರೊ? ಅಂತಹ ದೇವಿ ಯನ್ನು, ಅಂತಹ ಮಹಾನುಭಾವನನ್ನು ಯಾತ್ರೆಗೆ ತಂದ ನೀವು, ಈಗ ಅವರ ಕಳೇಬರಗಳನ್ನು ಹೊತ್ತು ಹೋಗುತ್ತಿರುವಿರೆ? ನಿಮಗೆ ಇದರ ಅರಿವೆ ಇಲ್ಲವೆ? ನಿಮಗೆ ಜೀವವಿಲ್ಲವೆ? ಆತ್ಮವಿಲ್ಲವೆ? ತಿಳುವಳಿಕೆಯೆಂಬುದಿಲ್ಲವೆ? ಇತರರಿಗೆ ದುಃಖವಾದಾಗ, ಸಂಕಟ ಒದಗಿದಾಗ ನಿಮಗೆ ದುಃಖ ಬರುವುದಿಲ್ಲವೆ? ಅಥವಾ ಈ ಅನುಕಂಪ ಮನುಷ್ಯನಿಗೆ ಮಾತ್ರ ಇದೆಯೆ? ಇಲ್ಲದಿರುವವನು ನಿಮ್ಮಂತೆ ಒಂದು ಮೃಗ' ಎಂದು ದುಃಖದ ಭರದಲ್ಲಿ ಪೇಚಾಡಿಕೊಳ್ಳುತ್ತ, ಆತ್ಮನಿಂದೆ ಯನ್ನು ಮಾಡಿಕೊಳ್ಳುತ್ತ, 'ಬೇಗ ನಡೆಯಿರಿ' ಎಂದು ಕುದುರೆಗಳನ್ನು ಚಪ್ಪರಿಸಿದನು. ಅವು ನಾಗಾಲೋಟದಿಂದ ರಥವನ್ನು ಎಳೆದುಕೊಂಡು ಓಡಿ ದವು.

ಸಂಜೆಯಾಯಿತು, ಕುದುರೆಗಳನ್ನು ಎಷ್ಟೋ ಬಾರಿ ಬದಲಾಯಿಸಿಯೂ ಆಯಿತು. ಕತ್ತಲೂ ಆಗುತ್ತ ಬಂದಿತ್ತು. ಬೆಳಕೇನೂ ಇಲ್ಲದಿದ್ದರೂ ಕುದುರೆ ಗಳು ತಮ್ಮ ಸೂಕ್ಷ್ಮದೃಷ್ಟಿಯಿಂದಲೆ ದಾರಿಹಿಡಿದು ಓಡಿದವು. ಸಂಜೆ ಆಗಿ ಎರಡು ಗಳಿಗೆಗೆ ರಥ ವೇಲಾಪುರದ ಗಡಿಯನ್ನು ಮುಟ್ಟಿತು. ಊರು ಹತ್ತಿರವಾದಾಗ ಸಾರಥಿಯ ಉಸಿರೂ ಅಡಗಿತು. ಕುದುರೆಗಳು ಅಭ್ಯಾಸ ಬಲದಿಂದ ರಥವನ್ನೆಳೆದುಕೊಂಡು ಹೋಗಿ ಅರಮನೆಯ ಮಹಾದ್ವಾರವನ್ನು ಸೇರಿ ನಿಂತವು.

ಶಿವಗಂಗೆಯಿಂದ ರಥವು ಬಂದಿತೆಂದು ದ್ವಾರಪಾಲಕನು ತನ್ನ ನಾಯಕ

ನಿಗೆ ತತ್‌ಕ್ಷಣವೇ ಹೋಗಿ ತಿಳಿಸಿದ. ನಾಯಕ ಒಳಗಡೆ ಸರ್ವಾಧಿಕಾರಿಗಳಿಗೆ ಹೋಗಿ ತಿಳಿಸಿದ. ಸರ್ವಾಧಿಕಾರಿ ಹೊತ್ತಿಸಿದ್ದ ದೀವಟಿಗೆಯನ್ನು ಹಿಡಿಸಿ ಕೊಂಡು ರಥದ ಬಳಿಗೆ ಬಂದ. ಸಾರಥಿ ತನ್ನ ಸ್ಥಾನದಲ್ಲಿ ಶವವಾಗಿ ಉರುಳಿ ಬಿದ್ದಿದ್ದ. ರಥದಿಂದ ಕೆಳಗೆ ಇಳಿದ ಬಿಡದಿಯವನನ್ನು ಸರ್ವಾಧಿಕಾರಿ ಗುರುತು ಹಿಡಿದ. ಬಿಡದಿಯವನ ಕಣ್ಣುಗಳಲ್ಲಿ ನೀರು ಧಾರೆ ಹರಿಯುತ್ತಿತ್ತು, ಮೈ ನಡುಗುತ್ತಿತ್ತು. ಅವನು ಸರ್ವಾಧಿಕಾರಿಯ ಮುಖವನ್ನು ನೋಡಿ ನಿರಾಶೆ ಯಿಂದ ತಲೆಯನ್ನಾಡಿಸಿದ. ಗಂಟಲಿನಿಂದ ಧ್ವನಿ ಹೊರಡುವುದೆ ಅವನಿಗೆ ಕಷ್ಟವಾಯಿತು. ಅವನ ಅವಸ್ಥೆಯನ್ನು ಸರ್ವಾಧಿಕಾರಿ ಕಂಡು, 'ಅಯ್ಯ, ರಥದಲ್ಲಿ ಮಲಗಿರುವವರು ಇವರು ಯಾರು? ನೀನೇಕೆ ಅಳುತ್ತಿರುವೆ? ಸಾರಥಿ ಹೇಗೆ ಸತ್ತ? ಕಳ್ಳರೆ? ದ್ರೋಹಿಗರೆ? ಎಲ್ಲಿ ಅಡ್ಡಗಟ್ಟಿದರು? ಏನಾಯಿತು? ನೀ ಹೇಗೆ ಬದುಕಿದೆ? ದೇವಿಯರೆಲ್ಲಿ? ಕುವರರೆಲ್ಲಿ?' ಎಂದು ಒಟ್ಟಿಗೆ ಅನೇಕ ಪ್ರಶ್ನೆಗಳನ್ನು ಕೇಳಿದ.

'ಅಯ್ಯ, ನಾನು ಹೆಚ್ಚು ಹೇಳಲಾರೆ, ಉಸಿರೇ ಬರುತ್ತಿಲ್ಲ. ಸುದ್ದಿ ತಿಳಿಸಿಬಿಟ್ಟು ಸಾಯಬೇಕೆಂದು ಜೀವವನ್ನು ಹಿಡಿದು ನಿಲ್ಲಿಸಿಕೊಂಡಿದ್ದೇನೆ. ಕಳ್ಳರಲ್ಲ, ದ್ರೋಹಿಗರೂ ಅಲ್ಲ; ಮಹಾರಾಣಿಯವರೂ, ಕುವರರೂ ಇಂದು ಶಿವಗಂಗೆಯ ಬೆಟ್ಟವನ್ನು ಹತ್ತಿದರು. ಬಾಯಾರಿಕೆಗೆ ನೀರು ತರುವಷ್ಟರಲ್ಲಿ ದೇವಿಯರೊಬ್ಬರೆ ಬೆಟ್ಟದ ಶಿಖರಕ್ಕೆ ಹತ್ತಿ, ಅಲ್ಲಿ ಎಲ್ಲೊ ಕಾಲು ಜಾರಿ, ಅಲ್ಲಿಂದ ನೂರಡಿ ಕೆಳಕ್ಕೆ ಬಿದ್ದು ತೀರಿಕೊಂಡರಂತೆ . . . ನೀರನ್ನು ತೆಗೆದುಕೊಂಡು ಬಂದ ಕುವರರು ಅಕ್ಕದಿರನ್ನು ಹುಡುಕಿ, ಕಡೆಗೆ, ಕೆಳಗೆ ಬಿದ್ದು ಸತ್ತಿರುವುದನ್ನು ಕಂಡು ತಾವೂ ಆ ಕ್ಷಣವೆ ಅಲ್ಲಿಂದ ಹಾರಿ . . . ಅವರ ಶವಗಳು ರಥದಲ್ಲಿ. ಸಾರಥಿ ಹೇಗೆ ಯಾವಾಗ ಸತ್ತನೊ, ಕುದರೆಗಳೇ ರಥವನ್ನು ಹೇಗೆ ಎಳೆದು ತಂದವೊ ನಾನು ಅರಿಯೆ. ಸೋವಲೆದೇವಿಯರಿಗೂ, ಮಹಾರಾಣಿಯವರ ತಾಯಿತಂದೆಗಳಿಗೂ ತಿಳಿಸಿಬಿಡಿ. ಇನ್ನು ನನ್ನ ಕಾರ್ಯ ಮುಗಿಯಿತು' ಎನ್ನುತ್ತ ಆ ದುಃಖದ ಸುದ್ದಿಗಳನ್ನು ಉಸುರಿದ ತನ್ನ ನಾಲಗೆಯನ್ನು ತಾನೇ ಕಚ್ಚಿ ತುಂಡುಮಾಡಿ, ಉಗಿದು, ಅಲ್ಲಿಯೆ ಇದ್ದ ಕಲ್ಲಿನ ಕಂಭಕ್ಕೆ ತನ್ನ ತಲೆ ಯನ್ನು ಬಲವಾಗಿ ಬೀಸಿ ಹೊಡೆದುಕೊಂಡ. ಅವನ ತಲೆಬುರುಡೆ ಬಿರಿದು, ಮಿದುಳು ಹೊರಚೆಲ್ಲಿತು. ತತ್‌ಕ್ಷಣ ಅವನು ಕೆಳಗೆ ಬಿದ್ದು ಸತ್ತ.

ಸರ್ವಾಧಿಕಾರಿ 'ಅಯ್ಯೋ! ಅಯ್ಯೋ!' ಎನ್ನುತ್ತ ದಿಕ್ಕುತೋಚದೆ ಅರಮನೆಯ ಒಳಕ್ಕೆ ಓಡಿದ. ವಿಶಾಲವಾದ ಮುಂಭಾಗದ ಸಭಾಗೃಹದಲ್ಲಿ ಪ್ರಭುಗಳು ಒಂದು ತಗ್ಗಾದ ಪೀಠದಲ್ಲಿ ಕುಳಿತು ವೇಲಾಪುರಿಯ ನಗರರಕ್ಷಕನೊಡನೆ ಏನೋ ಮಾತನಾಡುತ್ತಿದ್ದರು. ಅಂದು ಮಹಾದೇವನ ದಿನವಾದ್ದರಿಂದ ಪ್ರಭುಗಳು ನಿರಶನವ್ರತದಿಂದಿದ್ದರು. ಲಕ್ಷ್ಮೀದೇವಿಯರು, ಅರಮನೆಯ ಒಳಗೆ ಪೂಜಾಗೃಹದಲ್ಲಿ ಯಾವುದೊ ಕೆಲಸದಲ್ಲಿದ್ದರು. ಸರ್ವಾಧಿಕಾರಿ 'ಅಯ್ಯೋ!' ಎಂದ ಕೂಗು ಪ್ರಭುಗಳಿಗೆ ಕೇಳಿಸಿ, ಅವರು ಆ ಕೂಗು ಕೇಳಿಬಂದಕಡೆ ತಿರುಗಿ ನೋಡಿದರು. ಸರ್ವಾಧಿಕಾರಿ ಭಯದಿಂದ ದಿಕ್ಕೆಟ್ಟವನಂತೆ ಓಡಿಬಂದು, ಪ್ರಭುಗಳಿಗೆ ಅಡ್ಡಬಿದ್ದು, ಮುಖವನ್ನು ಮೇಲಕ್ಕೆತ್ತಿ ನೋಡಲಾರದೆ, ಬಿಡದಿ ಅಧಿಕಾರಿ ತನ್ನೊಡನೆ ಹೇಳಿದುದೆಲ್ಲವನ್ನೂ ಪ್ರಭುಗಳಿಗೆ ಅರಿಕೆ ಮಾಡಿದ. ಎರಡು ನಿಮಿಷ ಕಾಲ ಕುಳಿತಲ್ಲಿಯೆ ಸ್ತಂಭಿಸಿಹೋದರು ಪ್ರಭುಗಳು. ಆ ತರುವಾಯ ಏನೆನ್ನಿಸಿತೊ! ತತ್‌ಕ್ಷಣವೆ ಎದ್ದು, ಸದಾಕಾಲದಲ್ಲಿಯೂ ತನ್ನೊಡನೆ ಇಟ್ಟುಕೊಂಡಿರುತ್ತಿದ್ದ ಕಿರುಪೆಟ್ಟಿಗೆಯೊಂದನ್ನು ಇಟ್ಟಿದ್ದ ಸ್ಥಳದಿಂದ ಹೊರಕ್ಕೆ ತೆಗೆದು, ಅದರಲ್ಲಿನ ಚಿಕ್ಕದೊಂದು ಬೆಳ್ಳಿಯ ಸಂಪುಟವನ್ನು ಕೈಯಲ್ಲಿ ತೆಗೆದುಕೊಂಡು, ಲಕ್ಷ್ಮಿ ಇದ್ದ ಪೂಜಾಗೃಹದ ಕಡೆಗೆ ಬೇಗನೆ ನಡೆದರು. ಲಕ್ಷ್ಮಿ ಅಲ್ಲಿಯೇ ಇರುವಳೆಂದು ಅವರಿಗೆ ತಿಳಿದಿದ್ದಿತು. ಸ್ವಲ್ಪ ಹೊತ್ತಿಗೆ ಮುಂಚೆ, ದಂಪತಿಗಳಿಬ್ಬರೂ ಪೂಜೆಯನ್ನು ಮುಗಿಸಿ, ಪ್ರಭುಗಳು ಈಚೆಗೆ ಬಂದಿದ್ದರು. ಲಕ್ಷ್ಮಿ ಪೂಜಾಗೃಹದಲ್ಲಿಯೆ ಇದ್ದಳು. ಪ್ರಭುಗಳು ಹೀಗೆ ಆತುರದಿಂದ ಬಂದದ್ದನ್ನು ಕಂಡು, ಪೂಜಾಗೃಹದಲ್ಲಿ ಲಕ್ಷ್ಮಿಯೊಡನಿದ್ದ ದಾಸಿಯರು ಅಂಜಿ ಹೊರಕ್ಕೆ ಬಂದು ನಿಂತರು. ಪ್ರಭುಗಳು 'ಲಕ್ಷ್ಮೀ, ಲಕ್ಷ್ಮೀ' ಎಂದು ಕೂಗುತ್ತ ಪೂಜಾಗೃಹವನ್ನು ಹೊಕ್ಕರು. ಲಕ್ಷ್ಮಿ ಪ್ರಭುಗಳ ಕಾತರವನ್ನು ಕಂಡು ಅವಾಕ್ಕಾಗಿ ನಿಂತಳು. "ಲಕ್ಷ್ಮಿ ಇಲ್ಲಿ ಬಾ, ಬಾಯಿ ತೆರೆ, ಈ ಚೂರ್ಣವನ್ನು ನುಂಗು" ಎಂದು ಕರೆದರು ಪ್ರಭುಗಳು. ಲಕ್ಷ್ಮಿ ಬಳಿಗೆ ಬಂದು ಬಾಯಿ ತೆರೆದ ಗೊಂಬೆಯಂತೆ ನಿಂತಳು. ಪ್ರಭುಗಳು ಬೆಳ್ಳಿಯ ಸಂಪುಟದಲ್ಲಿದ್ದ ಚೂರ್ಣವನ್ನು ಅವಳ ಬಾಯಲ್ಲಿ ಹಾಕಿ, ಹತ್ತಿರ ಅಭಿಷೇಕ ಪಾತ್ರೆಯಲ್ಲಿದ್ದ ನೀರಿನಲ್ಲಿ ಎರಡು ಗುಟುಕನ್ನು ಅವಳ ಬಾಯೊಳಕ್ಕೆ ಸುರಿದು, 'ನುಂಗಿಬಿಡು ಲಕ್ಷ್ಮಿ ನುಂಗಿಬಿಡು' ಎಂದರು. ಲಕ್ಷ್ಮಿ ನುಂಗಿದಳು.

'ನುಂಗಿದೆ, ದೇವ' ಎಂದಳು.

'ಕಣ್ಣು ಮುಚ್ಚಿಕೊ, ಲಕ್ಷ್ಮಿ.'

'ಮುಚ್ಚಿಕೊಂಡೆ, ದೇವ.'

'ಭಯಪಡದಿರು ಲಕ್ಷ್ಮಿ, ಬೇರಾವ ಮಾರ್ಗವೂ ಇಲ್ಲ.'

'ಅರ್ಥವಾಗಲಿಲ್ಲ, ಸ್ವಾಮಿ.'

'ಒಂದು ಕ್ಷಣದಲ್ಲಿ ತಿಳಿಯುವೆ, ಈ ಕುಶಾಸನದ ಮೇಲೆ ಕುಳಿತುಕೊ.'

ಪ್ರಭುಗಳು ಲಕ್ಷ್ಮಿಯನ್ನು ಕೈಹಿಡಿದು ಕುಳ್ಳಿರಿಸಿದರು. ಕೈಗಳಿಂದ ನೆತ್ತಿ ತಲೆಗಳನ್ನು ನೇವರಿಸಿದರು. ಪ್ರಭುಗಳ ಕೈ ಆಗ ಅಸ್ತಿಮಿತವಾಗಿದ್ದುದು ಲಕ್ಷ್ಮಿಗೆ ಅನುಭವವಾಗಲಿಲ್ಲ. ಔಷಧಿ ಅಷ್ಟು ತೀಕ್ಷ್ಣವಾದದ್ದಾಗಿತ್ತು. ಎರಡೇ ನಿಮಿಷಗಳಲ್ಲಿ ಲಕ್ಷ್ಮಿಯ ಹೊಟ್ಟೆಯೊಳಗಡೆ ತೀಕ್ಷ್ಣಜ್ವಾಲೆಯೊಂದೆದ್ದಿತು. ಇನ್ನೆರಡು ನಿಮಿಷಗಳಲ್ಲಿ ಆ ಜ್ವಾಲೆ ಮೈಗೆ, ತಲೆಗೆ, ಎಲ್ಲ ಕಡೆಯೂ ವ್ಯಾಪಿಸಿತು. ಲಕ್ಷ್ಮಿ ಅಂದಳು: 'ಹೊಟ್ಟೆಯಲ್ಲಿ ಬೆಂಕಿ ಉರಿದಂತೆ ಉರಿಯುತ್ತಿದೆ, ಸ್ವಾಮಿ.'

'ಇನ್ನೆರಡು ಗುಟುಕು ನೀರು ಕುಡಿ, ಲಕ್ಷ್ಮಿ.'

ನೀರು ಕುಡಿಸಿ ಆಯಿತು.

'ಕೈಕಾಲು ಸೋತು ಬರುತ್ತಿದೆ, ತಲೆ ತಿರುಗುತ್ತಿದೆ.'

ಪ್ರಭು ಲಕ್ಷ್ಮಿಯನ್ನು ಚಾಪೆಯ ಮೇಲೆ ಮೆಲ್ಲನೆ ಮಲಗಿಸಿ, ಕಣ್ಣೆವೆ ಬಿಡಿಸಿ, ಕಣ್ಣಿನೊಳಗೆ ಕಣ್ಣಿಟ್ಟು ಸ್ವಲ್ಪಕಾಲ ನೋಡಿದರು. ಕಣ್ಣು ನಡುವಿನ ಕರಿಯ ಚುಕ್ಕೆ ಬರಬರುತ್ತ ಸಣ್ಣಗೆ ಆಗುತ್ತ ಬಂದಿತು. ಪ್ರಭುಗಳು ಇನ್ನೂ ಒಂದು ನಿಮಿಷಕಾಲ ಹಾಗೆಯೆ ನೋಡುತ್ತಿದ್ದರು. ಅನಂತರ ಆಕೆಯ ಕಣ್ಣುಗಳನ್ನು ಮುಚ್ಚಿಬಿಟ್ಟರು. ಪ್ರಭುಗಳಿಗೆ ಎಷ್ಟು ಸಂಕಟವಾಯಿತೊ! ಪೂಜಾಮೂರ್ತಿ ನಾರಾಯಣನನ್ನು ಅತಿದೈನ್ಯ ದೃಷ್ಟಿಯಿಂದ ನೋಡಿದರು: 'ಇಷ್ಟು ಕ್ರೂರಶಿಕ್ಷೆಗೆ ನಾನು ಹೇಗೆ ಪಾತ್ರನಾದೆ, ಪ್ರಭುವೆ?' ಎಂದು. ಹೊರಗೆ ನಿಂತಿದ್ದ ದಾಸಿಯರಿಬ್ಬರನ್ನೂ ಒಳಕ್ಕೆ ಕರೆದರು. ಅವರು ನಡುಗುತ್ತ ಬಂದು ನಿಂತರು. ಅವರನ್ನು ನೋಡಿ ಪ್ರಭುಗಳು 'ನೀವು ಅಂಜಬಾರದು. ನೀವೀಗ ಅಂಜಿದರೆ, ಧೃತಿ ಕೆಟ್ಟರೆ, ಲಕ್ಷ್ಮಿ ಸಾಯುವಳು, ಖಂಡಿತವಾಗಿಯೂ ಸಾಯುವಳು. ಲಕ್ಷ್ಮಿ ಬದುಕಬೇಕೆಂದಿದ್ದರೆ, ಇಗೊ ನಾವು ಹೇಳುವುದನ್ನು ಚೆನ್ನಾಗಿ

ಗಮನಿಸಿ ಕೇಳಿ. ಇದು ಮೂರ್ಛೆ, ಮೂರ್ಛೆ ಬರುವ ಔಷಧವನ್ನು ಕೊಟ್ಟಿದ್ದೇವೆ. ಇದನ್ನು ಈಗ ಅತ್ಯಾವಶ್ಯಕವಾಗಿ ಕೊಡಬೇಕಾಯಿತು. ಈ ಮೂರ್ಛೆ ಇನ್ನೂ ಅರ್ಧ ದಿನವೆಲ್ಲ ಹೀಗೆಯೆ ಇರುವುದು. ಅನಂತರ ಮೈ ಎಚ್ಚರಗೊಳ್ಳುತ್ತದೆ. ಬುದ್ಧಿ ಮನಗಳು ಮಾತ್ರ ತಬ್ಬಿಬ್ಬಾಗಿಯೆ ಇರುತ್ತವೆ. ಬಹುಶಃ ಇನ್ನೂ ಅರ್ಧ ದಿನವೆಲ್ಲ ಹಾಗೆಯೆ ಇರುತ್ತದೆ. ಈಗ ನಿಮ್ಮ ಕರ್ತವ್ಯವೇನೆಂದು ಅರಿತುಕೊಳ್ಳಿ. ಇಗೊ ಈ ಮಾತ್ರೆಯನ್ನು ಬಹು ಜೋಪಾನವಾಗಿಟ್ಟುಕೊಂಡು, ಜಾವಜಾವಕ್ಕೂ ತಪ್ಪದೆ ಒಮ್ಮೆ, ಶುದ್ಧವಾದ ಗಂಧ ತೇಯುವ ಕಲ್ಲಿನ ಮೇಲೆ ಲಘುವಾಗಿ, ಅಂಗೈ ಅಗಲದ ಸುತ್ತಿನಲ್ಲಿ ಹದಿನೈದು ಸುತ್ತು, ಹದಿನೈದು ತೊಟ್ಟು ಹಾಲಿನಲ್ಲಿ ಅಥವಾ ನೀರಿನಲ್ಲಿ ತೇದು, ಆ ಚಂದನವನ್ನು ಲಕ್ಷ್ಮಿಯ ನಾಲಗೆಯ ಮೇಲೆ ಬಳಿದು, ಎರಡು ಮೂರು ಗುಟುಕು ನೀರನ್ನು ಮೆಲ್ಲಮೆಲ್ಲನೆ ಗಂಟಲೊಳಕ್ಕೆ ಇಳಿಸಿರಿ. ಹೀಗೆ ಜಾವಜಾವಕ್ಕೂ ಒಮ್ಮೆ ನಾಲ್ಕಾವರ್ತಿ ಮಾಡಬೇಕು. ನೆನಪಿರಲಿ, ನಾಲ್ಕಾವರ್ತಿ. ಜೋಕೆ. ಇನ್ನೊಮ್ಮೆ ಹೇಳುತ್ತೇವೆ, ಗಮನವಿಡಿ. ಅಂಗೈ ಅಗಲದ ಸುತ್ತು. ಲಘುವಾಗಿ ಹದಿನೈದು ಸುತ್ತು. ಹದಿನೈದು ತೊಟ್ಟು–ಹಾಲಿನಲ್ಲಿ ಅಥವಾ ನೀರಿನಲ್ಲಿ. ಒಂದು ಜಾವಕ್ಕೆ ಒಮ್ಮೆ. ನಾಲ್ಕು ಸಲ. ಮೈ ಎಚ್ಚರಗೊಂಡನಂತರ ಸುಖೋಷ್ಣವಾದ ಹಾಲ್ಜೇನು. ಆಹಾರ ಕೇಳಿದರೆ ಲಘು ಆಹಾರ, ಫಲಗಳು. ಲಕ್ಷ್ಮಿಯನ್ನು ನಿಮ್ಮ ಕೈಗೆ ಕೊಟ್ಟು ಹೋಗುತ್ತಿದ್ದೇವೆ. ಇದು ಏಕೆ! ಏನು? ಎಂದು ಈಗ ಕೇಳದಿರಿ. ಉಳಿಸಿಕೊಳ್ಳುವ ಭಾರ ನಿಮ್ಮದು' ಎಂದು ಹೇಳಿ ಮಾತ್ರೆಯನ್ನು ಅವರ ಕೈಗೆ ಒಪ್ಪಿಸಿ, ತಾವು ಹಿಂದೆ ಕುಳಿತಿದ್ದೆಡೆಗೆ ಬಂದರು.

§

ನಾಲ್ಕೈದು ಜನ ದಾಸಿಯರು ಶಾಂತಲೆಯ ಕಳೇಬರವನ್ನು ರಥದಿಂದ ಮೆಲ್ಲನೆ ಇಳಿಸಿಕೊಂಡು ಗೋಳಿಡುತ್ತ ಅದನ್ನು ಹೊತ್ತು ತಂದು ಪ್ರಭುಗಳ ಮುಂದಿಟ್ಟರು. ದುಃಖದಿಂದ ಆ ದಾಸಿಯರ ಕಣ್ಣೀರು ಧಾರೆಧಾರೆಯಾಗಿತ್ತು. ಶೋಕದಿಂದ, ಭಯದಿಂದ ಅವರು ನಡುಗುತ್ತಿದ್ದರು. ಕಳೇಬರದ ಹೊದ್ದಿಕೆಯನ್ನು ಮೆಲ್ಲಗೆ ಬಿಡಿಸಿ ಮುಖವನ್ನು ಬೆಳಕಿಗೆ ಸರಿಸಿದರು. ದಾಸಿಯರು ಈಗ

ದುಃಖದಿಂದ ಬಿಕ್ಕಿ ಬಿಕ್ಕಿ ಅಳಲು ಮೊದಲಿಟ್ಟರು. ಪ್ರಭುಗಳ ಮುಂದೆ ಈ ದಾಸಿಯರು ಎಂದೂ ತಲೆಯೆತ್ತಿ ನೋಡಿದವರೇ ಅಲ್ಲ. ಈಗ ದುಃಖದ ಭರದಲ್ಲಿ ಎಲ್ಲವನ್ನೂ ಮರೆತರು. ಇವರ ರೋದನಧ್ವನಿ ಹೆಚ್ಚಿತು.

ಪ್ರಭುಗಳೂ ಶಾಂತಲೆಯ ಮುಖವನ್ನು ನೋಡಿದರು. ಮುಖದಲ್ಲಿ ಆ ವರ್ಚಸ್ಸು ಇಲ್ಲ, ಆ ತೇಜಸ್ಸು ಇಲ್ಲ, ಆ ಸೌಂದರ್ಯವಿಲ್ಲ, ಆ ಮೃದುಭಾವವಿಲ್ಲ. ಸದಾ ನಲಿದಾಡುತ್ತಿದ್ದ ಮಂದಹಾಸವಿಲ್ಲ. ಮುಖ ಈಗ ವಿವರ್ಣ, ವಿಲಕ್ಷಣ, ರಕ್ತರಂಜಿತ. ಮೈ ಕೈಗಳು ಮುದುಡಿಹೋಗಿವೆ. ಆಕೃತಿಯೆ ಇಲ್ಲದ ಒಂದು ಮುದ್ದೆಯಂತಿದೆ. ಪ್ರಭುಗಳು ಆ ದಾಸಿಯರನ್ನುದ್ದೇಶಿಸಿ 'ನೀವು ಹೀಗೆ ಧ್ವನಿ ತೆಗೆದು ಅಳಬಾರದು. ಲಕ್ಷ್ಮಿ ಎಚ್ಚತ್ತು ಬಂದರೆ ಇನ್ನೊಂದು ಘೋರವಾಗು ವುದು. ಲಕ್ಷ್ಮಿಗಾಗಿ ದಯೆಯಿಡಿ. ಹೊರಕ್ಕೆ ಹೋಗಿ ದುಃಖಿಸಿರಿ' ಎಂದರು. ಆಗ ಇಬ್ಬರು ಗಂಡಸರು ಕುವರನ ಕಳೇಬರವನ್ನು ಹೊತ್ತು ತಂದು, ಅವರ ಅಕ್ಕನ ಕಳೇಬರದ ಪಕ್ಕದಲ್ಲೇ ಇರಿಸಿ, ಮುಖಕ್ಕೆ ಹೊದಿಸಿದ್ದ ವಸ್ತ್ರವನ್ನು ತೆಗೆ ದರು. ಪ್ರಭುಗಳು ಕುವರನ ಮುಖವನ್ನೂ ನೋಡಿದರು, ಹೊತ್ತು ತಂದವರೂ ಬೆಳಕಿನಲ್ಲಿ ನೋಡಿದರು. ದಾಸ ದಾಸಿಯರೂ ನೋಡಿದರು. ದಾಸಿಯರು ಮತ್ತಷ್ಟು ಘೋರವಾಗಿ ರೋದಿಸುತ್ತ ಹೊರಕ್ಕೆ ಹೋಗಿ ಅಳುತ್ತ ನಿಂತರು. ಅಲ್ಲಿ ಇದ್ದವರೆಲ್ಲ ಗಂಡಸರೆ ಆದರೂ ದುಃಖದಲ್ಲಿ ಎಲ್ಲರೂ ಹೆಂಗಸರೆ ಆದರು. ಪ್ರಭುಗಳ ಕಣ್ಣಲ್ಲಿ ಮಾತ್ರ ನೀರು ಸೂಸಲಿಲ್ಲ. ಒಡಲೊಳಗೆ ಬಡಬಾಗ್ನಿ ಎದ್ದಿತು.

ಪ್ರಭುಗಳು ಕತ್ತೆತ್ತಿ ಒಮ್ಮೆ ಸರ್ವಾಧಿಕಾರಿಯನ್ನು ನೋಡಿದರು. ಪ್ರಭು ಗಳ ಮನಸ್ಸನ್ನು ಅರ್ಥಮಾಡಿಕೊಂಡ ಅವರು, ಗದ್ಗದಿಸುತ್ತಿದ್ದ ಧ್ವನಿಯಲ್ಲಿ 'ಹೇಮಾದ್ರಿ, ಅಚ್ಯುತ, ಗೋವಿಂದ, ವೀರದೇವ ಅಮಾತ್ಯರುಗಳಿಗೆ, ಸೋವಲೆ ದೇವಿಯರಿಗೆ, ಮಹಾರಾಜ್ಞಿಯವರ ತಂದೆತಾಯಿಗಳಿಗೆ ಹೇಳಿ ಕಳಿಸಿ ಆಯಿತು, ಪ್ರಭು' ಎಂದರು. ತಮ್ಮ ಮನಸ್ಸಿನ ಪ್ರಶ್ನೆಗೆ ಉತ್ತರ ಬಂದುದಕ್ಕೆ ಸುಮ್ಮನಾ ದರು ಪ್ರಭುಗಳು. ಒಂದು ವಿಘಳಿಗೆ ಮೇಲೆ ಪುನಃ ಸರ್ವಾಧಿಕಾರಿಯನ್ನು ಕುರಿತು 'ರಥವನ್ನು ತಂದವನೆಲ್ಲಿ? ರಥದಲ್ಲಿ ಯಾರು ಬಂದರು?' ಎಂದು ಕೇಳಿ ದರು. ಪ್ರಭುಗಳ ಧ್ವನಿ ಬಹು ದೀನವಾಗಿತ್ತು, ಕುಗ್ಗಿತ್ತು. 'ಪ್ರಭೂ, ಸಾರಥಿ ದುಃಖದಿಂದ ಎದೆಯೊಡೆದು ತನ್ನ ಸ್ಥಾನದಲ್ಲೇ ಸತ್ತುಬಿದ್ದಿದ್ದ. ಬಹುಶಃ ಈ

ಊರನ್ನು ಸೇರಿದಾಗ ಸತ್ತಿರಬೇಕು. ಕುದುರೆಗಳು ತಾವಾಗಿಯೆ ರಥವನ್ನು ಇಲ್ಲಿಗೆ ಎಳೆದು ತಂದು ನಿಂತವು. ಶಿವಗಂಗೆಗೆ ಹೋಗಿದ್ದ ಬಿಡದಿಯ ಅಧಿಕಾರಿ ರಥದಿಂದಿಳಿದು, ನಾನು ಆಗಲೆ ತಮ್ಮಲ್ಲಿ ಅರಿಕೆಮಾಡಿಕೊಂಡಷ್ಟೆ ಸಮಾಚಾರ ವನ್ನು ತಿಳಿಸಿ, ತನ್ನ ನಾಲಗೆಯನ್ನು ಕಡಿದುಕೊಂಡು ತುಂಡರಿಸಿ, ತಲೆಯನ್ನು ಕಲ್ಲುಕಂಬಕ್ಕೆ ಬೀಸಿ ಹೊಡೆದುಕೊಂಡು ತಲೆ ಬಿರಿದು ಸತ್ತ' ಎಂದು ಸರ್ವಾಧಿಕಾರಿ ಪ್ರಭುಗಳಿಗೆ ತಿಳಿಸಿದ.

ಪ್ರಭುಗಳ ದುಃಖ ಇನ್ನೂ ಹೆಚ್ಚಿತು. ತಮ್ಮೆರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ತಲೆ ತಗ್ಗಿಸಿಬಿಟ್ಟರು. ಎರಡು ನಿಮಿಷಗಳನಂತರ ದುಃಖ ಪೂರಿತ ಧ್ವನಿಯಲ್ಲಿ, 'ಸಾರಥಿಯ ಮತ್ತು ಬಿಡದಿಯ ಅಧಿಕಾರಿಯ ಮನೆ ಯವರಿಗೆ ಆ ಆ ಕಳೇಬರಗಳನ್ನು ಒಪ್ಪಿಸಿಬಿಡಿ. ಸಂಸ್ಕಾರಗಳಿಗೆ ಆಗುವ ವೆಚ್ಚ ವನ್ನೆಲ್ಲಾ ಬೊಕ್ಕಸದಿಂದ ಕೊಡಿ. ಇಪ್ಪತ್ತು ಇಪ್ಪತ್ತು ಬಳ್ಳ ರಾಜಮಾನ್ಯ ಗದ್ದೆಗಳನ್ನು ಅವರಿಗೆ ವಂಶಪಾರಂಪರ್ಯ ಶೂನ್ಯಮಾನವಾಗಿ ಕೊಡಿ' ಎಂದಾಜ್ಞೆ ಮಾಡಿದರು, ಇತರರ ದುಃಖವೂ ತಮ್ಮ ದುಃಖಕ್ಕಿಂತ ಕಿರಿದಲ್ಲವೆಂದು ಅರಿತಿದ್ದ ಆ ಮಹಾಪ್ರಭು.

ಅರಮನೆಯಲ್ಲಿದ್ದವರೆಲ್ಲ ಬಂದು, ಮೃತರ ಕಳೇಬರಗಳನ್ನು ನೋಡಿ, ಸಂಕಟವನ್ನು ತಡೆಯಲಾರದೆ, ಪ್ರಭುಗಳೆದುರಿಗೆ ಧ್ವನಿ ತೆಗೆದು ಅಳುವುದ ಕ್ಕಂಜಿ, ಹೊರಗೆ ಹೋಗಿ ವಿಕಾರವಾಗಿ ಗೋಳಿಡುತ್ತ ನಿಂತರು. ಪ್ರಭುಗಳ ಸಂಕಟ ಈ ಆಕ್ರಂದನಗಳನ್ನು ಕೇಳಿ ಇನ್ನಷ್ಟು ಹೆಚ್ಚಿತು. ಆಗ ಅವರು ಸರ್ವಾಧಿಕಾರಿಯನ್ನು ಕುರಿತು 'ಈ ಸಮಯದಲ್ಲಿ ಅರಮನೆಯಿಂದ ಯಾರನ್ನೂ ಹೊರಕ್ಕೆ, ಊರೊಳಗೆ ಹೋಗಲು ಬಿಡಬೇಡಿ. ಈ ಅವೇಳೆಯಲ್ಲಿ ಊರಿಗೆ ಊರೇ ಇಲ್ಲಿಗೆ ಬಂದಾರು. ಅಳುತ್ತಿರುವವರಿಗೆ ಹೇಳಿ, ಇಲ್ಲಿ ಇಷ್ಟು ಧ್ವನಿ ಯಿಂದ ಅಳಬಾರದೆಂದು. ಲಕ್ಷ್ಮೀದೇವಿಯರಿಗೆ ಅವರ ಅಕ್ಕನ ಸಾವು ಇನ್ನೂ ತಿಳಿಯದು. ತಿಳಿಯಬಾರದು. ಅವರು ಈ ಸದ್ದನ್ನು ಕೇಳಿ ಇಲ್ಲಿಗೆ ಬಂದರೆ, ಇನ್ನೂ ಒಂದು ಸಾವು ಆದೀತು. ನಮ್ಮ ಮೇಲೆ ಈ ಹೊತ್ತು ಎಲ್ಲರೂ ದಯೆಯಿಡಬೇಕೆಂದು ಹೇಳಿ. ಲಕ್ಷ್ಮೀದೇವಿಯವರು ಪೂಜಾಗೃಹ ದಲ್ಲಿದ್ದಾರೆ. ಇವರಾರೂ ಆ ಕಡೆಯೇ ಸುಳಿಯಬಾರದೆಂದು ಹೇಳಿ. ಊರಿನವ ರಾರನ್ನೂ ಒಳಕ್ಕೆ ಬಿಡಬೇಡಿ. ಸೋವಲೆ ದೇವಿ, ಅಮಾತ್ಯರುಗಳು, ನಮ್ಮ

ಅತ್ತೆಮೂವರಿರು, ಇನ್ನಾರಾದರೂ ಇವರೊಡನೆ ರಾಜಧಾನಿಯಿಂದ ಬಂದವರು, ಇವರು ಮಾತ್ರ ಬರಲಿ. ಅವರಿಗೂ ಬಾಗಿಲಲ್ಲೇ ತಿಳಿಸಿಬಿಡಿ, ಒಳಕ್ಕೆ ಬಂದು ನಮ್ಮ ದುಃಖವನ್ನು ಹೆಚ್ಚಿಸಬಾರದೆಂದು. ಶಿವಗಂಗೆಯಿಂದ ಬಂದ ರಥ ಅಲ್ಲಿಯೆ ಇರಲಿ, ಹಾಗೆಯೆ ಇರಲಿ. ನಾವು ಬಂದು ನೋಡುತ್ತೇವೆ' ಎಂದು ಅತಿದುಃಖದ ಧ್ವನಿಯಲ್ಲೆ ಆಜ್ಞೆ ಮಾಡಿದರು ಪ್ರಭುಗಳು.

ಸುಮಾರು ಅರ್ಧ ಗಳಿಗೆಯಲ್ಲಿ ಎಲ್ಲರ ಆಕ್ರಂದನ ಧ್ವನಿ ಕಡಮೆಯಾ ಯಿತು. ದುಃಖ ಹೃದಯದೊಳಗೇ ಕುದಿಯುತ್ತಿತ್ತು. ಅರಮನೆಯ ವಾತಾ ವರಣ ವಿಕಾರವಾಯಿತು. ದುಃಖದ ಮಳೆ ಮಾತ್ರ ಸಂತತಧಾರೆ. ಶಬ್ದ ಕಡಮೆ.

ಪ್ರಭುಗಳ ದುಃಖ ಮುಖ ಮುಚ್ಚಿಹಿಡಿದಿದ್ದ ಜ್ವಾಲಾಮುಖಿ. ಕಾಯ್ದು ನೀರಾದ ದುಃಖ ಒಳಗೇ ಕುದಿಯುತ್ತಿದೆ. ಉಕ್ಕಿ ಉಕ್ಕಿ ಮೇಲಕ್ಕೆ ಬರುತ್ತಿದೆ. ಹೊರಬೀಳಲು ಬಿಗಿದ ಸಂಯಮ ಅದುಮಿ ಹಿಡಿಯುತ್ತಿದೆ. ಆದರೆ ಎಷ್ಟು ಹೊತ್ತು! ಒಳಗಿನ ಕಾವು ಏರಿದರೆ ಎಂತಹ ಸಂಯಮವನ್ನಾದರೂ ಸೀಳಿ ಕೊಂಡು ಹೊರಬೀಳುವ ಶಕ್ತಿ ದುಃಖಕ್ಕೆ ಉಂಟು. ಪ್ರಭು ಕಠಿಣಹೃದಯರಲ್ಲ. ಬಹು ಅನುಕಂಪ ಉಳ್ಳ ಹೃದಯ ಅವರದು. 'ಕುವರ ವಿಷ್ಣುವನ್ನು ಕಾಣುವ ವರೆಗೆ ಅನ್ನ ನಿದ್ದೆಗಳು ನಮಗೆ ಬೇಡ' ಎನ್ನುತ್ತ, ಆಗ ತಾನೆ ಗತಿಸಿದ ತಾಯಿಯ ಕಳೇಬರದ ಅಗ್ನಿಸಂಸ್ಕಾರವನ್ನೂ ಬೇರೊಬ್ಬರಿಗೆ ಒಪ್ಪಿಸಿ, ಕುವರ ನನ್ನು ಕಾಪಾಡಿ ತರಲು ಹೊರಟ ಹೃದಯವಲ್ಲವೆ ಅದು? ಯುದ್ಧಕ್ಕೆ ಹೊರ ಟಾಗ ತಮ್ಮ ಶಾಂತಲೆಯ ಮುಖ ಬಾಡಿದುದನ್ನು ಕಂಡು, 'ದೇವಿ, ನೇಮ, ನಿಷ್ಠೆ, ವ್ರತ ಉಪವಾಸಗಳಿಂದ ದೇಹವನ್ನು ಕೃಶಗೊಳಿಸಬೇಡ, ಅದು ನಮಗೆ ದುಃಖವುಂಟುಮಾಡುತ್ತದೆ. ಕಣ್ಣೀರಿಡಬೇಡ, ನಿನ್ನ ಕಣ್ಣು ನೀರು ಕಾರಿದರೆ ನನ್ನ ಹೃದಯ ರಕ್ತ ಕಾರೀತು' ಎಂದ ಹೃದಯವಲ್ಲವೆ ಅದು?

ಪ್ರಭುಗಳು ಎರಡು ಕಳೇಬರಗಳನ್ನೂ ನೋಡುತ್ತ ಕುಳಿತರು. ಇವ ರಿಬ್ಬರ ನಡುವೆ ಇದ್ದ ಋಣಾನುಬಂಧವೇನು? ಎಂಬ ಪ್ರಶ್ನೆ ಉದ್ಭವಿಸಿತು ಅವರ ಮನದೊಳಗೆ. ಕುವರನ ಉಪನಯನದ ದಿನದ ನೆನಪಾಯಿತು. ಶಾಂತಲೆ ಆಗ ಕನ್ಯೆ. ಆಕೆಯನ್ನೂ ಲಕ್ಷ್ಮಿಯನ್ನೂ ನೋಡಿದ ಪ್ರಥಮ ದಿನವದು. ಅನಂತರ ಅವರು ದೇವಕನ್ನಿಕೆಯರಂತೆ, ಅರಮನೆಗೆ ಬಂದು ವೀಣೆ ನುಡಿಸಿದ

ದಿನ. ತಮ್ಮ ತನುಮನಗಳನ್ನು ಅವರಿಬ್ಬರೂ ಸೂರೆಗೊಂಡ ದಿನ. ಅವರು ಅರಸಿಯರಾಗಿ ಅರಮನೆಯನ್ನು ತುಂಬಿ, ತಮ್ಮ ಹೃದಯವನ್ನೂ ತಾಯಿಯ ಹೃದಯವನ್ನೂ ತುಂಬಿದ ದಿನ. ತಮ್ಮ ಭಾಗ್ಯರವಿ ಉದಯಿಸಿದ ದಿನ, ತಮ್ಮ ವಿಜಯಗಳ ಮಾಲಿಕೆ, ಕೇಶವ ದೇವಾಲಯದ ನಿರ್ಮಾಣ, ಹೃದಯದೇವಿಯ ಆನಂದನರ್ತನ, ಕುವರನ ಮದುವೆ, ಅಶ್ವಮೇಧ, ಹಿರಣ್ಯಗೋಗರ್ಭ ಎಲ್ಲವೂ ಮುಗಿಯಿತು. ತನ್ನ ಕಣ್ಣ ಮುಂದೆಯೇ ತನ್ನ ಸಕಲ ಸುಖ, ಸಂಪತ್ತು, ಅಧಿಕಾರ, ಗೌರವ ಎಲ್ಲವೂ ಮಣ್ಣಾಗಿ, ಮಸಣವಾಗಿ ಮುಗಿದುದು. 'ಈ ದುರ್ಮರಣಗಳು ನನ್ನ ಕಣ್ಣ ಮುಂದೆ ಏಕೆ? ನೋಡು ನಿನ್ನ ಜೀವಿತದ ಫಲ ಗಳನ್ನು! ಎಂದು ವಿಧಿ ನನಗೆ ತೋರಿಸುತ್ತಿದೆಯೆ? ನನ್ನದು ಯಾವುದು ಆ ಮಹಾ ಅಪರಾಧ? ನನ್ನ ತಪ್ಪು ನನಗೆ ತಿಳಿಯಲಿ, ನನ್ನ ಅಪರಾಧ ನನಗೆ ತಿಳಿ ಯಲಿ, ಅಂತಹ ದುಷ್ಕೃತ್ಯವೇನನ್ನು ಮಾಡಿದೆ ದೈವವೆ? ಅಥವಾ ದ್ರೋಹಗಳನ್ನೇ ಧರ್ಮವೆಂದು ಅನ್ಯಥಾ ಭಾವಿಸಿ ಮಾಡಿದೆನೆ' ಎನ್ನುತ್ತ ಪ್ರಭುಗಳು ಮತ್ತೂ ಸಂಕಟಪಟ್ಟರು. ಒಳಗಿನ ಸಂಕಟ ಹೊರಗೆ ಬಾರದು. ಒಳಗೆ ತಡೆಯದು.

ರಾತ್ರಿ ಮೂರು ಜಾವವಾಯಿತು. ಒಂದೊಂದು ಘಳಿಗೆಯ ಕಾಲವೂ ಒಂದು ದೀರ್ಘ ಶೋಕಯುಗವಾಯಿತು ಪ್ರಭುಗಳಿಗೆ. ಬರುಬರುತ್ತ ಇನ್ನು ನಿಮಿಷಗಳನ್ನು ಕಳೆಯುವುದೂ ದುಸ್ಸಹವಾಯಿತು. ಪ್ರಭುಗಳ ಈ ಮೌನ ಸಂಕಟವನ್ನು ಕಂಡು, ಅಧಿಕಾರಿಗಳು ಭಯಪಟ್ಟುಹೋದರು. 'ಒಮ್ಮೆ ಅವರು ಅಯ್ಯೋ ಎನಬಾರದೆ? ಎರಡು ಹನಿಯಾದರೂ ಕಣ್ಣೀರು ಉದುರ ಬಾರದೆ? ಆ ಒಳಗಿನ ಭುಗಿಲು ಸ್ವಲ್ಪವಾದರೂ ಹೊರಮುಖವಾಗಬಾರದೆ? ಅವರ ಹೃದಯ ಛಿದ್ರವಾದರೆ ಏನು ಗತಿ? ಭಗವಂತ, ಇನ್ನೇನು ವಿಪತ್ತು?' ಎಂದು ತಮ್ಮತಮ್ಮೊಳಗೆ ಮಾತನಾಡಿಕೊಳ್ಳುತ್ತ ದುಃಖಪಟ್ಟರು.

ಇನ್ನೆರಡು ಘಳಿಗೆಯಾಯಿತು. ಪ್ರಭುಗಳು ಸಭಾಗೃಹದಲ್ಲಿ ಈಗ ಒಬ್ಬರೇ. ಅವರ ಮುಂದೆ ಆ ಎರಡು ಕಳೇಬರಗಳು. ಆಗ ಹೊರಗೆ ರಥಗಳು ಬಂದು ನಿಂತ ಶಬ್ದವಾಯಿತು. ಹೆಂಗಸರ ಆಕ್ರಂದನ ಧ್ವನಿ ಪ್ರಭುಗಳ ಕಿವಿಗೆ ಬಿದ್ದಿತು. ಸರ್ವಾಧಿಕಾರಿ ಅಂಜುತ್ತ ಅಂಜುತ್ತ ಒಳಕ್ಕೆ ಬಂದು; 'ಪ್ರಭೂ, ಅತ್ತೆಮಾವದಿರು, ಸೋವಲದೇವಿಯರು, ಅಮಾತ್ಯರುಗಳು' ಎಂದ. ಮನ ಸ್ಸೆಲ್ಲಿಯೋ ಇದ್ದ ಪ್ರಭುಗಳು ಕತ್ತೆತ್ತಿ ನೋಡಿದರು. ಸದ್ದು ಕೂಡದು

ಎಂದರ್ಥ ಬರುವಂತೆ ತಮ್ಮ ತುಟಿಯ ಮೇಲೆ ಬೆರಳಿಟ್ಟು ತೋರಿದರು. 'ಅಪ್ಪಣೆ' ಎನ್ನುತ್ತ ಸರ್ವಾಧಿಕಾರಿ ಹೊರಕ್ಕೆ ಹೋಗಿ ಪ್ರಭುಗಳ ಆಜ್ಞೆಯನ್ನು ಅವರಿಗೆ ಅರುಹಿದ.

ಕೈಜೋಡಿಸಿಕೊಂಡು ಅಮಾತ್ಯರುಗಳು ಮೊದಲು ಪ್ರವೇಶ ಮಾಡಿದರು. ಹಿಂದೆ ಮಾರಸಿಂಗಮಯ್ಯನವರು, ಮಾಚಿಕಬ್ಬೆ, ಸೋವಲೆ, ಸೋವಲೆಯ ತಾಯಿ ಪ್ರವೇಶಿಸಿದರು. ಪ್ರಭುಗಳು ಏಳಲಾರದವರಾಗಿ ಕುಳಿತ ಸ್ಥಳದಿಂದಲೆ ಅತ್ತೆ ಮಾವದಿರಿಗೆ ಕೈಮುಗಿದರು. ಆ ಕ್ಷಣವೆ ತಲೆ ತಗ್ಗಿಸಿಬಿಟ್ಟರು. ಬಂದವರು ಕಳೇಬರಗಳನ್ನು ಹತ್ತಿರ ಬಂದು ನೋಡಿದರು. ಪ್ರಭುಗಳ ಈ ಮೌನವನ್ನೂ ಆಜ್ಞೆಯನ್ನೂ ಕಂಡು ಇನ್ನಷ್ಟು ಭೀತರಾದರು. ದುಃಖ ಉಮ್ಮಳಿಸಿ ಉಮ್ಮಳಿಸಿ ಬಂದರೂ ಗೌರವಿಸಲೇಬೇಕಾದ ರಾಜಾಜ್ಞೆ ಇವರೆಲ್ಲರ ಮೇಲೆಯೂ ಕುಳಿತಿದ್ದಿತು. ಮಾರಸಿಂಗಮಯ್ಯ ಹತ್ತಿರಕ್ಕೆ ಬಂದು ಕುಳಿತು, ತನ್ನ ಹೃದಯ ಮಣಿ ಒಡೆದು ಚೂರಾಗಿರುವುದನ್ನು ಕಂಡರು. ನಡುಗುತ್ತಿದ್ದ ಕೈಗಳಿಂದ ಹಿಮದಂತೆ ತಣ್ಣಗಿದ್ದ ತಮ್ಮ ಮಗುವಿನ ಮುಖ, ನೆತ್ತಿ, ತಲೆಗಳನ್ನು ಸವರಿ 'ನನ್ನವ್ವ, ನಿನ್ನ ಶಾರದೆ ನಿನ್ನನ್ನು ಹೀಗೆ ಕರಸಿಕೊಂಡಳೆ? ಗಂಗಾಧರೇಶ್ವರನ ಮನೆಗೆ ಹೋದ ನಿನಗೆ ಈ ವಿಪತ್ತೆ?' ಎನ್ನುತ್ತ ಬಿಸಿ ಕಣ್ಣೀರನ್ನು ಬಸಿದರು. ಮಾಚಿಕಬ್ಬೆ ಒಮ್ಮೆ ಕುವರನನ್ನು ನೋಡಿದರು, ಒಮ್ಮೆ ಮಗಳನ್ನು ನೋಡಿದರು. ಮಗಳ ಮೈ ಮುಖ ಎಲ್ಲವನ್ನೂ ಮುಟ್ಟಿದರು, ತಡವಿದರು. 'ಅಕ್ಕನೂ ತಮ್ಮನೂ ಮಾತನಾಡಿಕೊಂಡೇ ಹೊರಟಿರೆ? ಯಾವ ದೇವರು ನಿಮಗೆ ಈ ಬುದ್ಧಿ ಕೊಟ್ಟ? ಯಾವ ಪುಣ್ಯವೂ, ಯಾರ ಧರ್ಮವೂ ಸಹಾಯ ಬರಲಿಲ್ಲವೆ? ಕಂದಗಳಿರಾ, ನಮ್ಮನ್ನು ಅನಾಥರನ್ನಾಗಿ ಹೀಗೆ ಮಾಡಿದಿರೆ? ಮೃತ್ಯು ಅಷ್ಟು ದೂರ ಕರೆದೊಯ್ದು ನಿಮ್ಮನ್ನು ನುಂಗಿತೆ?' ಎಂದು ಮಗಳನ್ನು ಮುಟ್ಟಿ ಅಲುಗಾಡಿಸುತ್ತ, 'ಏಳು ನನ್ನವ್ವೆ, ಏಳು ನನ್ನ ಕಂದ, ಏಳು. ಶಾರದೆಯ ಪೂಜೆಗೆ ವೇಳೆಯಾಯಿತು. ದೇಚ ಇದೋ ಸ್ನಾನಕ್ಕೆ ನೀರು ತೋಡಿ ಇಟ್ಟಿದ್ದಾನೆ. ಹೂಬಿಡಿಸಿ ಇಟ್ಟಿದ್ದಾನೆ. ಏಳು ನನ್ನವ್ವೆ, ಇದೊ ಅಯ್ಯ ಬಂದಿದ್ದಾರೆ. ಒಂದೇ ಬಾರಿ ಕಣ್ಣು ತೆರೆದು ನಮ್ಮನ್ನು ನೋಡು. ಮಗಳೆ, ನೀನು ಸತ್ತಿಲ್ಲ. ಇವರೆಲ್ಲ ಸುಳ್ಳು ಹೇಳುತ್ತಿದ್ದಾರೆ. ಎಬ್ಬಿಸಿರಿ ಇವಳನ್ನು . . . ಎಷ್ಟು ಹೊತ್ತು ನಿದ್ದೆ ಮಾಡುತ್ತಾಳೆ? ಲಕ್ಷ್ಮಿ ಬಂದಳಲ್ಲೆ. ನೋಡು ಲಕ್ಷ್ಮಿ, ಇನ್ನೂ ನಿದ್ದೆ

ಮಾಡುತ್ತಿದ್ದಾಳೆ ನಿನ್ನ ಅಕ್ಕ' ಎಂದು ಹತ್ತಿರಿದ್ದ ಸೋವಲೆಯನ್ನೇ ಲಕ್ಷ್ಮಿ ಯೆಂದು ಭಾವಿಸಿ ಮಾತನಾಡಿದರು, ಮಾಚಿಕಬ್ಬೆ. ಮಾಚಿಕಬ್ಬೆಯ ಬುದ್ಧಿ ಅವ್ಯವಸ್ಥವಾಯಿತು. ಮಾರಸಿಂಗಮಯ್ಯ ದುಃಖದಲ್ಲಿದ್ದರೂ ಅದನ್ನು ಅರಿತರು. ಇನ್ನು ಬುದ್ಧಿಭ್ರಮಣೆಯಾಗಬಹುದೆಂದು, ಉಪಾಯವಿಲ್ಲದೆ ಎದ್ದು, ಪತ್ನಿಯ ಕೈಹಿಡಿದುಕೊಂಡು ಎಬ್ಬಿಸಿ 'ಮಾಚಿ, ಇನ್ನು ಗದ್ದಲ ಮಾಡಿ ಮಗುವನ್ನು ಎಬ್ಬಿಸಬೇಡ. ಬಾ, ಎಚ್ಚರವಾದಾಗ ತಾನೇ ಏಳಲಿ, ಈಗ ಹೊತ್ತಾದುದೇನು? ನೋಡು ಇನ್ನೂ ಬೆಳಗಾಗಿಲ್ಲ' ಎನ್ನುತ್ತ ಪತ್ನಿಯನ್ನು ಉಪಾಯದಿಂದ ಎಬ್ಬಿಸಿ ಕೊಂಡು ಹೋಗಿ ತತ್‌ಕ್ಷಣವೆ ಶೈತ್ಯೋಪಚಾರಕ್ಕೆ ಮೊದಲುಮಾಡಿಸಿದರು.

ಅತ್ತೆಯವರಿಗೆ ಆದ ಈ ದುಃಖಪರಿಭ್ರಮೆಯನ್ನು ಕಂಡು, ಪ್ರಭುಗಳಿಗೆ ತಮ್ಮ ಹೃದಯದೊಳಕ್ಕೆ ಶೂಲಗಳು ಹೊಕ್ಕಂತಾದುವು. ತಲೆಯೆತ್ತಿ ನೋಡಿ ದರು: ಎದುರಿಗೆ ಸೌಭಾಗ್ಯವತಿ ಸೋವಲೆ ಮಹಾಸತಿಯ ಅಲಂಕಾರಗಳಿಂದ ಒಪ್ಪುತ್ತ ಮೌನವಾಗಿ ನಿಂತಿದ್ದಾಳೆ. ದೂರದಲ್ಲಿ ಮಂತ್ರಿಗಳೆಲ್ಲ ಅಧೋವದನ ರಾಗಿ ನಿಂತಿದ್ದಾರೆ. ಸೋವಲೆಗೆ ಧೈರ್ಯ ಬಂದಿತು. ಹೋಗಿ, ಕಳೇಬರಗಳ ನಡುವೆ ಮೊಣಕಾಲೂರಿ ಕುಳಿತಳು. ತನ್ನ ಅತ್ತೆಯವರ ಚರಣಗಳಿಗೆ ತಲೆಯಿಕ್ಕಿ ದಳು. ಉಂಗುಟಗಳನ್ನು ಕೈಯಿಂದ ಮುಟ್ಟಿ ಮುಟ್ಟಿ ಕಣ್ಣುಗಳಿಗೊತ್ತಿಕೊಂಡಳು. ಇದನ್ನು ಪ್ರಭುಗಳು ನೋಡುತ್ತಲೆ ಇದ್ದರು. ಅತ್ತೆಯ ಮುಖವನ್ನು ನೋಡಿ ದಳು. ಸೋವಲೆಯ ಕೊನೆಕಣ್ಣುಗಳಲ್ಲಿ ನೀರು ಹೊಳೆಯಿತು, ದೀಪದ ಬೆಳ ಕಿನಲ್ಲಿ ವಜ್ರಗಳಂತೆ; ಅನಂತರ ಪತಿಗೆ ಹೊದಿಸಿದ್ದ, ಈಗ ಕಾಲುಗಳ ಮೇಲಿದ್ದ ಹೊದಿಕೆಯನ್ನು ಈಚೆಗೆ ಎಳೆದಳು. ಪತಿಯ ಪಾದಗಳ ಮೇಲೆ ತನ್ನ ಮಸ್ತಕ ವನ್ನು ಇಟ್ಟಳು. ಸೋವಲೆಯ ಕಣ್ಣೀರು ಧಾರೆಧಾರೆಯಾಯಿತು. ಸದ್ದಿಲ್ಲ. ತನ್ನ ಪತಿಯ ಕೈಯನ್ನು ತೆಗೆದುಕೊಂಡು ತಲೆಯ ಮೇಲೆ ಇರಿಸಿಕೊಂಡಳು ಸೋವಲೆ. ತನ್ನ ಕೆನ್ನೆಗಳಿಗೆ, ಹಣೆಗೆ ಒತ್ತಿಕೊಂಡಳು, ತನ್ನ ಬಾಯಿಗೆ ಒತ್ತಿ ಕೊಂಡಳು, ಕಣ್ಣುಗಳಿಗೆ ಒತ್ತಿಕೊಂಡಳು, ಎದ್ದುನಿಂತಳು. ತನ್ನನ್ನು ಯಾರೂ ಕನಿಕರಿಸುವವರೇ ಇಲ್ಲವೆ! ಎಂದು ಸುತ್ತು ನೋಡಿದಳು. ತನ್ನನ್ನು ಹೆತ್ತ ತಾಯಿ ಅಪಾರವಾದ ಮೂಕಸಂಕಟದಿಂದ, ಅಧೋವದನರಾಗಿ ಬಹುದೂರ ಹೋಗಿ ಕುಳಿತುಬಿಟ್ಟಿದ್ದರು. ತಂದೆ ವೀರದೇವ ಅಮಾತ್ಯರೂ, ಹೇಮಾದ್ರಿಗಳೂ, ಅಚ್ಯುತ, ಗೋವಿಂದರೂ ದುಃಖದಿಂದ ಮೂಕರಾಗಿ, ಖಿನ್ನರಾಗಿ ಗೋಡೆ

ಗಳನ್ನೊರಗಿಕೊಂಡು ನಿಂತುಬಿಟ್ಟಿದ್ದರು. ಕೊರಳೆತ್ತಿ ಅಳುವುದಕ್ಕೆ ಯಾರಿಗೂ ಧೈರ್ಯವಿಲ್ಲ. ಸೋವಲೆಗೆ ಈಗ ಬೇಕಾದುದು ಸಹೃದಯದ ಕನಿಕರ. ಇದೆಲ್ಲ ವನ್ನೂ ಮೌನದಿಂದ ನೋಡುತ್ತಿದ್ದ ಪ್ರಭುಗಳ ಗಂಡೆದೆ ಕರಗಿ ಕಲಕಿ ಹೋಯಿತು. ಸೋವಲೆಯ ದುಃಖ ಪ್ರಭುಗಳ ಹೃದಯಸಂಕಟವನ್ನು ಮೀಟಿ ಮೇಲೆಬ್ಬಿಸಿಬಿಟ್ಟಿತು. ಪ್ರಭುಗಳು ಮಗಳ ಮುಖವನ್ನು ಅನುಕಂಪದಿಂದ ನೋಡಿದರು. 'ಅಪ್ಪಾಜಿ, ಅಪ್ಪಾಜಿ' ಎಂದು ಕೂಗುತ್ತ ಸೋವಲೆ ಪ್ರಭುಗಳ ಎದೆಗೆ ತೆಕ್ಕೆಬಿದ್ದು ಬಲವಾಗಿ ಹಿಡಿದುಕೊಂಡಳು. ಮಹಾ ಆಪತ್ತಿನಿಂದ ದೈವ ವಶಾತ್, ಅಕಸ್ಮಾತ್ ರಕ್ಷಣೆಯಾದ ಕಂದನನ್ನು ಹೆತ್ತ ತಾಯಿ ಬಾಚಿ ತನ್ನೆದೆಗೆ ಅಪ್ಪಿ ಹಿಡಿವಂತೆ ಪ್ರಭುಗಳ ಕೈಗಳು ಅವಳನ್ನು ದುಃಖದಿಂದ ಕುದಿಯುತ್ತಿದ್ದ ತಮ್ಮ ಹೃದಯಕ್ಕೆ ಅಪ್ಪಿಕೊಂಡವು. ಹೂವಿನಂತಹ ಎರಡು ಹೃದಯಗಳು ಒಂದರ ನೋವಿನೊಂದಿಗೆ ಒಂದು ಬೆರೆತವು. ಸೋವಲೆಯ ದುಃಖ ಈಗ ದನಿ ಕಂಡಿತು. ಅಲ್ಲಿಗೆ ಪ್ರಭುಗಳ ಸಂಯಮವೂ ಒಡೆದು ಚೂರುಚೂರಾಯಿತು. ಅಶ್ರುಪ್ರವಾಹಗಳು ಇಬ್ಬರ ಕಣ್ಣುಗಳಲ್ಲೂ ಪ್ರಳಯವಾಹಿನಿಗಳಂತಾದವು. ಈ ದುಃಖವು ಅಮಾತ್ಯರೆಲ್ಲರ ಕಣ್ಣಿಗೂ ಮತ್ತೆ ಹೊಸ ದುಃಖವನ್ನು ತಂದವು. ಹೆತ್ತ ತಂದೆ ವೀರದೇವ ಅಮಾತ್ಯರು ತಮ್ಮ ಪತ್ನಿ ಚಂದವ್ವೆಯನ್ನು ಸಮ ಧಾಯಿಸಲು ಹೋಗಿ ತಾವೇ ಕಣ್ಣೀರು ತೆಗೆದರು.

ಸೋವಲೆ ಪ್ರಭುಗಳನ್ನು ತನ್ನ ಹೆತ್ತ ತಂದೆಯೆಂದೇ ವಿಶ್ವಾಸದಿಂದ ಗಟ್ಟಿ ಯಾಗಿ ಕಟ್ಟಿಕೊಂಡು 'ಅಪ್ಪಾಜಿ, ಅಪ್ಪಾಜಿ' ಎನ್ನುತ್ತ ಬಿಕ್ಕಿ ಬಿಕ್ಕಿ ಅತ್ತಳು. ಸೋವಲೆ ಅದುವರೆಗೆ ಪ್ರಭುಗಳನ್ನು ಕರೆದವಳು ಅಲ್ಲ, ಮುಟ್ಟಿದವಳಲ್ಲ. ಪ್ರಭುಗಳಿಗೆ ಆ 'ಅಪ್ಪಾಜಿ' ಎಂಬ ಕೂಗಿನಲ್ಲಿ ಕುವರನ ಧ್ವನಿ ಇದ್ದಿತು, ಅವನ ಆತ್ಮದ ಕೂಗಿತ್ತು. ಪ್ರಭುಗಳು ಕುವರನನ್ನೂ ಸೋವಲೆಯನ್ನೂ ತಮ್ಮ ಮಕ್ಕಳೆಂದೇ ಎಣಿಸಿದ್ದರು. ಅತಿ ದುಃಖದಲ್ಲಿ, ಆಪತ್ತಿನಲ್ಲಿ, ವ್ಯತ್ಯಾಸ ಗಳು ಮಾಯವಾಗುತ್ತವೆ, ಹೃದಯಗಳು ಹಣ್ಣಾಗುತ್ತವೆ. ಪ್ರಭುಗಳು ಮಗು ವನ್ನು ಎದೆಗೆ ಅಪ್ಪಿಕೊಂಡು 'ಮಗುವೆ, ನನ್ನ ಮಗುವೆ, ಇದಕ್ಕಾಗಿಯೆ ಹುಟ್ಟಿದೆಯ!' ಎಂದು ಅತಿ ದುಃಖದಿಂದ ನುಡಿದರು. ಸೋವಲೆ ತನ್ನ ಕೈ ಗಳಿಂದ ಅಪ್ಪಾಜಿಯವರ ಕಣ್ಣೀರನ್ನು ಒರಸಿದಳು. ಆದರೆ ಅದು ನಿಲ್ಲುವುದೆ? ಪ್ರಭುಗಳ ಕಣ್ಣೀರು ಈಗ ಅವರ ಎದೆಯನ್ನೆಲ್ಲ ತೊಯಿಸಿತ್ತು. ಬಿಸಿಯುಸಿರು

ಒತ್ತಿದ ತಿದಿಯಿಂದ ಹೊರಬರುವ ಗಾಳಿಯಂತೆ ರಭಸದಿಂದ ಹೊರಸೂಸು ತ್ತಿತ್ತು. ಪ್ರಭುಗಳು 'ಮಗುವೆ, ಇದಕ್ಕಾಗಿಯೆ ಹುಟ್ಟಿದೆಯ!' ಎಂದ ಮಾತು ನಿಜವಾಯಿತು. ಸೋವಲೆ ಹಳದಿಯ ವಸ್ತ್ರಗಳನ್ನು ಉಟ್ಟಿದ್ದಳು. ಕೊರಳಲ್ಲಿ ಮಾಂಗಲ್ಯ ಮಾತ್ರವಿತ್ತು, ಪುಷ್ಪಮಾಲಿಕೆಯಿತ್ತು. ಕೈಯ ಮಣಿ ಕಟ್ಟುಗಳಲ್ಲಿ ಪುಷ್ಪವಲಯಗಳಿದ್ದುವು. ಬಿಚ್ಚಿದ ತಲೆಗೂದಲು, ಕಿವಿಗಳಲ್ಲಿ ಪುಷ್ಪಾಭರಣ. ಪ್ರಭುಗಳು ಮತ್ತೊಮ್ಮೆ ಸೋವಲೆಯನ್ನು ಆಪಾದಮಸ್ತಕ ನೋಡಿದರು. ತಾವು ಚಿಕ್ಕವರಾಗಿದ್ದಾಗ ಕುವರವಿಷ್ಣುವಿನ ತಾಯಿ ಚೆನ್ನಮ ದಂಡಾಧೀಶ್ವರರ ಪತ್ನಿ ಚಂದಲೆದೇವಿಯರು ತಾವು ಸತಿಯಾಗಿ ಪತಿಯ ಚಿತಾಗ್ನಿಗೆ ದೇಹವನ್ನರ್ಪಿಸಿಕೊಂಡಾಗ, ಎಂತಹ ಹೂವಿನ ಆಭರಣಗಳನ್ನು ಧರಿಸಿದ್ದರೊ, ಸೋವಲೆಯೂ ಅಂಥದೆ ಆಭರಣಗಳನ್ನು ಈಗ ಧರಿಸಿದ್ದಳು. ಕುತ್ತಿಗೆಯಲ್ಲಿ ಮಾಂಗಲ್ಯ ಮಾತ್ರ, ಹಣೆಯಲ್ಲಿ ಕುಂಕುಮ ಸೌಭಾಗ್ಯ. ಪ್ರಭು ಗಳಿಗೆ ಗುಕ್ಕು ಹಿಡಿದಂತಾಯ್ತು. 'ಸತಿ ಸೋವಲೆ!' ಎಂದರು. ಸೋವಲೆ ಹೌದೆಂದು ತಲೆಯಾಡಿಸಿದಳು. ತಾನು ಹಿಂದೆ ಕಟ್ಟಿಕೊಂಡಿದ್ದ ಸತಿಯ ಕಂಕಣವನ್ನು ಅಪ್ಪಾಜಿಯವರಿಗೆ ತೋರಿದಳು. ಅನಂತರ ತನ್ನ ಪತಿಯ ಕಳೇಬರವಿದ್ದಲ್ಲಿಗೆ ಹೋಗಿ ಪತಿಯ ಎರಡು ಕಾಲುಗಳನ್ನೂ ಪ್ರಭುವಿನ ದೃಷ್ಟಿಗೆ ಅಳವಡಿಸಿದಳು. ಪ್ರಭುಗಳು ಚಕಿತರಾಗಿ ನೋಡಿದರು. ಕುವರನ ಎರಡು ಕಾಲುಗಳಲ್ಲಿಯೂ ತೋಡಗಳು; ಒಂದು, ತಾವೇ ದಯಪಾಲಿಸಿದ್ದ 'ಗಂಡ ಪೆಂಡೇರ'; ಇನ್ನೊಂದು ಕಾಲಿಗೆ ಗರುಡರು ಮಾತ್ರವೇ ಧರಿಸತಕ್ಕ ತೋಡ. ಪ್ರಭುಗಳಿಗೆ ಬಿಟ್ಟಕಣ್ಣು ಬಿಟ್ಟಬಾಯಿ ಆಯಿತು. 'ಕುವರನು ಯಾವಾಗ ಗರುಡನಾದ? ಯಾರನ್ನು ಕೇಳಿದ? ಗರುಡನಾಗೆಂದು ಹೇಳಿದವರು ಯಾರು?' ಎಂದು ಅವರ ಮನಸ್ಸು ಪ್ರಶ್ನಿಸಿತು. ಸೋವಲೆ ಈಗ ಪ್ರಭುಗಳ ಬಳಿ ಬಂದು ನಿಂತಳು. ಪ್ರಭುಗಳು ಆ ಮಹಾಸತಿಯ ಕಾಲುಗಳನ್ನು ಮುಟ್ಟಿ ಕಣ್ಣಿಗೊತ್ತಿ ಕೊಂಡರು. ಸೋವಲೆ ಈಗ ಸರ್ವರಿಗೂ ಪೂಜನೀಯಳಾದಳು. 'ಆಗದಾಗದು ಅಪ್ಪಾಜಿ' ಎನ್ನುತ್ತ ಸೋವಲೆ ಪ್ರಭುಗಳ ಬಲಗೈಯನ್ನು ಹಿಡಿದೆತ್ತಿ ತನ್ನ ತಲೆಯ ಮೇಲಿಟ್ಟುಕೊಂಡಳು. 'ಅಪ್ಪಾಜಿ, ಇನ್ನು ಹೋಗಿಬರುತ್ತೇನೆ, ಅಪ್ಪಣೆ ಕೊಡಿ' ಎಂದು ಮಣಿದಳು. ಪ್ರಭುಗಳು ಕುಳಿತಿದ್ದಂತೆಯೆ 'ನಾರಾಯಣ, ನಾರಾಯಣ' ಎಂದು ಎರಡು ಸಾರಿ ಹೇಳಿ ತಲೆ ತಗ್ಗಿಸಿಕೊಂಡು ಕುಳಿತು

ಬಿಟ್ಟರು. ಸೋವಲೆ ಕಣ್ಣೀರನ್ನು ಸೆರಗಿನಿಂದ ಕಡೆಯ ಸಲ ಒರಸಿಕೊಂಡಳು. ಇನ್ನು ಆಕೆಗೆ ಕಣ್ಣೀರು ಕೂಡದು. ತನ್ನ ಪತಿಯ ಕಳೇಬರವನ್ನು ಎತ್ತಿಕೊಂಡು ಹೋಗಿ ತನ್ನ ರಥದಲ್ಲಿಡುವಂತೆ ಕೆಲಸದವರಿಗೆ ಆಜ್ಞಾಪಿಸಿದಳು. ಅನಂತರ ಹೇಮಾದ್ರಿಗಳಿಗೂ, ಅಚ್ಯುತ, ಗೋವಿಂದ ಅಮಾತ್ಯರುಗಳಿಗೂ ನಮಸ್ಕರಿಸಿ ದಳು. ಅವರು ಆ ಮಹಾಸತಿಗೆ ಪ್ರತಿನಮಸ್ಕಾರವನ್ನೇ ಮಾಡಿದರು. ಅನಂತರ ಮಾಚಿಕಬ್ಬೆಯನ್ನು ಕಾಣಲು ಹೋದಳು. ಮಾಚಿಕಬ್ಬೆಯವರಿಗೆ ಇನ್ನೂ ಪ್ರಜ್ಞೆ ಬಂದಿರಲಿಲ್ಲ. ಶೈತ್ಯೋಪಚಾರಗಳು ನಡದೇ ಇದ್ದವು. ಸೋವಲೆ ಮಾಚಿಕಬ್ಬೆಯ ಪಾದಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡಳು. ಮಾರಸಿಂಗ ಮಯ್ಯನವರಿಗೆ ನಮಸ್ಕರಿಸಿ, ಪ್ರತಿನಮಸ್ಕಾರಗೊಂಡು, ತಂದೆತಾಯಿಗಳನ್ನು ಕೂಡಿಕೊಂಡು ರಥವನ್ನು ಹತ್ತಿ ದ್ವಾರಾವತಿಗೆ ಹೊರಟುಹೋದಳು.

ಸ್ವಲ್ಪ ಕಾಲಾನಂತರ ಪ್ರಭುಗಳು ಕತ್ತೆತ್ತಿ ಅಮಾತ್ಯರನ್ನು ನೋಡಿ, ಬಳಿಗೆ ಬನ್ನಿರೆಂದು ಸಂಜ್ಞೆಮಾಡಿ ಕರೆದರು. ಪ್ರಭುಗಳು ದುಃಖಪೂರಿತರಾಗಿ 'ಇದು ನನ್ನ ಪುರಾಕೃತವೊ, ಅಥವಾ ವಿಧಿನಿಯಾಮಕವೊ, ನಾನು ಅನುಭವಿಸ ಬೇಕು. ಈಗ ನಾನು ಹೇಳುವುದನ್ನು ಇಷ್ಟು ನಡಸಿಬಿಡಿ. ಹೊರಗೆ ಇರುವವರೆಲ್ಲ ಅವರವರ ಸ್ಥಾನಗಳಿಗೆ ಹೋಗಿ, ಅಲ್ಲಿಯೆ ಇದ್ದುಕೊಂಡು ಈ ಎರಡು ಜೀವಗಳ ಶಾಂತಿಗಾಗಿ ದೈವವನ್ನು ಪ್ರಾರ್ಥಿಸಲಿ. ಒಬ್ಬ ಕಾವಲುಗಾರನು ಸಹ ಇಲ್ಲಿರು ವುದು ಬೇಡ. ದ್ವಾರಪಾಲಕರೂ ಬೇಡ. ಎಲ್ಲರೂ ಹೊರಟುಹೋಗಲಿ. ನೀವೆಲ್ಲ ಪ್ರಾರ್ಥನಾಗೃಹದಲ್ಲಿದ್ದುಕೊಂಡು ಈ ಜೀವಗಳಿಗಾಗಿ ಶಾಂತಿಪ್ರಾರ್ಥನೆ ಗಳನ್ನು ಸಲ್ಲಿಸಿರಿ. ನಾನು ಏನೊ ಘೋರ ಅಪರಾಧವನ್ನೆ ಮಾಡಿರುತ್ತೇನೆ. ಇದು ನನಗೆ ದೈವ ವಿಧಿಸಿರುವ ಶಿಕ್ಷೆ, ಅನುಭವಿಸಬೇಕು. ಅನುಭವಿಸುತ್ತೇನೆ. ಈಗ ನನ್ನ ಮೇಲೆ ದಯವಿಡಿ' ಎಂದರು.

ಅಮಾತ್ಯರು ಕಿವಿಗಳನ್ನು ಮುಚ್ಚಿಕೊಂಡು 'ಶಾಂತಂ ಪಾಪಂ' ಎಂದು, 'ಆಜ್ಞೆ ಪ್ರಭೂ, ಅಂತೆಯೆ ಮಾಡುವೆವು' ಎಂದು ಹೇಳಿ ಹೋಗಿ ರಾಜಾಜ್ಞೆ ಯನ್ನು ಸರ್ವರಿಗೂ ತಿಳಿಸಿದರು. ದ್ವಾರಪಾಲಕರು, ಕಾವಲಿನವರು ಸರ್ವರೂ ಹೊರಟುಹೋದರು. ಈಗ ಅರಮನೆಯೆ ಜನಶೂನ್ಯವಾದಂತೆ ಕಂಡಿತು. ಸಭಾ ಗೃಹದಲ್ಲಿ ಪ್ರಭುಗಳೊಬ್ಬರೆ. ಅವರ ಮುಂದೆ ಶಾಂತಲೆಯ ಕಳೇಬರ.

ಮಧ್ಯರಾತ್ರಿಗೆ ಇನ್ನೆರಡು ಗಳಿಗೆ ಹೊತ್ತಿದ್ದಿತು. ಪ್ರಭುಗಳು ಎದ್ದು

ಬಂದು ಶಾಂತಲೆಯ ಕಳೇಬರದ ಬಳಿ ಕುಳಿತರು. ಮೈಯೆಲ್ಲ ಮುಟ್ಟಿ ಮುಟ್ಟಿ ನೋಡಿದರು. ಗಾಯವಾಗಿ ಅಲ್ಲಲ್ಲಿ ರಕ್ತಸ್ರಾವವಾಗಿ ಬಟ್ಟೆಯ ಮೇಲೆ ರಕ್ತದ ಕಲೆಗಳಿದ್ದವು. ಪ್ರಭುಗಳಿಗೆ ಆಗ ತಮ್ಮ ಮೈಯೇ ಛಿದ್ರಛಿದ್ರವಾದಂತೆ ನೋವಾಯಿತು, ಬಹು ಸಂಕಟವಾಯಿತು. ದೇವಿಯ ಕೈಗಳನ್ನು ತಮ್ಮ ಕೈಗೆ ತೆಗೆದುಕೊಂಡು ಕಣ್ಣೀರು ಸುರಿಸುತ್ತ ನೋಡಿದರು. ಎಣಿಕೆಯಿಲ್ಲದ ಪೂಜೆ, ನೋಂಪಿ, ದಾನಧರ್ಮಗಳನ್ನು ಮಾಡಿದ ಕೈಗಳವು. ತಮ್ಮನ್ನು ಆದರಿಸಿ, ಸತ್ಕರಿಸಿ, ಮುಟ್ಟಿ, ತಣಿಸಿ, ಸೊದೆಗರೆದ ಕೈಗಳು ಅವು. ಈಗ ತಣ್ಣಗಾಗಿವೆ, ಕಟ್ಟಿಗೆಯಾಗಿವೆ. ಪ್ರಭುಗಳು ಆ ಕೈಗಳನ್ನು ಬಹಳ ಹೊತ್ತು ತಮ್ಮ ಕಣ್ಣುಗಳಿಗೆ ಒತ್ತಿಹಿಡಿದುಕೊಂಡಿದ್ದರು. ಇನಿಯಳ ಮುಖವನ್ನು ನೋಡಿದರು. ಸೌಂದರ್ಯದ, ಸೌಭಾಗ್ಯದ, ಸೌಶೀಲ್ಯದ, ಸುಹಾಸದ, ಸುವಚನಗಳ ಆ ನೆಲೆವೀಡು ಈಗ ವಿವರ್ಣ, ವಿಕಾರ, ಭಯಂಕರ. ಧಾರಾಪೂರ್ವಕವಾಗಿ ಹರಿಯುತ್ತಿದ್ದ ಪ್ರಭುಗಳ ಕಣ್ಣೀರು ಈಗ ಪ್ರಭುಗಳ ಬೇಯುತ್ತಿರುವ ಎದೆಯನ್ನು ತಣಿಸಲೋಸುಗ ಪ್ರಯತ್ನಿಸುತ್ತಿದೆಯೋ ಎನ್ನಿಸಿತು. ಅಮೃತಮಯವಾಗಿರುತ್ತಿದ್ದ ದೇವಿಯ ಕಣ್ಣನ್ನು ಬಿಡಿಸಿ ನೋಡಿದರು. ನೋಡುತ್ತಿದ್ದಂತೆ ಪ್ರಭುಗಳ ತಲೆ ಬೆಚ್ಚಗಾಯಿತು. ಶಾಂತಲೆ ತಮ್ಮನ್ನು ನೋಡಿದಂತಾಯ್ತು. ಹಿತವಾಗಿ ಕರೆದಂತೆ ಆಯಿತು. ಸ್ವಲ್ಪಕಾಲ ಎವೆಯಿಕ್ಕದೆ ಕಳೇಬರದ ಮುಖವನ್ನು ನೋಡಿದರು. ಪ್ರಭುಗಳ ಮನಸ್ಸಿಗೆ ಏನು ಹೊಳೆಯಿತೊ! ಏನು ಅರ್ಥವಾಯಿತೊ! ತತ್ಕ್ಷಣವೆ ಅಲ್ಲಿಂದ ಎದ್ದು ಹೊರಬಾಗಿಲಿಗೆ ನಡೆದರು. ಅಲ್ಲಿ ಯಾರೂ ಇರಲಿಲ್ಲ. ಮಹಾದ್ವಾರದ ಬಳಿಗೆ ಹೋದರು. ಅಲ್ಲಿಯೂ ಯಾರೂ ಇರಲಿಲ್ಲ. ಉರಿಯುತ್ತಿದ್ದ ಪಂಜುಗಳು ಮಾತ್ರ ಎರಡು ಕಡೆಗಳಲ್ಲೂ ಹಿಡಿಕೆಯಲ್ಲಿ ನಿಲ್ಲಿಸಲ್ಪಟ್ಟಿದ್ದವು. ಕಳೇಬರಗಳನ್ನು ಶಿವಗಂಗೆಯಿಂದ ಹೊತ್ತು ತಂದ ರಥ ಅಲ್ಲಿಯೇ ಇತ್ತು. ಅದಕ್ಕೆ ಹೂಡಿದ್ದ ಕುದುರೆಗಳು ಮೇವು ನೀರುಗಳನ್ನು ಮುಗಿಸಿ ಹಾಗೆಯೆ ನಿಂತಿದ್ದವು. ಪ್ರಭುಗಳು ಒಳಕ್ಕೆ ಹೋಗಿ, ಉರಿಯುತ್ತಿದ್ದ ದೀಪ ಒಂದನ್ನು ತಂದು ರಥದ ಮೇಲಿಟ್ಟರು. ಪುನಃ ಒಳಕ್ಕೆ ಹೋಗಿ, ಶಾಂತಲೆಯ ಕಳೇಬರವನ್ನು ಹೊದಿಸಿದ್ದ ದುಕೂಲದೊಂದಿಗೆ ತಂದು ರಥದ ಮೇಲಿಟ್ಟರು. ಅದು ಅಲುಗಾಡಿ ಹೊರಳಿ ಬೀಳದಂತೆ, ಸುತ್ತಿದ್ದ ದುಕೂಲವನ್ನೇ ಪೀಠಕ್ಕೆ ಚೆನ್ನಾಗಿ ಬಿಗಿದರು. ದ್ವಾರಪಾಲಕರು ಇಟ್ಟುಹೋಗಿದ್ದ ಪಂಜುಗಳೆರಡನ್ನೂ ರಥದ ಎರಡು ಕಡೆಯ ಕಂಬಗಳಿಗೆ

ಬಿಗಿದು ಕಟ್ಟಿದರು. ಅಲ್ಲಿಯೆ ಪಾತ್ರೆಯಲ್ಲಿ ಎಣ್ಣೆಯಲ್ಲಿ ಚೆನ್ನಾಗಿ ನೆನೆಸಿಟ್ಟಿದ್ದ ಬಟ್ಟೆಯ ಪಂಜುಬಳೆಗಳನ್ನು ಆ ಪಾತ್ರೆಯೊಡನೆ ರಥದಲ್ಲಿರಿಸಿಕೊಂಡರು. ಸಾರಥಿಯ ಸ್ಥಾನದಲ್ಲಿ ತಾವೇ ಕುಳಿತು, ಕುದುರೆಗಳ ಕಡಿವಾಣದ ರಜ್ಜುಗಳನ್ನು ಕೈಗೆ ತೆಗೆದುಕೊಂಡರು. ಚಾವಟಿಯಿಂದ ಕುದುರೆಗಳನ್ನು ಎಚ್ಚರಿಸಿ, ರಥವನ್ನು ಶಿವಗಂಗೆಯ ಕಡೆಗೆ ತಿರುಗಿಸಿ, ಅತಿ ವೇಗದಿಂದ ನಡಸಿಕೊಂಡು ಹೋದರು.

# ಮೂರನೆಯ ಭಾಗ

೧

ಪ್ರಭುಗಳು ರಥವನ್ನು ಬಹು ವೇಗದಿಂದ ನಡಸುತ್ತಿದ್ದರು. ರಾತ್ರಿಯ ವೇಳೆಯಾದುದರಿಂದ ಮಾರ್ಗದಲ್ಲಿ ಇತರ ವಾಹನಗಳ ಸಂಚಾರವಾಗಲಿ ಮನುಷ್ಯರ ಸಂಚಾರವಾಗಲಿ ಇರಲಿಲ್ಲ. ರಥಕ್ಕೆ ಹೂಡಿದ್ದ ಕುದುರೆಗಳು ಚೆನ್ನಾಗಿ ಪಳಗಿದ್ದವು, ವೇಗಗಾಮಿಗಳು, ಆ ಮಾರ್ಗಪರಿಚಯ ಅವುಗಳಿಗೆ ಚೆನ್ನಾಗಿ ಆಗಿತ್ತು. ಪ್ರಭುಗಳು ನೆಪಮಾತ್ರಕ್ಕೆ ಕುದುರೆಯ ಕಡಿವಾಣದ ಪಟ್ಟಿಗಳನ್ನು ಹಿಡಿದಿದ್ದರು. ಅವರ ಮನಸ್ಸು ದುಃಖದಿಂದ ತುಂಬಿತ್ತು. ದುಃಖಾತಿರೇಕದಲ್ಲಿ ಅವರು ಈ ಪ್ರಪಂಚವನ್ನೇ ಮರೆತಿದ್ದರು, 'ತಾನು ಏನು ಮಾಡುತ್ತಿದ್ದೇನೆ! . . . ಮಾಡುತ್ತಿರುವುದು ಸರಿಯೇ?' ಎಂಬ ವಿಚಾರವೆ ಆಗ ಬರಲಿಲ್ಲ. ಮನಸ್ಸು ಮಾತ್ರ ಯಾವುದೊ ಒಂದು ನಿರ್ಧಾರದ ಮೇಲೆ ಸ್ಥಿರವಾಗಿ ನಿಂತುಬಿಟ್ಟಿದ್ದಿತು. ಅದರ ಸಾಧ್ಯಾಸಾಧ್ಯಗಳ ತರ್ಕ ಆಗ ಅವರ ಮನಸ್ಸಿಗೇ ಹೊಳೆಯಲಿಲ್ಲ.

ವೇಗವಾಗಿ ಹೋಗುತ್ತಿದ್ದ ರಥದ ಶಬ್ದ ದೂರಕ್ಕೆ ಮುಂಗಾರಿನ ಗುಡುಗಿನಂತೆ ಆ ರಾತ್ರಿಯಲ್ಲಿ ಕೇಳಬರುತ್ತಿತ್ತು. ರಾಜರಥಕ್ಕೆ ಮಾತ್ರವೆ ಕಟ್ಟುತ್ತಿದ್ದ ಗಂಟೆಗಳ ಶಬ್ದವನ್ನು ಕೇಳಿ ಮೊದಲ ಹರಿದಾರಿಯ ಕೊನೆಯಲ್ಲಿ ರಾಜಮಾರ್ಗದ ಒಂದು ಪಾರ್ಶ್ವದಲ್ಲಿಯೆ ಸ್ಥಾಪಿತನಾಗಿದ್ದ ಕುದುರೆಯ ಕಾವಲುಗಾರ—ನಿದ್ದೆ ಮಾಡುತ್ತಿದ್ದವನು—ಬೆಚ್ಚಿಬಿದ್ದು ಎದ್ದು ಕುಳಿತ. ಶಬ್ದವನ್ನು ಆಲಿಸಿ ಕೇಳಿದ. ಬರುಬರುತ್ತ ಶಬ್ದ ಸ್ಫುಟವಾಯಿತು. ಇದು ರಾಜರಥವೆ ಇರಬೇಕೆಂದು ದೃಢವಾಯಿತು. 'ಸಂಜೆ ವೇಲಾಪುರಕ್ಕೆ ಹೋದ ರಥ ಇಷ್ಟು ಬೇಗ ಹಿಂದಿರುಗಿತೇಕೆ!' ಎಂದು ಆಶ್ಚರ್ಯಪಟ್ಟ. 'ಈ ವೇಳೆಯಲ್ಲಿ!' ಎನ್ನುತ್ತ ಅವನು ತಟ್ಟನೆ ಎದ್ದು ತನ್ನ ರಕ್ಷಣೆಯಲ್ಲಿ ಕಟ್ಟಿದ್ದ ಕುದುರೆಗಳೆರಡನ್ನೂ ಬಿಚ್ಚಿ ಹಿಡಿದುಕೊಂಡು ಬಂದು ರಾಜಮಾರ್ಗದಲ್ಲಿ ನಿಲ್ಲಿಸಿಕೊಂಡ. ಅಲ್ಲಿ ಒಂದು ಗಾವುದ ಸೂಚಿಸುವ ಸುಣ್ಣ ಬಳಿದಿದ್ದ ದೊಡ್ಡದಾದ ಅಡ್ಡಮರದ ಗುರುತು ಇತ್ತು. ವೇಗವಾಗಿ ಬರುತ್ತಿದ್ದ ರಥ ಎರಡು ವಿಘಳಿಗೆಯೊಳಗೆ ಅಲ್ಲಿಗೆ ಬಂದು ನಿಂತಿತು.

'ಇವನು ಪರಿಚಿತನಾದ ರಥ ನಡಸುವವನಲ್ಲವಲ್ಲ! ಇವನು ಯಾರು? ರಥವನ್ನು ಇಷ್ಟು ವೇಗವಾಗಿ ನಡಸುತ್ತಿರುವವನು?' ಎಂದು ಕಾವಲಿನವನು ಆಶ್ಚರ್ಯ ಕುತೂಹಲಗಳಿಂದ ನೋಡಿದ. ಪ್ರಭುಗಳು ಅವನನ್ನು ಕಂಡು 'ನಾವು, ನಿನ್ನ ಪ್ರಭುಗಳು. ಈ ಕುದುರೆಯನ್ನು ಬೇಗ ಬಿಚ್ಚಿ ಹೊಸ ಅಶ್ವಗಳನ್ನು ಹೂಡು' ಎಂದರು. ಕಾವಲಿನವನು ಪ್ರಭುಗಳನ್ನು ಕಂಡು ಅಂಜಿದ, ನಡುಗುತ್ತ ಅಡ್ಡಬಿದ್ದ. 'ಅಂಜಬೇಡ, ಹೇಳಿದುದನ್ನು ಬೇಗ ಮಾಡಿ ಮುಗಿಸು' ಎಂದರು ಪ್ರಭುಗಳು. ಕಾವಲಿನವನು ಮರುಮಾತಾಡದೆ ಕುದುರೆಗಳನ್ನು ಬಿಚ್ಚಿ ಹೊಸ ಕುದುರೆಗಳನ್ನು ರಥಕ್ಕೆ ಹೂಡಿದ. ರಥದ ಗಾಲಿಗಳ ಅಕ್ಷಕ್ಕೆ ಕೀಲೆಣ್ಣೆಯನ್ನು ಇಟ್ಟ. ಉರಿದುಹೋಗಿದ್ದ ಪಂಜುಗಳ ಬತ್ತಿಗಳನ್ನು ನೆಲಕ್ಕೆ ಕೆಡವಿ ಹೊಸ ಬತ್ತಿಬಳೆಗಳನ್ನು ಹಾಕಿದ. ಅಷ್ಟರಲ್ಲಿ ಪ್ರಭುಗಳು ಶಾಂತಲೆಯ ಕಳೇಬರವನ್ನು ರಥದ ಪೀಠಕ್ಕೆ ಭದ್ರಮಾಡಿದ್ದ ಕಟ್ಟುಗಳನ್ನು ಪರಿಶೀಲನೆ ಮಾಡಿ, ಎಲ್ಲವೂ ಸರಿಯಾಗಿರುವುದನ್ನು ಕಂಡರು. ರಥ ಮುಂದಕ್ಕೆ ಹೊರಟಿತು. ನಿದ್ದೆಗಣ್ಣಿನಲ್ಲಿದ್ದ ಆ ಕುದುರೆಗಳು ಚಾವಟಿಯ ಶಬ್ದದಿಂದ ಚುರುಕುಗೊಂಡವು. ಕುದುರೆಗಳೂ ವೇಗಶಾಲಿಗಳು; ರಥ ನಡಸುತ್ತಿದ್ದವರು ಅಶ್ವಹೃದಯವನ್ನು ಬಲ್ಲ ಪ್ರಭುಗಳು. ಇನ್ನು ವೇಗಕ್ಕೆ ಏನು ಕೊರತೆ?

ಶಿವಗಂಗೆಯ ಕಡೆಗೆ ಹೊರಟಿದ್ದ ಈ ರಥ ಮೊದಲ ಗಾವುದವನ್ನು ದಾಟಿ ಎರಡನೆಯ ಗಾವುದದ ಅರ್ಧದೂರವನ್ನು ಮುಟ್ಟುತ್ತಿದ್ದಾಗ ವೇಲಾಪುರಿಯಿಂದ ದ್ವಾರವತಿಗೆ ಹೊರಟಿದ್ದ ಸೋವಲೆದೇವಿಯ ರಥ ರಾಜಧಾನಿಯನ್ನು ಸೇರಿತು. ರಥದ ಹಿಂಭಾಗದಲ್ಲಿ ಸೋವಲೆಯ ತಾಯಿತಂದೆಯರು ದುಃಖಪೂರಿತಹೃದಯರಾಗಿ ಮೌನದಿಂದ ಕುಳಿತಿದ್ದರು. ಸೋವಲೆದೇವಿ ರಥದ ಮುಂಭಾಗದಲ್ಲಿ ತನ್ನ ಸ್ವಾಮಿಯ ಕಳೇಬರವನ್ನು ತನ್ನೊಡನೆ ಇಟ್ಟುಕೊಂಡು, ಎರಡು ಕೈಗಳಿಂದಲೂ ಅದನ್ನು ಹಿಡಿದುಕೊಂಡು ಕುಳಿತಿದ್ದಳು. ಕಣ್ಣಲ್ಲಿ ನೀರಿಲ್ಲ. ಸೋವಲೆ ತನ್ನ ಸ್ವಾಮಿಯೊಡನೆ ಬಾಳಿದ ಕಾಲ ಬಹು ಸ್ವಲ್ಪ. ಅದು ಸೋವಲೆಗೆ ಈಗ ಕ್ಷಣಿಕ ಸುಖಸ್ವಪ್ನದಂತೆ ಆಯಿತು. ತನ್ನ ಸ್ವಾಮಿ ಅಳಿದ ದುಃಖ, ಹೊಯಿಸಳ ರಾಜ್ಯಲಕ್ಷ್ಮಿ ಶಾಂತಲೆ ಅಳಿದ ದುಃಖ, ಈ ಎರಡು ದುಃಖಗಳನ್ನೂ ಅದುಮಿ ಹಿಡಿದು ಕುಳಿತಿದ್ದಳು ಸೋವಲೆ. 'ನನ್ನ ದುಃಖಕ್ಕಿಂತ ಅಪ್ಪಾಜಿಯವರ ದುಃಖ ಅಪಾರವಲ್ಲವೆ! ಈ ಮಹಾ ವಿಪತ್ತನ್ನು ಅವರು ಹೇಗೆ ಸಹಿಸಿಕೊಂಡಾರು?

ಲೋಕೋತ್ತರನಾದ ಮಗ, ಲೋಕೋತ್ತರಳಾದ ಹೆಂಡತಿ ಇಬ್ಬರೂ ಒಂದೇ ದಿನ ಒಟ್ಟಿಗೆ ಆಕಸ್ಮಿಕ ಮರಣಕ್ಕೆ ಗುರಿಯಾದರಲ್ಲ! ಈ ದುಃಖಸ್ಥಿತಿಯನ್ನು ಯಾವ ಮಹಾನುಭಾವನೆ ಆಗಲಿ ಹೇಗೆ ತಡೆದುಕೊಳ್ಳಬಲ್ಲ! ಅಪ್ಪಾಜಿಗಳು ಇದನ್ನು ಹೇಗೆ ಸಹಿಸಬಲ್ಲರು!' ಎಂದು ಯೋಚಿಸಿದಳು ಆ ಸಾಧ್ವಿ. ತನ್ನ ದುಃಖ ಅಷ್ಟು ದೊಡ್ಡದಾದರೂ, ಆ ಸಮಯದಲ್ಲಿ ಇನ್ನೊಬ್ಬರ ದುಃಖ ತನ್ನದಕ್ಕಿಂತಲೂ ಹೆಚ್ಚಿನದು ಎಂದು ತಿಳಿದಳು. 'ಈ ಭೂಮಿ ಪುಣ್ಯಭೂಮಿಯಲ್ಲ; ಪಾಪಶೇಷವೊ ಪುಣ್ಯಶೇಷವೊ ಯಾವುದೊ ಕರ್ಮಶೇಷವನ್ನು ತೀರಿಸಿಕೊಳ್ಳುವುದಕ್ಕೆ ಆತ್ಮಗಳು ಇಲ್ಲಿಗೆ ಬರುವುವು. ಅಕ್ಕ ಕಾಲುಜಾರಿ ಬಿದ್ದುದನ್ನು ಕಂಡು ತಡೆಯಲಾರದ ದುಃಖದಿಂದ ದೇಹತ್ಯಾಗವನ್ನು ಮಾಡಿದ ನನ್ನ ಸ್ವಾಮಿಯೆ ಮುಕ್ತ. ಧನ್ಯತೆ ಪಡೆಯಿತು ಆತನ ಆತ್ಮ. ಅಕ್ಕನೊಡನೆ ನಾನೂ ಶಿವಗಂಗೆಗೆ ಹೋಗಿದ್ದರೆ ಚೆನ್ನಾಗಿರುತ್ತಿತ್ತು. ನಾನೂ ನನ್ನ ಸ್ವಾಮಿಯನ್ನು ತತ್‌ಕ್ಷಣವೆ ಅನುಸರಿಸುತ್ತಿದ್ದೆ . . . ನನ್ನ ಸ್ವಾಮಿ ಹೋಗುವುದಕ್ಕೆ ಮುನ್ನ ನನ್ನ ನೆನಪು ಒಂದುವೇಳೆ ಬಂದಿದ್ದರೆ ಏನುಗತಿ! ಅಥವಾ ಬಂದಿದ್ದರೂ ನಾನು ಒಡನೆಯೆ ಬರುವವಳೆಂದೇ ಅವರು ತಮ್ಮ ಕರ್ತವ್ಯವನ್ನು ನಿರ್ಧರಿಸಬೇಕು. ನನ್ನ ಸ್ವಾಮಿ ನನ್ನನ್ನು ಚೆನ್ನಾಗಿ ಬಲ್ಲವರು. ಆದಷ್ಟು ಬೇಗನೆ ನನ್ನ ಸ್ವಾಮಿಯನ್ನು ಸೇರಿಕೊಳ್ಳಬೇಕು. ನನಗಾಗಿ ಅವರು ಎಷ್ಟು ಹೊತ್ತು ಕಾಯುವುದು? ಅವರನ್ನು ಎಷ್ಟು ಬೇಗ ಕಂಡೇನು! ಇನ್ನು ನಮಗೆ ಈ ಪಾಪಭೂಮಿಯ ಸೋಂಕೇ ತಪ್ಪಿತು' ಎಂದು ಸೋವಲೆ ಒಂದು ವಿಧವಾಗಿ ಉತ್ಸಾಹಿಯಾದಳು. ತನಗೂ ತನ್ನ ಸ್ವಾಮಿಗೂ ತನ್ನ ಅತ್ತೆಗೂ ಇನ್ನು ಶಾಶ್ವತವಾದ ಪುಣ್ಯಲೋಕಗಳೆ ಕಾದಿರುವುವೆಂದು ಆ ಮುಗ್ಧೆಗೆ ಪೂರ್ಣ ನಂಬಿಕೆ ಇತ್ತು.

ಆಕೆಯ ರಥ ಪತಿಗೃಹವನ್ನು ಸೇರಿ ನಿಂತಿತು. ಆ ವೇಳೆಗೆ ಆ ಅವೇಳೆಯಲ್ಲೂ ಹತ್ತಿರದ ಗ್ರಾಮಗಳಿಂದ ಸೋವಲೆಯ ಬಂಧುಬಾಂಧವರೂ ಬಂದಿದ್ದರು. ಎಲ್ಲರೂ ದುಃಖಪಡುತ್ತ ರಥದ ಸುತ್ತ ಬಂದು ನೆರೆದರು.

ಅತ್ತ ವೇಲಾಪುರಿಯಲ್ಲಿ ಇಷ್ಟು ಹೊತ್ತು ಶೈತ್ಯೋಪಚಾರಗಳು ನಡೆದಿದ್ದರೂ ಮಾಚಿಕಬ್ಬೆಗೆ ಪ್ರಜ್ಞೆ ಬಂದಿರಲಿಲ್ಲ. ವಯಸ್ಸಾಗಿದ್ದ ಆಕೆಗೆ ಈ ದುರ್ಭರ ದುಃಖದಿಂದ ಮಿದುಳಿನ ಒಂದು ಭಾಗಕ್ಕೆ ರಕ್ತೋದ್ರೇಕ ಉಂಟಾಗಿದ್ದಿತು. ಇಂದ್ರಿಯಗಳ ಸ್ವಾಧೀನತೆ ಲೋಪವಾಗಿತ್ತು. ಅಂಗಾಂಗಗಳ ಸಂಕುಚನ

ಪ್ರಕುಚನಗಳೂ ನಿಧಾನವಾಗಿದ್ದವು. ಹೃದಯಗತಿಯೂ ಮಂದವಾಗಿತ್ತು. ಶ್ವಾಸೋಚ್ಛ್ವಾಸಗಳು ಮಾತ್ರ ನಿಂತಿರಲಿಲ್ಲ. ಚಿಕ್ಕಂದಿನಿಂದ ಯಾವುದೊಂದು ದುರ್ದಶೆಯನ್ನಾಗಲಿ ಪೀಡೆಯನ್ನಾಗಲಿ ಅರಿಯದೆ ಮಂಗಳದಲ್ಲಿ ಬೆಳೆದ ಮನಸ್ಸು ಆಕೆಯದು. ಈಗ ಹೀಗೆ ಅಕಸ್ಮಾತ್ ಸಂಭವಿಸಿದ ಮಗಳ ಮರಣಕ್ಕೆ ಆ ತಾಯಿ ಮನಸ್ಸು ತೀರ ಜರ್ಜರಿಸಿಹೋಯಿತು. ಪತಿ ಮಾರಸಿಂಗಮಯ್ಯ ಹತ್ತಿರದಲ್ಲೆ ಕುಳಿತಿದ್ದರು. ಸ್ತ್ರೀಕುಲಕ್ಕೇ ಮುಕ್ತಾಮಣಿಯಂತಿದ್ದ ಮಗಳು ಈ ದುರ್ಮ್ರರಣಕ್ಕೆ ತುತ್ತಾದ ದುಃಖ ಒಂದೆಡೆ, ಪ್ರಭುಗಳ ಮನಸ್ಸನ್ನು ದಾವಾಗ್ನಿಯಂತೆ ಸುಡು ತ್ತಿರುವ ದುಃಖ ಹೇಗೆ ಪರ್ಯವಸಾನ ಹೊಂದುವುದೊ ಎಂಬ ಭೀತಿ ಒಂದು ಕಡೆ, ಇಷ್ಟು ಶುಶ್ರೂಷೆ ನಡೆದರೂ ಪತ್ನಿಯ ಮೂರ್ಛೆ ತಿಳಿದು ಏಳಲಿಲ್ಲವಲ್ಲ! ಇನ್ನೇ ನಾಗುವುದೋ! ಎಂಬ ಭಯ ಬೇರೆ. ಈ ಎಲ್ಲ ಭಯ ದುಃಖಗಳೂ ಏಕಕಾಲ ದಲ್ಲಿ ಕೂಡಿ ಆ ವೀರನ ಬುದ್ಧಿಚೈತನ್ಯಗಳನ್ನೂ ತೀರ ಉಡುಗಿಸಿದ್ದುವು. ಅವರ ಮುಖದಲ್ಲಿ ನಿರಾಶೆಯ ಚಿಹ್ನೆ ಮೂಡಿತ್ತು. ನಿಸ್ತೇಜರಾಗಿ, ನಿರ್ಬಲರಾಗಿ 'ಶಿವನೇ ಗತಿ' ಎಂದು ಅಧೋವದನರಾಗಿ ಕುಳಿತುಬಿಟ್ಟದ್ದರು. ತಮಗೆ ತಿಳಿದಿದ್ದ ಎಲ್ಲ ಉಪಾಯಗಳನ್ನೂ ಮಾಡಿ ನಿಷ್ಫಲರಾಗಿದ್ದರು.

ರಾಜಧಾನಿಯಲ್ಲಿ ಸೋವಲೆಯ ಬಂಧುಬಾಂಧವರೆಲ್ಲರೂ ಕುವರವಿಷ್ಣು ವಿನ ಕಳೇಬರವನ್ನು ಕಂಡು ಘೋರವಾಗಿ ದುಃಖಿಸಿದರು. ಇವರ ದುಃಖದ ಧ್ವನಿಗಳಿಗೆ ರಾಜಧಾನಿ ಎಚ್ಚರಗೊಂಡಿತು. ಕುವರವಿಷ್ಣು, ಶಾಂತಲಾ ಮಹಾ ರಾಣಿ ಇವರ ಸಾವಿನ ಸುದ್ದಿ ಕಿಚ್ಚಿನಷ್ಟೇ ಬೇಗೆಯಿಂದ ವೇಗದಿಂದ ರಾಜಧಾನಿ ಯಲ್ಲೆಲ್ಲ ಹರಡಿತು. ಮಹಾರಾಣಿ ಶಾಂತಲಾದೇವಿ ಶಿವಗಂಗೆಯ ಬೆಟ್ಟದ ಶಿಖರದಿಂದ ಕಾಲುಜಾರಿ ಬಿದ್ದು ಸತ್ತರೆಂದೂ, 'ಅಕ್ಕ ಸತ್ತಳಲ್ಲಾ!' ಎಂಬ ದುಃಖದಿಂದ ಒಡನೆ ಕುವರರೂ ಗಿರಿಶಿಖರದಿಂದ ಹಾರಿ ಪ್ರಾಣಬಿಟ್ಟರೆಂದೂ ಸುದ್ದಿ ಹರಡಿತು. ಕುವರವಿಷ್ಣುವು ಯಾರಿಗೂ ತಿಳಿಸದೆ ತಾವು ಗರುಡರಾಗಿದ್ದ ರೆಂದೂ, ಅದೇ ದಿನವೆ ಸೋವಲೆ ತಾನು 'ಸತಿ'ಯ ಕಂಕಣ ಧರಿಸಿದಳೆಂದೂ ಕುವರವಿಷ್ಣು ಗರುಡನಾಗಿದ್ದುದನ್ನು ಕಂಡು ಅವನ ಸೈನ್ಯದಲ್ಲಿನ ಆರು ಜನ ನಾಯಕರುಗಳೂ ಕುವರರೊಂದಿಗೇ ತಾವೂ ಹೋಗುವೆವೆಂದು ಕಂಕಣ ತೊಟ್ಟ ರೆಂಬ ಸಂಗತಿಯೂ ಈಗ ಎಲ್ಲರಿಗೂ ತಿಳಿಯಿತು. 'ಮಹಾರಾಣಿಯೂ ಕುವರರೂ ಈ ಅಕಾಲಮರಣಕ್ಕೆ ಗುರಿಯಾದರೆ! ಅಯ್ಯೊ! ಅಯ್ಯೊ! ಇದೇನು

ಅನ್ಯಾಯ! ಇನ್ನೇನು ಗತಿ?' ಎಂದು ರಾಜಧಾನಿಯೆ ಗೋಳಾಡಿತು. ಮಹಾ ಸತಿಯಾಗಲಿರುವ ಸೋವಲೆಯ ಮೇಲೆ ಅವರ ಭಕ್ತಿ ಗೌರವಗಳು ಹೆಚ್ಚಿದವು. ಊರ ಜನರೆಲ್ಲ ಆ ವೇಳೆಯಲ್ಲೂ ಕುವರನ ಮನೆಯ ಮುಂದೆ ಸಮುದ್ರದಂತೆ ನೆರೆದು ನಿಂತರು. ಶಾಂತಲಾದೇವಿಯ ಕಳೇಬರ ವೇಲಾಪುರಿಯಲ್ಲಿಯೆ ಇರುವು ದೆಂದೂ ಕುವರವಿಷ್ಣುವಿನ ಕಳೇಬರವನ್ನು ಸೋವಲೆದೇವಿಯೆ ವೇಲಾಪುರಿಗೆ ಹೋಗಿ ತಂದಳೆಂದೂ ಜನರಿಗೆ ತಿಳಿಯಿತು.

ರಾಜಧಾನಿಯ ಹತ್ತಿರವಿದ್ದ ಸೇನಾಶಿಬಿರಗಳಿಗೂ ಈ ವಾರ್ತೆ ಮುಟ್ಟಿತು. 'ಅಯ್ಯೋ! ಅಂತಹ ಧೀರರಿಗೆ, ವೀರರಿಗೆ, ಈ ಅಂತ್ಯವೆ! ನಮ್ಮ ತಾಯಿಗೆ ಈ ದುರ್ಮರಣವೆ! ದೇವನು ನಮ್ಮ ಮೇಲೆ ಇಷ್ಟು ನಿರ್ದಯನೇಕಾದ! ಪ್ರಭುಗಳ ಹೃದಯಕ್ಕೆ ಇನ್ನಾವ ಉತ್ಸಾಹ? ಇನ್ನಾವ ಸಂತೋಷ? ಇನ್ನು ಅವರ ಹೃದಯವೂ ಬತ್ತಿತು, ಬಲವೂ ಉಡುಗಿತು. ಈ ರಾಜ್ಯಕ್ಕೆ ಇದೇನು ವಿಪತ್ತು ಬಂದಿತು! ಮುಂದೇನು ಗತಿ!' ಎಂದು ಸೇನೆಯ ಜನರೆಲ್ಲ ಶೋಕದಿಂದ ಕಂಗೆಟ್ಟರು. ಸ್ನೇಹಕಂಕಣ ಧರಿಸಿದ್ದ ಆ ಆರು ಜನ ನಾಯಕರುಗಳೂ ತಮ್ಮ ಸಂಕಲ್ಪಸಿದ್ಧಿಗೆ ಅಣಿಮಾಡಿಕೊಳ್ಳತೊಡಗಿದರು.

ಅತ್ತ ವೇಲಾಪುರಿಯಲ್ಲಿ ಮಾಚಿಕಬ್ಬೆಯವರಿಗೆ ಶೈತ್ಯೋಪಚಾರಗಳನ್ನು ಮಾಡುತ್ತಿದ್ದ ದಾಸಿಯೊಬ್ಬಳಿಗೆ ದೈವವೇ ಸೂಚಿಸಿದಂತೆ ಥಟ್ಟನೆ ಏನೋ ಜ್ಞಾಪಕ ಬಂದಿತು. ಆಕೆ ಆಳೊಬ್ಬನನ್ನು ಜೊತೆಗೆ ಕರೆದುಕೊಂಡು ಊರೊಳಕ್ಕೆ ಹೋಗಿ, ತನಗೆ ಬಹುದಿನಗಳ ಹಿಂದೆ ಪರಿಚಿತಳಾಗಿದ್ದ ಒಬ್ಬ ವೃದ್ಧೆಯನ್ನು ಆ ವೇಳೆಯಲ್ಲಿ ಎಬ್ಬಿಸಿ, ಬಹು ಸಾಹಸದಿಂದ ಅರಮನೆಗೆ ಕರೆತಂದಳು. ಆ ವೃದ್ಧೆಯ ವಂಶವೆಲ್ಲ ವೈದ್ಯವೃತ್ತಿಯಲ್ಲೆ ಬಾಳಿದುದು. ವೃದ್ಧೆಯ ಪತಿ ಬದುಕಿದ್ದ ಕಾಲ ದಲ್ಲಿ ಆ ಪ್ರಾಂತದ ಜನರಿಗೆಲ್ಲ ಆಕೆ ಮನೆಯ ಧನ್ವಂತರಿಯಾಗಿದ್ದರು. ಆ ವೃದ್ಧೆ, ಮಕ್ಕಳ, ಮಕ್ಕಳ ತಾಯಂದಿರ, ಗರ್ಭಿಣಿಯರ ಕಾಯಿಲೆ ವಿಷಯಗಳನ್ನೂ ಚಿಕಿತ್ಸೆ ಪಥ್ಯಗಳನ್ನೂ ಚೆನ್ನಾಗಿ ತಿಳಿದುಕೊಂಡಿದ್ದರು. ಆಕೆಯ ಹಸ್ತಗುಣ ಚೆನ್ನಾಗಿತ್ತು. ಎಳವು, ಸೆಳವು, ಮೂರ್ಛೆ, ಪಿತ್ತವಿಕಾರ, ವಾತವಿಕಾರ, ಸನ್ನಿ, ಧನುರ್ವಾತ ಮುಂತಾದವುಗಳಿಗೆ ಆಯವರಿತು ಕಲ್ಕ, ಬಿಸಿ ಮೊದಲಾದವು ಗಳನ್ನು ಹಾಕಲು ಬಲ್ಲವಳಾಗಿದ್ದಳು. 'ರಾಜರ ಮನೆತನಕ್ಕೆ ಸಂಬಂಧಪಟ್ಟ ಒಬ್ಬಾಕೆ ಒಂದು ಮರಣವಾರ್ತೆಯನ್ನು ಕೇಳಿ ಮೂರ್ಛೆ ಹೋಗಿದ್ದಾರೆ,

ನಾವು ನಮಗೆ ತಿಳಿದಿದ್ದ ಶೈತ್ಯೋಪಚಾರಗಳನ್ನು ನಡಸಿದೆವು. ಒಂದು ಜಾವ ಸಮಯವಾದರೂ ಇನ್ನೂ ಪ್ರಜ್ಞೆ ಬರಲಿಲ್ಲ, ನೀವು ಬಂದು ಆಕೆಯನ್ನು ಬದುಕಿಸಿಕೊಡಬೇಕು' ಎಂದು ಆ ದಾಸಿ ಕೇಳಿಕೊಂಡಿದ್ದಳು. ಚಿಕಿತ್ಸಕನಿಗೆ ಇರಬೇಕಾದಂತಹ ಚಿನ್ನದಂತಹ ಮನಸ್ಸು ಆ ವೃದ್ಧೆಯದು. 'ಈ ಸೇವೆಗಾಗಿಯೇ ದೈವವು ನನಗೆ ಜನ್ಮವಿತ್ತಿರುವುದು' ಎಂದು ತಿಳಿದುಕೊಂಡಿದ್ದ ಜೀವ ಆಕೆಯದು. 'ನಡೆಯಿರಿ, ದೇವರು ನನಗೆ ಏನು ಬುದ್ಧಿಯನ್ನು ಕೊಡುತ್ತಾನೊ ನೋಡೋಣ' ಎಂದು ಸಣ್ಣದೊಂದು ಕೈಪೆಟ್ಟಿಗೆಯನ್ನು ತೆಗೆದುಕೊಂಡು ದಾಸಿಯೊಡನೆ ಹೊರಟುಬಂದಿದ್ದಳು. ದಾರಿಯಲ್ಲಿ ನಡೆದು ಬರುತ್ತ ಆ ವೃದ್ಧೆ ಹೇಳಿದಳು: 'ನೀವು ಈಗ ನಡಸಿದ ಉಪಚಾರಗಳೆಲ್ಲ, ವಿಶೇಷ ದೇಹಾಯಾಸದಿಂದ, ಬಿಸಿಲಿನ ಬೇಗೆಯಿಂದ ಉಂಟಾದ ಮೂರ್ಛೆಗಳಿಗೆ ಮಾಡಬೇಕಾದವು. ಈ ತೆರದವುಗಳಿಗೆ ಉಪಚಾರವೆ ಬೇರೆ. ಜ್ಞಾನವಾಹಿ ನರಗಳನ್ನು ಎಚ್ಚರಿಸಿದರೆ ಜ್ಞಾನೇಂದ್ರಿಯಗಳು ಎಚ್ಚರಗೊಳ್ಳುತ್ತವೆ; ಆಗ ಕ್ರಿಯಾವಾಹಿ ನರಗಳೂ ಬಾಹ್ಯೇಂದ್ರಿಯಗಳೂ ತಾವಾಗಿ ಎಚ್ಚರಗೊಳ್ಳುತ್ತವೆ. ಆಕೆಯ ಶ್ವಾಸೋಚ್ಛ್ವಾಸಕ್ರಮಗಳು ಹೇಗಿವೆ? ಕೈಕಾಲು ಬೆಚ್ಚಗಿವೆಯೆ? ವಯಸ್ಸೇನು? ಮೈ, ಶುಷ್ಕವೊ? ಸ್ಥೂಲವೊ? ಇಲ್ಲವೆ ಸಾಧಾರಣವೊ? ಮನಸ್ಸು, ಸ್ವಭಾವ ಎಂತಹವು?' ಎಂಬ ಅನೇಕ ವಿಷಯಗಳನ್ನು ಆ ವೃದ್ಧೆ ದಾರಿಯಲ್ಲಿ ನಡೆದು ಬರುತ್ತ ದಾಸಿಯಿಂದ ಸಂಗ್ರಹಿಸಿಕೊಂಡಿದ್ದಳು.

ಅರಮನೆಯನ್ನು ಸೇರಿ ವೃದ್ಧೆ ಮಾಚಿಕಬ್ಬೆಯ ಬಳಿ ಕುಳಿತು ಮೊದಲು ನಾಡಿಯನ್ನು ಹಿಡಿದು ನೋಡಿ, ಹೃದಯಕ್ರಮವನ್ನು ಅರಿತುಕೊಂಡು ಸ್ವಲ್ಪ ಸಮಾಧಾನಪಟ್ಟುಕೊಂಡಳು. ಕೈಕಾಲುಗಳನ್ನು ಮುಟ್ಟಿ ನೋಡಿದಳು; ಅಂಗಾಲನ್ನು ಕೆರೆದು ಚಿವುಟಿ ನೋಡಿದಳು. ಅನಂತರ ದೀಪವನ್ನು ಹತ್ತಿರಕ್ಕೆ ತರಸಿ ಹಿಡಿಸಿಕೊಂಡು ಕಣ್ಣುರೆಪ್ಪೆಗಳನ್ನು ಬಿಡಿಸಿನೋಡಿ, ತನ್ನ ಮನಸ್ಸಿಗೆ ಸಮಾಧಾನವಾದಮೇಲೆ ತಂದಿದ್ದ ಕೈಪೆಟ್ಟಿಗೆಯನ್ನು ತೆರೆದು, ತನ್ನ ಕೈಗಳನ್ನು ಶುಭ್ರವಾಗಿ ತೊಳೆದುಕೊಂಡು, ದೇವರನ್ನು ಪ್ರಾರ್ಥಿಸಿ, ಆ ವಿದ್ಯೆಯನ್ನು ಅನುಗ್ರಹಿಸಿದ ತನ್ನ ಪತಿಯನ್ನು ಸ್ಮರಿಸಿ, ಬೆಳ್ಳಿಯ ಭರಣಿಯೊಂದನ್ನು ತೆರೆದು, ಅದರಲ್ಲಿದ್ದ ಔಷಧಿಯನ್ನು ಕಿರುಬೆರಳಿನಿಂದ ಅದ್ದಿಕೊಂಡು, ಮಾಚಿಕಬ್ಬೆಯವರ ಎರಡು ಕಣ್ಣುಗಳಿಗೂ ಕಲ್ಕ ಹಾಕಿದಳು. ದೂರದಲ್ಲಿ ಅಧೋವದನರಾಗಿ

ಕುಳಿತಿದ್ದ ಮಾರಸಿಂಗಮಯ್ಯನವರು ಈಗ ಪತ್ನಿಯ ಬಳಿ ಬಂದು ಕುಳಿತರು. ಕಲ್ಕದ ಚುರುಕು ಕಣ್ಣಿನ ಸೂಕ್ಷ್ಮ ಜ್ಞಾನವಾಹಿ ನರಗಳ ಮೂಲಕ ಮಿದುಳಿನ ಆ ಭಾಗದಲ್ಲಿ ರಕ್ತಚಲನೆಯನ್ನು ಸಮಗೊಳಿಸಿತು. ಅರ್ಧ ನಿಮಿಷದಲ್ಲಿ ಮಾಚಿಕಬ್ಬೆಯ ಕೈಗಳು ಈಗ ತಾವಾಗಿ ಕಣ್ಣುಗಳನ್ನು ಹೊಸಕಿಕೊಳ್ಳಲು ಹೋದವು. ವೃದ್ಧೆಯು ಮಾಚಿಕಬ್ಬೆಯ ಕೈಗಳೆರಡನ್ನೂ ಬಲವಾಗಿ ಹಿಡಿದು ನಿಲ್ಲಿಸಿ, ಮಾಚಿಕಬ್ಬೆಯ ಆ ಪ್ರಯತ್ನವನ್ನು ನಿರೋಧಿಸಿದಳು. ಆಗ ಮಾಚಿ ಕಬ್ಬೆ ಸ್ವಲ್ಪ ಮುಲುಕಿದರು. ಶರೀರ ಸ್ವಲ್ಪ ಚೇತನಗೊಂಡಿತು, ಮೈ ಸ್ವಲ್ಪ ಕದಲಿತು, ಕೈಕಾಲುಗಳೂ ಸ್ವಲ್ಪ ಆಡಿದವು. ಮಾರಸಿಂಗಮಯ್ಯನವರಿಗೆ ಹೋಗಿದ್ದ ಉಸಿರು ಹಿಂದಕ್ಕೆ ಬಂದಿತು. ಕಲ್ಕದ ಚುರುಕಿಗೆ ಮಾಚಿಕಬ್ಬೆಯ ಕಣ್ಣುಗಳಲ್ಲಿ ನೀರು ಬಂದಿತು. ರೆಪ್ಪೆಗಳು ಬಡಿದುಕೊಂಡವು. ಸ್ವಲ್ಪ ಹೊತ್ತಾದ ಮೇಲೆ ಮಾಚಿಕಬ್ಬೆ ಕಣ್ತೆರೆದು ಅತ್ತಿತ್ತ ನೋಡಿ ಕುಡಿಯಲು ನೀರು ಬೇಕೆಂದು ಸಂಜ್ಞೆ ಮಾಡಿದರು. ದಾಸಿಯೊಬ್ಬಳು ಗುಟುಕು ಗುಟುಕಾಗಿ ನೀರು ಕುಡಿಸಿದಳು.

ಮಾರಸಿಂಗಮಯ್ಯ ತಮ್ಮ ಕುತ್ತಿಗೆಯಲ್ಲಿ ಯಾವಾಗಲೂ ಧರಿಸುತ್ತಿದ್ದ ಅಮೂಲ್ಯವಾದ ರತ್ನಹಾರವನ್ನು ತೆಗೆದು, ವೃದ್ಧೆಯ ಪಾದಗಳ ಬಳಿ ಇಟ್ಟು 'ಸಂತೋಷದಿಂದ ಸ್ವೀಕರಿಸಬೇಕು' ಎಂದು ವೃದ್ಧೆಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ವೃದ್ಧೆ ಈ ಮಹಾಬಹುಮಾನಕ್ಕೆ ಅಂಜಿ 'ಕೇಶವ ಕೃಪೆ ಮಾಡಿದ. ನಾನಿಟ್ಟ ಕಲ್ಕದ ಬೆಲೆ ಎರಡು ಕವಡೆ, ಈ ಮಹಾ ಆಭರಣವನ್ನು ನಾನೊಲ್ಲೆ' ಎಂದಳು. 'ಅಜ್ಜಿ, ನಾನು ಕೊಡುತ್ತಿರುವುದು ನಿಮ್ಮ ಕಲ್ಕದ ಬೆಲೆಯಲ್ಲ. ನಿಮ್ಮ ಔದಾರ್ಯಕ್ಕೆ ಬೆಲೆಯೇ ಇಲ್ಲ. ನಿಮ್ಮ ಈ ಮುಪ್ಪಿನಲ್ಲಿ ಇಷ್ಟು ಅವೇಳೆಯಲ್ಲಿ ಇಲ್ಲಿಗೆ ಬಂದು ತಕ್ಕ ಚಿಕಿತ್ಸೆಯನ್ನು ನಡಸಿ, ಆಕೆ ಯೊಬ್ಬಳ ಪ್ರಾಣವನ್ನೆ ಅಲ್ಲ, ನನ್ನ ಪ್ರಾಣವನ್ನೂ ಉಳಿಸಿದಿರಿ. ಕಲಿತ ವಿದ್ಯೆಗೆ ಈ ನಿರಭಿಮಾನವಲ್ಲವೆ ಕಲಶ! ನೀವು ಇದನ್ನು ಒಲ್ಲೆ ಎನ್ನುವಿರೆಂದು ನಾನು ಬಲ್ಲೆ. ನಾನೀಗ ನಿಮಗೆ ಕೊಡುತ್ತಿರುವುದು ಒಂದೇ ಕವಡೆಯ ಬೆಲೆ. ಇನ್ನೊಂದು ಕವಡೆಯ ಬೆಲೆಯನ್ನು ಕೊಡುವವನು ಪರಮೇಶ್ವರನು. ಯಾವ ವೃತ್ತಿಯವನೇ ಆಗಲಿ ಈ ಪರಮಾರ್ಥವನ್ನು ಬೆಳಸಿಕೊಳ್ಳಬೇಕು. ನನ್ನ ಕೃತಜ್ಞತೆ ಇದು, ನೀವು ಸ್ವೀಕರಿಸಲೇಬೇಕು. ನಮಗಿಬ್ಬರಿಗೂ ಜೀವದಾನ

ಮಾಡಿದ ನೀವು ಈಗ ನಮಗೆ ತಾಯಾದಿರಿ' ಎಂದು ಒತ್ತಾಯ ಮಾಡಿ ಹಾರವನ್ನು ವೃದ್ಧೆಗೆ ಒಪ್ಪಿಸಿದರು. ವೃದ್ಧೆ ಕೇಶವನನ್ನು ಕೊಂಡಾಡುತ್ತ ಸಂತೋಷಚಿತ್ತಳಾಗಿ ಮನೆಗೆ ಹೋದಳು.

ಮಾಚಿಕಬ್ಬೆಗೆ ಪೂರ್ಣಪ್ರಜ್ಞೆಯುಂಟಾಗಿ ಪತಿಯ ಕೈಯನ್ನು ಹಿಡಿದುಕೊಂಡರು. ಮಾರಸಿಂಗಮಯ್ಯ ಮೃದುವಾಗಿ 'ಮಾಚಿ, ಮಾಚಿ' ಎಂದು ಕರೆದರು. ಮಾಚಿಕಬ್ಬೆಗೆ ಎರಡು ವಿಘಳಿಗೆಗಳೊಳಗಾಗಿ ಮಗಳ ನೆನಪುಂಟಾಯಿತು. ಪತಿಯ ಮುಖವನ್ನು ದುಃಖದಿಂದ ನೋಡಿ, 'ಅಯ್ಯೊ, ನಮ್ಮ ಮಗುವಿನ ಭಾಗಕ್ಕೆ ಧರ್ಮೇಶ್ವರನೂ ಇಲ್ಲವಾದನೆ! ತನ್ನ ಮಗುವನ್ನು ತಾನು ಕಾಪಾಡಿಕೊಳ್ಳಲಾರದೆ ಹೋದನೆ! ನನ್ನ ಶಾಂತಿನಾಥನೂ ಇಲ್ಲವಾದನೆ! ತಾಯಿ ಶಾರದೆಯೂ ತನ್ನ ಮಗುವನ್ನು ನಿರ್ಲಕ್ಷಿಸಿದಳೆ! ನನ್ನ ಕಂದನಿಗೆ, ನನ್ನ ಕಲ್ಯಾಣಿಗೆ ಈ ದುರ್ಮರಣವೆ! ಅಯ್ಯೋ ಧರ್ಮೇಶ್ವರ! ಲೋಕೋತ್ತರನಾದ ಇಂತಹ ರತ್ನವನ್ನು ಯೋಗ್ಯತೆ ಇಲ್ಲದ ನಮಗೇಕೆ ಕೊಟ್ಟೆ? ಕಿತ್ತುಕೊಂಡೆಯೇಕೆ? ಕೇಶವ, ನಾರಾಯಣ, ನಿನ್ನನ್ನು ಕೈಯಾರೆ ಮನಸಾರೆ ಪೂಜಿಸಿ ನಿನ್ನ ಕೀರ್ತಿಯನ್ನು ಪಾಡಿ ಆಡಿದವಳಿಗೆ ಈ ದುರ್ಮರಣವೆ! ಯಾರನ್ನು ಕೇಳಲಿ! ಇನ್ನು ಯಾರನ್ನು ಕೇಳಲಿ! ಯಾರ ಮರೆಹೋಗಲಿ! ನಾನು ಬದುಕಿದ್ದು, ನನ್ನ ಮಗು ನನ್ನ ಕಣ್ಣೆದುರಿಗೆ ಹೋಗಬೇಕೆ! ನಾನಿನ್ನೇಕೆ ಬದುಕಿರಬೇಕು! ಹೇಗೆ ಬದುಕಿರಬೇಕು! ಇನ್ನೇತಕ್ಕೆ!' ಎಂದು ಗೋಳಾಡಲು ಮೊದಲಿಟ್ಟರು.

ಹತ್ತಿರವೇ ಇದ್ದ ಪೂಜಾಗೃಹದ ಒಳಗಡೆ ಲಕ್ಷ್ಮಿಯ ಸೇವೆಗೆಂದು ಪ್ರಭುಗಳು ನಿಯಮಿಸಿಹೋಗಿದ್ದ ದಾಸಿಯರಲ್ಲೊಬ್ಬಳು, ಈ ಆಕ್ರಂದನವನ್ನು ಕೇಳಿ ಹೊರಕ್ಕೆ ಬಂದು, ಮಾಚಿಕಬ್ಬೆ ಘೋರವಾಗಿ ದುಃಖಿಸುತ್ತಿರುವುದನ್ನು ಕಂಡಳು. ಆಕೆ ದುಃಖಿಸುತ್ತಿರುವುದು ಲಕ್ಷ್ಮೀದೇವಿಯರಿಗೆ ಈಗ ಉಂಟಾಗಿರುವ ಈ ವಿಚಿತ್ರ ಪರಿಸ್ಥಿತಿಗೆಂದೇ ಎಂದು ಭ್ರಮಿಸಿ, ಆ ದಾಸಿ ಮಾಚಿಕಬ್ಬೆಯರಿಗೆ ನಮಸ್ಕರಿಸಿ 'ಅವ್ವೆ, ನೀವು ಹೀಗೆ ರೋದಿಸಬಾರದು. ಇಲ್ಲಿ ಯಾರೂ ರೋದಿಸಬಾರದೆಂದು ಪ್ರಭುಗಳು ಕಟ್ಟಾಜ್ಞೆಮಾಡಿ ಹೋಗಿದ್ದಾರೆ. ಲಕ್ಷ್ಮೀದೇವಿಯರು ಸುಖವಾಗಿ ಎಚ್ಚರಗೊಳ್ಳುತ್ತಾರೆಂದು ಪ್ರಭುಗಳು ಭರವಸೆಯಿಂದ ಹೇಳಿ ಹೋಗಿದ್ದಾರೆ. ಯಾವ ಭಯವೂ ಬೇಡ. ನೀವು ಇಷ್ಟು ಅಧೈರ್ಯ

ಪಟ್ಟು, ರೋದಿಸಲು ಕಾರಣವೆ ಇಲ್ಲ. ಸಮಾಧಾನ ಮಾಡಿಕೊಳ್ಳಿರಿ. ಲಕ್ಷ್ಮೀ ದೇವಿಯವರು ಈ ಮೂರ್ಛೆಯಲ್ಲಿರುವಾಗ ಅಕಸ್ಮಾತ್ ಭೀತಿಗೊಂಡರೆ, ದೊಡ್ಡ ಧ್ವನಿಗಳಾದರೆ, ಸೂಕ್ಷ್ಮರೀತಿಯಿಂದ ಈಗ ನಡೆಯುತ್ತಿರುವ ಅವರ ಹೃದಯ ಕ್ರಿಯೆ ಅಕಸ್ಮಾತ್ ಅಪಾಯಕ್ಕೆ ಒಳಗಾಗಬಹುದು. ಇದು ಹೀಗೆ ಆಗಬಾರ ದಲ್ಲವೆ? ಪ್ರಭುಗಳು ಇಲ್ಲಿ ನಿಶ್ಶಬ್ದವಾಗಿರಬೇಕೆಂದು ಮೇಲಿಂದ ಮೇಲೆ ಎಚ್ಚ ರಿಸಿ ಹೋಗಿದ್ದಾರೆ' ಎಂದಳು. ಮಾಚಿಕಬ್ಬೆಗೆ ಬೆನ್ನಿನ ಮೇಲೆ ಅಕಸ್ಮಾತ್ ಥಳಿಸಿದಂತೆ ಆಯಿತು. 'ಹಾಂ, ಲಕ್ಷ್ಮಿಯೆ! ಎಲ್ಲಿ! ಏನಾಯಿತು? ಏನಾಗಿ ದ್ದಾಳೆ? ಹೇಳಿರಿ' ಎಂದು ಆತುರ ಭಯಗಳಿಂದ ತಡಬಡಿಸುತ್ತಿದ್ದ ಆ ತಾಯಿ ಹೃದಯ ಕೇಳಿತು.

ನಡೆದುದೆಲ್ಲವನ್ನೂ ದಾಸಿಯರು ಮಾಚಿಕಬ್ಬೆಗೆ ಈಗ ವಿವರಿಸಲೆಬೇಕಾ ಯಿತು. ಪ್ರಭುಗಳ ಆಜ್ಞೆಯಂತೆ ಈಗ ಒಂದು ಹೊತ್ತು ಔಷಧಿಯನ್ನು ಕೊಟ್ಟಾಯಿತು. ದೇವಿಯರು ಗಾಢನಿದ್ರೆಯಲ್ಲಿರುವಂತೆ ಇದ್ದಾರೆ. ಮುಖದಲ್ಲಿ ಒಳ್ಳೆಯ ಕಳೆ ಇದೆ, ಉಸಿರು ಚೆನ್ನಾಗಿ ಆಡುತ್ತಿದೆ. ಪ್ರಜ್ಞೆ ಬರಬೇಕಾದರೆ ಬೆಳಗ್ಗೆ ಮೂರು ಜಾವಕ್ಕೆ ಎಂದು ಪ್ರಭುಗಳೆ ಹೇಳಿದ್ದಾರೆ, ಪೂರ್ಣಪ್ರಜ್ಞೆ ಉಂಟಾಗಬೇಕಾದರೆ ಇದರ ಮೇಲೆ ಇನ್ನೂ ಮೂರು ಅಥವಾ ನಾಲ್ಕು ಜಾವ ಗಳ ಕಾಲ ಆಗುವುದಂತೆ' ಎಂದು ದಾಸಿ ಒಬ್ಬಳು ಬಿನ್ನವಿಸಿಕೊಂಡಳು.

ಇದನ್ನು ಕೇಳಿದೊಡನೆ ಮಾಚಿಕಬ್ಬೆಯ ಮನಸ್ಸು ಆ ದುರ್ಭರ ದುಃಖ ದಿಂದ ಭಯದ ಕಡೆಗೆ ಓಡಿತು. 'ಎಲ್ಲಿ, ನನ್ನ ಲಕ್ಷ್ಮಿಯೆಲ್ಲಿ? ನನ್ನ ಚಿಕ್ಕವಳೆಲ್ಲಿ? ಅಯ್ಯೋ! ಭಗವಂತ! ಈ ಮಗುವನ್ನೂ ಕಿತ್ತುಕೊಳ್ಳಬೇಡ, ಇಷ್ಟಾದರೂ ದಯವಿರಲಿ, ಇಷ್ಟಾದರೂ ಕೃಪೆಯಿರಲಿ' ಎಂದು ಕೈಗಳನ್ನು ಜೋಡಿಸಿ ಗಗನಕ್ಕೆ ಮೊರೆಯಿಟ್ಟರು. ದಾಸಿಯರು ಮಾಚಿಕಬ್ಬೆಯನ್ನು ಮೆಲ್ಲಗೆ ಎಬ್ಬಿಸಿ ಲಕ್ಷ್ಮಿ ಇದ್ದಲ್ಲಿಗೆ ಕರೆದುಕೊಂಡುಹೋದರು. 'ಇಲ್ಲ, ನಾನು ಮಾತನಾಡುವುದಿಲ್ಲ, ನಾನು ಗೋಳಾಡುವುದಿಲ್ಲ, ನನ್ನ ಲಕ್ಷ್ಮಿಯನ್ನು ಒಮ್ಮೆ ತೋರಿಸಿಬಿಡಿ' ಎಂದು ಗೋಗರೆಯುತ್ತ ಲಕ್ಷ್ಮಿ ಇದ್ದಲ್ಲಿಗೆ ಬಂದರು ಮಾಚಿಕಬ್ಬೆ. ಮಾರಸಿಂಗಮಯ್ಯ ನವರೂ ಒಡನೆ ಬಂದರು.

ಕಣ್ಣುಮುಚ್ಚಿ ಮಲಗಿದ್ದ ಲಕ್ಷ್ಮಿಯನ್ನು ಕಂಡು ತಾಯಿ ಮಾಚಿಕಬ್ಬೆಗೆ ಸಿಡಿಲು ಬಡಿದಂತಾಯಿತು. ಕೈಕಾಲುಗಳಲ್ಲಿ ನಡುಕ ಉಂಟಾಯಿತು. ಪುನಃ

ಏನು ಘೋರ ಪರಿಸ್ಥಿತಿ ಉಂಟಾಗುವುದೊ ಎಂದು ಮಾರಸಿಂಗಮಯ್ಯನವರೂ ನಡುಗಿಹೋದರು. ಭುಗಿಲೆಂದು ಎದೆಯಿಂದ ಹೊರಟ ಜ್ವಾಲೆಯನ್ನು ಮಾಚಿಕಬ್ಬೆ ತಮ್ಮ ಬಾಯನ್ನು ತಾವೆ ಭದ್ರವಾಗಿ ಮುಚ್ಚಿ ಹಿಡಿದು ತಡೆದರು. 'ಅವ್ವೆ ....ಇಲ್ಲಿ ಕೂಡದು, ಇಲ್ಲಿ ಬಾರದು, ದೇವಿಯವರಿಗೆ ಒಳಿತಾಗಲಾರದೆಂದು ಪ್ರಭುಗಳು ಕಟ್ಟಾಜ್ಞೆ ಮಾಡಿದ್ದಾರೆ, ನಮ್ಮೆದೆಯ ಮೇಲೆ ನಾವೆ ಕಲ್ಲೆಳೆದು ಕೊಳ್ಳಬಾರದು ಅವ್ವೆ' ಎಂದರು ದಾಸಿಯರು. ಮಾಚಿಕಬ್ಬೆ ಅತಿ ಮೃದುವಾಗಿ ಲಕ್ಷ್ಮಿಯ ತಲೆಯನ್ನು ತಡವಿ 'ನನ್ನ ಕಂದ, ನನ್ನ ಹೊಟ್ಟೆಯನ್ನು ಬರಿದು ಮಾಡಬೇಡ. ನನ್ನ ಲಕ್ಷ್ಮಿ, ನಿನ್ನ ಅಕ್ಕ ಹೋದಳೆಲ್ಲಿಗೆ! ಇಲ್ಲ! ಇಲ್ಲ! ಅವಳೆಲ್ಲಿಯೂ ಹೋಗಲಿಲ್ಲ, ಅವಳೆಲ್ಲಿಯೂ ಹೋಗಳು, ಅಕ್ಕ ತಂಗಿಯ ಹೊಟ್ಟೆಯಲ್ಲೆ ಇರುತ್ತಾಳೆ' ಎಂದರು ಮಾಚಿಕಬ್ಬೆ. ಎದುರಿಗೆ ಭವ್ಯವಾದ ಪೀಠದ ಮೇಲೆ ಪ್ರಜ್ವಲಿಸುತ್ತಿದ್ದ ಎರಡು ಜ್ಯೋತಿಗಳ ನಡುವೆ ನಿಂತಿರುವ ನರಸಿಂಹ ವಿಗ್ರಹವನ್ನು ಮಾಚಿಕಬ್ಬೆ ನೋಡಿದರು. ಎದ್ದು ಬಂದು ಆ ವಿಗ್ರಹದ ಮುಂದೆ ನಿಂತು, ಕೈಜೋಡಿಸಿಕೊಂಡು, 'ನಾರಾಯಣ, ನರಸಿಂಹ, ಧರ್ಮೇಶ, ಜಿನೇಶ, ಬುದ್ಧೇಶ, ಎಲ್ಲವೂ ನೀನೆ........ನೀನೆ........ಎಲ್ಲವೂ ನಿನ್ನ ಅನಂತರೂಪಗಳೆ, ನಿನ್ನ ಅನಂತ ನಾಮಗಳೆ. ಈ ಒಂದು ಮಗುವಾದರೂ ನನಗಿರಲಿ, ಇವಳನ್ನು ಉಳಿಸಿಕೊಡು........ಉಳಿಸಿಕೊಡು. ಇಲ್ಲವೆ ಹೀಗೆ ಬೇಯುತ್ತಿರುವ ನನ್ನ ಕರುಳುಗಳನ್ನು ನಾನೆ ಬಗೆದು ತೆಗೆದು ನಿನಗೆ ಮಾಲೆ ಮಾಡುತ್ತೇನೆ. ಖಳನ ಕರುಳುಗಳನ್ನು ಮಾಲೆ ಮಾಡಿಕೊಂಡ ನಿನಗೆ ನನ್ನ ಕರುಳು ಭಾರವಾಗದು' ಎಂದು ದುಃಖದ ಭರದಲ್ಲಿ ಪುನಃ ಬುದ್ಧಿ ಪಲ್ಲಟವಾದಂತೆ ಆಗಿ ಉಸಿರಡಗಿದ ಧ್ವನಿಯಲ್ಲಿ ಅಂದರು. ಮಾರಸಿಂಗಮಯ್ಯ ತತ್‌ಕ್ಷಣ ಎದ್ದುಹೋಗಿ ಪತ್ನಿಯ ಎರಡು ಕೈಗಳನ್ನೂ ಹಿಡಿದುಕೊಂಡು, 'ಮಾಚಿ! ಮಾಚಿ! ನಿನ್ನ ವಿವೇಚನೆ ಎಲ್ಲಿ ಹೋಯಿತು? ಇದೇನು ನೀನು ಹೇಳುತ್ತಿರುವ ಮಾತು! ದೈವನಿಂದನೆ ತಗದು, ಸುಮ್ಮನಿರು. ಮಗು ಲಕ್ಷ್ಮಿಗೆ ಖಂಡಿತ ಏನೂ ವಿಪತ್ತಾಗದು. ನಿದ್ರೆಯಿಂದ ಎದ್ದವಳಂತೆ ಏಳುವಳು, ಸ್ವಲ್ಪ ಸಮಾಧಾನ ಮಾಡಿಕೊ. ನಿನ್ನ ಅಳಿಯಂದಿರು ವಿವೇಚನಾಪರರಾದುದರಿಂದಲೆ ಹೀಗೆ ಮಾಡಿರುವರು. ಯೋಚಿಸಿ ನೋಡು ಮಾಚಿ, ಲಕ್ಷ್ಮಿಗೆ ಈಗ ಎಚ್ಚರವಾದರೆ, ನಿನ್ನ ಬಾಯಿಂದಲೆ ಅವಳಿಗೆ ಅಕ್ಕನ ಸಂಗತಿ ತಿಳಿದರೆ, ನಿನ್ನ ಈ ಮಗುವನ್ನು

ನೀನೆ ಕೊಲ್ಲುತ್ತೀಯೆ. ಈ ಒಂದು ಮಗುವನ್ನಾದರೂ ಉಳಿಸಿಕೊಳ್ಳೋಣ' ಎಂದು ಸಮಾಧಾನಪಡಿಸಿ ಲಕ್ಷ್ಮಿಯ ಬಳಿ ಕರೆತಂದು ಕುಳ್ಳಿರಿಸಿದರು.

ಲಕ್ಷ್ಮಿ ಹಾಗೆ ಅಕಸ್ಮಾತ್ ಎಚ್ಚರಗೊಂಡರೆ ಏನು ಅನರ್ಥವಾಗಬಹುದೆಂದು ಮಾಚಿಕಬ್ಬೆಗೆ ಈಗ ಹೊಳೆಯಿತು. ತನ್ನ ಅಳಿಯಂದಿರನ್ನು ಮನಸಾ ಹರಿಸಿದರು. ಏನೇ ಆಗಲಿ, ಆ ತಾಯಿಕರುಳು ದುಃಖದ ಭರವನ್ನು ತಡೆಯಲಾರದೆಹೋಯಿತು. ದಾಸಿಯೊಬ್ಬಳು ಲಕ್ಷ್ಮಿಗೆ ಬೀಸಣಿಗೆಯಿಂದ ಮೃದುವಾಗಿ ಗಾಳಿ ಹಾಕುತ್ತಿದ್ದಳು. ಮಾಚಿಕಬ್ಬೆ ಆ ಬೀಸಣಿಗೆಯನ್ನು ಈಸಿಕೊಂಡು ಲಕ್ಷ್ಮಿಗೆ ತಾವೇ ಗಾಳಿಹಾಕಲು ಮೊದಲುಮಾಡಿದರು. ಮಾಚಿಕಬ್ಬೆಯ ಕಣ್ಣುಗಳಿಂದ ಅಶ್ರುಧಾರೆ ಎಷ್ಟು ಹೊತ್ತಾದರೂ ತಡೆಯಿಲ್ಲದೆ ಹರಿದು ಬರುತ್ತಿತ್ತು. ಲಕ್ಷ್ಮಿಗೆ ಎರಡನೆಯ ಹೊತ್ತಿನ ಔಷಧಿಯನ್ನು ಕೊಡುವ ಸಮಯವಾಯಿತು. ದಾಸಿಯರ ವಿವರಣೆಯಂತೆ ಮಾಚಿಕಬ್ಬೆ ತಾವೆ ಔಷಧಿ ತೇದು ಲಕ್ಷ್ಮಿಯ ನಾಲಗೆಗೆ ಲೇಪಿಸಿ ನಾಲ್ಕು ಗುಟುಕು ನೀರನ್ನು ಮೆಲ್ಲಗೆ ಗಂಟಲೊಳಕ್ಕೆ ಇಳಿಸಿದರು. ಲಕ್ಷ್ಮಿಯನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂಬ ಆತುರ ಆ ತಾಯಿಗೆ ಹೆಚ್ಚಾಯಿತು.

ರಾಜಧಾನಿಯಲ್ಲಿ ಸೂರ್ಯೋದಯಕ್ಕೆ ಐದು ಗಳಿಗೆ ಇದೆ. ಪತಿಯ ಕಳೇಬರವನ್ನು ತಂದೆತಾಯಿ ಬಂಧುಬಾಂಧವರ ಬಳಿಯೆ ಬಿಟ್ಟು, ಸೋವಲೆದೇವಿ ಸ್ನಾನಮಾಡಿ ಮಡಿಯುಟ್ಟು, ಪೂಜಾಗೃಹವನ್ನು ಸೇರಿ ಪ್ರಾರ್ಥನೆಯಲ್ಲಿ ನಿರತಳಾದಳು. ಆ ವೇಳೆಯಲ್ಲಿ ಅರಮನೆಗೆ ಸಂಬಂಧಪಟ್ಟವರೆಲ್ಲ ಕುವರವಿಷ್ಣುವಿನ ಗೃಹದಲ್ಲಿ ಸೇರಿದ್ದರು. ಬೊಪ್ಪಣ ತನ್ನ ತಂದೆ ತೀರಿಕೊಂಡಾಗ ಕೂಡ ಇಷ್ಟು ದುಃಖಿತನಾಗಿರಲಿಲ್ಲ. 'ಹೊಯಿಸಳ ರಾಜ್ಯಕ್ಕೆ ಕುವರವಿಷ್ಣುವಿನಿಂದ ಮಹೋನ್ನತಿಯನ್ನು ಪಡೆಯುವ ಯೋಗವಿತ್ತು' ಎಂದು ಬೊಪ್ಪಣ ತನ್ನ ತಮ್ಮನಿಗಾಗಿ ಬಹು ಸಂಕಟಪಟ್ಟ.

ಪಾಳೆಯದಲ್ಲಿದ್ದ ಆರು ಮಂದಿ ನಾಯಕರುಗಳೂ ಅರುಣೋದಯಕ್ಕೆ ಮೊದಲೆ ಸ್ನಾನಮಾಡಿ ತಮ್ಮ ದೈವಗಳಿಗೆ ಕೊನೆಯ ಪ್ರಾರ್ಥನೆಗಳನ್ನು ಸಲ್ಲಿಸಿ, ಯುದ್ಧಪೋಷಾಕುಗಳನ್ನು ತೊಟ್ಟು, ಗುರಾಣಿಗಳನ್ನು ಉಳಿದು, ಹೊಸದಾಗಿ ಸಾಣೆಹಿಡಿದ ಕತ್ತಿಗಳನ್ನು ಮಾತ್ರ ತಮ್ಮೊಡನೆ ತೆಗೆದುಕೊಂಡು, ಇಮ್ಮಡಿ ದಂಡನಾಯಕ ಕುವರವಿಷ್ಣುವಿನ ಕಳೇಬರದ ದರ್ಶನಕ್ಕೆ ನಡೆದರು. ಅವರೊಡನೆ

ಅಲ್ಲಿದ್ದ ಸರ್ವಸೇನೆಯೂ ದರ್ಶನಕ್ಕೆಂದು ಹೊರಟಿತು. ಅಷ್ಟು ಹೊತ್ತಿಗೆ ಕುವರ ವಿಷ್ಣುವಿನ ಮನೆಯ ಮುಂದೆ ಅಪಾರ ಜನಸಂದಣಿ ಸೇರಿತ್ತು.

* * * *

ಸೂರ್ಯೋದಯ ಇನ್ನೇನು ಸಮೀಪಿಸುತ್ತಿದ್ದಾಗ ಪ್ರಭುಗಳ ರಥ ಶಿವಗಂಗೆಗೆ ಇನ್ನೂ ಒಂದು ಗಾವುದ ದೂರದಲ್ಲಿತ್ತು. ಆ ಶಿವಗಂಗೆಯ ಬೆಟ್ಟ ಆಕಾಶದ ಅಂಚಿನಲ್ಲಿ ಶಾಂತಲೆಯನ್ನು ಆಹುತಿಗೊಂಡ ಮಹಾಭೂತದಂತೆ ಪ್ರಭುಗಳ ದೃಷ್ಟಿಗೆ ಬಿತ್ತು. ರಥದ ವೇಗ ಇನ್ನೂ ಹೆಚ್ಚಿತು. ಶಿವಗಂಗೆಯ ಊರು ಸಮೀಪವಾಗುತ್ತ ಬಂದಿತು. ಊರು ಹತ್ತಿರವಾದಾಗ ಪ್ರಭುಗಳು ರಾಜಮಾರ್ಗವನ್ನು ಬಿಟ್ಟು, ರಥವನ್ನು ಬೆಟ್ಟದ ಬುಡದ ಒಂದು ಕಡೆಗೆ ತಿರುಗಿಸಿದರು. ಕಲ್ಲುಗುಂಡುಗಳ ಮೇಲೆ, ಪೊದೆಗಳ ಮೇಲೆ, ಇರುಕುಬಿರುಕುಗಳಲ್ಲಿ ಕುದುರೆಗಳು ರಥವನ್ನು ಬಹು ಪ್ರಯಾಸದಿಂದ ಎಳೆದುಕೊಂಡು ಹೋಗಿ ಬೆಟ್ಟದ ಬುಡವನ್ನು ಸೇರಿ ನಿಂತವು. ಅಷ್ಟು ಹೊತ್ತಿಗೆ ಚೆನ್ನಾಗಿ ಸೂರ್ಯೋದಯವಾಗಿತ್ತು. ಪ್ರಭುಗಳು ಶಾಂತಲೆಯ ಕಳೇಬರವನ್ನು ರಥದ ಪೀಠದಿಂದ ಬಿಚ್ಚಿ ಕೆಳಗಿಳಿಸಿಕೊಂಡರು. ಕಾಡಿನ ನೆಲದ ಮೇಲೆ ಶಾಂತಲೆಯ ಶರೀರವನ್ನು ಇಡುವಾಗ ಅವರ ಕರುಳು ಕಿತ್ತುಬಂದಿತು. ದುಃಖವನ್ನು ತಡೆಯಲಾಗಲಿಲ್ಲ. 'ಎಲ್ಲರ ಶಾಶ್ವತ ಹಾಸಿಗೆ ಇದುವೆ, ದೇವಿ. ನಿನ್ನ ವಿಷ್ಣುವರ್ಧನ ಇಂದು ನಿರ್ಭಾಗ್ಯ, ಭಿಕಾರಿ' ಎನ್ನುತ್ತ ತನ್ನ ದೇವಿಯ ಕಳೇಬರವನ್ನು ಮೃದುವಾಗಿ ನೆಲದ ಮೇಲೆ ಮಲಗಿಸಿ, ಅಲ್ಲಿದ್ದ ಒಂದು ಹಿಡಿ ಮಣ್ಣನ್ನು ತೆಗೆದುಕೊಂಡು, ತಮ್ಮ ತಲೆಯ ಮೇಲೆ ಸುರಿದುಕೊಂಡರು. ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಗಳ ಮೇರೆಯುಳ್ಳ ಭೂಪಾಲನಿಗೆ, ಭಗವಂತನಿಗೆಂದು ಲೋಕೋತ್ತರಗಳಾದ ದೇವಾಲಯಗಳನ್ನು ಕಟ್ಟಿದವನಿಗೆ, ಧರ್ಮ ಸತ್ಯ ಇವುಗಳೆ ಜೀವನದ ಪರಮಧ್ಯೇಯಗಳೆಂದು ನಂಬಿ ನಡೆದುಕೊಂಡವನಿಗೆ, ಎಣಿಕೆಯಿಲ್ಲದ ದಾನಧರ್ಮಗಳನ್ನು ಮಾಡಿದವನಿಗೆ, ಭೇದರಹಿತನಿಗೆ, ತಲೆಯ ಮೇಲೆ ಒಂದು ಹಿಡಿ ಮಣ್ಣಾಯಿತು. ಪ್ರಭುಗಳು ಕುದುರೆಗಳ ಸಹಾಯದಿಂದ ತಾವು ತಂದಿದ್ದ ರಥವನ್ನು ಒಂದು ಕೊರಕಲಿಗೆ ತಳ್ಳಿಬಿಟ್ಟರು. ರಥದ ಎರಡು ಕಡೆ ಕಂಬಗಳಿಗೆ ಕಟ್ಟಿ ಉರಿಯುತ್ತಿದ್ದ ಪಂಜುಗಳು ಆ ರಥಕ್ಕೆ ಬೆಂಕಿಯಿಟ್ಟವು. ಪ್ರಭುಗಳು ಕುದುರೆಗಳ ಕುತ್ತಿಗೆಯನ್ನು ತಟ್ಟಿಕೊಟ್ಟು 'ನಿಮ್ಮ ಸೇವೆ ಸಂದಿತು, ನಿಮಗೆ ಕೃತಜ್ಞನಾಗಿದ್ದೇನೆ, ನೀವಿನ್ನು ಸ್ವೇಚ್ಛೆಯಾಗಿ

ಹೋಗಿರಿ' ಎಂದು ಹೇಳಿ ಕುದುರೆಗಳನ್ನು ಬಿಡುಗಡೆಮಾಡಿ ಓಡಿಸಿಬಿಟ್ಟರು. ರಾಜಮುದ್ರೆಗಳನ್ನುಳ್ಳ ಆ ಅಶ್ವಗಳನ್ನು ಯಾರೂ ಕಟ್ಟಿಹಾಕಬಾರದೆಂಬ ಶಾಸನ ವಿದ್ಧಿತು. ಕುದುರೆಗಳು ಸ್ವೇಚ್ಛೆಯಿಂದ ಹೋದವು.

ಶಾಂತಲೆಯ ಕಳೇಬರವನ್ನು ಎತ್ತಿ ಹೆಗಲ ಮೇಲೆ ಹಾಕಿಕೊಂಡು ಪ್ರಭುಗಳು ಬೆಟ್ಟವನ್ನು ಹತ್ತಲು ಮೊದಲಿಟ್ಟರು. ಸ್ವಲ್ಪ ದೂರ ಹತ್ತುವುದರಲ್ಲಿಯೇ ಆಯಾಸ ತೋರಿತು. ದಾರುಣ ದುಃಖ ಅವರ ಅಪಾರ ದೇಹಶಕ್ತಿಯನ್ನೂ ಕುಗ್ಗಿಸಿತ್ತು. ನಿನ್ನೆಯ ದಿನ ಉಪವಾಸ; ರಾತ್ರಿ ಈ ಮಹಾ ದುಃಖಾನುಭವ; ನಿದ್ದೆ ಇಲ್ಲದೆ ರಾತ್ರಿಯೆಲ್ಲ ರಥವನ್ನು ನಡಸಿಕೊಂಡು ಬಂದ ಆಯಾಸ; ಕೈಯಲ್ಲಿ ಕಳೇಬರ; ದಾರಿಯಲ್ಲದ ದಾರಿಯಲ್ಲಿ ಬೆಟ್ಟವನ್ನು ಹತ್ತುವ ಶ್ರಮ: ಇದು ಯಾರಿಗೆ ಸಾಧ್ಯ! ಪ್ರಭುಗಳು ಆಯಾಸದಿಂದ ಒಮ್ಮೆ ನಿಂತರು. ಕತ್ತನ್ನು ತಿರುಗಿಸಿ ತಮ್ಮ ದೇವಿಯನ್ನು ನೋಡಿದರು. ನೋಡಿದೊಡನೆ ಕರುಳು ಕಲಕಿ ಹೋಯ್ತು, ದುಃಖ ಉಕ್ಕೇರಿತು. 'ಇದು ನನ್ನ ಶಾಂತಲೆಯೆ! ಇದು ನನ್ನ ಹೃದಯರತ್ನವೆ! ಇದು ಆಕೆಯ ಸೊಬಗು ಸೌಭಾಗ್ಯಗಳ ಮುಖವೆ! ನನ್ನ ಜೀವಕ್ಕೆ ಜೀವನಕ್ಕೆ ರಸಪುಷ್ಟಿಯನ್ನು ಕೊಟ್ಟು, ನನ್ನ ಹೃದಯಕ್ಕೆ ಸ್ಥೈರ್ಯವನ್ನೂ ನನ್ನ ಬಾಹುಗಳಿಗೆ ಶಕ್ತಿಯನ್ನೂ ಮನಸ್ಸಿಗೆ ಆನಂದ ಉಲ್ಲಾಸಗಳನ್ನೂ ಕೊಟ್ಟ ಮುಖಶ್ರೀ ಇದುವೆ! ಯಾರ ಒಂದು ಉತ್ಸಾಹದ ಮಾತಿನಿಂದ ನನ್ನ ಎದೆ ಉಬ್ಬುತ್ತಿತ್ತೊ, ನನ್ನ ಭುಜಗಳಲ್ಲಿ ವೀರಶ್ರೀ ಸಂಚಾರವಾಗುತ್ತಿತ್ತೊ, ಯಾರ ಒಂದು ಸಣ್ಣ ನಗೆಯಿಂದ ಬ್ರಹಾನಂದವನ್ನು ಪಡೆಯುತ್ತಿದ್ದೆನೊ, ಯಾರ ಸಂತೋಷಕ್ಕಾಗಿ ಶ್ರೇಯಸ್ಸಿಗಾಗಿ ನನ್ನ ಕೈಯಲಾದಷ್ಟು ದಾನಧರ್ಮಗಳನ್ನು ನಡಸಿದೆನೊ, ದೇವನಿಗೆ ಭವ್ಯವಾದ ಆಲಯಗಳನ್ನು ಕಟ್ಟಿಸಿದೆನೊ, ಯಾರ ಪುಣ್ಯ ಬೆಳೆಯಲೆಂದು ಧರ್ಮ ವೃದ್ಧಿಸಲೆಂದು ರಾಜ್ಯವೆಲ್ಲ ಸುರಕ್ಷಿತವಾಗಿರಲೆಂದು ಸತತ ಶ್ರಮಿಸಿದೆನೊ ಆ ರಸವಂತಿ ಈಗ ಬತ್ತಿಹೋಯಿತೆ! ನಿರ್ಜೀವವಾಯಿತೆ! ಶಾಂತಲೆ . . . ಓ . . . ಶಾಂತಲೆ, "ಓ" ಎನ್ನು ದೇವಿ . . . . ನಾನೊಬ್ಬನೆ ಇನ್ನು ಇಲ್ಲಿರಲು ಸಾಧ್ಯವಿಲ್ಲ, ನನಗೆ ಸಾಧ್ಯವಿಲ್ಲ, . . . . ನಿನ್ನ ಜೀವವನ್ನರಸುತ್ತ ಇಲ್ಲಿಗೆ ಬಂದಿದ್ದೇನೆ. ಅದು ಇಲ್ಲಿಯೆ ಇರುವುದೆಂದು ನಾನು ಬಲ್ಲೆ. ನನ್ನ ಜೀವವಿನ್ನೂ ಇರುವುದರಿಂದಲೆ ನಿನ್ನ ಜೀವ ಇಲ್ಲಿಯೆ ಇರುವುದೆಂಬ ಭರವಸೆ. ಕೇಳು ದೇವಿ, ನನ್ನ ಮೇಲಿನ ಆಣೆಯಿದೆ. ನೀನು ಕೇಳಬಲ್ಲೆ,

ನನ್ನನ್ನು ನೋಡಬಲ್ಲೆ. ನನ್ನನ್ನು ಹೀಗೆ ಮೋಸಪಡಿಸಿ ಹೋಗಬೇಕೆಂದು ನಿನ್ನ ಉದ್ದೇಶವಿರಲಾರದು . . . ನೀನು ಕಾಲುಜಾರಿ ಬಿದ್ದೆಯೆಂದು ನನ್ನ ಮನಸ್ಸು ಒಪ್ಪುವುದಿಲ್ಲ . . . ಶಾಂತಲೆ, ನಿನ್ನ ಹೆಸರೇ ಎಷ್ಟು ಅಮೃತಮಯ ವಾಗಿದೆ! ದೇವಿ, ನಿನ್ನ ಮನಸ್ಸು ಯಾವುದೊ ಕಠಿಣ ಸಮಸ್ಯೆಗೆ ಸಿಕ್ಕಿ ಹೋಯಿತು. ನಿನಗೆ ಬೇರಾವ ಮಾರ್ಗವೂ ಕಾಣಬರಲಿಲ್ಲವೆ? ಈ ಮಾರ್ಗ ವನ್ನು ನೀನು ಅನುಸರಿಸಬಹುದೆ? . . . ನಿನ್ನ ಕಣ್ಣಿಗೆ ನಾನು ಮೂರ್ಖ ನಾದೆನೆ! ಹಟಮಾರಿಯಾದೆನೆ? ಅಂತಹ ಅಪರಾಧವನ್ನು ನಾನೇನು ಮಾಡಿದೆ! ನನ್ನ ಹಟ ನಿನಗೆ ಈ ವಿಧಿಯನ್ನು ತಂದೊಡ್ಡಿತೆ? ಶಾಂತಲೆ . . . ಕ್ಷಮೆ ಎಂಬುದು ಪರಾತ್ಪರವಸ್ತು. ನೀನು ದಯಾರ್ದ್ರೆ, ನೀನು ನನ್ನನ್ನು ಕ್ಷಮಿಸ ಬೇಕು. ಶಾಂತಲೆ—ಓ—ಶಾಂತಲೆ—"ಓ" ಎನ್ನು ಶಾಂತಲೆ. ನೀನೆಲ್ಲಿ ಇರು ವೆಯೊ ಅಲ್ಲಿಗೆ ಬರುತ್ತಿದ್ದೇನೆ . . .'

ಬೆಟ್ಟದ ಮೇಲೆ ಈಗ ಸ್ವಲ್ಪ ಬಿಸಿಲೇರುತ್ತ ಬಂದಿತು. ಬಲು ಕಷ್ಟದಿಂದ ಸುಮಾರು ಅರ್ಧ ಬೆಟ್ಟವನ್ನು ಹತ್ತಿ ಆಯಿತು. ದಾರಿಯಿಲ್ಲ, ಮೆಟ್ಟಲುಗಳಿಲ್ಲ. ಎಂತೋ ಹೇಗೊ ಶಾಂತಲೆಯ ಕಳೇಬರವನ್ನು ಹೊತ್ತು ಪ್ರಭುಗಳು ಸ್ವಲ್ಪಸ್ವಲ್ಪ ವಾಗಿ ಮುಂದುವರಿಯುತ್ತಿದ್ದಾರೆ, ಕಾಲು ಜಾರುತ್ತಿದೆ, ಎಡಗೈಯಿಂದ ಕಳೇಬರ ವನ್ನು ತಮ್ಮ ಮೈಗೆ ಒತ್ತಿ ಹಿಡಿದುಕೊಂಡು, ಬಲಗೈಯನ್ನು ಆಸರೆಯಾಗಿ ಊರುಗೋಲಾಗಿ ಉಪಯೋಗಿಸುತ್ತ ಮೇಲುಬ್ಬುಸದಿಂದ ಎದೆಯೊಡೆದುಹೋಗು ತಿದ್ದರೂ 'ಶಾಂತಲೆಯ ಜೀವವಿರುವ ಬಳಿಗೆ ಹೋಗುತ್ತಿದ್ದೇನೆ, ಆ ಜೀವವನ್ನು ಮತ್ತೆ ಈ ಶರೀರದೊಳಕ್ಕೆ ಕರೆದುಕೊಳ್ಳುತ್ತೇನೆ' ಎಂಬ ಒಂದೆ ನಂಬಿಕೆಯಿಂದ ಮುಂದೆ ಮುಂದೆ ಹೋಗುತ್ತಿದ್ದಾರೆ. ಪ್ರಭುಗಳ ವಿವೇಚನೆ ದುಃಖಾತಿರೇಕ ದಿಂದ ಹದಗೆಟ್ಟಿದೆ. ತಾವು ಮಾಡುತ್ತಿರುವುದನ್ನು ಲೋಕ ಒಪ್ಪೀತೆ ಎಂಬುದು ಕೂಡ ಆಗ ಆ ಧೀಮಂತನ ಮನಸ್ಸಿಗೆ ಬರಲಿಲ್ಲ. 'ನನ್ನ ದೇವಿ ಮರಳಿ ನನ್ನ ಬಳಿಗೆ ಬಂದೇಬರುವಳು. ನಾನು ಆಕೆಗೆ ಭರವಸೆ ಕೊಡುತ್ತೇನೆ. ಆಕೆಯ ಮನೋಭೀಷ್ಟಗಳೆಲ್ಲವನ್ನೂ ನಡಸಿಕೊಡುತ್ತೇನೆ ಎಂದು ನಾನು ಆಕೆಗೆ ಭರವಸೆ ಕೊಡುತ್ತೇನೆ. ಆಕೆಯು ಶಾಂತಲೆಯಲ್ಲವೆ! ಆಕೆಯ ಕೋಪವಾರುವುದು. ಆಕೆ ನನ್ನನ್ನು ಖಂಡಿತ ಕ್ಷಮಿಸಿ ಆದರಿಸುವಳು. ನಾನು ಹೊತ್ತು ತರುತ್ತಿರುವ ಈ ಕಳೇಬರ ಸಜೀವವಾಗುವುದು' ಎಂಬ ಪೂರ್ಣ ಭರವಸೆ ಪ್ರಭುಗಳಿಗಿದ್ದಿತು.

ಬಹು ಆಯಾಸವಾಯಿತು. ಒಂದು ಬಂಡೆಯ ನೆರಳಿನಲ್ಲಿ ಸ್ವಲ್ಪ ನಿಂತರು. ಪ್ರಭುಗಳಿಗೆ ಬಾಯಾರುತ್ತಿದೆ, ಮೈಯಲ್ಲಿದ್ದ ದ್ರವಭಾಗವೆಲ್ಲ ಬೆವರಾಗಿ ಹರಿದುಹೋಗುತ್ತಿದೆ. ಶರೀರದ ರಕ್ತ ಫೇನವಾಗುತ್ತಿದೆ. ಆದರಿಂದ ಆಯಾಸ ಇನ್ನಷ್ಟು ಹೆಚ್ಚುತ್ತಿದೆ. ಹೆಗಲ ಮೇಲಿನ ಕಳೇಬರದೊಂದಿಗೆ ಅಕ್ಕರೆಯಿಂದ ಮಾತನಾಡುತ್ತಾರೆ. 'ದೇವಿ, ಬಿಸಿಲಾಗುತ್ತಿದೆಯೆ? ನಿನಗೆ ಆಯಾಸವಾಗುತ್ತಿದೆಯೆ? ಬಾಯಾರುತ್ತಿದೆಯೆ? ಏನು ಮಾಡಲಿ? ನೀನು ಕಷ್ಟಕ್ಕೆ ಸಿಲುಕಿದೆ, ನನಗೂ ಸಹಿಸಲಾಗದ ಈ ದುಃಖ ಒಡ್ಡಿದೆ. ಶಾಂತಲೆ, ಓ . . . ಶಾಂತಲೆ, ಹೀಗೇಕೆ ಮಾಡಿದೆ? ನಿನ್ನ ತಮ್ಮ ಗರುಡನಾದುದನ್ನು ನಾನು ಬಲ್ಲೆನೆ? ನೀನಿರುವಾಗ ಲಕ್ಷ್ಮಿ ಪಟ್ಟದರಸಿ ಆಗಬಾರದೆಂದು ಹೇಳಿದ ಒಂದು ಮಾತನ್ನು ಅರ್ಥಮಾಡಿಕೊಳ್ಳಲಾರದೆ ಹೋದೆಯ! ದೇವಿ, ನೀನು ನನ್ನೊಡನೆ ಸುಳ್ಳು ಹೇಳಿದೆ. ಶಿವಗಂಗೆಗೆ, ಯಾತ್ರೆಗೆ, ಎಂದು ಹೇಳಿದೆ . . . ನೀನೆಲ್ಲಿಗೆ ಯಾತ್ರೆ ಹೊರಟೆ! . . . ಕೇಳುತ್ತಿರುವೆಯ? . . . ನಾನು ಹೇಳುತ್ತಿರುವುದನ್ನು ಕೇಳುತ್ತಿರುವೆಯ? ನಿನ್ನನ್ನು ಮದುವೆಯಾದಾಗ ನಿನ್ನನ್ನು ಸಖೀ ಎಂದು ನಾನು ಕರೆದೆ. "ದೇವಿ, ಈ ಅರೆಕಲ್ಲಿನ ಮೇಲೆ ನಿಲ್ಲು; ನಿಂತಿರುವ ಕಲ್ಲು ಎಷ್ಟು ಬಲವಾಗಿದೆಯೊ ಎಷ್ಟು ದೃಢವಾಗಿದೆಯೊ ನಿನ್ನ ಮನಸ್ಸೂ ಬುದ್ಧಿಯೂ ಅಷ್ಟೆ ದೃಢವಾಗಿರಲಿ. ನಮ್ಮ ಜೀವನಗಳಲ್ಲಿ ಎಷ್ಟು ಕಷ್ಟಗಳು ತೋರಿದರೂ, ಭದ್ರೆ, ನಿನ್ನ ಮನಸ್ಸು ಈ ಕಲ್ಲಿನಂತೆ ಅಚಲವಾಗಿರಲಿ, ಯಾವ ಸಂಕಟಗಳು ಬಂದರೂ ಒಟ್ಟಿಗೆ ಇರೋಣ, ಒಟ್ಟಿಗೆ ಯೋಚಿಸೋಣ, ಒಬ್ಬರ ಹಿತವನ್ನೊಬ್ಬರು ಸದಾ ಕಾಯ್ದುಕೊಳ್ಳೋಣ" ಎಂದು ಹೇಳಿದೆನಲ್ಲ! ನೀನು ಅಗ್ನಿಯ ಎದುರಿಗೆ, ಸದಸ್ಸಿನ ಎದುರಿಗೆ, ಅನುವರ್ತಿಸುವೆನೆಂದು ಹೇಳಿದುದನ್ನು ಮರೆತೆಯ? ನನ್ನನ್ನು ಕೈಹಿಡಿದು ನಡಸುತ್ತಿದ್ದವಳು ನೀನಲ್ಲವೆ? ಇದನ್ನೂ ಮರೆತೆಯ? . . . ಶಾಂತಲೆ . . . ಶಾಂತಲೆ, ನಿನ್ನ ಜೀವ ನನ್ನನ್ನು ನೋಡುತ್ತಿರುವುದು, ನಿನ್ನ ಆತ್ಮ ನನ್ನನ್ನು ಕಾಣುತ್ತಿರುವುದು, ನನ್ನ ಹಟಕ್ಕೆ ನಾನು ಪಶ್ಚಾತ್ತಾಪಪಡುತ್ತಿದ್ದೇನೆ . . . ಕ್ಷಮೆ ಕೋರುತ್ತಿದ್ದೇನೆ. ನನ್ನ ಅಪರಾಧಕ್ಕೆ ಈ ಶಿಕ್ಷೆ ಅನುಭವಿಸುತ್ತಿದ್ದೇನೆ . . . ನೀನಿಲ್ಲದೆ ನಾನು ರಾಜಧಾನಿಗೆ ಹೋಗುವುದಿಲ್ಲ. ನನಗೆ ಇನ್ನೆಲ್ಲಿಯ ರಾಜ್ಯ? ಶಾಂತಲೆ—ಎಲ್ಲಿ—ನಮ್ಮ ಮಗುವೆಲ್ಲಿ? ನಮ್ಮ ಕುವರನೆಲ್ಲಿ? ತಂದೆಗಿಂತಲೂ ಅವನಿಗೆ ತಾಯಿಯಾದ ಅಕ್ಕನಾದ ನೀನೆ

ಹೆಚ್ಚಾದೆ. ಅವನು ನಿನ್ನನ್ನೆ ಅನುಸರಿಸಿದ. ನಮ್ಮ ಮಗು ಸೋವಲೆಯೂ ಈಗ ಅವನನ್ನು ಅನುಸರಿಸುವಳು. ಇನ್ನು ನಿನ್ನ ತಂಗಿ ಅವಳೂ ನಿನ್ನನ್ನು ಅನುಸರಿಸುವಳು. ಇಬ್ಬರು ಮಕ್ಕಳುಗಳನ್ನು ಕಳೆದುಕೊಂಡ ನಿನ್ನ ಅವ್ವೆ, ನಿನ್ನ ಅಯ್ಯ, ಸೋವಲೆಯ ತಂದೆತಾಯಿಗಳು, ಕಡೆಗೆ ಬೊಪ್ಪಣ, ಎಲ್ಲರೂ ನನ್ನನ್ನು ಬಿಟ್ಟು ಹೋಗುವರು. ಅಯ್ಯೋ, ಹೊಯಿಸಳ ವಂಶವೆ, ರಾಜ್ಯವೆ! ಒಂದೇ ದಿನದಲ್ಲಿ ನೀನು ನಿರ್ನಾಮವಾದೆ, ಶ್ಮಶಾನವಾದೆ. ಇಷ್ಟು ಅನಾಹುತಗಳು ನಡದೇ ನಡೆಯುವುವೆಂದು ನೀನು ಯೋಚಿಸಲಿಲ್ಲವೇಕೆ? ಶಾಂತಲೆ, ನಾನಿನ್ನು ತಡೆಯಲಾರೆ, ತಡೆದುಕೊಳ್ಳಲಾರೆ . . . . ನೀನೆಲ್ಲಿರುವೆ? ಎಲ್ಲಿಂದು ಹುಡುಕಲಿ? ಯಾವ ಗವಿಯಲ್ಲಿ ಸೇರಿರುವೆ? ಯಾವ ಪೊದರಿನಲ್ಲಿ ಸೇರಿರುವೆ? ಯಾವ ವಾಯುವಿನಲ್ಲಿ ಸೇರಿರುವೆ? . . . ನಾನು ಕರೆಯುತ್ತಿದ್ದೇನೆ. ನನ್ನ ಜೀವ ಕಾತರಿಸಿ ಕರೆಯುತ್ತಿದೆ, ಶಾಂತಲೆ—ಓ . . . ಶಾಂತಲೆ!'

ಪ್ರಭುಗಳು ಪುನಃ ಆ ಕಳೇಬರವನ್ನು ಹೊತ್ತು ಹೊರಟರು. ಈಗಂತೂ ಹೆಜ್ಜೆಹೆಜ್ಜೆಗೂ ಹೆಚ್ಚು ಹೆಚ್ಚು ಶ್ರಮವಾಗುತ್ತಿದೆ. ಮೈಯೆಲ್ಲ ಬೆವರಿನಿಂದ ಒದ್ದೆಮುದ್ದೆಯಾಗಿದೆ. ಕಾಲುಗಳು ಮುಳ್ಳನ್ನು ತುಳಿದಿವೆ. ಉಟ್ಟಿದ್ದ ಧೋತ್ರ, ತೊಟ್ಟಿದ್ದ ಅಂಗರೇಕು ಮುಳ್ಳುಪೊದೆಗಳಿಗೆ ಸಿಕ್ಕಿ ಹರಿದು ಚಿಂದಿಯಾಗಿವೆ. ಕಾಲಿಟ್ಟರೆ ಬಂಡೆ ಸುಡುತ್ತಿದೆ. ಕಾಲಲ್ಲಿ ಶಕ್ತಿ ಉಡುಗಿ ಮೊಣಕಾಲು ಮುದುಡಿಕೊಳ್ಳುತ್ತಿದೆ. ಶಾಂತಲೆಯ ಕಳೇಬರವನ್ನು ಹೊತ್ತಿರುವ ಎಡಭುಜವನ್ನೂ ಎಡಪಾರ್ಶ್ವವನ್ನೂ ಬಹು ಜಾಗರೂಕತೆಯಿಂದ ಕಾಪಾಡಿಕೊಂಡು ಹೋಗುತ್ತಿದ್ದಾರೆ. ಬಲಭುಜ, ಬಲತೋಳು, ಬಲಪಾರ್ಶ್ವ ಎಲ್ಲ ಕಡೆಗಳಲ್ಲೂ ಗಾಯಗಳಾಗಿವೆ. ಅವರಿಗೆ ಈಗ ಯಾವ ನೋವೂ ಲಕ್ಷ್ಯವಿಲ್ಲ, ಯಾವ ಪೆಟ್ಟೂ ಲಕ್ಷ್ಯವಿಲ್ಲ. ಮನಸ್ಸಿನಲ್ಲಿ ಒಂದೇ ಗುರಿ: ತಮ್ಮ ಶಾಂತಲೆ ಬಂದೇಬರುವಳೆಂಬ ದೃಢ ವಿಶ್ವಾಸ. ಅವರ ವಿವೇಚನೆ ನಿನ್ನಿನ ರಾತ್ರಿಯೇ ಅರ್ಧ ಕೆಟ್ಟಿತು. ಬೆಟ್ಟ ಹತ್ತುವುದಕ್ಕೆ ಮೊದಲಿಟ್ಟಾಗ ಮುಪ್ಪಾಗ ಕೆಟ್ಟಿತು. ಈಗ ಪೂರ್ತಿ ಕೆಟ್ಟಿದೆ. ಹುಚ್ಚರಂತೆ ಬಲವಾಗಿ ಕೂಗುತ್ತಿದ್ದಾರೆ: 'ಶಾಂತಲೆ—ಓ—ಶಾಂತಲೆ!'

ತಮ್ಮ ಶಾಂತಲೆಯ ಜೀವ ಆ ಬಂಡೆಯ ಬಿರುಕಿನಲ್ಲಿದೆಯೆಂದು ಅಲ್ಲಿಗೆ ಹೋಗಿ ಕರೆಯುತ್ತಾರೆ. 'ಇಲ್ಲಿಲ್ಲ! ಆ ಗವಿಯಲ್ಲಿರಬಹುದು' ಎಂದು ಅಲ್ಲಿಗೆ ಹೋಗಿ ಬಲವಾಗಿ ಕರೆಯುತ್ತಾರೆ. ಅಲ್ಲಿ ಕಾಣದೆ 'ಗಿಡಗಳ ಅಡಿ ಅಡಗಿ

ಕೊಂಡಿರಬೇಕು' ಎಂದು ಅಲ್ಲಿಗೆ ಹೋಗಿ ಕರೆಯುತ್ತಾರೆ: 'ದೇವಿ . . . ನಾನು ಶಠ . . . ಮೂರ್ಖ, ಒಮ್ಮೆ ಕ್ಷಮಿಸಿಬಿಡು . . . ಬಾ ನನ್ನದೆಯ ಬೆಳಕೆ! ಬಾ . . . ಎನ್ನ ಉಸಿರೇ . . . ಶಾಂತಲೆ—ಓ ಶಾಂತಲೇ!'

§

ಅತ್ತ ರಾಜಧಾನಿಯಲ್ಲಿ ಕುವರವಿಷ್ಣುವಿನ ಕಳೇಬರಕ್ಕೆ ಮಜ್ಜನ ಮಾಡಿಸಿ, ಅಧಿಕಾರ ಅಂತಸ್ತುಗಳ ಉಡಿಗೆ ತೊಡಿಗೆಗಳನ್ನು ತೊಡಿಸಿ, ಕಾಲುಗಳಿಗೆ ಗಂಡ ಪೆಂಡೇರ, ಗರುಡನ ತೋಡಗಳನ್ನು ತೊಡಿಸಿ, ಅವನ ಆಯುಧಗಳೊಡನೆ ಅವನನ್ನು ಶುಭ್ರವಾದ ಕುಶಾಸನ ಒಂದರ ಮೇಲೆ ಮಲಗಿಸಿ, ಎಲ್ಲರೂ ಕೊನೆಯ ಸಲ ನೋಡಲೆಂದು ಮನೆಯ ಮುಂದಣ ವಿಸ್ತಾರವಾದ ಬಯಲಿನಲ್ಲಿ ತಂದಿಟ್ಟರು. ಮಕ್ಕಳಾದಿಯಾಗಿ ಸರ್ವರೂ ಬಂದು ನೋಡಿ ಆ ಧೀರನಿಗೆ ವೀರನಿಗೆ ಅಗಣಿತ ಗುಣನಿಗೆ ಪುಷ್ಪಗಳನ್ನು, ಅದರೊಡನೆ ಕಣ್ಣೀರನ್ನು ಅರ್ಪಿಸಿದರು. ಜನರು 'ನಮ್ಮ ತಾಯಿ ಎಲ್ಲಿ? ನಮ್ಮ ಮಹಾರಾಣಿ ಎಲ್ಲಿ?' ಎಂದು ಮೊರೆಯಿಟ್ಟರು. ಆಕೆಯ ಕಳೇಬರ ವೇಲಾಪುರಿಯಲ್ಲಿಯೆ ಇದೆಯೆಂದು ತಿಳಿದಾಗ ದ್ವಾರವತಿ ವೇಲಾಪುರಿಗೆ ದುಃಖಯಾತ್ರೆ ಹೊರಟಿತು.

ಆ ವೇಳೆಗೆ ಹೊಯಿಸಳೇಶ್ವರ ದೇವಾಲಯದ ಪಶ್ಚಿಮ ಭಾಗದ ಒಂದೆಡೆಯಲ್ಲಿ ಒಣಗಿದ ಗಂಧದ ಮರಗಳ ತುಂಡುಗಳಿಂದ ಒಂದು ದೊಡ್ಡ ಚಿತೆಯನ್ನು ಏರ್ಪಡಿಸಿಟ್ಟಿದ್ದರು. ಮನೆಯಿಂದ ಕುವರವಿಷ್ಣುವಿನ ಕಳೇಬರವನ್ನು ಸಮಸ್ತ ರಾಜಮರ್ಯಾದೆಗಳೊಡನೆ ಹೊತ್ತು ನಡೆದರು. ಆಚಾರ್ಯಕುಲ ಗುರುಕುಲಗಳವರೂ ಸಹಪಾಠಿಗಳೂ ಹಿಂದೆ ಹೊರಟರು. ಅವರ ಹಿಂದೆ, ಹೂ, ಅರಿಸಿನ, ಕುಂಕುಮ, ಸುಮಂಗಲ ಸೌಭಾಗ್ಯಗಳನ್ನು ಹೊತ್ತ ಸುಮಂಗಲಿಯರು ಹೊರಟರು. ಅವರ ನಡುವೆ ಸೌಮ್ಯಮುಖಿ ಶಾಂತಚಿತ್ತೆ ಅರಸಿನಬಣ್ಣದ ಉಡುಗೆಗಳಿಂದ ಹರಿದ್ರಾಕುಂಕುಮಪುಷ್ಪಾಲಂಕೃತೆಯಾಗಿ ಕೈಯಲ್ಲಿ ಮಂಗಳದ್ರವ್ಯಗಳನ್ನು ಹೊತ್ತು ಮಹಾಸತಿ ಸೋವಲೆದೇವಿ ನಡೆದುಬಂದಳು. ದಾರಿಯ ಉದ್ದಕ್ಕೂ ಊರ ಹೆಣ್ಣುಮಕ್ಕಳು ಆ ಸತಿಯ ಮೇಲೆ ಮಂಗಳದ್ರವ್ಯಗಳನ್ನು ಸುರಿಸುತ್ತ, ಹಾದಿಗೆ ಪುಷ್ಪಗಳನ್ನು ಹರಡುತ್ತಿದ್ದರು. ದಾರಿಯುದ್ದಕ್ಕೂ ಅಲ್ಲಲ್ಲಿ ಸುಮಂಗಲಿಯರು ಆ ಮಹಾಸತಿಗೆ ಹೂ, ಗಂಧ, ಅರಿಸಿನ ಕುಂಕುಮಗಳನ್ನು

ಕೊಟ್ಟು 'ಹೋಗಿಬರುವೆಯ ತಾಯಿ' ಎಂದು ಹರಸಿ ಬೀಳ್ಕೊಡುತ್ತಿದ್ದರು. ತಾಯಂದಿರು ಚಿಕ್ಕ ಮಕ್ಕಳನ್ನು ತಂದು ಮಹಾಸತಿಯ ಪಾದಗಳ ಮೇಲಿಟ್ಟು 'ಆಶೀರ್ವದಿಸು ತಾಯೆ' ಎಂದು ಬೇಡುತ್ತಿದ್ದರು. ಈ ಸಂದಣಿಯ ಹಿಂದೆ, ಕುವರರನೊಡನೆ ಹೋಗುವೆನೆಂದು ಕಂಕಣ ತೊಟ್ಟಿದ್ದ ಆರು ಮಂದಿ ನಾಯಕರು ಕೆಂಪು ವಸ್ತ್ರಗಳನ್ನುಟ್ಟು, ಹೊಸದಾಗಿ ಸಾಣೆ ಹಿಡಿದಿದ್ದ ಕತ್ತಿಗಳನ್ನು ಕೈಯಲ್ಲಿ ಹಿಡಿದು, ವೀರಯೋಧರ ಹಾಡುಗಳನ್ನು ಹೇಳುತ್ತ, ಸಂತೋಷಚಿತ್ತರಾಗಿ ನಡೆದರು. ಇವರ ಹಿಂದೆ ಕುವರವಿಷ್ಣುವಿನ ಸ್ವಂತಪಡೆಯ ಜನರು ತಮ್ಮ ಸೇನಾಧಿಪತಿಯ ಅಂತಿಮ ದರ್ಶನಕ್ಕೆಂದು ನಡೆದರು.

ಚಿತೆಯ ಪ್ರದೇಶವನ್ನು ಸೇರಿದನಂತರ ಗುರುಕುಲದವರು ಮುಂದೆ ಬಂದು ಕುವರನ ವಸ್ತ್ರಭೂಷಣಗಳನ್ನೆಲ್ಲ ಬಿಚ್ಚಿ, ಕುಲಸಂಪ್ರದಾಯವಾದ ಶ್ವೇತಾಂಬರವನ್ನು ಕಳೇಬರಕ್ಕೆ ಹೊದಿಸಿ, ಅಂದಿನ ಕರ್ಮಾದಿಗಳಿಗೆ ಮೊದಲಿಟ್ಟರು. ಚಿತಾರೋಹಣ ಮಾಡಿಸಿ, ಕಳೇಬರವನ್ನು ಗಂಧದ ಮರದ ತುಂಡುಗಳಿಂದ ಮುಚ್ಚಿ, ಮುಖವನ್ನು ಮಾತ್ರ ಹೊರಗಿಟ್ಟು, ಆಚ್ಛಾದಿಸಿದ್ದ ವಸ್ತ್ರವನ್ನೂ ತೆಗೆದುಹಾಕಿದರು. ಎಲ್ಲರೂ ಬಂದು ಅಂತ್ಯದರ್ಶನ ಮಾಡಿ ಹೋದರು. ಚಿತೆಗೆ ಸೇರಿಕೊಂಡಂತೆ ಮೋಟಕಾದ ಶಿಲಾಸ್ತಂಭ ಒಂದನ್ನೂ ಅದಕ್ಕೆ ಸೇರಿದಂತೆ ಒಂದು ಮಹಾಸತಿ ಕಲ್ಲನ್ನೂ ಸ್ಥಾಪಿಸಿದ್ದರು. ವಿಧಿಪೂರ್ವಕವಾಗಿ ಸೋವಲೆಯ ತಂದೆ ವೀರದೇವ ಅಮಾತ್ಯರು ಚಿತೆಗೆ ಅಗ್ನಿಸ್ಪರ್ಶ ಮಾಡಿಸಿದರು. ಸೋವಲೆಯ ತಾಯಿ ಮಗಳಿಗೆ ಹೂ ಮುಡಿಸಿ, ಅರಿಸಿನ ಕುಂಕುಮವಿಟ್ಟು, ಕೈಗೆ ವೀಳೆಯ ಕೊಟ್ಟು 'ನಿನ್ನ ಪತಿಯೊಡನೆ ಶಾಶ್ವತ ಸೌಧರ್ಮಸ್ವರ್ಗವನ್ನೇರು' ಎಂದು ಹರಸಿದರು. ಆ ಮಹಾಸತಿ ಆಗ ಅಲ್ಲಿ ಸೇರಿದ್ದ ಸಭೆಗೆಲ್ಲ ವಂದಿಸಿದಳು. ಆಕೆಯ ಮೇಲೆ ಪುಷ್ಪವೃಷ್ಟಿಯೆ ಆಯಿತು. ಕೊನೆಯದಾಗಿ ತಾಯಿತಂದೆಯರಿಗೆ ವಂದಿಸಿದಳು. ಬಳಿಕ ತಾಯಿತಂದೆಯರಿಬ್ಬರೂ ಪಕ್ಕದಲ್ಲಿದ್ದ ಕೊಳ ಒಂದರಲ್ಲಿ ಕುತ್ತಿಗೆಯುದ್ದ ನೀರಿನಲ್ಲಿ ತೀರ್ಥಂಕರರನ್ನು ಧ್ಯಾನಿಸುತ್ತ ಕುಳಿತುಬಿಟ್ಟರು.

ಮಹಾಸತಿ ಸೋವಲೆದೇವಿ ಕೈಗಳನ್ನು ಜೋಡಿಸಿಕೊಂಡು ಜ್ವಲಿಸುತ್ತಿದ್ದ ಚಿತೆಗೆ ಮೂರುಸಲ ಬಲವಂದಳು. ಸುಮನದಿಂದ ಪ್ರಫುಲ್ಲವದನೆಯಾಗಿ ಸತೀಸ್ತಂಭವನ್ನು ಹತ್ತಿ ಮೇಲೆ ನಿಂತಾಗ ಅಗ್ನಿಯೂ ಸ್ವಾಹಾದೇವಿಯೂ ಇನ್ನು

ತಮ್ಮ ಮಗಳಾದ ಈಕೆಯನ್ನು ಆಕೆಯ ಪತಿಯ ಬಳಿಗೆ ಕರೆದೊಯ್ಯಲು ತಮ್ಮ ಜ್ವಾಲಾಭುಜಗಳನ್ನು ಚಾಚಿಚಾಚಿ ಮುಂದೆ ಬಂದರು. ಜನರೆಲ್ಲ 'ಮಹಾಸತಿ, ಮಹಾಸತಿ ಸೋವಲೆದೇವಿ' ಎಂದು ಮುಕ್ತಕಂಠದಿಂದ ಕೂಗಿದರು. ನಾನಾ ತೆರನಾದ ಪ್ರಚಂಡ ನಾದವಾದ್ಯಗಳು ಭೋರ್ಗರೆದುವು. ಮಹಾಸತಿ ಎರಡು ಕೈಗಳನ್ನೂ ಮೇಲಕ್ಕೆತ್ತಿ, ತಾನು ನಂಬಿದ್ದ ದೈವಕ್ಕೆ ಅಂತಿಮ ಪ್ರಾರ್ಥನೆಯನ್ನು ಸಲ್ಲಿಸಿ, ಅದ್ಭುತಾಕಾರವಾಗಿ ಜ್ವಲಿಸುತ್ತಿದ್ದ ಆ ಚಿತಾಗ್ನಿಗೆ ಸುವರ್ಣಲತೆಯಂತಿದ್ದ ತನ್ನ ಶರೀರವನ್ನು ಅರ್ಪಿಸಿಕೊಂಡುಬಿಟ್ಟಳು.

ಈ ಚಿತಾಗ್ನಿಗೆ ಸ್ವಲ್ಪ ದೂರವಾಗಿ ನೆಲದಲ್ಲಿ ಒಂದು ದೊಡ್ಡ ಹೊಂಡವನ್ನು ಮಾಡಿ, ಅದರ ತುಂಬ ಒಣಗಿದ ಕಾಷ್ಠಗಳನ್ನು ಸೇರಿಸಿ ಬೆಂಕಿಯ ನೊಡ್ಡಿದರು. ಅದು ಈಗ ಚೆನ್ನಾಗಿ ಹೊತ್ತಿಕೊಂಡು ಉರಿಯುತ್ತಿತ್ತು. ಹೊಂಡಕ್ಕೆ ಎದುರಾಗಿ ವೀರಗಲ್ಲಿನ ಸ್ತಂಭ, ಅದರ ಶಿಖರಕ್ಕೆ ಹೊಯಿಸಳ ಪತಾಕೆ. ಈ ವೀರಗಲ್ಲನ್ನೂ ಅಗ್ನಿಕುಂಡವನ್ನೂ ಸುತ್ತು ಬಳಸಿ ಅರುವತ್ತು ಎಪ್ಪತ್ತು ಅಡಿ ವರ್ತುಳದಲ್ಲಿ ಬಿಚ್ಚುಗತ್ತಿ ಹಿಡಿದಿದ್ದ ಹೊಯಿಸಳ ಸೇನೆ. ಕಿವಿ ಚಿಟ್ಟಾಗುವಂತೆ, ಚರ್ಮವಾದ್ಯಗಳ ಕೊಂಬುಕಹಳೆಗಳ ಆರವ. ನಡುವೆ ಆರು ಮಂದಿ ಕಂಕಣಧಾರಿಗಳು ವೀರನೃತ್ಯಕ್ಕೆ ಮೊದಲಿಟ್ಟರು. ವಾದ್ಯಗಳ ರಭಸ ಹೆಚ್ಚಿದಂತೆ ಅವರ ನೃತ್ಯವೂ ಭಯಂಕರವಾಗುತ್ತ ಬಂತು. ಕುಣಿದು ಕುಣಿದು ಅವರಿಗೆ ವೀರಾವೇಶ ಬಂದಿತು. 'ಸಿದ್ಧತಲೆ'ಯನ್ನು ನೋಡಲು ಎಲ್ಲರೂ ಆತುರದಿಂದ ಕಾದಿದ್ದರು. ಚೆನ್ನಾಗಿ ಹರಿತಮಾಡಿದ್ದ ಚಂದ್ರಾಯುಧವನ್ನು ಬಲವಾದ ಒಂದು ಬಿಲ್ಲಿನ ಹೆದೆಗೆ ಬಾಗಿಸಿ ಕಟ್ಟಿದ್ದರು. ಅದರ ಮುಂದೆ ಆ ಆರು ಜನರಲ್ಲಿ ಒಬ್ಬನು ಬಂದು ಕೈ ಜೋಡಿಸಿಕೊಂಡು, ಕಣ್ಮುಚ್ಚಿ ಉಚ್ಛ್ವಾಸ ನಿಶ್ವಾಸಗಳನ್ನು ಸ್ತಂಭಿಸಿ ಕೂತ. ಇನ್ನೊಬ್ಬನು ಕುಣಿಯುತ್ತ ಬಂದು, ಬಿಗಿದು ಕಟ್ಟಿದ್ದ ಹಗ್ಗವನ್ನು ಆಯನೋಡಿ ತನ್ನ ಕತ್ತಿಯಿಂದ ತುಂಡರಿಸಿದ. ಬಗ್ಗಿಸಿ ಕಟ್ಟಿದ್ದ ಚಂದ್ರಾಯುಧದ ಅಲಗು ಬಲವಾಗಿ ಬೀಸಿ, ಕುಳಿತಿದ್ದ ಸಿದ್ಧನ ಕತ್ತನ್ನು ಸವರಿದಂತೆ ಕತ್ತರಿಸಿಕೊಂಡುಹೋಯಿತು. ತಲೆ ಕೆಳಗುರುಳಿತು. ಹೀಗೆ ಒಬ್ಬರಾದ ಮೇಲೆ ಒಬ್ಬರಾಗಿ ಐದು ಜನ ತಮ್ಮ ತಲೆಗಳನ್ನು ಕೊಟ್ಟರು. ಆರನೆಯವನು ತನ್ನ ಶಿಖೆಯನ್ನು ಎಡಗೈಯಿಂದ ಹಿಡಿದುಕೊಂಡು, ಬಲಗೈ ಕತ್ತಿಯ ಒಂದೇ ಏಟನಿಂದ ತಲೆಯನ್ನು ಕತ್ತರಿಸಿಕೊಂಡುಬಿಟ್ಟ.

ಅನಂತರ ಅವರೆಲ್ಲರ ರುಂಡಮುಂಡಗಳನ್ನು ಸೈನಿಕರು ಅಗ್ನಿಗೆ ಎಳೆದುಹಾಕಿದರು. ಆ ಆರು ವೀರರಿಗೂ ವೀರಸ್ವರ್ಗದ ಸದ್ಗತಿ ಬಂದಿತೆಂದು ಸಂತೋಷದಿಂದ ಸೈನಿಕರೆಲ್ಲ ಕುಣಿದಾಡಿದರು. ಅಗ್ನಿಕುಂಡದಲ್ಲಿ ಬೇಯುತ್ತಿದ್ದ ಮಹಾಮಾಂಸದ ವಾಸನೆ ಎಲ್ಲೆಲ್ಲೂ ಹರಡಿ, ರಾಜಧಾನಿಯೆಲ್ಲ ಶ್ಮಶಾನಧೂಮಮಯವಾಯಿತು.

§

ಅತ್ತ ವೇಲಾಪುರಿಯಲ್ಲಿ ಸೂರ್ಯೋದಯವಾಗುವುದಕ್ಕೆ ಮೊದಲೆ ಊರಿನವರು ಅರಮನೆಯ ಮುಂದೆ ಬಂದು ಸೇರಿದರು. ಸಾವಿನ ಸುದ್ದಿಯನ್ನು ಮುಚ್ಚಿಡಲು ಸಾಧ್ಯವೆ! 'ಚೆಲುವ ಕೇಶವನನ್ನು ನಮಗೆ ಕೊಟ್ಟ ಚೆಲುವಾಂಬೆ ಮಹಾರಾಣಿ ಶಾಂತಲಾದೇವಿಯರು ಎಲ್ಲಿ? ಮಕ್ಕಳಂತೆ ನಮ್ಮನ್ನು ಸಲಹುತ್ತಿದ್ದ ಹೊಯಿಸಳ ದೇವಿಯರೆಲ್ಲಿ? ನಮ್ಮ ಅವ್ವೆಯರೆಲ್ಲಿ? ಆಕೆಗೆ ಮಗುವಾಗಿದ್ದ, ತಮ್ಮನಾಗಿದ್ದ, ಈ ರಾಜ್ಯವನ್ನು ಮಹಾ ಆಪತ್ತಿನಲ್ಲಿ ಕಾಪಾಡಿದ ಲೋಕೈಕವೀರನೆಲ್ಲಿ? ಕುದುರೆಗಳ ಗುಂಪುಗಳನ್ನೂ, ಆನೆಗಳ ಹಿಂಡನ್ನೂ ತಂದು ತನ್ನ ಅಪ್ಪಾಜಿಯವರಿಗೆ ಒಪ್ಪಿಸಿದ ವೀರನೆಲ್ಲಿ! ನಮ್ಮ ಪ್ರಭುಗಳ ಕುವರನೆಲ್ಲಿ? ಅಯ್ಯೋ . . .' ಎಂದು ಜನರು ಗೋಳಾಡಿಹೋದರು.

ಕುವರನ ಕಳೇಬರವನ್ನು ಸತಿ ಸೋವಲೆದೇವಿ ಮಧ್ಯರಾತ್ರಿಯಲ್ಲಿಯೆ ರಥದಲ್ಲಿ ದ್ವಾರವತಿಗೆ ಕೊಂಡುಹೋದರೆಂದು ಜನರಿಗೆ ತಿಳಿಯಿತು. ಪ್ರಭುಗಳೂ ಶಾಂತಲದೇವಿಯ ಕಳೇಬರವೂ ಅನಂತರ ಕಾಣಬರಲಿಲ್ಲವೆಂಬುದನ್ನು ಕೇಳಿ, ಜನರಿಗೆ ದುಃಖ, ಭಯ, ಆಶ್ಚರ್ಯಗಳು ಏಕಕಾಲದಲ್ಲಿ ಉಂಟಾದುವು. ಅರಮನೆಯ ಅಧಿಕಾರಿಗಳೆಲ್ಲ ಭಯಪಟ್ಟುಹೋದರು. ಅವರು ಮಾರಸಿಂಗಮಯ್ಯನವರನ್ನು ಪ್ರಶ್ನಿಸಿದರು. ಮಾರಸಿಂಗಮಯ್ಯ ಅವಾಕ್ಕಾದರು. ಹೇಮಾದ್ರಿಗಳಿಗೂ, ಅಚ್ಯುತ, ಗೋವಿಂದ ಅಮಾತ್ಯರುಗಳಿಗೂ ದಿಕ್ಕು ತೋರದಂತಾಯಿತು. ಅರಮನೆಯನ್ನು, ಊರನ್ನು, ದೇವಾಲಯಗಳನ್ನು ಎಲ್ಲ ಶೋಧಿಸಿದರು. ಪ್ರಭುಗಳೂ ಇಲ್ಲ, ಶಾಂತಲದೇವಿಯ ಕಳೇಬರವೂ ಇಲ್ಲ. 'ಇದೇನು ಆಶ್ಚರ್ಯ! ಇದೇನು ವಿಪತ್ತು!' ಎಂದು ಎಲ್ಲರೂ ಧೃತಿಕೆಟ್ಟರು. ಮಾರಸಿಂಗಮಯ್ಯನವರು 'ಈ ಸಂಗತಿಯನ್ನು ತಮ್ಮ ಪತ್ನಿಗೆ ತಿಳಿಸುವುದೆ? ತಿಳಿಸದೆ ಇರುವುದೆ? ಈಗೇನು ಮಾಡುವುದು?' ಎಂಬ ತೊಡಕಿನಲ್ಲಿ ಸಿಕ್ಕಿಬಿದ್ದರು.

ಹೇಮಾದ್ರಿಗಳಿಗೆ ಈಗ ಅರ್ಥವಾಯಿತು, ನಿನ್ನಿನ ರಾತ್ರಿ 'ಅರಮನೆಯ ಎಲ್ಲ ದಾಸದಾಸಿಯರೂ, ಎಲ್ಲ ಅಧಿಕಾರವರ್ಗದವರೂ, ನಿಮ್ಮ ನಿಮ್ಮ ಸ್ಥಾನ ಗಳಿಗೆ ಹೋಗಿ ದೇವರನ್ನು ಪ್ರಾರ್ಥಿಸಿರಿ, ಶಿವಗಂಗೆಯಿಂದ ಬಂದ ರಥ ಅಲ್ಲಿಯೆ ಇರಲಿ, ಕುದುರೆಗಳಿಗೆ ಮೇವು ನೀರುಗಳನ್ನಿಡಿ, ಬಿಚ್ಚಬೇಡಿ' ಎಂದು ಪ್ರಭುಗಳು ಆಜ್ಞಾಪಿಸಿದುದರ ಸೂಕ್ಷ್ಮ. ಅಚ್ಯುತ, ಗೋವಿಂದರೂ ಹಾಗೆಯೆ ಊಹಿಸಿದರು. ಮಾರಸಿಂಗಮಯ್ಯನವರೂ ಅರಿತರು: ಪ್ರಭುಗಳು ಶಾಂತಲೆಯ ಕಳೇಬರವನ್ನು ರಥದಲ್ಲಿಟ್ಟು ತೆಗೆದುಕೊಂಡು ಹೋದರೆಂದು. 'ರಾಜಧಾನಿಗೆ ಹೋದರೆ? ಅವರೇ ರಥ ನಡಸಿಕೊಂಡು ಹೋದರೆ? ಈ ಗೋಪ್ಯವೇಕೆ? ಇಲ್ಲ, ರಾಜಧಾನಿಗೆ ಹೋಗಲಿಲ್ಲ! ಇನ್ನೆಲ್ಲಿಗೆ? ಇನ್ನೆಲ್ಲಿಗೆ?' ಎಂದು ಎಲ್ಲರಿಗೂ ಯೋಚನೆಗೆ ಕಾರಣವಾಯಿತು.

ಕೊನೆಗೆ ಒಂದು ನಿರ್ಧಾರಕ್ಕೆ ಬಂದರು: 'ಪ್ರಭುಗಳೇ ರಥವನ್ನು ನಡಸಿಕೊಂಡು ಹೋಗಿದ್ದಾರೆ. ರಥಕ್ಕೆ ರಾತ್ರಿಯ ವೇಳೆಯಲ್ಲಿ ಎರಡು ಕಡೆ ಕಟ್ಟೆ ಹಚ್ಚುವ ಪಂಜುಗಳನ್ನೂ ತೆಗೆದುಕೊಂಡು ಹೋಗಿದ್ದಾರೆ. ದೂರದ ಪ್ರಯಾಣಕ್ಕೆಂದು ಎಣ್ಣೆಯಲ್ಲಿ ನೆನೆಸಿಟ್ಟದ್ದ ಪಂಜಿನ ಬತ್ತಿಗಳನ್ನೂ ತೆಗೆದು ಕೊಂಡು ಹೋಗಿದ್ದಾರೆ. ಆದ್ದರಿಂದ ಇನ್ನೆಲ್ಲಿಗೆ ಹೋಗಿದ್ದಾರು! ಬಹುಶಃ ಶಿವಗಂಗೆಗೇ ಹೋಗಿರಬೇಕು' ಎಂದು. ಶಿವಗಂಗಾ ಮಾರ್ಗವೂ, ವೇಲಾ ಪುರಿಯ ರಾಜಮಾರ್ಗವು ಕವಲೊಡೆದು ಬೇರೆಯಾಗುವ ಕಡೆ, ಇರುವ ರಾತ್ರಿಯ ಕಾವಲುಗಾರರನ್ನು ಕರೆಯಿಸಿ ಕೇಳಿದರು. ಅವರು 'ಮಧ್ಯರಾತ್ರಿ ಸಮಯದಲ್ಲಿ ರಾಜರಥವೊಂದು ವೇಗದಿಂದ ಶಿವಗಂಗಾಭಿಮುಖವಾಗಿ ಹೋಯಿತು. ಕುದುರೆಗಳ ಅಲಂಕಾರದಿಂದ, ರಥಕ್ಕೆ ಕಟ್ಟಿದ ಗಂಟೆಗಳಿಂದ, ರಥದ ಶಿಖರದಲ್ಲಿದ್ದ ಧ್ವಜದಿಂದ, ಅದು ರಾಜರಥವೆಂದೇ ತಿಳಿದು, ಅದನ್ನು ನಿಲ್ಲಿಸಿ ಪರೀಕ್ಷಿಸಲಿಲ್ಲ' ಎಂದರು.

ಹೇಮಾದ್ರಿಗಳು ತತ್‌ಕ್ಷಣವೇ ಶಿವಗಂಗೆಗೆ ಎರಡು ವೇಗವಾದ ರಥ ಸಿದ್ಧವಾಗಲೆಂದು ಆಜ್ಞೆ ಮಾಡಿದರು. ಐವತ್ತು ಉತ್ತಮಾಶ್ವಗಳನ್ನು ಆ ಕ್ಷಣವೆ, ಮಾರ್ಗದ ಗಾವುದ ಗಾವುದ ಬದಲಾವಣೆಗಾಗಿ ಕಳಿಸಿದರು. ಅಷ್ಟು ಹೊತ್ತಿಗೆ ಸರಿಯಾಗಿ, ಹಿಂದಿನ ದಿನ ಶಾಂತಲಾದೇವಿ, ಕುವರವಿಷ್ಣು ಇವರ ಕಳೇಬರಗಳನ್ನು ರಥದಲ್ಲಿರಿಸಿ, ಶಿವಗಂಗೆಯಿಂದ ವೇಲಾಪುರಿಗೆ ಕಳಿಸಿಕೊಟ್ಟ

ಶಿವಗಂಗೆಯ ಹೆಗ್ಗಡೆಯೂ ನಗರರಕ್ಷಕರೂ ರಥದಲ್ಲಿ ಬಂದಿಳಿದರು. ಸಚಿವರು ಅವರಿಂದ ಸಮಸ್ತ ವಿಷಯಗಳನ್ನೂ ವಿಚಾರಿಸಿ ಅರಿತುಕೊಂಡರು, 'ದಾರಿಯಲ್ಲಿ ರಾಜರಥವನ್ನು ಕಂಡಿರೆ?' ಎಂದು ಪ್ರಶ್ನೆ ಮಾಡಿದರು. ಅವರು 'ಸುಮಾರು ಮೂರು ಗಂಟೆ ರಾತ್ರಿಯಲ್ಲಿ, ದಾರಿಯಲ್ಲಿ, ಎದುರಿಗೆ ಮಹಾವೇಗದಿಂದ ಬರುತ್ತಿದ್ದ ರಾಜರಥ ಒಂದಕ್ಕೆ ದಾರಿಬಿಟ್ಟು ಪಕ್ಕಕ್ಕೆ ಸರಿದೆವು. ರಥ ಮಿಂಚಿನ ವೇಗದಿಂದ ಹೋಯಿತು. ರಥದಲ್ಲಿದ್ದವರು ಯಾರೆಂದು ನೋಡಲಾಗಲಿಲ್ಲ, ಎರಡು ಕಡೆಗಳಲ್ಲೂ ಸಂಜು ಉರಿಯುತ್ತಿದ್ದವು' ಎಂದು ಹೇಳಿದರು. ಅಚ್ಯುತ, ಗೋವಿಂದರು 'ನೀವು ಈಗ ಸ್ನಾನ ಮುಗಿಸಿ ಉಪಾಹಾರ ಕೊಂಡು ಇನ್ನೆರಡು ಘಳಿಗೆಗಳೊಳಗೆ ನಮ್ಮೊಡನೆ ಶಿವಗಂಗೆಗೆ ಹೊರಡಲು ಸಿದ್ಧರಾಗಿರಿ' ಎಂದಾಜ್ಞೆ ಮಾಡಿದರು.

ಅಷ್ಟು ಹೊತ್ತಿಗೆ ಲಕ್ಷ್ಮೀದೇವಿಗೆ ನಾಲ್ಕು ಸಲ ಔಷಧಿ ಕೊಟ್ಟು ಆಗಿತ್ತು. ಮೂರನೆಯ ಸಲ ಔಷಧಿಯನ್ನು ಕೊಟ್ಟ ಮೇಲೆ ಲಕ್ಷ್ಮೀದೇವಿಯ ಕೈಕಾಲು ಸ್ವಲ್ಪ ಮೆದಲಿದುವು. ಬಿಗಿದುಹೋಗಿದ್ದ ಕಣ್ಣುರೆಪ್ಪೆ ಸ್ವಲ್ಪ ಸಡಿಲವಾದುವು. ಗಳದಲ್ಲಿ ಸ್ವಲ್ಪ ನಾದ ಹೊರಟಿತು. ನಾಲ್ಕನೆಯ ವೇಳೆಯ ಔಷಧಿಯನ್ನು ಕೊಡುವ ವೇಳೆಗೆ ಕೈಕಾಲು ಪೂರ್ಣ ಸ್ವಾಧೀನಕ್ಕೆ ಬಂದಿದ್ದವು. ಲಕ್ಷ್ಮಿ ಕಣ್ತೆರೆದು ಸುತ್ತಮುತ್ತ ನೋಡಿದಳು. ಎಲ್ಲಿಯೋ ಇದ್ದವಳಂತೆ, ಎಲ್ಲಿಗೋ ಬಂದವಳಂತೆ ಪೇಚಾಡಿದಳು. ತಂದೆತಾಯಿಯರನ್ನು ನೋಡಿದಳು, ಗುರುತು ಹಿಡಿಯಲಿಲ್ಲ; ದಾಸಿಯರ ಗುರುತೂ ಸಿಗಲಿಲ್ಲ. ಮಾಚಿಕಬ್ಬೆ ಮಗಳಿಗೆ ಔಷಧ ಕೊಟ್ಟು, ಎರಡು ಬಟ್ಟಲು ಸುಖೋಷ್ಣವಾದ ಹಾಲನ್ನು ಮೆಲ್ಲಮೆಲ್ಲಗೆ ಗುಟುಕು ಗುಟುಕಾಗಿ ಕುಡಿಸಿದರು. ಸ್ವಲ್ಪ ಹೊತ್ತಾದ ಮೇಲೆ, ಲಕ್ಷ್ಮೀದೇವಿ, ಮೆಲ್ಲನೆ ಎದ್ದು ಕುಳಿತುಕೊಂಡಳು. ಮಾಚಿಕಬ್ಬೆ ಮಗಳನ್ನು ತಮ್ಮ ಎದೆಗೆ ಒರಗಿಸಿ ಹಿಡಿದುಕೊಂಡರು.

ಆಗ ಅಚ್ಯುತ ಅಮಾತ್ಯರು ಅಲ್ಲಿಗೆ ಬಂದು ಲಕ್ಷ್ಮೀದೇವಿಯನ್ನೂ ಮಾಚಿಕಬ್ಬೆಯವರನ್ನೂ ಕಂಡು ಸ್ವಲ್ಪ ಸಮಾಧಾನ ಹೊಂದಿದವರಾಗಿ, ಅಲ್ಲಿಯೆ ಕುಳಿತಿದ್ದ ಮಾರಸಿಂಗಮಯ್ಯನವರನ್ನು ಮೆಲ್ಲಗೆ ಸಂಜ್ಞೆಮಾಡಿ ಹೊರಕ್ಕೆ ಬರಹೇಳಿದರು. ಹೊರಕ್ಕೆ ಕರೆದುಕೊಂಡುಬಂದು ಪಿಸುಮಾತಿನಲ್ಲಿ ನಾಲ್ಕೈದು ನಿಮಿಷ ಕಾಲ ಮಾತನಾಡಿ, ತಾವು ಹೇಳಬೇಕಾದ ಸಂಗತಿಗಳೆಲ್ಲವನ್ನು ಹೇಳಿ

ದರು. ಮಾರಸಿಂಗಮಯ್ಯನವರು ಅದೆಲ್ಲವನ್ನು ಕೇಳಿ ಇನ್ನಷ್ಟು ಭೀತಿಗೊಂಡರು. 'ಏನು ಉದ್ದೇಶವಿರಬಹುದು?' ಎಂದು ಕೇಳಿದರು. 'ಭಗವಂತನಿಗೇ ಬೆಳಕು, ಪ್ರಭುಗಳ ಮನಸ್ಸಿನಲ್ಲಿ ಏನು ಯೋಚನೆ ತೋರಿತೋ! ಇಂತಹ ಘೋರ ಸಂಕಟದಲ್ಲಿ ಯಾವ ಪ್ರಾಜ್ಞನಿಗಾದರೂ ಸಂಯಮ ತಪ್ಪಬಹುದು, ಚಿತ್ತ ವಿಕಲ್ಪವಾಗಬಹುದು, ಧೀಮಂತನೂ ಹುಚ್ಚನಾಗಬಹುದು! ಈ ವಿಪತ್ತು ಸಾಮಾನ್ಯವೆ! . . . ಅಣ್ಣನವರು ನಾನು ಮುಖಸ್ತುತಿ ಮಾಡುತ್ತಿರುವೆನೆಂದು ಭಾವಿಸಬಾರದು. ಅಣ್ಣನವರ ಸಂಯಮ ಶಿವನಿಗೂ ಸಾಧ್ಯವಿಲ್ಲ' ಎಂದರು ಅಚ್ಯುತರು. 'ಇದು ಸಂಯಮವಲ್ಲ ಅಚ್ಯುತರೆ. ಈ ಮನಸ್ಸಿಗೆ ಹತ್ತಿರುವ ಇನ್ನೊಂದು ದೊಡ್ಡ ಭೀತಿ ನನ್ನ ಮಗುವಿಗಾಗಿ ನಾನು ಪಡುತ್ತಿರುವ ಸಂಕಟ ವನ್ನು ಮೇಲೇರಿ ತಾನು ನಿಂತಿದೆ. ನನ್ನ ಪತ್ನಿ ಇನ್ನು ಜೀವ ಹಿಡಿದಿರಲಾರಳು. ಅಕ್ಕನ ಸುದ್ದಿ ತಂಗಿಗೆ ತಿಳಿಯದೆ ಇರುವುದೆ? ತಿಳಿದ ಕ್ಷಣವೆ ಲಕ್ಷ್ಮಿ ಹೋದ ಳೆಂದೇ! . . . . ಪ್ರಭುಗಳು ಒಂದು ವೇಳೆ ಉಳಿದರೂ ಲಕ್ಷ್ಮಿಗಾಗಿಯೆ! ಲಕ್ಷ್ಮಿಯೂ ಹೋದ ಮೇಲೆ!' ಎಂದರು ಮಾರಸಿಂಗಮಯ್ಯ. ಒಂದೆರಡು ನಿಮಿಷ ಯೋಚಿಸಿದಮೇಲೆ ಮಾರಸಿಂಗಮಯ್ಯ ಮತ್ತೆ ಹೇಳಿದರು: 'ಅಚ್ಯುತರೆ, ಈಗಿನ ಸನ್ನಿವೇಶದಲ್ಲಿ ನಿಮ್ಮ ಯೋಚನೆಯೇ ಸೂಕ್ತವೆಂದು ಕಾಣುತ್ತದೆ. ನಿಮ್ಮೊಡನೆ ಶಿವಗಂಗೆಗೆ ಬರಲು ನನಗೂ ಆತುರವಿದೆ, ಆದರೆ ನನ್ನ ಪತ್ನಿಯನ್ನು ಇಲ್ಲಿ ಬಿಟ್ಟು ನಾನು ಬರಲಾಗುವುದಿಲ್ಲ. ಆಕೆ ಲಕ್ಷ್ಮಿಯನ್ನೂ ಸಾಯಿಸಿ ತನ್ನನ್ನೂ ಕೊಂದುಕೊಳ್ಳುವಳು. ಪ್ರಭುಗಳು ತನ್ನ ಮಗುವಿನ ಕಳೇಬರದೊಂದಿಗೆ ಶಿವ ಗಂಗೆಗೆ ಹೋದರೆಂಬ ಸುದ್ದಿ ಕಿವಿಗೆ ಬಿದ್ದ ಕ್ಷಣ ಆಕೆ ಉಳಿಯುವುದಿಲ್ಲ. ಲಕ್ಷ್ಮಿಗೆ ಇನ್ನು ಕೆಲವು ಗಂಟೆಗಳೊಳಗೆ ಪೂರ್ಣಪ್ರಜ್ಞೆಯುಂಟಾಗುತ್ತದೆ. ಆಮೇಲೆ ಲಕ್ಷ್ಮಿಯೂ ಉಳಿಯುವುದಿಲ್ಲ. ನನ್ನ ಪತ್ನಿಗೆ, ಪ್ರಭುಗಳ ಈ ವಿಷಯ ಖಂಡಿತ ತಿಳಿಯಕೂಡದು. ಇದಕ್ಕೇನು ಮಾಡುವುದು? ಲಕ್ಷ್ಮಿಗೆ ಪ್ರಜ್ಞೆ ಬರುತ್ತಿರುವಾಗ,—ಈಗ,—ನನ್ನ ಪತ್ನಿ ಲಕ್ಷ್ಮಿಯ ಬಳಿಯೂ ಇರಕೂಡದು. ಅಚ್ಯುತರೆ, ನಾನೇನು ಮಾಡಲಿ? ಈಗ ಪತ್ನಿಯನ್ನೂ ಕಳೆದುಕೊಳ್ಳುತ್ತೇನೆ. ಇನ್ನೊಬ್ಬ ಮಗಳನ್ನೂ ಕಳೆದುಕೊಳ್ಳುತ್ತೇನೆ . . . . ಈಗೇನು ಮಾಡಲಿ? . . . ಈಗ ನನಗೆ ತೋರುವುದೊಂದೆ ಮಾರ್ಗ. ಇಲ್ಲಿಂದ ಈ ನಿಮಿಷ ನಾನು ನನ್ನ ಪತ್ನಿಯನ್ನು, ಹೇಗಾದರೂ ಮಾಡಿ, ಏನಾದರೂ ಮಾಡಿ, ರಾಜಧಾನಿಗೆ

ಕರೆದುಕೊಂಡು ಹೋಗಬೇಕು. ತನ್ನ ಮಗುವಿನ ಕಳೇಬರವನ್ನು ಇನ್ನೊಮ್ಮೆ ನೋಡಲು ಆಸೆಪಟ್ಟರೆ ನಾನು ಬೇಡವೆನ್ನಲೆ, ಭಗವಂತ! . . . ನೋಡದೆ ಬರಲಾರೆನೆಂದು ಗೋಳಾಡಿದರೆ! ಲಕ್ಷ್ಮಿಗೆ ಆಗ ಪ್ರಜ್ಞೆ ಬಂದರೆ! ಅಯ್ಯೋ! ಶಿವನೆ! ಇದೇನು ವಿಪತ್ತುಗಳು! ನನ್ನ ಪತ್ನಿಗೆ ನಿಜ ಹೇಳಲೆ! ಸುಳ್ಳು ಹೇಳಲೆ! ಏನು ಮಾಡಲಿ ಹೇಳಿ. ಯಾರ ಸಂಕಟ ದೊಡ್ಡದು? ಯಾರದು ಚಿಕ್ಕದು? . . . ನಾನು ನನ್ನ ಕರ್ತವ್ಯವನ್ನು ಮಾಡುತ್ತೇನೆ . . . ಹೇಗೊ . . . ಎಂತೊ . . . ನನ್ನ ಪತ್ನಿಯನ್ನು ಇಲ್ಲಿಂದ ಕರೆದುಕೊಂಡು ಹೋಗಲೇ ಬೇಕು. ದೈವ ನನ್ನ ಬಾಯಲ್ಲಿ ನಿಜವನ್ನಾದರೂ ನುಡಿಸಲಿ, ಸುಳ್ಳನ್ನಾದರೂ ನುಡಿಸಲಿ. ನಮ್ಮ ಈ ಮಗು ಬದುಕಿ, ಪ್ರಭುಗಳೂ ಬದುಕುವುದಾದರೆ, ಸುಳ್ಳು ಹೇಳೇನು. ಅದಕ್ಕಾಗಿ ಶತಕೋಟಿ ವರುಷಗಳು ನನಗೆ ನರಕ ಪ್ರಾಪ್ತಿ ಯಾದರೂ ಚಿಂತೆಯಿಲ್ಲ. ಅಚ್ಯುತರೆ, ನಿಮ್ಮ ಮನಸ್ಸಿಗೆ ತೋರಿರುವ ಮಾರ್ಗವೆ ಸರಿಯೆಂದು ಕಾಣುತ್ತದೆ, ಸರ್ವ ಪ್ರಯತ್ನಗಳಿಂದಲೂ ನಾವು ಪ್ರಭುಗಳನ್ನು ಉಳಿಸಿಕೊಳ್ಳಬೇಕು. "ಲಕ್ಷ್ಮಿಯನ್ನು ಕರೆದುಕೊಂಡು ಹೋಗು ವುದೆ? ಇಲ್ಲಿಯೆ ಬಿಟ್ಟು ಹೋಗುವುದೆ?" ಎಂದು ನನ್ನನ್ನು ಕೇಳಿದಿರಿ. ನಾನು ನನ್ನ ಪತ್ನಿಯನ್ನು ಕರೆದುಕೊಂಡು ಹೋಗುವುದೆಂದು ನಿರ್ಧರಿಸಿದ ಮೇಲೆ ಲಕ್ಷ್ಮಿ ಒಬ್ಬಳನ್ನೇ ಇಲ್ಲಿ ಬಿಟ್ಟು ಹೋಗುವುದು ಸರ್ವಥಾ ಕೂಡದು. ತಿಳಿವಳಿಕೆ ಬಂದಮೇಲೆ ಆಕೆಗೆ ಸಂಗತಿಗಳು ಗೋಚರವಾಗದೆ ಇರುತ್ತವೆಯೆ? ನೀವು ಆಕೆಯನ್ನು ಶಿವಗಂಗೆಗೆ ಕರೆದುಕೊಂಡು ಹೋದರೆ, ಅಲ್ಲಿ ಈವರೆಗೆ ಏನಾಗಿ ದೆಯೊ? ಏನಾಗುತ್ತದೊ? ಕರೆದುಕೊಂಡು ಹೋಗುವುದರಲ್ಲಿ ಒಂದು ಆಶೆ ಕಾಣುತ್ತದೆ, ಅಪಾಯವೂ ಕಾಣುತ್ತದೆ. ಇಲ್ಲಿಯೆ ಬಿಟ್ಟುಹೋಗುವುದರಲ್ಲಿ ಅರ್ಥವೂ ಕಾಣುತ್ತದೆ, ಅನರ್ಥವೂ ಕಾಣುತ್ತದೆ. ಈ ಎರಡು ಸಂಕಟಗಳಲ್ಲಿ ಈಗ ಯಾವುದು ಅನುಭೋಕ್ತವ್ಯ? ದೈವ ಒಂದೇ ನಮಗೀಗ ಬೆಳಕು ತೋರ ಬೇಕು, ಅಚ್ಯುತರೆ. ಒಂದು ರಾತ್ರಿಯಲ್ಲೆ ಹೊಯಿಸಳ ರಾಜ್ಯ, ಹೊಯಿಸಳ ವಂಶ ಎರಡೂ ಅಳಿಸಿಹೋದಂತೆ ಕಾಣುತ್ತದೆ. ನನಗೆ ದಾರಿ ಕಾಣದಾಗಿದೆ. ನಮ್ಮ ಪಾಲಿಗೆ ಈಗ ದೈವವೂ ಕ್ರೂರವಾದಂತೆ ಇದೆಯಲ್ಲವೆ? ಮಗುವನ್ನು ಕಳೆದುಕೊಂಡ ನನಗೆ ಜೀವ ಬೇಸರವಾಗಿದೆ. ಕೇಶವನಿಗೆ ಕೈ ಜೋಡಿಸಿ, ನಿಮ್ಮ ಮನಸ್ಸಿಗೆ ಏನು ತೋಚುತ್ತದೆಯೊ ಹಾಗೆ ಮಾಡಿಬಿಡಿ. ಪ್ರಭುಗಳು

ಬದುಕಿ, ಲಕ್ಷ್ಮಿಯೂ ಬದುಕಿದರೆ, ನಮಗೆ ಲಕ್ಷ್ಮಿಯೇ ಶಾಂತಲೆ. ನಾನು ನನ್ನ ಪತ್ನಿಯನ್ನು ಇಲ್ಲಿಂದ ಕರೆದುಕೊಂಡು ಹೋಗುತ್ತೇನೆ. ಉತ್ತರದ್ವಾರದ ಬಳಿ ಈ ಕ್ಷಣವೆ ನಮಗಾಗಿ ಒಂದು ರಥವನ್ನು ಸಿದ್ಧಮಾಡಿಸಿರಿ. ರಾಜಧಾನಿಗೆ ಹೋಗುತ್ತೇವೆ. ಇನ್ನು ಅಲ್ಲಿ ನಮಗೆ ಏನೇನು ಕಾದಿದೆಯೊ!' ಎನ್ನುತ್ತ ಮಾರಸಿಂಗಮಯ್ಯ ತಮ್ಮ ಪತ್ನಿ ಇದ್ದೆಡೆಗೆ ಹೋದರು.

ಲಕ್ಷ್ಮೀದೇವಿ ಮೂರ್ಛೆಯಿಂದ ಎಚ್ಚತ್ತಿದ್ದರೂ ಪ್ರಜ್ಞೆ ಇನ್ನೂ ಬಂದಿರಲಿಲ್ಲ. 'ಪೂರ್ಣ ಪ್ರಜ್ಞೆ ಬರಬೇಕಾದರೆ ಇನ್ನು ಅರ್ಧ ದಿನವಾದರೂ ಆದೀತು, ಎಂದು ಪ್ರಭುಗಳು ಅಂದಿದ್ದಾರೆ, ನಾವು ಆತುರಪಟ್ಟರೆ ಆದೀತೆ' ಎಂದು ದಾಸಿಯೊಬ್ಬಳು ದುಃಖಿತೆಯಾಗಿದ್ದ ಮಾಚಿಕಬ್ಬೆಯವರೊಡನೆ ಹೇಳುತ್ತಿದ್ದಳು. ಮಾಚಿಕಬ್ಬೆ ಮಗಳ ನೆತ್ತಿ, ಕೆನ್ನೆಗಳನ್ನು ಸವರಿ, ಮೃದುವಾಗಿ ಗಲ್ಲವನ್ನು ಹಿಡಿದು ಅಲುಗಿಸುತ್ತ 'ಲಕ್ಷ್ಮಿ, ನನ್ನ ಕಂದ, ಇದು ನೋಡೆ: ನಾನು ಬಂದಿದ್ದೇನೆ. ಇಲ್ಲಿ ನೋಡು, ನನ್ನನ್ನು ನೋಡು. ಮಾತಾಡೆ ನನ್ನ ತಾಯಿ. ನಾನು ಯಾರು ಹೇಳು ನೋಡೋಣ?' ಎಂದು ಕೇಳುತ್ತಿದ್ದರು.

ಮಾರಸಿಂಗಮಯ್ಯ ಓಡಿಬಂದು ತಮ್ಮ ಪತ್ನಿಯ ಬಾಯನ್ನು ಬಲವಾಗಿ ಮುಚ್ಚಿಹಿಡಿದು 'ಶಿವ ಶಿವ, ಹೆಂಗಸರಿಗೆ ಎಷ್ಟು ವಯಸ್ಸಾದರೆ ತಾನೆ ಏನು! ಎಷ್ಟು ವಿದ್ಯೆ ಕಲಿತಿದ್ದರೆ ತಾನೆ ಏನು? ಧೈರ್ಯವೂ ಬುದ್ಧಿಯೂ ಯಾವ ವೇಳೆಯಲ್ಲಿ ಅತ್ಯಾವಶ್ಯಕವೊ ಅಂತಹ ವೇಳೆಗಳಲ್ಲಿ ಮೂರ್ಖತೆ, ಮೊಂಡುತನ, ಇಲ್ಲವೆ ಕಣ್ಣೀರು . . . ಮಾಚಿ, . . . ಮಾಚಿ . . . ನೀನು ಏನು ಮಾಡುತ್ತಿದ್ದೀಯೆ! ಲಕ್ಷ್ಮಿಗೆ ಈಗ ತಿಳಿವಳಿಕೆ ಬಂದರೆ? ಇದೆಲ್ಲ ತಿಳಿದರೆ ಏನು ಗತಿ? . . . ಇನ್ನೇನು ಗತಿ? ಈಗಲೆ ಅವಳಿಗೆ ಪ್ರಜ್ಞೆ ಬಂದರೆ "ನಾನೇತಕ್ಕೆ ಹೀಗೆ? . . . ಅವ್ವೆ ಏಕೆ ಬಂದರು? . . . ಅಯ್ಯ ಏಕೆ ಬಂದರು? . . . ಅಕ್ಕ ಊರಿಗೆ ಬಂದಳೆ? ಅರಮನೆಯೆಲ್ಲ ಇದೇಕೆ ಹೀಗಿರುವುದು? ಏಕೆ ಒಬ್ಬರೂ ಮಾತನಾಡಲೊಲ್ಲರು?" ಎಂದು ಪ್ರಶ್ನೆಮಾಡಿದರೆ ಏನು ಹೇಳುತ್ತಿ ಮಾಚಿ? . . ಮಾಚಿ . . . ಈ ಮಗುವನ್ನೂ ನಾವು ಕಳೆದುಕೊಳ್ಳುವುದೆ? ನಾವಾಗಿ ಮಗುವಿಗೆ ವಿಪತ್ತು ತರುವುದೆ? ನಡೆ ಮಾಚಿ, ನೀನೀಗ ಇಲ್ಲಿಂದ ಏಳು. ಲಕ್ಷ್ಮಿಗೆ ಪ್ರಜ್ಞೆ ಬರುವುದಕ್ಕೆ ಮುಂಚೆಯೆ ಊರಿಗೆ ಹೋಗೋಣ. ನಮಗಿನ್ನು ಶಾಂತಲೆಯು ಇವಳೆ, ಇವಳೇ ಶಾಂತಲೆ. ಲಕ್ಷ್ಮಿ ಇನ್ನು ಬದುಕಿರಬೇಕೆಂದು

ನಿನಗೆ ಆಶೆ ಇದ್ದರೆ, ನಾವು ಈ ಕ್ಷಣವೆ ಹೊರಟುಹೋಗಬೇಕು. ಅವಳಿಗೆ ಈಗಲೋ, ಇನ್ನೊಂದು ಅರೆಗಳಿಗೆಗೊ, ಅಥವಾ ಸ್ವಲ್ಪ ನಿಧಾನವಾಗಿಯೊ ಪ್ರಜ್ಞೆ ಬರಬಹುದು. ಇನ್ನು ಅವಳನ್ನು ಉಳಿಸಿಕೊಳ್ಳುವ ಭಾರ ಪ್ರಭುಗಳದು. ಇದೆಲ್ಲ ವನ್ನು ತಿಳಿದೂ ತಿಳಿದೂ ನಾವೇ ಇನ್ನು ಅನರ್ಥಗಳಿಗೆ ಕಾರಣರಾಗಬಾರದು. ಏಳು ಮಾಚಿ, ಇಲ್ಲಿಂದ ದಯವಿಟ್ಟು ಏಳು' ಎಂದರು ಮಾರಸಿಂಗಮಯ್ಯ.

ಮಾಚಿಕಬ್ಬೆ ಸಂಕಟದಿಂದ ಮೆಲ್ಲನೆ 'ಇನ್ನು ನಮಗೆ ಮನೆಯೆಲ್ಲಿ? ಮನೆಯೇಕೆ? ನಮಗಿರುವುದು ಇದೊಂದು ಮಗು. ಇದನ್ನೂ ಬಿಟ್ಟು ಬಾ ಎನ್ನುವಿರಾ?' ಎಂದರು.

'ನಿಜ ಮಾಚಿ, ನಮಗಿರುವುದು ಇದೊಂದೇ ಮಗು. ಇದಾದರೂ ಬದುಕಲಿ ಎಂದೇ ನಿನ್ನನ್ನು ಕರೆಯುತ್ತಿದ್ದೇನೆ, ಬಾ ಏಳು.'

ಮಾರಸಿಂಗಮಯ್ಯ ಬಲಾತ್ಕಾರದಿಂದ ಪತ್ನಿಯನ್ನು ಹೊರಕ್ಕೆ ಕರೆದು ತಂದರು. ಬಾಗಿಲು ದಾಟ ಹೊರಕ್ಕೆ ಬರುತ್ತಲೆ ಮಾಚಿಕಬ್ಬೆ ಮತ್ತೆ 'ಅಯ್ಯೋ, ಲಕ್ಷ್ಮಿಗೆ ತನ್ನ ಅವ್ವೆಯ ಗುರುತೂ ಸಿಗಲಿಲ್ಲವೆ? ಇಂತಹ ಸಂದರ್ಭದಲ್ಲಿ ನಾನು ಹೇಗೆ ಊರಿಗೆ ಬರಲಿ? ನನ್ನ ಮಗುವಿನ ದೇಹವೆಲ್ಲಿ? ನನ್ನ ಕಂದನ ದೇಹವೆಲ್ಲಿ? ಏನು ಮಾಡಿದರು? ಸುಟ್ಟುಬಿಟ್ಟರೆ? ಅಯ್ಯೋ, ಚಿನ್ನದ ಪುತ್ಥಳಿಯಂತಿದ್ದ ನನ್ನ ಸೊಬಗಿಯನ್ನು ಸುಟ್ಟರೆ? ಹೇಳಿ, ನಿಮ್ಮ ದಮ್ಮಯ್ಯ ಹೇಳಿ' ಎಂದು ಮಾಚಿಕಬ್ಬೆ ನಿನ್ನೆ ರಾತ್ರಿ ತನ್ನ ಮಗುವಿನ ಕಳೇಬರವನ್ನು ನೋಡಿದೆಡೆಗೆ ಹೋಗಲು ಯತ್ನಿಸಿದರು.

ಮಾರಸಿಂಗಮಯ್ಯ ಪತ್ನಿಯನ್ನು ಬಲವಾಗಿ ಹಿಡಿದೆಳೆದು ನಿಲ್ಲಿಸಿಕೊಂಡು 'ಇಲ್ಲ, ಮಾಚಿ, ಇಲ್ಲ. ನಮ್ಮ ಮಗುವಿನ ದೇಹಕ್ಕೆ ಅಗ್ನಿಸಂಸ್ಕಾರ ನಡೆಯ ಬೇಕಾದದ್ದು ರಾಜಧಾನಿಯಲ್ಲೆ. ಅಲ್ಲಿಗೇ ತರುತ್ತಾರೆ. ಸದ್ಯ ನಿನ್ನ ಗೋಳನ್ನು ನಿಲ್ಲಿಸಿದರೆ, ಲಕ್ಷ್ಮಿ ಬದುಕಿಕೊಳ್ಳುತ್ತಾಳೆ. ನೀನು ಇಲ್ಲಿದ್ದರೆ ಇನ್ನೂ ಅನೇಕ ಅನರ್ಥಗಳು ಖಂಡಿತ. ದಯವಿಡು ಮಾಚಿ, ನಿನ್ನ ಬುದ್ಧಿ ಎಲ್ಲಿಹೋಯಿತು?'

'ಅಯ್ಯೋ, ಹೆತ್ತ ಕರುಳು ಬೇಯುತ್ತಿದೆ. ಗಂಡಸರ ಕರುಳು ಕಲ್ಲು, ಹೃದಯ ಕಲ್ಲು. ನಾನು ಊರಿಗೆ ಬರಬೇಕಾದರೆ ಒಂದು ಮಾತಿನ ಮೇಲೆ, ಒಂದು ನಿರ್ಧಾರದ ಮೇಲೆ. ನಾವಿಬ್ಬರೂ ಮಗುವಿನ ಚಿತೆಯಲ್ಲೆ, ಮಗುವಿನ ಜೊತೆಯಲ್ಲೆ, ಒಪ್ಪಿಗೆಯೆ?'

'ನೀನು ಈಗಲೆ, ಈಗಿಂದ ಹೀಗೆಯೆ ಹೊರಟುಬರುವುದಾದರೆ ಒಪ್ಪಿಗೆ, ಒಪ್ಪಿಗೆ. ನಮಗೆ ಅದಕ್ಕಿಂತಲೂ ಸುಖವಾದ ಮರಣ ಉಂಟೆ, ಮಾಚಿ?' ಎನ್ನುತ್ತ ಮಾರಸಿಂಗಮಯ್ಯ ತಮ್ಮ ಪತ್ನಿಯನ್ನು ಬೇಗನೆ ಉತ್ತರದ ಬಾಗಿಲಿಂದಾಚೆಗೆ ಕರೆದುಕೊಂಡು ಬಂದು, ನಿಂತಿದ್ದ ರಥದಲ್ಲಿ ಕುಳ್ಳಿರಿಸಿಕೊಂಡು ದ್ವಾರವತಿಗೆ ವೇಗದಿಂದ ಹೊರಟರು.

ಹೇಮಾದ್ರಿಗಳೂ, ಅಚ್ಯುತರೂ, ಗೋವಿಂದರೂ, ಸ್ವಲ್ಪ ಕಾಲ ತಮ್ಮ ತಮ್ಮಲ್ಲಿಯೆ, 'ಲಕ್ಷ್ಮೀದೇವಿಯರನ್ನು ಶಿವಗಂಗೆಗೆ ಕರೆದೊಯ್ಯುವುದೆ? ಅಥವಾ ಇಲ್ಲಿಯೆ ಬಿಟ್ಟುಹೋಗುವುದೆ?' ಎಂಬ ವಿಷಯವನ್ನು ಚರ್ಚಿಸಿದರು. 'ಆಕೆಗೆ ಈಗಲೆ ಪ್ರಜ್ಞೆ ಬಂದರೆ ಏನು ಗತಿ? ಇಲ್ಲಿದ್ದರೆ, ಆಕೆಗೆ ವಿಷಯಗಳೆಲ್ಲ ತಿಳಿದು ಬರದೆ ಇರುತ್ತದೆಯೆ? ಶಾಂತಲಾದೇವಿಯ ಕಳೇಬರವನ್ನು ತೆಗೆದುಕೊಂಡು ಹೋಗಿರುವ ಪ್ರಭುಗಳಿಗೆ ಚಿತ್ತಭ್ರಮಣೆಯಾಗಿರಬೇಕು. ಶಿವಗಂಗೆಗೇ ಹೋದರೊ? ಅಥವಾ ಇನ್ನೆಲ್ಲಿಗಾದರೂ ಹೋದರೊ? ಪ್ರಭುಗಳು ಈಗ ಎಲ್ಲಿರುವರೊ! ಹೇಗಿರುವರೊ! ಇರುವರೊ? ಇಲ್ಲವೆ ಇಲ್ಲವೊ? ತಾವೂ ದುಃಖಾತಿರೇಕದಲ್ಲಿ ಕಳೇಬರದೊಂದಿಗೆ ಕುವರ ಮಡಿದ ಹಾಗೆ...? ಶಾಂತಂ ಪಾಪಂ; ಶಾಂತಂ ಪಾಪಂ. ಲಕ್ಷ್ಮೀದೇವಿಯರನ್ನು ಅಲ್ಲಿಗೆ ಕರೆದುಕೊಂಡುಹೋಗಿ ನಾವೇನು ಮಾಡುವುದು? ಆಕೆಯನ್ನು ಇಲ್ಲಿಯೆ ಬಿಟ್ಟುಹೋಗುವುದೆ? ಆಕೆಯನ್ನು ನೋಡಿಕೊಳ್ಳುವ, ಕಾಪಾಡಿಕೊಳ್ಳುವ ಶಕ್ತಿ ಯಾರಿಗೆ ಉಂಟು? ಇಂತಹ ಸಂಕಟ ಸಮಯದಲ್ಲಿ ಪಂಡಿತರೊಬ್ಬರಾದರೂ ಬದುಕಿದ್ದಿದ್ದರೆ? ಗಂಗರಾಜರಾದರೂ ಇದ್ದಿದ್ದರೆ? ನಮ್ಮ ದುರ್ದೈವಕ್ಕೆ ನಮಗೆ ಯಾರೂ ಇಲ್ಲದೆ ಹೋದರಲ್ಲ! ಶಿವಗಂಗೆಯಲ್ಲೆ ಪ್ರಭುಗಳು ಇರುವುದಾದರೆ!... ನಾವು ಅವರನ್ನು ಕಾಣುವ ವರೆಗೂ ಯಾವ ಪ್ರಮಾದವೂ ಸಂಭವಿಸದಿದ್ದರೆ!... ಲಕ್ಷ್ಮೀದೇವಿಯರು ಪ್ರಭುಗಳನ್ನು ಸಮಾಧಾನಪಡಿಸುವರೊ?.... ಹಾಗಲ್ಲದೆ ಒಂದು ವೇಳೆ ಅವರೂ ಅಕ್ಕನ ದಾರಿಯನ್ನೇ ಹಿಡಿದರೆ, ನಾವಾಗಿ ಲಕ್ಷ್ಮೀದೇವಿಯರನ್ನು ಅವರ ಅಂತ್ಯಕ್ಕೆ ಕರೆದೊಯ್ದಂತೆ ಆಗುತ್ತದೆ. ನಾಳೆ ಜನಗಳಾದರೂ 'ಇವರಿಗೆ ಇಷ್ಟೂ ವಿವೇಚನೆ ಇಲ್ಲದೆ ಹೋಯಿತೆ?' ಎಂದು ಆಡಿಕೊಳ್ಳುವಂತೆ ಆಗುತ್ತದೆ. ಈ ಹಲವು ಸಂಕಟಗಳಲ್ಲಿ ಏನು ಮಾಡುವುದು?' ಎಂದು ಬಹಳ ಹೊತ್ತು ಪೇಚಾಡಿದರು.

ಅಚ್ಯುತರು 'ನಾರಾಯಣನೆ ದಿಕ್ಕು ತೋರಲಿ' ಎಂದು ಪ್ರಾರ್ಥನಾ ಗೃಹಕ್ಕೆ ಹೋಗಿ ಎರಡು ಓಲೆಗಳನ್ನು ಬರೆಯಿಸಿದರು. ಒಂದರಲ್ಲಿ 'ಕರೆದು ಕೊಂಡು ಹೋಗಿ' ಎಂದೂ, ಇನ್ನೊಂದರಲ್ಲಿ 'ಕರೆದುಕೊಂಡು ಹೋಗುವುದು ಬೇಡ' ಎಂದೂ ಬರೆಯಿಸಿ, ನಾರಾಯಣನ ಪಾದಾರವಿಂದಗಳಲ್ಲಿಟ್ಟು, ದೈವವನ್ನು ದಿಕ್ಕು ತೋರೆಂದು ಬೇಡಿಕೊಂಡು, ನಮಿಸಿ, ಮಗುವಿನ ಕೈಯಿಂದ ಒಂದು ಓಲೆ ಯನ್ನು ಎತ್ತಿಸಿ ನೋಡಿದರು. ನೋಡುವಲ್ಲಿ, 'ಕರೆದುಕೊಂಡು ಹೋಗಿ' ಎಂದು ಬರೆದಿದ್ದಿತು. ಅಚ್ಯುತರು 'ಸ್ವಾಮಿಯ ಆಜ್ಞೆ' ಎಂದು ಅದನ್ನು ಕಣ್ಣು ಗಳಿಗೊತ್ತಿಕೊಂಡು, ಇಬ್ಬರು ದಾಸಿಯರನ್ನು ಕರೆಯಿಸಿ, ಪ್ರಯಾಣಕ್ಕೆ ಬೇಕಾಗು ವಷ್ಟು ಹಣ್ಣು ಹಾಲುಗಳನ್ನು ತೆಗೆಯಿಸಿಕೊಂಡು, ಲಕ್ಷ್ಮೀದೇವಿಯರನ್ನು ಮೆಲ್ಲನೆ ರಥದ ಮೇಲಕ್ಕೆ ಹತ್ತಿಸಿ ಕೂಡಿಸಿ, ತಾವು, ಗೋವಿಂದರು, ಶಿವಗಂಗೆಯ ಹೆಗ್ಗಡೆ, ನಗರರಕ್ಷಕರು, ಇನ್ನೊಂದು ರಥದಲ್ಲಿ ಕುಳಿತು ಶಿವಗಂಗೆಗೆ ಹೊರಟರು. ಹೇಮಾದ್ರಿಗಳು ಆ ಕ್ಷಣವೇ ರಾಜಧಾನಿಗೆ ಹೊರಟರು.

§

ಪ್ರಭುಗಳು ಶಾಂತಲೆಯ ಕಳೇಬರವನ್ನು ಹೆಗಲ ಮೇಲೆ ಹೊತ್ತುಕೊಂಡು ಬೆಟ್ಟದ ಶಿಖರವನ್ನು ಸೇರಿದ್ದರು. ಹತ್ತು ಹತ್ತು ಹೆಜ್ಜೆಗಳಿಗೊಮ್ಮೆ ಆಯಾಸ ದಿಂದ ನಿಂತುಕೊಳ್ಳುತ್ತ, ಸುತ್ತಲೂ ನೋಡಿ, 'ಶಾಂತಲೆ—ಓ—ಶಾಂತಲೆ' ಎಂದು ನಾಲ್ಕು ದಿಕ್ಕುಗಳಲ್ಲೂ ಕೂಗಿ, ಉತ್ತರ ಬಂದೀತೆಂದು ಕಾದು ನೋಡಿ, ಬಾರದಿರಲು ಖಿನ್ನರಾಗಿ, ಇನ್ನೂ ಸ್ವಲ್ಪ ದೂರ ಅಧಿಕ ಶ್ರಮದಿಂದ ಹತ್ತಿ ಹೋಗುತ್ತಿದ್ದರು. ಮಧ್ಯಾಹ್ನ, ಚೈತ್ರಮಾಸದ ಬಿಸಿಲು, ತಲೆ ಸುಡುತ್ತಿದೆ, ಬೆಟ್ಟ ಕಾದುಹೋಗಿದೆ, ಗಾಳಿಯ ಸುಳಿವಿಲ್ಲ. ಪ್ರಭುಗಳ ಶರೀರ ರಕ್ತದ ದ್ರವ ಭಾಗದ ಅರ್ಧವೆಲ್ಲ ಬೆವರಾಗಿ ಹರಿದುಹೋಗಿದೆ. ದ್ರವಭಾಗವನ್ನು ಕಳೆದು ಕೊಂಡ ರಕ್ತ ಈಗ ಗಟ್ಟಿಯಾಗುತ್ತ ಬಂದಿದೆ, ಹೃದಯ ಅತಿ ಕಷ್ಟದಿಂದ ಕೆಲಸ ಮಾಡುತ್ತಿದೆ. ಪ್ರಭುಗಳ ನಾಲಗೆ ಗಂಟಲುಗಳು ತೀರ ಒಣಗಿಹೋಗಿವೆ. ಬಾಯಿ ತೆರೆದುಹೋಗಿದೆ. ಶರೀರದ ರಕ್ತವರ್ಣ ಕೆಟ್ಟು ಕಪ್ಪುವರ್ಣಕ್ಕೆ ತಿರುಗು ತ್ತಿದೆ. ಅತಿ ಪ್ರಯಾಸದಿಂದ ಉಸಿರೆಳೆದುಕೊಳ್ಳಬೇಕಾಗಿದೆ. ಕಾಲುಗಳು ನಡುಗುತ್ತಿವೆ. ಕಳೇಬರವನ್ನು ಹೊರಲು ಶಕ್ತಿಯೇ ಇಲ್ಲವಾಗಿದೆ. ಆಗ ಪ್ರಭು

ಗಳು ಕಳೇಬರಕ್ಕೆ ಸುತ್ತಿದ ಬಟ್ಟೆಯನ್ನೇ ತಮ್ಮ ಕುತ್ತಿಗೆಗೆ ಸುತ್ತಿ, ಅದನ್ನು ಜೋಳಿಗೆಯಂತೆ ಮಾಡಿಕೊಂಡು, ಅದರಲ್ಲಿ ಶಾಂತಲೆಯ ಕಳೇಬರವನ್ನು ಇಟ್ಟು, ಅದನ್ನು ಎದೆಯ ಮೇಲೆ ಹೊತ್ತು, ಎರಡು ಕೈಗಳಿಂದಲೂ ಪ್ರೀತಿಯಿಂದ ತಬ್ಬಿ ಹಿಡಿದುಕೊಂಡು, ಬೆಟ್ಟದ ಒಂದು ಪಾರ್ಶ್ವವನ್ನು ಹುಡುಕುತ್ತ ತಮ್ಮ ದೇವಿಯನ್ನು ಅರಸುತ್ತ ನಡೆದೇ ಇದ್ದಾರೆ. ಪ್ರಭುಗಳ ಮುಖದಲ್ಲಿದ್ದ ತೇಜಸ್ಸು ನಾಶವಾಗಿ, ಮುಖದ ಚರ್ಮ ಬೆಂದು ಬಾಡಿ ವಿವರ್ಣವಾಗಿದೆ. ತಲೆ ಕೆದರಿಹೋಗಿ, ದೂಳಿನಿಂದ ಕೆಂಚಾಗಿದೆ. ಉಟ್ಟಿದ್ದ ಬಟ್ಟೆಗಳು ಗಿಡಗೆಂಟೆಗಳಿಗೆ ಸಿಕ್ಕಿ ಚಿಂದಿ ಚಿಂದಿಯಾಗಿವೆ; ಕೈ, ಕಾಲು, ಮೈಯಲ್ಲಿ ಅನೇಕ ಕಡೆ ತರಚಿ, ಗಾಯವಾಗಿ ರಕ್ತಹರಿದು, ಕರೆಗಟ್ಟಿದೆ. ಕೈಯಲ್ಲಿರುವ ಕಳೇಬರ ನಾರುವುದಕ್ಕೆ ಮೊದಲಾಗಿದೆ. ಪ್ರದ್ಯುಮ್ನನಂತಿದ್ದ ಪ್ರಭುವು ಈಗ ವಿಕಾರವಾಗಿ ಕಾಣಬರುತ್ತಿದ್ದಾರೆ. ಮೂರು ಮೂರು ಹೆಜ್ಜೆಗೆ, ನಾಲ್ಕು ನಾಲ್ಕು ಹೆಜ್ಜೆಗೆ 'ಶಾಂತಲೆ . . . ಓ . . . ಶಾಂತಲೆ' ಎಂದು ಬಲವಾಗಿ ಕೂಗುತ್ತಿದ್ದಾರೆ. ಜೀವ ಹಿಂದಿರುಗಿತೆ ಎಂದು ಕಳೇಬರದ ಮುಖವನ್ನು ನೋಡುತ್ತಾರೆ. ಕೂಗಿ ಕೂಗಿ ಗಂಟಲಲ್ಲಿ ಹೀನಸ್ವರ ಹೊರಟಿದೆ. ಧ್ವನಿ ಒಡಕಾಗಿದೆ. ಒಂದೊಂದು ಬಾರಿ ಪೊದರುಗಳಲ್ಲಿ ಇಣುಕಿನೋಡಿ 'ಶಾಂತಲೆ' ಎಂದು ಮೆಲುದನಿಯಲ್ಲಿ ಕರೆಯುತ್ತಾರೆ. ಇನ್ನೊಂದು ಬಾರಿ ಬಂಡೆಯ ಇರುಕಿನಲ್ಲಿ ತಲೆಹಾಕಿ 'ದೇವಿ, ಇಲ್ಲಿರುವೆಯ?' ಎಂದು ಕರೆಯುತ್ತಾರೆ. ತಾವು ಈಗಿರುವ ಸ್ಥಳದಿಂದ ಇನ್ನು ಸ್ವಲ್ಪ ದೂರದಲ್ಲಿರಬಹುದೆಂದು ಗಟ್ಟಿಯಾಗಿ 'ಶಾಂತಲೆ . . . ಶಾಂತಲೆ' ಎಂದು ಕೂಗುತ್ತಾರೆ. ಅತಿ ಆಯಾಸವಾದಾಗ ಆ ಉರಿಯುತ್ತಿರುವ ಬಿಸಿಲಿನಲ್ಲಿಯೆ ನಿಂತುಕೊಳ್ಳುತ್ತಾರೆ. ಬಿಸಿಲಿನಿಂದ ಚೆನ್ನಾಗಿ ಕಾಯ್ದ ಬಂಡೆ ಬೆಂಕಿಯಂತೆ ಅಂಗಾಲುಗಳನ್ನು ಸುಡುತ್ತಿದೆ. ಇಷ್ಟೆಲ್ಲ ಸಹಿಸಲಶಕ್ಯವಾದ ಬಾಧೆಗಳಾಗುತ್ತಿದ್ದರೂ ಆ ಪ್ರೇಮಿಗೆ ತಮ್ಮ ದೇಹದ ಅರಿವೇ ಇಲ್ಲ. 'ತಮ್ಮ ಪ್ರೇಮ ವಿಶ್ವಾಸಗಳ ಆಳವನ್ನು ತಮ್ಮ ಸಖಿ ಬಲ್ಲಳು. ಆಕೆಯ ಆತ್ಮ ಈರೇಳು ಲೋಕಗಳಲ್ಲಿ ಎಲ್ಲಿದ್ದರೂ ತಮ್ಮ ಈ ಹೃದಯದ ಸಂಕಟಕ್ಕೆ, ಕೂಗಿಗೆ, ಬಂದೇ ಬರುವುದು. ತಮ್ಮ ಮೈಗೆ ಅಂಟಿಕೊಂಡಿರುವ ಇನಿಯಳ ಕಳೇಬರ ಸಜೀವವಾಗುವುದು; ತಮ್ಮ ಶಾಂತಲೆ ಬದುಕುವಳು' ಎಂದು ಪ್ರಭುಗಳು ಧೃಢವಾಗಿ ನಂಬಿದ್ದರು.

ಸ್ವಲ್ಪ ದಣಿವಾರಿದ ಕೂಡಲೆ ಮತ್ತೆ 'ಶಾಂತಲೆ . . . ಶಾಂತಲೆ . . .

ಶಾಂತಲೆ' ಎಂದು ಕೂಗುವರು. ಗಂಟಲಿಂದ ಈಗೀಗ ಧ್ವನಿಯೇ ಹೊರಡ ದಾಯಿತು. 'ದೇವಿ, ಇನ್ನೆಲ್ಲಿರುವೆ? ಇನ್ನೆಷ್ಟು ಹುಡುಕಲಿ? ದೇವಿ, ಜನ್ಮ ಜನ್ಮಕ್ಕೂ ಹತ್ತಿರ ಬಂದು ಪುನಃ ದೂರವಾಗಿ ಹೋಗಿದ್ದೇವೆ, ಅರಿತು ಕೊಳ್ಳಲಿಲ್ಲ. ಮತ್ತೆ ಹೀಗಾಗುವುದು ಬೇಡ. ನಿನ್ನ ಆಯುಸ್ಸು ಮುಗಿಯ ಲಿಲ್ಲ ಶಾಂತಲೆ; . . . ನನ್ನದು ಮುಗಿದಾಗಲ್ಲವೆ ನಿನ್ನದೂ ಮುಗಿಯಬೇಕು. ಒಬ್ಬರು ಹೋಗಿ ಒಬ್ಬರು ಉಳಿಯುವುದೆಂತು! ಇದು ಸುಳ್ಳು. ನಾವಿಬ್ಬರೂ ಅನಂತಕಾಲದ ಸಹಪಥಿಕರು, ಅನಂತಕಾಲದ ಸ್ನೇಹಿತರು. ಸಖಿ, ಎಲ್ಲಿಂದ ಬಂದೆವು! ಎಲ್ಲಿಗೊ! ಏತಕ್ಕೊ! ನಾನೂ ಇನ್ನು ಒಬ್ಬನೆ ಇರಲಾರೆ. ಪ್ರೇಮಕ್ಕೆ ಸಾವಿಲ್ಲವೆಂದು ನಂಬಿದವನು ನಾನು, ಪ್ರೇಮವೆ ದೈವವೆಂದು ನಂಬಿದವನು ನಾನು. ನಾನು ಯಾವ ದೈವವನ್ನು ಉಪೇಕ್ಷಿಸಿದೆ? ಯಾವ ಧರ್ಮವನ್ನು ಉಪೇಕ್ಷಿಸಿದೆ? ಯಾವ ಅಪರಾಧ ಮಾಡಿದೆ? ನಾರಾಯಣ . . . ನನ್ನ ಶಾಂತಲೆ ಯನ್ನು ನನಗೆ ಕೊಡು. ನನ್ನ ಪ್ರಾಣವನ್ನು ನನಗೆ ಕೊಡು, ನನ್ನ ಆತ್ಮವನ್ನು ನನಗೆ ಕೊಡು. ನೀನು ಇನ್ನೇನು ಕೊಟ್ಟರೂ ಬೇಡ . . . ಬೇಡ . . . ಶಾಂತಲೆ . . . ಶಾಂತಲೆ . . . ಶಾಂ . . . ತ . . .' ಪ್ರಭುಗಳು ಕಾಲು ಕುಸಿದು ಬಿದ್ದರು.

§

ಅತ್ತ ಮಾಚಿಕಬ್ಬೆ ಮಾರಸಿಂಗಮಯ್ಯನವರು ಕುಳಿತಿದ್ದ ರಥ ರಾಜಧಾನಿ ಯನ್ನು ಸೇರಿದಾಗ ಚರ್ಮವಾದ್ಯಗಳ ಮಹಾರವ ಭೀಕರವಾಗಿ ಬಹುದೂರಕ್ಕೆ ಕೇಳಬರುತ್ತಿತ್ತು. ಆರು ಜನ ನಾಯಕರುಗಳ ದೇಹ ಅಗ್ನಿಯಲ್ಲಿ ಬೇಯುತ್ತಿತ್ತು.

ರಥ ಮನೆಯನ್ನು ಸೇರಿ ಮಾಚಿಕಬ್ಬೆ ಮಾರಸಿಂಗಮಯ್ಯ ರಥದಿಂದ ಇಳಿಯುತ್ತಿದ್ದಾಗ ಮನೆಯ ಮುಂದೆ ಅಸಾಧ್ಯ ಜನಸಂದಣಿಯಾಯ್ತು. ರಥ ದಲ್ಲಿ ಮಹಾರಾಣಿಯ ಕಳೇಬರವನ್ನು ತಂದರೆಂದು ಜನ ಭಾವಿಸಿದರು. ಎಲ್ಲರ ಕಣ್ಣುಗಳಲ್ಲಿಯೂ ನೀರು ಧಾರೆಯಾಗಿತ್ತು. ರಥದಲ್ಲಿ ಮಹಾರಾಣಿಯ ಕಳೇಬರ ಇಲ್ಲವೆಂದು ಜನರಿಗೆ ತಿಳಿಯಿತು. ಮಾಚಿಕಬ್ಬೆಯವರಿಗೆ ಪರಿಚಿತರಾದ ಹೆಂಗಸ ರಲ್ಲಿ ಕೆಲವರು ಮುಂದೆ ಬಂದು, 'ಅವ್ವೆ, ನಮ್ಮ ಭಾಗ್ಯ ಬರಿದಾಯಿತೆ! ನಮ್ಮ ಭಾಗ್ಯಲಕ್ಷ್ಮಿ, ನಮ್ಮ ರಾಜ್ಯಲಕ್ಷ್ಮಿ, ಹೊಯಿಸಳಲಕ್ಷ್ಮಿ ಹೋದಳೆ! ನಮ್ಮ ಕಾಮಧೇನು . . . ನಮ್ಮ ಕಲ್ಪತರು ಹೋಯಿತೆ? ನಿಮ್ಮ ಧರ್ಮ, ಪ್ರಭುಗಳ

ಧರ್ಮ, ಯಾರ ಪುಣ್ಯವೂ ಆಕೆಯನ್ನು ಕಾಯಲಿಲ್ಲವೆ? ಈ ವಯಸ್ಸಿನಲ್ಲಿ ನಿಮಗೆ ಈ ದುಃಖ ಬರಬಹುದೆ! ನಮಗೆ ಈ ದುರ್ಗತಿ ಬರಬಹುದೆ!' ಎಂದು ತಮ್ಮ ಹೊಟ್ಟೆಯ ಸಂಕಟಗಳನ್ನು ತೋಡಿಕೊಂಡು, ಆಕೆಯ ದುಃಖವನ್ನು ಮತ್ತೂ ಹೆಚ್ಚಿಸಿದರು. ಸೋವಲೆ ಮಹಾಸತಿಯಾದ ವಿವರಗಳನ್ನೆಲ್ಲ ದುಃಖ ದಲ್ಲಿಯೇ ಮಾಚಿಕಬ್ಬೆಗೆ ಬಣ್ಣಿಸಿ ಹೇಳಿದರು. ಮಾಚಿಕಬ್ಬೆಯ ದುಃಖ ಮತ್ತೆ ಪ್ರಬಲಿಸಿತು. ಆಕೆ 'ಹೊಯಿಸಳ ರಾಜ್ಯೇಶ್ವರಿ ಹೋದಳು, ನನ್ನ ಹೃದಯದ ಮಣಿ ಹೋದಳು, ಸೊಸೆ ಸೋವಲೆ ಮಹಾಸತಿಯಾದಳು, ಇನ್ನು ನನ್ನ ಮಹಾಲಕ್ಷ್ಮಿ ತಾನೆ ಉಳಿಯುವಳೆ! . . . ಇಲ್ಲ, ಅಕ್ಕನನ್ನು ಕಳೆದುಕೊಂಡ ಅವಳು ಇರಳು . . . ಖಂಡಿತ ಇರಳು, ಪ್ರಭುಗಳೂ ಇರರು. ಕುವರ ಅಕ್ಕ ನೊಡನೆಯೆ ಹೋದ . . . ಹೊಯಿಸಳ ರಾಜ್ಯ, ರಾಜವಂಶ ಎಲ್ಲವೂ ಬೂದಿ ಯಾಯಿತು. ನಾನಿನ್ನು ಇರಲಾರೆ . . . ನನಗೆ ಸಾವು ಬರಲಿ, ನನಗೆ ಸಾವು ಬರಲಿ' ಎನ್ನುತ್ತ ಗೋಳಾಡಿಹೋದರು.

ಆ ದುಃಖದಲ್ಲಿಯೆ ಆಕೆಯ ದೈವ ಆಕೆಗೆ ಒಂದು ದಾರಿಯನ್ನು ತೋರಿಸಿ ಕೊಟ್ಟಿತು. ಒಡನೆ ಮಾಚಿಕಬ್ಬೆ ಪತಿಯ ಬಳಿಗೆ ಬಂದು ತಮ್ಮ ಮನೋ ನಿರ್ಧಾರವನ್ನು ಅವರಿಗೆ ತಿಳಿಸಿಬಿಟ್ಟರು. ಎರಡು ನಿಮಿಷಗಳ ಕಾಲ ಆ ಸಹೃದಯ ನಿಗೂ ಉತ್ತರ ಕೊಡಲಾಗಲಿಲ್ಲ. ಕಡೆಗೆ 'ಮಾಚಿ, ನಿನ್ನ ಸಂಕಲ್ಪಕ್ಕೆ ನಾನು ಅಡ್ಡಿ ಬರುವವನಲ್ಲ, ಆಗಬಹುದು' ಎಂದು ಬಿಟ್ಟರು.

ಮಾಚಿಕಬ್ಬೆ ಸಲ್ಲೇಖನಕ್ಕೆ ಮನಕೊಟ್ಟದ್ದು ಇತರರಿಗೆ ತಿಳಿಯದೆ ಹೋಗ ಲಿಲ್ಲ. ದುಃಖವನ್ನು ಹೇಳಬಂದ ಕೇತಮಲ್ಲನಾಯಕ ಜಕ್ಕಿಯಬ್ಬೆಯರಿಗೆ ಮಾರಸಿಂಗಮಯ್ಯನವರೆ ಹೇಳಿದರು. ಆಕೆಯ ಈ ಸಂಕಲ್ಪವನ್ನು ನಿರೋಧಿಸ ಬೇಡಿರೆಂದು ಅವರೇ ತಿಳಿಸಿಬಿಟ್ಟರು.

ಅಷ್ಟರೊಳಗೆ ಹೇಮಾದ್ರಿಗಳ ರಥವನ್ನು ತಂದ ಸಾರಥಿ, ಹಿಂದಿನ ರಾತ್ರಿ ಮಾಚಿಕಬ್ಬೆ ಮಾರಸಿಂಗಮಯ್ಯನವರನ್ನು ರಾಜಧಾನಿಯಿಂದ ವೇಲಾಪುರಿಗೆ ರಥದಲ್ಲಿ ಕರೆದುಕೊಂಡು ಹೋದವನು, ಮಾಚಿಕಬ್ಬೆಯವರ ಬಳಿಗೆ ಬಂದು, ತಾನು ಅದನ್ನು ಹೇಳಬಹುದೆ? ಕೂಡದೆ? ಎಂದು ತಿಳಿಯದೆ, 'ಅವ್ವೆ, ಪ್ರಭುಗಳು ಶಾಂತಲಾದೇವಿಯವರ ಕಳೇಬರವನ್ನು ರಥದಲ್ಲಿಟ್ಟುಕೊಂಡು ತಾವೇ ರಥ ನಡಸಿಕೊಂಡು ಮಧ್ಯರಾತ್ರಿಯಲ್ಲಿಯೆ ಶಿವಗಂಗೆಗೆ ಹೋದರಂತೆ. ಬೆಳ

ಗಾಗುವ ತನಕ ಅದು ಯಾರಿಗೂ ತಿಳಿಯಬರಲಿಲ್ಲ. ಪ್ರಭುಗಳು ಶಿವಗಂಗೆಗೆ ಏಕೆ ಹೋದರೊ! ಮಹಾರಾಣಿಯ ಶರೀರವನ್ನು ಏಕೆ ಕೊಂಡುಹೋದರೊ! ಎಂದು ವೇಲಾಪುರಿ ಭಯಭ್ರಾಂತಿಗಳಿಂದ ತುಂಬಿಹೋಗಿದೆ. ಅಚ್ಯುತ ಅಮಾತ್ಯರೂ ಗೋವಿಂದ ಅಮಾತ್ಯರೂ ಲಕ್ಷ್ಮೀದೇವಿಯರನ್ನು ಕರೆದುಕೊಂಡು ಒಂಬತ್ತು ಗಂಟೆಗೆ ಶಿವಗಂಗೆಗೆ ಹೋದರು. ಅಷ್ಟುಹೊತ್ತಿಗೆ ಶಿವಗಂಗೆಯಿಂದ ಹೆಗ್ಗಡೆಗಳು ಬಂದಿದ್ದರು. ನಾನು ಹೇಮಾದ್ರಿ ಅಮಾತ್ಯರ ರಥವನ್ನು ಈಗ ತಾನೆ ಇಲ್ಲಿಗೆ ತಂದೆ' ಎಂದು ಎಲ್ಲ ಸಮಾಚಾರಗಳನ್ನೂ ಸಮಗ್ರವಾಗಿ ವರದಿ ಮಾಡಿದ. ಮಾಚಿಕಬ್ಬೆ ಕಿವಿಗಳನ್ನು ಮುಚ್ಚಿಕೊಂಡು 'ಸಾಕು ಸಾಕು. ನನಗೆ ಇನ್ನೇನೂ ತಿಳಿಸಬೇಡಿ. ಪ್ರಭುಗಳು ಆತ್ಮಾರ್ಪಣೆಗಾಗಿಯೆ ಹೋದರು. ನನ್ನ ಲಕ್ಷ್ಮಿಯೂ ಅಕ್ಕನ ಮಾರ್ಗವನ್ನೇ ಅನುಸರಿಸಲು ಹೋದಳು. ಇನ್ನೇನಿದೆ! ಹೊಯಿಸಳೇಶ್ವರರೂ ಅವರ ಕುಮಾರರೂ ರಾಣಿಯರೂ ಎಲ್ಲರೂ ಹೋದ ಮೇಲೆ . . . ಮುಗಿಯಿತು' ಎಂದರು.

ಬಡವರು, ಬಂಧುಬಾಂಧವರು, ವಿದ್ಯಾವಿನಯಸಂಪನ್ನರಾದ ಕುಲಗುರು ಪೀಠದವರು, ಚೈತ್ಯಾಲಯಗಳ ಇಂದ್ರರು, ದೀನರು, ಹೀನರು, ಎಲ್ಲರನ್ನೂ ಮಧ್ಯಾಹ್ನ ತಮ್ಮ ಮನೆಗೆ ಬರಮಾಡಿಕೊಂಡರು ಮಾಚಿಕಬ್ಬೆ. ತಾವು ಸ್ನಾನಮಾಡಿ, ಶಾಂತಿನಾಥಸ್ವಾಮಿಯ ದರ್ಶನ ಮಾಡಿಕೊಂಡು ಬಂದು, ಒಬ್ಬೊಬ್ಬ ಬಡವನಿಗೂ ಒಂದೊಂದು ಕವಿಲೆ, ಎರಡೆರಡು ಹೊನ್ನಗದ್ಯಾಣ ಗಳಂತೆ ಒಂದುನೂರು ಕವಿಲೆಗಳನ್ನೂ ಎರಡುನೂರು ಹೊನ್ನಗದ್ಯಾಣಗಳನ್ನೂ ಕೊಟ್ಟರು. ಸ್ಥಿರ ಆಸ್ತಿ: ಹೊಲ ಗದ್ದೆಗಳನ್ನೆಲ್ಲ ಶಾಂತಿನಾಥ ಬಸದಿಗೆ ದತ್ತಿಬಿಟ್ಟು, ಶಾಸನ ನಡೆಸಿದರು. ತಮ್ಮ ಮನೆಯನ್ನೂ ಶಾರದಾಲಯವನ್ನೂ ಚಂದಲೆಗೆ ಕೊಟ್ಟರು. ಅರಮನೆ ತಮಗೆ ಗೌರವಾರ್ಥವಾಗಿ ಕೊಟ್ಟಿದ್ದ ರಥ ವನ್ನೂ, ಕುದುರೆಗಳನ್ನೂ, ಮೇನೆಯನ್ನೂ ಅರಮನೆಯ ಭಾಂಡಾಗಾರಕ್ಕೆ ಒಪ್ಪಿಸಿಬಿಟ್ಟರು. ಮನೆಯಲ್ಲಿದ್ದ ಸಮಸ್ತ ಒಡವೆ, ವಸ್ತ್ರ, ಪಾತ್ರೆ, ಪದಾರ್ಥ, ಸಾಮಾನು ಸರಂಜಾಮು ಎಲ್ಲವನ್ನೂ ಬಡಬಗ್ಗರಿಗೆ, ದೀನ ಹೀನರಿಗೆ ಹಂಚಿ ಕೊಟ್ಟಮೇಲೂ ನಾಲ್ಕು ಬಂಡಿಗಳಷ್ಟು ಸಾಮಾನು ಉಳಿದುವು. ಆ ಸಾಮಾನು ಗಳನ್ನೆಲ್ಲ ಬಂಡಿಯೊಳಗೆ ತುಂಬಿಸಿ, ಬಂಡಿಗಳ ಮೇಲೆ 'ಕಃ ಕೇನಾರ್ಥೀ' ಎಂದು ಬರೆಯಿಸಿ, ಇದು ಬೇಕೆಂದು ಬಂದು ಕೇಳಿದವರಿಗೆ ಬಂಡಿಯಿಂದ

ಅದನ್ನು ತೆಗೆಯಿಸಿಕೊಡುತ್ತ, ಪತಿಯೊಡನೆಯೂ ದೇಚನೊಡನೆಯೂ ಮನೆ ಯನ್ನು ಬಿಟ್ಟು, ನಡೆದರು. ರಾಜಧಾನಿಯ ಗಡಿಯನ್ನು ದಾಟಿ, ಶ್ರವಣಬೆಳು ಗೊಳದ ದಾರಿಯನ್ನು ಮಾಚಿಕಬ್ಬೆ ಹಿಡಿದಾಗ, ಮಕ್ಕಳಂತೆ ಕಣ್ಣೀರು ಸುರಿಸುತ್ತ ತಮ್ಮನ್ನೇ ಅನುಸರಿಸುತ್ತಿದ್ದ ಬಂಧುಗಳನ್ನೂ, ಪರಿಚಿತರನ್ನೂ, ಪುರಜನರನ್ನೂ ಕಂಡರು. ಆಕೆ ಅಲ್ಲಿಯೆ ನಿಂತು, ಹಿಂದಿರುಗಿ ನೋಡಿ 'ನನ್ನ ಅಣ್ಣತಮ್ಮದಿರು, ಅಕ್ಕತಂಗಿಯರು ನೀವೆಲ್ಲ ಇನ್ನು ಇಲ್ಲಿಯೆ ನಿಂತು ನಿಮ್ಮ ಮನೆಗಳಿಗೆ ಹಿಂದಿರು ಗಿರಿ. ನಾವು ನಿಮ್ಮೊಡನಿದ್ದಷ್ಟು ಕಾಲ ಸುಖವಾಗಿ ಕಳೆದೆವು. ನಿಮ್ಮೆಲ್ಲರ ಪ್ರೇಮ ವಿಶ್ವಾಸಗಳು ನಮಗೆ ನೆನಪಿನ ಹೊರೆಯಾಗಿವೆ. ನಮಗೆ ಇನ್ನು ಇಲ್ಲಿರಲು ಸಾಧ್ಯವಿಲ್ಲ. ಮುಂದೆ ಹೋಗುತ್ತಿದ್ದೇವೆ. ನೀವೆಲ್ಲರೂ ಇಷ್ಟು ದೂರ ನಮ್ಮನ್ನು ಕಳಿಸಿಕೊಡಲು ಬಂದಿದ್ದೀರಿ, ಇನ್ನು ನಿಲ್ಲಿರಿ, ನಿಮ್ಮ ನಿಮ್ಮ ಮನೆಗಳಿಗೆ ಹಿಂದಿರು ಗಿರಿ' ಎಂದರು. ಜನರು 'ಅಯ್ಯೋ, ಎಲ್ಲ ಭಾಗ್ಯಗಳೂ ಹೋದ ಮೇಲೆ, ಎಲ್ಲ ಗುಣವಂತರೂ ಹೋದ ಮೇಲೆ, ತಾಯಿತಂದೆಯಂತಹ ಪ್ರಭುಗಳೂ ರಾಣಿ ಯರೂ ಹೋದ ಮೇಲೆ ನಮಗೆ ಊರು ಯಾವುದು? ಮನೆ ಯಾವುದು? ಇನ್ನು ಈ ರಾಜ್ಯವನ್ನು ಯಾರು ಆಳಿದರೇನು?' ಎಂದು ಅತ್ತು, ಗೋಳಾಡಿ ಹಿಂದಿರುಗಿದರು.

ಆಗ ಕೇತಮಲ್ಲನಾಯಕ, ಜಕ್ಕಿಯಬ್ಬೆಯರು ಚಂದಲೆಯನ್ನು ಕರೆದು ಕೊಂಡು ಮುಂದೆ ಬಂದು, ಮಾಚಿಕಬ್ಬೆಯೊಡನೆ 'ಅವ್ವೆ, ಇವಳನ್ನು ನೀವು ನಿಮ್ಮ ಮಗಳೆಂದೆ ಸಾಕಿ ಸಲಹಿ, ವಿದ್ಯಾಬುದ್ಧಿಗಳನ್ನು ಕಲಿಸಿದಿರಿ, ನೀವಿದ್ದ ಮನೆಯನ್ನು ಇವಳಿಗೆ ಧಾರೆಯೆರೆದಿರಿ. ಇವಳು ನಮಗೆ ಎಷ್ಟುಮಾತ್ರ ಮಗಳೊ, ಅದಕ್ಕಿಂತ ಹೆಚ್ಚಾಗಿ ನಿಮ್ಮ ಮಗಳು. ನಮ್ಮದೊಂದು ಪ್ರಾರ್ಥನೆ: ನಿಮ್ಮ ಉಸಿರಿರುವತನಕ ಇವಳು ನಿಮ್ಮ ಸೇವೆಯಲ್ಲಿ ಇದ್ದು, ಅನಂತರ ನಮ್ಮನ್ನು ಬಂದು ಸೇರಲಿ. ಇದು ನಮ್ಮ ಮನಸ್ಸಿಗೆ ತೃಪ್ತಿ, ಒಲ್ಲೆ ಎನಬಾರದು' ಎಂದು ಬಲಾತ್ಕಾರ ಮಾಡಿ, ಚಂದಲೆಯನ್ನು ಮಾಚಿಕಬ್ಬೆಯವರಿಗೆ ಒಪ್ಪಿಸಿ ಊರಿಗೆ ಹಿಂದಿರುಗಿದರು.

ರಾತ್ರಿಯಾಯಿತು. ಪಂಜುಗಳ ಬೆಳಕಿನಲ್ಲಿ ಮಾಚಿಕಬ್ಬೆ ಚಂದಲೆಯ ಕೈಹಿಡಿದುಕೊಂಡು ಮುಂದೆ ಮುಂದೆ ಸಾಗಿದರು. ಜೊತೆಯಲ್ಲಿಯೆ ಮಾರ ಸಿಂಗಮಯ್ಯ, ದೇಚ ನಡೆದರು. ಸಣ್ಣದೊಂದು ಎತ್ತಿನ ಬಂಡಿ ಇವರಿಗೆ

ಬೇಕಾದ ಬಟ್ಟೆ ಮುಂತಾದ ಪದಾರ್ಥಗಳನ್ನು ಹೊತ್ತು ಹಿಂದೆ ನಡೆಯಿತು.

೬

ಶಿವಗಂಗೆಯ ದಾರಿಯಲ್ಲಿ ಅಚ್ಯುತರೂ, ಗೋವಿಂದರೂ, ಹೆಗ್ಗಡೆಗಳೂ ಕುಳಿತಿದ್ದ ರಥ, ಅದರ ಹಿಂದೆ ಲಕ್ಷ್ಮೀದೇವಿ, ದಾಸಿಯರು ಕುಳಿತಿದ್ದ ರಥ ಎರಡೂ ವೇಗದಿಂದ ಸಾಗುತ್ತಿದ್ದವು. ಗಾವುದ ಗಾವುದಕ್ಕೂ ಕುದುರೆಗಳನ್ನು ಬದಲಾಯಿಸುತ್ತಿದ್ದುದರಿಂದ ರಥಗಳು ವೇಗವಾಗಿ ಸಾಗಲು ಸಾಧ್ಯವಾಯಿತು. ಮಧ್ಯಾಹ್ನ ಮೂರು ಗಂಟೆಯ ವೇಳೆಗೆ ಲಕ್ಷ್ಮೀದೇವಿಗೆ ಪೂರ್ಣ ಪ್ರಜ್ಞೆ ಉಂಟಾಯಿತು. ಮಾರ್ಗದಲ್ಲಿ ದಾಸಿಯರು ಲಕ್ಷ್ಮೀದೇವಿಯರಿಗೆ ಆಗಾಗ ಹಣ್ಣು ಗಳನ್ನು ಹಾಲನ್ನು ಕೊಡುತ್ತಿದ್ದರು. ಲಕ್ಷ್ಮೀದೇವಿ ಮೂಕಳಂತೆ ಅವುಗಳನ್ನು ತೆಗೆದುಕೊಳ್ಳುತ್ತಿದ್ದಳು. ನಡುನಡುವೆ ಸ್ವಲ್ಪ ಸ್ವಲ್ಪ ಹೊತ್ತು ನಿದ್ದೆಹೋಗು ತ್ತಿದ್ದಳು. ತಾನು ರಥದಲ್ಲಿ ಕುಳಿತಿರುವುದಾಗಲಿ, ರಥ ವೇಗದಿಂದ ಹೋಗು ತ್ತಿರುವುದಾಗಲಿ ಆಕೆಗೆ ತಿಳಿಯಲಿಲ್ಲ.

ಪ್ರಜ್ಞೆ ಬೇಗಬೇಗ ಪೂರ್ಣತೆಗೆ ಬಂದಿತು. ಲಕ್ಷ್ಮೀದೇವಿ ಮಾತನಾಡಿ ದಳು: ದಾಸಿಯರನ್ನು ಕುರಿತು 'ಇದೇನು! ರಥದಲ್ಲಿ ನಾವು ಎಲ್ಲಿಗೆ ಹೋಗು ತ್ತಿದ್ದೇವೆ?' ಎಂದು ಕೇಳಿದಳು. ದಾಸಿಯರಿಂದ ಉತ್ತರ ಬರಲಿಲ್ಲ. ಲಕ್ಷ್ಮಿ ಪುನಃ ಕೇಳಿದಳು: 'ಎಲ್ಲಿಗೆ ಹೋಗುತ್ತಿದ್ದೇವೆ' ನಾನು ಎಷ್ಟು ಹೊತ್ತು ನಿದ್ದೆ ಮಾಡಿದೆ? ಈಗ ಎಷ್ಟು ಸಮಯ? . . ಓ . . ನೀವು ನನಗೆ ಔಷಧಿ ಕೊಟ್ಟೆ ರಲ್ಲವೆ! . . . ಅಲ್ಲ . . . ಅಲ್ಲ . . . ಪ್ರಭುಗಳೇ ಕೊಟ್ಟರು. ನನ್ನನ್ನು 'ಬಾಯಿ ತೆರೆ' ಎಂದು ಹೇಳಿ ಬಾಯೊಳಕ್ಕೆ ಔಷಧಿ ಹಾಕಿದರು, ನಾಲ್ಕು ಗುಟುಕು ನೀರು ಕುಡಿಸಿದರು. ಆಮೇಲೆ ದೊಡ್ಡ ನಿದ್ದೆ ಬಂದಿತು. ಕನಸಾಯಿತು . . . ಅವ್ವೆ ಬಂದಿದ್ದರು . . . ಚಿಕ್ಕಯ್ಯ ಬಂದಿದ್ದರು . . . ನನಗೆ ಮೈಯಲ್ಲಿ ಅಸ್ವಸ್ಥತೆ ಆಗಿತ್ತು. ಇನ್ನೂ ತಲೆ ಭಾರವಾಗಿಯೆ ಇದೆ . . . ಈಗ ನಾವು ಎಲ್ಲಿಗೆ ಹೋಗು ತ್ತಿದ್ದೇವೆ? . . . ಅಕ್ಕ ಶಿವಗಂಗೆಯಿಂದ ಬಂದರೆ? ತಮ್ಮ ಬಂದನೆ? ಇದೇಕೆ ನಾನು ಮಾತನಾಡಿಸಿದರೂ ನೀವು ಮಾತನಾಡುವುದಿಲ್ಲ? ಹಾಂ! . . . ಇದು ದ್ವಾರವತಿಯ ದಾರಿಯೆ? ವೇಲಾಪುರದಿಂದ ದ್ವಾರವತಿಗೆ ಹೋಗುತ್ತಿದ್ದೇವೆಯೆ? . . . ಉಹುಂ . . . ಅಲ್ಲ, ಇದು ದ್ವಾರವತಿಗೆ ದಾರಿಯಲ್ಲವೆ ಅಲ್ಲ. ನಾನರಿ

ಯೆನೆ? ನಾವು ದಾರಿ ತಪ್ಪಿದೆವು. ಸಾರಥಿಗೆ ರಥ ನಿಲ್ಲಿಸಹೇಳಿ. ಎದುರಿಗೆ ಕಾಣು ತ್ತಿರುವ ಬೆಟ್ಟ ಯಾವುದು? . . . ಆಂ . . . ನೀವಿಬ್ಬರೂ ಏಕೆ ಮಾತನಾಡು ವುದಿಲ್ಲ? ರಥವನ್ನು ನಿಲ್ಲಿಸೆಂದು ಹೇಳಿ. ಈ ಕ್ಷಣವೆ ಹೇಳಿ. ಇದೇನು ಹುಡು ಗಾಟ? ಅಕ್ಷಮ್ಯವಿದು! ನನಗೆ ಇನ್ನು ಸಿಟ್ಟು ಬರುತ್ತದೆ' ಎಂದು ಆಶ್ಚರ್ಯದಿಂದ, ಕೋಪದಿಂದ ಮಾತನಾಡಿದಳು ಲಕ್ಷ್ಮೀದೇವಿ.

'ಲಕ್ಷ್ಮೀದೇವಿಯರು ಎಚ್ಚತ್ತರೂ ಆಕೆಯೊಡನೆ ನೀವು ಮಾತನಾಡ ಬಾರದು, ಆಕೆಗೆ ಯಾವುದೊಂದು ಸಂಗತಿಯನ್ನೂ ಹೇಳಬಾರದು, ಜೋಕೆ ಜೋಕೆ!' ಎಂದು ದಾಸಿಯರನ್ನು ಎಚ್ಚರಿಸಿದ್ದರು ಅಚ್ಯುತರು. ಈಗ ದಾಸಿಯರು ತಮ್ಮ ಪ್ರಶ್ನೆಗಳಿಗೆ ಉತ್ತರ ಕೊಡದೆ ಮೌನವಾಗಿರುವುದನ್ನು ಕಂಡು ಲಕ್ಷ್ಮೀದೇವಿ ಸಿಟ್ಟಿನಿಂದ 'ನೀವು ಹೇಳುತ್ತೀರೋ . . . ಇಲ್ಲವೆ ನಾನು ರಥದಿಂದ ದುಮುಕಿ ಬಿಡಲೊ?' ಎಂದಳು. ದಾಸಿಯರು ನಡುಗಿಹೋದರು. ಕಂಪಿಸುತ್ತಿದ್ದ ಧ್ವನಿಯಲ್ಲಿ 'ಸ್ವಲ್ಪ ಇರಿ ಅವ್ವೆ, ಮುಂದಿನ ರಥದಲ್ಲಿ ಅಚ್ಯುತ ಅಮಾತ್ಯರೂ ಗೋವಿಂದ ಅಮಾತ್ಯರೂ ಇದ್ದಾರೆ, ಅವರೇ ಬಂದು ತಮ್ಮೊಡನೆ ಮಾತನಾಡು ತ್ತಾರೆ' ಎಂದು ದೇವಿಯರಿಗೆ ಬಿನ್ನೈಸಿ, ಸಾರಥಿಯೊಡನೆ 'ರಥವನ್ನು ಬೇಗ ನಡಸಿ, ಮುಂದಿನ ರಥವನ್ನು ಕೂಗಿ ನಿಲ್ಲಿಸು' ಎಂದರು. ಸಾರಥಿ ರಥವನ್ನು ವೇಗದಿಂದ ನಡಸಿಕೊಂಡು ಹೋಗಿ, ಧ್ವನಿ ಕೇಳಿಬರುವಷ್ಟು ದೂರದಿಂದಲೆ, ಮುಂದಿನ ರಥದ ಸಾರಥಿಯನ್ನು ಕೂಗಿ ರಥ ನಿಲ್ಲಿಸೆಂದು ಹೇಳಿದ. ರಥ ನಿಂತಿತು. ಅಚ್ಯುತ ಗೋವಿಂದರು ಭಯಪಟ್ಟು ಹಿಂದಿರುಗಿ ನೋಡಿದರು. ದಾಸಿಯೊಬ್ಬಳು ಹಿಂದಿನ ರಥದಿಂದ ಕೆಳಗಿಳಿದು ಅಚ್ಯುತರಲ್ಲಿಗೆ ಬಂದು ಲಕ್ಷ್ಮೀದೇವಿ ಹೇಳಿದ ಮಾತೆಲ್ಲವನ್ನೂ ಅಮಾತ್ಯರಿಗೆ ಒಪ್ಪಿಸಿದಳು. ಅಚ್ಯುತರು ಧೃತಿಗೆಡದೆ ರಥ ದಿಂದಿಳಿದು ಲಕ್ಷ್ಮೀದೇವಿ ಇದ್ದಲ್ಲಿಗೆ ಬಂದು, ವಿನಯದಿಂದ ನಮಸ್ಕರಿಸಿ, 'ರಾಜ್ಞಿಯವರು ಸಾವಧಾನದಿಂದ ಅವಧರಿಸಬೇಕು . . . ಶಿವಗಂಗೆಗೆ ಹೋಗು ತ್ತಿದ್ದೇವೆ . . . ಊರು ಹತ್ತಿರವಾಯಿತು. ಪ್ರಭುಗಳು ಶಿವಗಂಗೆಯಲ್ಲಿದ್ದಾರೆ' ಎಂದರು.

'ಇಲ್ಲವಲ್ಲ! ಪ್ರಭುಗಳು ವೇಲಾಪುರಿಯಲ್ಲಿಯೆ ಇದ್ದಾರೆ. ಅಕ್ಕನೂ ತಮ್ಮನೂ ಇಬ್ಬರು ಮಾತ್ರ ಇಲ್ಲಿಗೆ ಬಂದಿದ್ದಾರೆ. ನನ್ನನ್ನು ಬರಹೇಳಿದರೆ?' ಎಂದು ಕೇಳಿದಳು ಲಕ್ಷ್ಮಿ.

'ದೇವಿಯರು ಅವಧರಿಸಬೇಕು, ಪ್ರಭುಗಳು ನಿನ್ನಿನ ರಾತ್ರಿ ಇಲ್ಲಿಗೆ ಬಂದರು.'

'ಇಲ್ಲವಲ್ಲ! ನಿನ್ನಿನ ರಾತ್ರಿ ನನಗೆ ಔಷಧವನ್ನು ಕೊಟ್ಟರು.'

'ಅನಂತರ ಇಲ್ಲಿಗೆ ಹೊರಟುಬಂದರು.'

'ಅಷ್ಟು ರಾತ್ರಿಯಲ್ಲಿ ಇಲ್ಲಿಗೆ ಏಕೆ ಹೊರಟುಬಂದರು? ನನಗೆ ಮೈಯಲ್ಲಿ ಸ್ವಸ್ಥವಿರಲಿಲ್ಲ. ನನ್ನನ್ನು ಕರೆದುತನ್ನಿರೆಂದು ನಿಮ್ಮೊಡನೆ ಹೇಳಿ ಹೋದರೆ? ಅವರೇ ಏಕೆ ನನ್ನನ್ನು ಕರೆದೊಯ್ಯಲಿಲ್ಲ? ಅಥವಾ ಅಕ್ಕ ಬರಹೇಳಿ ಕಳುಹಿದರೆ?'

ಅಚ್ಯುತರು ತಮ್ಮನ್ನು ತಾವೆ ಶಪಿಸಿಕೊಳ್ಳುತ್ತ 'ದೇವಿಯರು ಇಲ್ಲಿಗೆ ಬಂದುದರಿಂದ ನಮ್ಮ ಸಾಮ್ರಾಜ್ಯವೆ ಈಗ ಬದುಕಿಕೊಳ್ಳಬಹುದು. ಇಲ್ಲವಾದರೆ ಹೊಯಿಸಳ ರಾಜ್ಯದ ಕೊನೆಯ ದಿನವಿದು. ಪ್ರಭುಗಳು ಇನ್ನು ಬಾಳಬೇಕಾದರೂ ತಮ್ಮ ಪುಣ್ಯಬಲ ಒಂದರಿಂದಲೆ. ಈ ಆಸೆಯಿಂದಲೆ ತಮ್ಮನ್ನು ಇಲ್ಲಿಗೆ ಕರೆದು ತಂದಿರುವೆವು. ತಾವು ಈಗ ಈ ರಾಜ್ಯಕ್ಕೇ ತಾಯಿ. ವಯಸ್ಸಿನಲ್ಲಿ ಮಾತ್ರ ನಾನು ತಮಗೆ ಹಿರಿಯ; ತಮ್ಮ ದಿವ್ಯಚರಣಗಳಿಗೆ ಕೈಜೋಡಿಸಿ ಬೇಡಿಕೊಳ್ಳುತ್ತೇನೆ, ಪ್ರಭುಗಳನ್ನು ನಾವು ಕಾಣುವವರೆಗೂ ದಯವಿಟ್ಟು ಯಾರನ್ನೂ ಯಾವ ಪ್ರಶ್ನೆಯನ್ನೂ ಯಾವ ವಿಷಯವನ್ನೂ ಕೇಳದಿರಿ. ಈಗ ನಾವೆಲ್ಲರೂ ಬಹು ಸಂಕಟಸಂದರ್ಭ ಒಂದರಲ್ಲಿ ಸಿಕ್ಕಿಹೋಗಿದ್ದೇವೆ. "ಭಗವಂತ, ನಮ್ಮನ್ನು ಇಂದು ಹೇಗಾದರೂ ಕಾಪಾಡು" ಎಂದು, ಊರಿನಿಂದ ಹೊರಟ ನಿಮಿಷ ಮೊದಲುಗೊಂಡು ಇನ್ನೂ ವಿಜಯನಾರಾಯಣನ ಸ್ಮರಣೆ ಮಾಡುತ್ತಲೆ ಬರುತ್ತಿದ್ದೇವೆ. ದೇವಿಯರು ಆಶ್ಚರ್ಯಪಡಬಾರದು. ತಮ್ಮ ಸೌಭಾಗ್ಯ ಒಂದರಲ್ಲೆ ಈಗ ನಮಗೆ ಭರವಸೆ ಇರುವುದು, ತಮ್ಮ ಪುಣ್ಯ ಒಂದೇ ನಮ್ಮನ್ನೆಲ್ಲ ಈಗ ಕಾಪಾಡಬೇಕು' ಎನ್ನುತ್ತ ಅಚ್ಯುತರು ಲಕ್ಷ್ಮೀದೇವಿಯ ಕಾಲುಗಳನ್ನು ಮುಟ್ಟಿ ಆ ಕೈಯನ್ನು ಕಣ್ಣುಗಳಿಗೊತ್ತಿಕೊಂಡರು.

ಲಕ್ಷ್ಮೀದೇವಿ ಕಾಲುಗಳನ್ನು ಸರ್ರನೆ ಹಿಂದಕ್ಕೆ ಎಳೆದುಕೊಂಡು 'ಇದು ಕೂಡದು, ಇದು ಬಾರದು. ನೀವು ನನಗೆ ಅಣ್ಣನ ಹಾಗೆ' ಎನ್ನುತ್ತ ಅಚ್ಯುತರ ಬಲಗೈಯನ್ನು ತನ್ನ ಕೈಗಳಿಂದ ಹಿಡಿದು, ಕಣ್ಣಿಗೆ ಒತ್ತಿಕೊಂಡು, ತನ್ನ ತಲೆಯ ಮೇಲೆ ಇಟ್ಟುಕೊಂಡು, 'ಅಣ್ಣನವರ ಮಾತಿನಿಂದ ನನಗೆ ಬಹಳ ಭಯವಾಗುತ್ತಿದೆ. ನನ್ನ ಬಾಯನ್ನು ಕಟ್ಟಿಬಿಟ್ಟಿರಿ, ನಾನು ಇನ್ನು "ಏನು? ಏಕೆ?"

ಎಂದು ಕೇಳುವುದಿಲ್ಲ. ಭಯನಿವಾರಕನಾದ ಶ್ರೀ ನರಸಿಂಹನನ್ನು ಧ್ಯಾನಿಸುತ್ತ ಮೌನದಿಂದಿರುತ್ತೇನೆ. ಅಣ್ಣನವರಲ್ಲಿ ನನಗೆ ಪೂರ್ಣ ವಿಶ್ವಾಸವಿದೆ' ಎಂದಳು ಹೊಯಿಸಳ ಮಂಗಳದೇವಿ ಲಕ್ಷ್ಮಿ.

ಅಚ್ಯುತರು ತಮ್ಮ ರಥದಲ್ಲಿ ಹೋಗಿ ಕುಳಿತರು. ರಥಗಳೆರಡೂ ನಾಲ್ಕು ಗಂಟೆಯ ಸಮೀಪಕ್ಕೆ ಶಿವಗಂಗೆಯನ್ನು ಸೇರಿದುವು.

§

ಆ ಹೊತ್ತಿಗೆ ಶಿವಗಂಗೆಯಲ್ಲಿ ನಾನಾ ತೆರದ ವಿಚಿತ್ರ ಸುದ್ದಿಗಳು ಹುಟ್ಟಿ ಹರಡಿದ್ದುವು. ದನಕುರಿಗಳನ್ನು ಬೆಟ್ಟದ ಮೇಲೆ ಮೇಯಿಸಲು ಅಟ್ಟಿ ಹೋಗು ವವರೇ ಈ ಸುದ್ದಿಗಳನ್ನು ಮೊದಲು ಹೊತ್ತು ತಂದು ಬಿತ್ತಿದವರು. ಈಗ ಈ ಸುದ್ದಿಗಳು ಸುತ್ತಮುತ್ತಲಿನ ಗ್ರಾಮಗಳಲ್ಲೆಲ್ಲ ಹರಡಿಹೋಗಿದ್ದುವು.

ಆ ದಿನ ಪ್ರಾತಃಕಾಲ ಕಾಲ್ನಡೆಗಳನ್ನು ಬೆಟ್ಟದ ಮೇಲೆ ಮೇಯಿಸಿ ಕೊಂಡು ಬರಲು ಹೋದವರು, ಅರ್ಧ ಬೆಟ್ಟದಲ್ಲಿರುವಾಗ 'ಶಾಂತಲೆ—ಓ— ಶಾಂತಲೆ' ಎಂಬ ಕೂಗುಗಳು ಪ್ರತಿಯೊಂದು ಬಂಡೆಯ ಬಿರುಕುಗಳಿಂದಲೂ ಬರುತ್ತಿದ್ದುದನ್ನು ಕೇಳಿದರು. ಶಾಂತಲೆ ಮಹಾರಾಣಿಯೂ ಅವರ ತಮ್ಮ ಕುವರವಿಷ್ಣುವೂ ಹಿಂದಿನ ದಿನ ಆ ಬೆಟ್ಟದಲ್ಲಿ ದುರ್ಮರಣಹೊಂದಿದ ಸಂಗತಿ ಆ ಪ್ರಾಂತಕ್ಕೆ ತಿಳಿದೇ ಇದ್ದಿತು. ಬೆಟ್ಟದ ತಪ್ಪಲ ನಾಲ್ಕೂ ಕಡೆಯ ಗ್ರಾಮ ಗಳಿಂದ ಮೇವಿಗಾಗಿ ಬೆಟ್ಟದ ಮೇಲಕ್ಕೆ ಕಾಲ್ನಡೆಗಳನ್ನು ಅಟ್ಟಿಕೊಂಡು ಹೋದ ವರಿಗೆ 'ಶಾಂತಲೆ—ಓ—ಶಾಂತಲೆ' ಎಂಬ ಕೂಗು, ಪ್ರತಿಧ್ವನಿಗಳೊಡನೆ ಮೇಲಿಂದ ಮೇಲೆ ಕೇಳಿಬರುತ್ತಲೇ ಇತ್ತು. ಆ ಕೂಗು ಒಮ್ಮೆ ಹತ್ತಿರದಿಂದ ಬಂದಂತೆಯೂ, ಒಮ್ಮೆ ದೂರದಿಂದ ಬಂದಂತೆಯೂ, ಒಮ್ಮೆ ತೀರ ಪಕ್ಕದಿಂದಲೆ ಬಂದಂತೆಯೂ ಕೇಳಿಸಿತು. ಗಾಳಿ ಹೇಗೆ ಬೀಸಿ ಬಂದರೆ ಹಾಗೆ, ಅಲ್ಲಲ್ಲಿ, ಬಂಡೆಗಳ ಇರುಕುಗಳಲ್ಲಿ, ಬೋರೆಗಲ್ಲುಗಳಿದ್ದಲ್ಲಿ ಪ್ರತಿಧ್ವನಿಗಳೇಳುತ್ತಿದ್ದುವು. ಯಾರೊ ಒಬ್ಬರ ಇಬ್ಬರ ಕಣ್ಣಿಗೆ ದೂರದಲ್ಲಿ ಬಿಳಿಯ ಬಟ್ಟೆಗಳನ್ನುಟ್ಟದ್ದ ಎತ್ತರದ ಪುರುಷಾಕೃತಿಯೊಂದು ಏನನ್ನೊ ಕೈಗಳಲ್ಲಿ ಹೊತ್ತುಕೊಂಡು 'ಶಾಂತಲೆ —ಓ—ಶಾಂತಲೆ' ಎಂದು ಕೂಗುತ್ತ ಬಂಡೆಯಿಂದ ಬಂಡೆಗೆ ಹೊಗುತ್ತಿ ದ್ದುದೂ ಕಂಡುಬಂದಿತು. ಅವರು ಅದನ್ನು ಕುವರವಿಷ್ಣುವಿನ ದೆವ್ವವೆಂದೂ

ಅಕ್ಕನನ್ನು ಹುಡುಕುತ್ತ ಬೆಟ್ಟವನ್ನೆಲ್ಲ ಹೀಗೆ ಅಲೆದಾಡುತ್ತಿದೆಯೆಂದೂ ಭಾವಿಸಿದರು. ತಮ್ಮ ತಮ್ಮ ಮನಸ್ಸಿನ ಭಯಭಾವನೆಗಳನ್ನು ಇನ್ನಷ್ಟು ಪೋಷಿಸಿಕೊಂಡರು. 'ಬೆಟ್ಟದ ಮೇಲೇ ಇದ್ದರೆ, ದೆವ್ವ ತಮ್ಮ ಕುತ್ತಿಗೆಗಳನ್ನು ಹಿಸುಕಿಕೊಂದೀತು' ಎಂಬ ಭಯದಿಂದ ಕಾಲ್ನಡೆಗಳನ್ನು ಕೂಡಿಸಿಕೊಂಡು, ದಡದಡನೆ ಬೆಟ್ಟವನ್ನಿಳಿದು ತಮ್ಮ ತಮ್ಮ ಗ್ರಾಮಗಳನ್ನು ಸೇರಿಕೊಂಡರು. 'ಕುವರವಿಷ್ಣುವಿನ ದೆವ್ವ ತನ್ನ ಅಕ್ಕನನ್ನು ಹುಡುಕುತ್ತ ಬೆಟ್ಟದಲ್ಲೆಲ್ಲ ಅಲೆಯುತ್ತಿದೆ. ಇದನ್ನು ನಾವು ಕಣ್ಣಾರೆ ಕಂಡೆವು, ಭಯಪಟ್ಟು ಓಡಿಬಂದೆವು' ಎಂದು ಊರಲ್ಲೆಲ್ಲ ಸುದ್ದಿ ಹರಡಿದರು. 'ಶಾಂತಲೆ—ಓ—ಶಾಂತಲೆ' ಎಂಬ ಕೂಗು ಮೇಲಿಂದ ಮೇಲೆ ತಮಗೂ ಕೇಳಿಬಂದಿತು ಎಂದು ಗ್ರಾಮಗಳವರೂ ಒಪ್ಪಿದರು. ಶಿವಗಂಗೆಯ ಊರಿನವರೂ ಆ ಕೂಗನ್ನು ಕೇಳಿದ್ದರು. ದೇವರ ದರ್ಶನಕ್ಕೆಂದು ಬೆಟ್ಟಕ್ಕೆ ಹೋಗಿದ್ದ ಜನರೂ ಆ ಕೂಗನ್ನು ಕೇಳಿದ್ದರು. ಎಲ್ಲರಿಗೂ ಭಯ ಹುಟ್ಟಿತು.

ಶಿವಗಂಗೆಯನ್ನು ಸೇರಿದಾಗ ಈ ಸುದ್ದಿ ಅಚ್ಯುತರಿಗೂ ಗೋವಿಂದರಿಗೂ ಮುಟ್ಟಿತು. ಇದು ತಮ್ಮ ಪ್ರಭುಗಳೇ ಇರಬಹುದೆಂದು ಅವರ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಈ ಸುದ್ದಿಗಳು ಲಕ್ಷ್ಮೀದೇವಿಯರ, ಅವರ ದಾಸಿಯರ ಕಿವಿಗಳಿಗೆ ಬೀಳದಂತೆ ನೋಡಿಕೊಂಡರು ಅಮಾತ್ಯರು.

ಇವರೆಲ್ಲ ಶಿವಗಂಗೆಗೆ ಬಂದುದು ಊರಿನವರ ಊಹಾಪೋಹಗಳನ್ನು ಇನ್ನಷ್ಟು ಚುರುಕುಗೊಳಿಸಿತು. 'ಆ ಕೂಗನ್ನು ನಾವು ಕೇಳಿದೆವು' ಎಂದು ಹೇಳಿದ ದನಕಾಯುವವರನ್ನು ಅಚ್ಯುತ, ಗೋವಿಂದರು ಗುಟ್ಟಾಗಿ ಕರಸಿಕೊಂಡು ಕೂಲಂಕಷವಾಗಿ ವಿಚಾರಿಸಿದರು. 'ಎಲ್ಲಿ ಕೇಳಿದಿರಿ? ಆಗ ನೀವು ಎಲ್ಲಿದ್ದಿರಿ? ಆಗ ಎಷ್ಟು ವೇಳೆ? ಕೂಗು ಸ್ಪಷ್ಟವಾಗಿ ಕೇಳಿಬಂದಿತೆ? ಎಷ್ಟು ಹೊತ್ತು ಹಾಗೆ ಕೇಳಿಬರುತ್ತಿತ್ತು? ರೂಪವನ್ನು ನೋಡಿದವರು ಯಾರು? ಆ ಆಕಾರವೆ ಕೂಗುತ್ತಿತ್ತೆ? ಎಷ್ಟು ಎತ್ತರವಿರಬಹುದು? ಯಾವ ಬಣ್ಣದ ಬಟ್ಟೆಗಳು? ನಡೆದು ಹೋಗುತ್ತಿತ್ತೆ? ತೇಲಿ ಹೋಗುತ್ತಿತ್ತೆ? ಆ ಆಕಾರ ನಿಮ್ಮ ಕಡೆ ನೋಡಿತೆ?' ಎಂದೆಲ್ಲ ಪ್ರಶ್ನೆ ಮಾಡಿ, ಸಮಂಜಸ, ಅಸಮಂಜಸ ಉತ್ತರಗಳನ್ನೆಲ್ಲ ಕೇಳಿ, ತೂಗಿಕೊಂಡರು.

ಅಚ್ಯುತರಿಗೂ ಗೋವಿಂದರಿಗೂ ಇದು ಪ್ರಭುಗಳೇ ಇರಬೇಕೆಂದು ನಿರ್ಧರವಾಯಿತು. 'ಮಧ್ಯಾಹ್ನ ಎರಡು ಗಂಟೆಯಾದ ಮೇಲೆ ಆ ಕೂಗು

ನಿಂತುಹೋಯಿತು, ಆಮೇಲೆ ಕೇಳಿಬರಲಿಲ್ಲ' ಎಂದು ಜನಗಳು ಅಂದುದನ್ನು ಕೇಳಿ ಅವರಿಗೆ ಭಯ ತಟ್ಟಿತು. 'ಅನಂತರ ಏನಾಯಿತು? ಏನಾಗಿರಬಹುದು?' ಎಂಬುದು ಅವರ ಊಹನೆಗೂ ಎಟುಕದಾಯಿತು. ರಾಜ್ಯ ವಿಷಯಗಳಲ್ಲಿ ಎಂತಹ ಕಠಿಣ ಸಮಸ್ಯೆ ಬಂದರೂ ಧೃತಿಗೆಡದೆ, ಸ್ಥೈರಣೆಯಿಂದ, ವಿವೇಚನೆ ಯಿಂದ ತೊಡಕನ್ನು ಬಿಡಿಸುತ್ತಿದ್ದ ಈ ಚತುರ ಅಮಾತ್ಯರಿಗೆ ಈಗ ಬುದ್ಧಿ ಓಡ ದಂತಾಗಿ, 'ಪ್ರಭುಗಳು ಏನಾದರೊ? ಬುದ್ಧಿ ಪಲ್ಲಟಿಸಿಹೋಯಿತೊ? ಹಾಗಾ ಗಿದ್ದರೆ ಏನು ಗತಿ! ಲಕ್ಷ್ಮೀದೇವಿಯನ್ನಾದರೂ, ನಮ್ಮನ್ನಾದರೂ, ಗುರುತಿಸದೆ ಹೋದರೆ ಏನು ಗತಿ! ಪ್ರಭುಗಳು ಎರಡು ಗಂಟೆಯ ತನಕ ತಮ್ಮ ಪತ್ನಿಯ ಹೆಸರನ್ನು ಕೂಗುತ್ತಿದ್ದವರು, ಅನಂತರ ಏಕೆ ಸುಮ್ಮನಾದರು! ಏನಾಗಿರ ಬಹುದು! ಏನು ಸಂಭವಿಸಿರಬಹುದು? ದೇವರೆ, ಎಂತಹ ಸಂಕಟ ತಂದಿಟ್ಟೆ? ಒಂದರ ಮೇಲೆ ಒಂದು, ಇನ್ನೊಂದರ ಮೇಲೆ ಮತ್ತೊಂದು, ಹೀಗೆ ಸಂಕಟಗಳು ಬರುತ್ತಲೇ ಇರುವುವಲ್ಲಾ!' ಎಂದು ಅಮಾತ್ಯರಿಬ್ಬರೂ ಬಹು ಭಯಕ್ಕೆ ಈಡಾದರು. 'ಇನ್ನು ಏನಾದರೆ ಏನು! ಕೊನೆಯೂ ನಡೆದೇಹೋಗಲಿ. ಆಗ ಅಕ್ಕನನ್ನು ಕರೆದುಕೊಂಡು ತಮ್ಮನು ಬಂದ; ಈಗ, ನಮ್ಮ ತಂಗಿಯನ್ನು ಕರೆದು ಕೊಂಡು ನಾವಿಬ್ಬರೂ ಬಂದಿದ್ದೇವೆ. ಗೋವಿಂದರೆ, ಪ್ರಭುಗಳಿಲ್ಲದೆ ಹೋದರೆ, ಅಥವಾ ಇದ್ದೂ ಇನ್ನು ಇಲ್ಲದಂತೆ ಆಗಿದ್ದರೆ ನಮ್ಮ ರುದ್ರಭೂಮಿಯೂ ಇಲ್ಲಿಯೆ. ಪರಮೇಶ್ವರ, ಎಲ್ಲವೂ ನಿನ್ನ ಇಚ್ಛೆಯಂತೆ ನಡೆದುಹೋಗಲಿ' ಎನ್ನುತ್ತ ಅಚ್ಯುತ ಅಮಾತ್ಯರು ತತ್‌ಕ್ಷಣವೆ ಮರದ ತೊಟ್ಟಿಲನ್ನು ಹೊರಲು ಬೋಯಿಗಳನ್ನು ಕರೆಯಿಸಿ, ಲಕ್ಷ್ಮೀದೇವಿಯರನ್ನು ಬಹು ಒತ್ತಾಯಪಡಿಸಿ, ತೊಟ್ಟಿಲೊಳಗೆ ಕೂಡಿಸಿದರು. ಬೋಯಿಗಳು ತೊಟ್ಟಿಲನ್ನು ಹೊತ್ತು ನಡೆದರು. ಸಂಗಡ ದಾಸಿಯರಿಬ್ಬರೂ ನಡೆದರು. ಹಿಂದೆಯೆ ಅಚ್ಯುತರೂ, ಗೋವಿಂದರೂ, ಹೆಗ್ಗಡೆ ಗಳೂ, ನಗರ ರಕ್ಷಕರೂ, ಒಬ್ಬಿಬ್ಬರು ಪುರಪ್ರಮುಖರೂ ಬೆಟ್ಟವನ್ನು ಹತ್ತಿದರು.

'ಬೆಟ್ಟವನ್ನು ಹತ್ತಿ ಎಲ್ಲಿ ಹುಡುಕುವುದು?' ಎಂಬ ಪ್ರಶ್ನೆ ಆಗ ಅಚ್ಯುತ ರಿಗೆ ಉಂಟಾಗಲಿಲ್ಲ. 'ಬೆಟ್ಟದ ಕೋಡಿಗೆ ಹತ್ತಿ ಪ್ರಭುಗಳನ್ನು ಕರೆದು ಕೂಗು ವುದು. ಲಕ್ಷ್ಮೀದೇವಿಯರ ಪುಣ್ಯದಿಂದ ಉತ್ತರ ಬಂದರೆ, ಆ ಕಡೆಗೆ ಹೋಗಿ ಹುಡುಕುವುದು. ಫಲಕಾರಿಯಾಗದಿದ್ದರೆ, ಊರಿನಿಂದ ನೂರು ಇನ್ನೂರು ಜನ ಗಳನ್ನಾದರೂ ಕರೆಯಿಸಿ, ಪಂಜುಗಳನ್ನು ತರಿಸಿಕೊಟ್ಟು ಬೆಟ್ಟದಲ್ಲಿರುವ ಇರುಕು,

ಬಿರುಕು, ಒಂದೂ ಬಿಡದಂತೆ ಬೆಟ್ಟವನ್ನೆಲ್ಲಾ ಶೋಧಿಸಿಬಿಡುವುದು. ಇಷ್ಟರ ಮೇಲೆ ದೈವೇಚ್ಛೆ! ನಮ್ಮೆಲ್ಲರಿಗೂ ಭೃಗುಪತನವೇ ಬ್ರಹ್ಮಾರ್ಪಣ ಎಂದು ಮನಸ್ಸನ್ನು ಗಟ್ಟಿಮಾಡಿಕೊಂಡರು.

ಬೆಟ್ಟದ ತುದಿಯನ್ನು ಮುಟ್ಟುತ್ತಿರುವಾಗ ಸಂಜೆ ಆರು ಗಂಟೆ ಸಮಯ ವಾಗುತ್ತ ಬಂದಿತು. ಲಕ್ಷ್ಮೀದೇವಿಯರೂ, ದಾಸಿಯರೂ ಬೆಟ್ಟದ ಕಾವಿಗೆ, ಬಿಸಿಲಿನ ಝಳಕ್ಕೆ, ಬಾಡಿಹೋಗಿದ್ದರು. ಆಗ ಹೆಗ್ಗಡೆಯವರು 'ಮಹಾರಾಣಿ ಯವರು ಅಪಘಾತ ಹೊಂದಿದ್ದು ಈ ಕಡೆಯಲ್ಲೆ' ಎಂದು ಮೆಲ್ಲನೆ ಅಚ್ಯುತರ ಕಿವಿಯಲ್ಲಿ ಉಸುರಿ, ಕೋಡುಗಲ್ಲು ಬಸವನ ಕಡೆಗೆ ಕೈಮಾಡಿ ತೋರಿದರು. ಅಚ್ಯುತರಿಗೆ ಮೊದಲು ಆ ಕಡೆಯೆ ನೋಡೋಣವೆಂಬ ಮನಸ್ಸಾಯಿತು. 'ನಡೆಯಿರಿ' ಎಂದು ಹೆಗ್ಗಡೆಗಳನ್ನು ಮುಂದಿಟ್ಟುಕೊಂಡು, ಎಲ್ಲರೂ ಅನುಸರಿಸಿ ಹೋದರು.

ಕೋಡುಗಲ್ಲು ಬಸವನಿರುವ ಸ್ಥಳವನ್ನು ಸೇರಿದರು. ಲಕ್ಷ್ಮೀದೇವಿಯರು ತುಟಿ ಪಿಟಕ್ಕೆನ್ನದೆ, ಕಣ್ಣು ಮುಚ್ಚಿ ಸ್ಥಿರಮನಸ್ಸಿನಿಂದ ನರಸಿಂಹನ ಧ್ಯಾನದಲ್ಲಿಯೆ ಇದ್ದರು. ದಾಸಿಯರಿಗೆ ಮಾತ್ರ ಮನಸ್ಸಿನಲ್ಲಿ ಏನೇನೊ ಸಂಶಯ, ಏನೇನೊ ಭೀತಿ ತಲೆದೋರಿದ್ದರೂ ಅವರು ಮೌನವಾಗಿಯೆ ಇದ್ದರು. ಹೆಗ್ಗಡೆಗಳು ಅಚ್ಯುತರ ಜೊತೆಯಲ್ಲೆ ಸುತ್ತ ಸುಳಿದು ನೋಡಿ, ಅಚ್ಯುತರಿಗೆ 'ಅಗೋ ಅದೇ ಸ್ಥಳ'ವೆಂದು ಮೆಲ್ಲನೆ ಹೇಳಿದರು. ಹೆಗ್ಗಡೆಗಳು ಕೈನೀಡಿ ತೋರಿಸಿದ ಸ್ಥಳವನ್ನು ಅಚ್ಯುತರು ಚೆನ್ನಾಗಿ ದೃಷ್ಟಿಯನ್ನು ಪಸರಿಸಿ ನೋಡಿದರು. ಯಾರೊ ನಿಂತಿರು ವಂತೆ ಕಂಡಿತು. ಗೋವಿಂದರನ್ನು ಕರೆದು 'ಅಲ್ಲಿ ಯಾರೋ ನಿಂತಿರುವಂತೆ ಕಾಣುತ್ತದೆ ಅಲ್ಲವೆ?' ಎಂದರು. ಗೋವಿಂದರು 'ಹೌದು, ಯಾರೊ ನಿಂತಿರು ವಂತೆ ಕಾಣುತ್ತಿದೆ' ಎಂದರು. ಒಂದೆರಡು ನಿಮಿಷ ಹಾಗೆಯೆ ನೋಡುತ್ತಿದ್ದರೂ ಆ ವ್ಯಕ್ತಿ ತಾನು ನಿಂತಿದ್ದ ಸ್ಥಳದಿಂದ ಕದಲಲಿಲ್ಲ. ಅಚ್ಯುತರಿಗೆ 'ಹೇ ಭಗವಂತ, ಇವರು ಪ್ರಭುಗಳಿರಬಹುದೆ?' ಎಂಬ ದೂರದ ಆಶೆ ತಲೆಹಾಕಿತು. ಅಷ್ಟು ಹೊತ್ತು ಆ ವ್ಯಕ್ತಿ ಕದಲದೆ ನಿಂತಿರುವುದನ್ನು ನೋಡಿ ಹೆಗ್ಗಡೆಗಳು ಗಟ್ಟಿಯಾಗಿ 'ಹೋ ಯಾರದು? ನಿಂತಿರುವವರು?' ಎಂದು ಕೂಗಿದರು. ಅಚ್ಯುತರು ಕೂಡಲೆ ಹೆಗ್ಗಡೆಗಳ ಬಾಯನ್ನು ತಮ್ಮ ಕೈಯಿಂದ ಮುಚ್ಚಿ ಹಿಡಿದು 'ಕೂಗ ಬೇಡಿ, ಕೂಗಬೇಡಿ, ಸದ್ಯಃ ನಾವು ಹುಡುಕುತ್ತಿರುವ ದೈವ ಅವರೆ ಇರಬಹುದು!

ನಡೆಯಿರಿ, ಸ್ವಲ್ಪ ಹತ್ತಿರದಿಂದ ನೋಡೋಣ, ಆ ಕಡೆಗೆ ಹೋಗಲು ದಾರಿ ಇದೆಯೊ?' ಎಂದು ಆತುರರಾಗಿ ಕೇಳಿದರು.

ಅಲ್ಲಿಗೆ ಹೋಗಲು ಸರಿಯಾದ ಮಾರ್ಗವಿರಲಿಲ್ಲ. ಹೆಗ್ಗಡೆಗಳ ಅನುಭವದ ಮೇಲೆ ಮೆಲ್ಲಮೆಲ್ಲಗೆ ದಾರಿಯನ್ನು ಮಾಡಿಕೊಳ್ಳುತ್ತ ನಡೆದರು. ತೊಟ್ಟಿಲನ್ನು ಹೊತ್ತಿದ್ದ ಬೋಯಿಗಳಿಗಂತೂ ಬಹು ಕಷ್ಟವಾಯಿತು. ಲಕ್ಷ್ಮೀದೇವಿ, ಯಾವುದೊ ಮಹಾ ಆಪತ್ತಿನಲ್ಲಿರುವೆವೆಂದು ತಿಳಿದು ತಲೆ ಬಗ್ಗಿಸಿಕೊಂಡು ನರಸಿಂಹನಾಮಸ್ಮರಣೆಯಲ್ಲಿ ನಿರತಳಾಗಿದ್ದಳು.

§

ಪ್ರಾತಃಕಾಲದಿಂದ ಪತ್ನಿಯ ಕಳೇಬರವನ್ನು ಎದೆಗೆ ಕಟ್ಟಿಕೊಂಡು, 'ಶಾಂತಲೆ . . . ಓ . . . ಶಾಂತಲೆ' ಎಂದು ಹೆಜ್ಜೆಹೆಜ್ಜೆಗೂ ಕೂಗುತ್ತ, ಮೈಕೈ ನೋವುಗಳಿಗಿಂತ ಹೃದಯಕಾತರ ನೂರ್ಮಡಿಯಾಗಿ, ಆ ಚೈತ್ರಮಾಸದ ಮಧ್ಯಾಹ್ನದಲ್ಲಿ, ಮೇಲೆ ಬೆಂಕಿ, ಕೆಳಗೆ ಬೆಂಕಿ, ಹೃದಯದಲ್ಲಿ ಮಹಾಬೆಂಕಿ, ಈ ಮೂರು ಬೆಂಕಿಗಳ ನಡುವೆ ಬೆಂದು ಬೆಂಡಾಗಿ ಬೆಟ್ಟದ ಬಹುಭಾಗವನ್ನೆಲ್ಲ ಅಲೆದಾಡಿ, ಉಟ್ಟ ತೊಟ್ಟ ಬಟ್ಟೆಗಳು ಹರಿದುಹೋಗಿ, ಮೈಯಲ್ಲಿ ಹಲವಾರು ಗಾಯಗಳಾಗಿ, ಮುಖ ಸುಟ್ಟ ಹಣ್ಣಿನಂತಾಗಿ, ಮುಂದಕ್ಕೆ ಹೆಜ್ಜೆ ಇಡಲು ಸಹ ಶಕ್ತಿ ಸಾಲದೆ ಪ್ರಭುಗಳು ಒಂದೆಡೆ ಸರ್ವಚೈತನ್ಯವೂ ಉಡುಗಿ ನಿಂತುಬಿಟ್ಟಿದ್ದರು.

ಪ್ರಭುಗಳು ಈಗ ಗುರುತು ಸಹ ಸಿಗದಷ್ಟು ವಿಕಾರವಾಗಿದ್ದರು. ಮಧ್ಯಾಹ್ನಾತ್ಪರ ಐದು ಹೋರೆಯ ಸಮಯಕ್ಕೆ ಆ ಸ್ಥಳಕ್ಕೆ ಬಂದವರು ಅಲ್ಲಿಂದ ಮುಂದಕ್ಕೆ ಕದಲಲಾಗದೆ ನಿಂತರು. ಅಲ್ಲಿಗೆ ಕಾಲು ಕಟ್ಟಿಹೋದಂತೆ ಅನುಭವವಾಯಿತು. ಭಾರವನ್ನು ಇನ್ನು ಹೊತ್ತು ನಿಂತಿರಲು ಅವರ ಕೈಯಿಂದ ಆಗಲಿಲ್ಲ. ಕುತ್ತಿಗೆಗೆ ಕಟ್ಟಿಕೊಂಡಿದ್ದ ಜೋಳಿಗೆಯನ್ನು ಬಿಚ್ಚಿ ಕಳೇಬರವನ್ನು ನೆಲದ ಮೇಲೆ ತಮ್ಮ ಮುಂದೆ ಇಟ್ಟುಕೊಂಡರು. ಶಾಂತಲಾದೇವಿ ಯಾವ ಸ್ಥಳದಲ್ಲಿ ಬಿದ್ದು ಪ್ರಾಣಬಿಟ್ಟಿದ್ದಳೊ ಅದೇ ಸ್ಥಳಕ್ಕೆ ಈಗ ಆಕೆಯ ಕಳೇಬರ ತಂದಿಡಲ್ಪಟ್ಟಿತು. ಯಾವುದೋ ಅವ್ಯಕ್ತವಾದ ಶಕ್ತಿಯೆ ಪ್ರಭುಗಳನ್ನೂ ಆ ಸ್ಥಳಕ್ಕೆ ಕರೆತಂದಿದ್ದಿತ್ತು. ಆಗ ಅವರು ಯೋಚಿಸಿದರು: ತಮ್ಮ ಹೃದಯದ ಕರೆ ತಮ್ಮ ದೇವಿಗೆ ಮುಟ್ಟಲಿಲ್ಲ. ವಿಜಯನಾರಾಯಣನಿಗೆ ಮುಟ್ಟಲಿಲ್ಲ. ಇಹಜನ್ಮದಲ್ಲಿ ಇನ್ನು

ತಮಗೆ ಶಾಂತಲೆ ಇಲ್ಲವೆಂದು ಪ್ರಭುಗಳು ಈಗ ದೃಢಪಟ್ಟುಹೋದರು. ನಿರಾಶ ರಾದರು. ಮನಸ್ಸು ತೊಟ್ಟಿದ್ದ ಮೌಢ್ಯಹಠ ಕಳಚಿಹೋಯಿತು. 'ನಿಜವಾಗಿ... ನಿಜವಾಗಿ ಯೋಚಿಸಿದರೆ ಈ ಭೂಮಿಯ ಮೇಲೆ ಮಾನವನ ಬದುಕೇ ಒಂದು ಘೋರ, ಒಂದು ಮಿಥ್ಯ. ಇದರ ಸಮಾಧಾನಕ್ಕಾಗಿಯೆ ಪ್ರಪಂಚದಲ್ಲಿರುವ ನಾನಾ ಮತಗಳೂ ಪಂಥಗಳೂ ಉಪದೇಶಕರೂ ಆಚಾರ್ಯರೂ ಹುಟ್ಟಿಕೊಂಡಿರ ಬೇಕು' ಎಂದುಕೊಂಡರು ಪ್ರಭುಗಳು. ಒಂದು ಸಲ ಕತ್ತೆತ್ತಿ ಪಶ್ಚಿಮ ದಿಕ್ಕಿನಲ್ಲಿ ಕೆಳಗಿಳಿಯುತ್ತಿರುವ ಸೂರ್ಯನನ್ನು ನೋಡಿದರು. ಕೈಮುಗಿದು 'ಭಗವನ್, ನಾನು ಮಹಾಪಾಪಿ ಇದ್ದಿರಬೇಕು. ಆದುದರಿಂದಲೆ ಇಷ್ಟು ಘೋರ ದುಃಖ ವನ್ನು ಅನುಭವಿಸುತ್ತಿದ್ದೇನೆ. ನನ್ನ ಶಾಂತಲೆಯ ಆತ್ಮ ಇಲ್ಲಿಯೆ ಎಲ್ಲೊ ಇರ ಬೇಕು. ಇಲ್ಲದಿದ್ದರೆ ವಿಧಿ ನನ್ನನ್ನು ಇಲ್ಲಿಗೆ ಎಳೆದು ತರುತ್ತಿರಲಿಲ್ಲ. ಹೇ ಪ್ರತ್ಯಕ್ಷ ದೈವವೆ, ನಿನ್ನ ಬೆಳಕು ಪಶ್ಚಿಮಾಕಾಶದಲ್ಲಿ ಕಾಣದೆಹೋಗುವ ಮುನ್ನ ನನ್ನನ್ನೂ ನನ್ನ ಶಾಂತಲೆಯೊಂದಿಗೆ ಸೇರಿಸಿಬಿಡು. ಇಂದಿನ ನಿನ್ನ ಕೊನೆಯ ಕಿರಣ ಗಳೊಂದಿಗೆ ನನ್ನ ಕೊನೆಯ ಉಸಿರೂ ಉಡುಗಲಿ. ನನ್ನ ಅಂತ್ಯವನ್ನು ನನ್ನ ಕುವರನ ಅಂತ್ಯದಂತೆಯೆ ನಿರ್ಧರಿಸಿದ್ದೇನೆ. ಈ ಭೂಮ್ಯಾಕಾಶಗಳಿಗೂ ಸಮಸ್ತ ಭೂತಗಳಿಗೂ ಸರ್ವದೇವರುಗಳಿಗೂ ಇದುವೆ ನನ್ನ ಕೊನೆಯ ನಮಸ್ಕಾರ' ಎಂದು ತಲೆಯ ಮೇಲೆ ಕೈಗಳನ್ನು ಜೋಡಿಸಿಕೊಂಡು ಸೂರ್ಯ ಮುಳುಗುವುದನ್ನು ಕಾಯುತ್ತ, ತಮ್ಮ ಮನದನ್ನೆಯ ನೆನಪು ಮಾಡಿಕೊಳ್ಳುತ್ತ ನಿಂತುಬಿಟ್ಟರು.

ಸೂರ್ಯಬಿಂಬ ಮುಳುಗಲು ಇನ್ನು ಬಹಳ ಹೊತ್ತೇನಿಲ್ಲ. ಪಶ್ಚಿಮ ಆಕಾಶ ಆಗಲೆ ಕಿತ್ತಳೆ ಬಣ್ಣ ತಾಳಿದೆ. ಅಂದಿನ ಸೂರ್ಯಾಸ್ತಮಯದೊಂದಿಗೆ ಹೊಯಿಸಳ ಸಾಮ್ರಾಜ್ಯವೂ ಅಸ್ತಮಿಸುವುದರಲ್ಲಿದೆ.

ಅಚ್ಯುತ ಅಮಾತ್ಯರು ಹೆಗ್ಗಡೆಯವರನ್ನೂ ಇತರರನ್ನೂ ದಾಸಿಯರನ್ನೂ ದೂರದಲ್ಲಿಯೆ ನಿಲ್ಲಿಸಿ, ಲಕ್ಷ್ಮೀದೇವಿಯನ್ನು ತೊಟ್ಟಿಲಿಂದ ಇಳಿಸಿ ಮೆಲ್ಲನೆ ನಡಸಿ ಕೊಂಡು ಗೋವಿಂದರೊಡಗೂಡಿ, ಆ ಅಚಲಿತ ವ್ಯಕ್ತಿ ನಿಂತಿದ್ದೆಡೆಗೆ ಹೋದರು. ಅಚ್ಯುತರಿಗೆ ಆ ವ್ಯಕ್ತಿ ತಮ್ಮ ಪ್ರಭುಗಳೇ ಇರಬೇಕೆಂಬ ನಂಬಿಕೆ ಹುಟ್ಟಿತು. ಆ ವ್ಯಕ್ತಿ ಇನ್ನೂ ಕದಲದೆ ಹಾಗೆಯೆ ನಿಂತಿತ್ತು. ಅಚ್ಯುತರೂ ಗೋವಿಂದರೂ ಲಕ್ಷ್ಮೀದೇವಿಯರೂ ಈಗ ಆ ವ್ಯಕ್ತಿಗೆ ಸುಮಾರು ಐವತ್ತೆ ಮಾರುಗಳ ಅಂತರಕ್ಕೆ ಬಂದರು. ಅಚ್ಯುತರು ನಿಂತು ನೋಡಿದರು. ಅದೇ ಆಕಾರ, ಅದೇ ನಿಲವು,

ಕುತ್ತಿಗೆಯಲ್ಲಿ ಅವರು ಧರಿಸುತ್ತಿದ್ದ ನವರತ್ನಮಾಲಿಕೆ ಸೂರ್ಯನ ಕೊನೆಯ ಕಿರಣ ಗಳನ್ನು ಪ್ರತಿಫಲಿಸಿತು. ಇದು ಪ್ರಭುಗಳೆಂದೇ ಅಚ್ಯುತರಿಗೆ ಆಗ ದೃಢವಾಯಿತು. ಸಂತೋಷದಿಂದ, ನಡುಗುತ್ತಿದ್ದ ತಗ್ಗಿನ ಧ್ವನಿಯಲ್ಲಿ 'ಗೋವಿಂದಾ, ಇದು ನಮ್ಮ ಪ್ರಭುಗಳು! ಜೀವಂತರಾಗಿದ್ದಾರೆ! ನಾರಾಯಣ, ನಿನಗೆ ನಮ್ಮ ಅನಂತ ನಮಸ್ಕಾರಗಳು' ಎಂದರು. ಪ್ರಭುಗಳ ಮುಂದೆ ಮೂಟೆಯಂತಿದ್ದ ಶಾಂತಲಾದೇವಿಯ ಕಳೇಬರವಿತ್ತು. ಪ್ರಭುಗಳು ತಲೆಯ ಮೇಲೆ ಕೈಗಳನ್ನು ಜೋಡಿಸಿಕೊಂಡು ಮುಕ್ಕಾಲು ಮುಳುಗಿದ್ದ ಸೂರ್ಯನಿಗೆ ತಮ್ಮ ಅಂತ್ಯನಮಸ್ಕಾರ ವನ್ನು ಮಾಡುತ್ತಿದ್ದರು. ಅವರ ಮನಸ್ಸು, ಅವರ ದೃಷ್ಟಿ ಆಗ ಸೂರ್ಯಬಿಂಬ ದಲ್ಲಿ ನೆಟ್ಟುಹೋಗಿತ್ತು. ಇತರ ಬಾಹ್ಯೇಂದ್ರಿಗಳೆಲ್ಲ ಸುಪ್ತಸ್ಥಿತಿಯಲ್ಲಿದ್ದುವು.

ಅಚ್ಯುತರು ಅಂದ ಮಾತಿಗೆ ಲಕ್ಷ್ಮೀದೇವಿ ಕಕ್ಕುಬಿಕ್ಕಾದರು. ಆಕೆ ಪ್ರಭುಗಳನ್ನು ಒಂದೆರಡು ನಿಮಿಷಕಾಲ ಅದೇ ಸ್ಥಳದಲ್ಲಿ ನಿಂತು ಚೆನ್ನಾಗಿ ನೋಡಿದಳು. ಆಕೆಗೆ ಆಗ ಪೂರ್ಣ ಪ್ರಜ್ಞೆ ಇತ್ತು. ಅವರ ಕಾಲುಗಳ ಬಳಿ ಬಿದ್ದಿದ್ದ ಆ ಮೂಟೆ ಏನೆಂದು ಲಕ್ಷ್ಮಿಗೆ ಅರ್ಥವಾಗಲಿಲ್ಲ. 'ಏನೋ ಅನರ್ಥ ಸಂಭವಿಸಿದೆ. ಪ್ರಭುಗಳು ಏಕೆ ಹೀಗಿರುವರು! ಅವರಿಗೆ ಏನಾಗಿದೆ! ಹುಚ್ಚ ರಂತೆ ಇರುವರಲ್ಲ! ಇಲ್ಲಿಗೇಕೆ ಬಂದಿರುವರು! ಕೆಳಗೆ ಬಿದ್ದಿರುವ ಈ ಮೂಟೆ ಏನು! ಹೀಗೆ ಯಾರಿಗೆ ಕೈಜೋಡಿಸಿಕೊಂಡು, ದಿಕ್ಕನ್ನು ಏಕೆ ನೋಡುತ್ತಿರು ವರು! ಅಚ್ಯುತರೂ, ಗೋವಿಂದರೂ ನನ್ನನ್ನು ಇಲ್ಲಿಗೆ ಏಕೆ ಕರೆತಂದರು!' ಎಂಬ ನಾನಾ ಯೋಚನೆಗಳೂ ಭಯಗಳೂ ಸಂಶಯಗಳೂ ಲಕ್ಷ್ಮೀದೇವಿಯ ಮನಸ್ಸಿನಲ್ಲಿ ಆ ಕ್ಷಣದಲ್ಲಿ ಮೂಡಿದವು. ಈ ವಿಚಿತ್ರ ಪರಿಸ್ಥಿತಿ ಲಕ್ಷ್ಮೀದೇವಿಯ ಹೃದಯದಲ್ಲಿ ಭಯವನ್ನೂ ದುಃಖವನ್ನೂ ಒಟ್ಟಿಗೆ ಒಡ್ಡಿತು. ಒಡನೆ ಆಕೆ ಕಣ್ಣೀರಿಟ್ಟಳು. ಒಂದು ಬಾರಿ ಗಟ್ಟಿಯಾಗಿ ಚೀರುವುದಕ್ಕೆ ಹೋದಳು. ಭಯ ಸಂಶಯಗಳು ಆಕೆಯ ಗಂಟಲನ್ನು ಒತ್ತಿಹಿಡಿದವು. ಹೊರಟ ಧ್ವನಿ ಬಹು ಸಂಕಟಕರವಾಗಿತ್ತು. ಈಗ ಏನು ಮಾಡುವುದೆಂದು ಆಕೆಗೆ ತೋರಲಿಲ್ಲ. ಬಿಲ್ಲಿ ನಿಂದ ಎಸೆಯಲ್ಪಟ್ಟ ಬಾಣದಂತೆ ನಲವತ್ತು ಮಾರು ದೂರವನ್ನು ಒಂದೆ ಉಸಿರಿ ನಲ್ಲಿ ಅತಿಕ್ರಮಿಸಿ, ಪ್ರಭುಗಳಿಗೆ ಹತ್ತೇ ಮಾರು ದೂರದಲ್ಲಿ ಬಂದು ನಿಂತಳು ಲಕ್ಷ್ಮಿ. ಲಕ್ಷ್ಮೀದೇವಿ ಹಾಗೆ ಮಾಡುವರೆಂದು ಅಚ್ಯುತರು ಭಾವಿಸಿರಲಿಲ್ಲ. ಆಕೆಯನ್ನು ತಡೆಯಲು ಕೈನೀಡುವಷ್ಟರೊಳಗೆ ಲಕ್ಷ್ಮೀದೇವಿ ಪ್ರಭುಗಳ ಬಳಿಗೆ

ಹೊರಟುಹೋಗಿದ್ದಳು. ಮಿಂಚುಬಳ್ಳಿಯನ್ನು ಹಿಡಿದು ತಡೆಯುವಷ್ಟು ನಿಷ್ಫಲ ವಾಯಿತು ಅಚ್ಯುತರ ಪ್ರಯತ್ನ. ಆಗ ತಾವೂ ಹಿಂದೆ ಓಡಲು ಪ್ರಯತ್ನಿಸಿದರು; ಯಾವುದೊ ಅವ್ಯಕ್ತಶಕ್ತಿ ಆಗ ಅವರನ್ನು ಹಿಡಿದು ನಿಲ್ಲಿಸಿದಂತಾಯಿತು, ಬಲವಾಗಿ ಹಿಡಿದು ಎಳೆದಂತೆ ಆಯಿತು. ಗೋವಿಂದರನ್ನು ಹಿಡಿದುಕೊಂಡು ನಡುಗುತ್ತ ನಿಂತುಬಿಟ್ಟರು ಅಚ್ಯುತರು.

ಇಷ್ಟೆಲ್ಲ ತಮ್ಮ ಮುಂದೆಯೆ ನಡೆಯುತ್ತಿದ್ದರೂ, ಇನ್ನೇನು ಮುಳುಗಿದ ಸೂರ್ಯಬಿಂಬದಲ್ಲಿ ನೆಟ್ಟದೃಷ್ಟಿಯುಳ್ಳ ಪ್ರಭುಗಳು ಹಿಂದೆ ಇದ್ದಂತೆಯೆ ಅಚಲರಾಗಿದ್ದರು. ಚಿತ್ತವೃತ್ತಿಗಳು ದೃಷ್ಟಿಯಲ್ಲಿ ಕೇಂದ್ರೀಕರಿಸಿಹೋಗಿದ್ದುವು. ಲಕ್ಷ್ಮಿ ಅಶ್ರುಪೂರಿತ ನಯನಗಳಿಂದ ಪ್ರಭುಗಳನ್ನು ಆಪಾದಮಸ್ತಕ ಚೆನ್ನಾಗಿ ನೋಡಿದಳು. ಕೆಳಗೆ ಮೂಟೆಯಂತೆ ಬಿದ್ದಿದ್ದ ಕಳೇಬರ ಕಂಡಿತು. ಕಳೇಬರದ ತಲೆ ಮುಖಗಳನ್ನು ಆಕೆ ಕಂಡಳು. ಅಕ್ಕನ ತಲೆಕೂದಲು, ಅಕ್ಕನ ಕರ್ಣಾವಸಂತ! ಸಂಶಯವಿಲ್ಲ. ಇದು ಅಕ್ಕನವೇ ಸರಿ. ಎದುರಿಗೆ ಈ ವಿಕಾರರೂಪದಲ್ಲಿ ನಿಂತಿರುವವರು ತನ್ನ ಸ್ವಾಮಿ ಎಂದು ಲಕ್ಷ್ಮೀದೇವಿಗೆ ತಿಳಿದುಹೋಯಿತು. 'ಏನಾಯಿತು? ಏನಾಗಿರಬಹುದು? ಹೀಗೇಕೆ?' ಈ ವಿಷಯಗಳು ಆಕೆಯ ಮನಸ್ಸಿಗೆ ತಟ್ಟನೆ ಹೊಳೆದವು. ಅಷ್ಟೇ ಬೇಗನೆ ವಿಷಯಗಳೂ ಪರಿಷ್ಕಾರವಾದವು . . . 'ಅಯ್ಯೊ ಈ ಮಹಾಪುರುಷರೂ ಹೀಗೆ ಆದರಲ್ಲ! ಇವರ ಮನಸ್ಸಿನಲ್ಲಿ ಇಷ್ಟು ಅಗಾಧ ಪ್ರೇಮವನ್ನು ನೆಟ್ಟು ಬೆಳಸಿ ಹೊರಟುಹೋದಳೆ ನನ್ನಕ್ಕ . . . ನನ್ನಕ್ಕ! ಅಕ್ಕಾ....ನೀನೆಷ್ಟು ದೊಡ್ಡವಳೆ! ನಿನ್ನ ಪ್ರೇಮ ವಿಶ್ವಾಸಗಳು ಎಷ್ಟು ದೊಡ್ಡವೆ! . . . ಅಕ್ಕ . . . ಎಷ್ಟು ಮಹಾನುಭಾವೆ ನೀನು! ಪ್ರಭುಗಳ ಈ ದುಃಖವನ್ನು, ಈ ಸ್ಥಿತಿಯನ್ನು ನಾನು ನೋಡಲಾರೆ . . . ನೋಡಲಾರೆ . . . ನಾನೀಗ ಏನು ಮಾಡಲಿ! ಹೇಳು ಅಕ್ಕಾ . . . ನೀನೀಗಲೆ ಬಂದು ಇವರನ್ನು ಉಳಿಸಕ್ಕ . . . ನಿನ್ನನ್ನು ಬೇಡುತ್ತಿದ್ದೇನೆ . . . ಬಾ ನನ್ನ ಅಕ್ಕ, ಬೇಗ ಬಾ. ನನ್ನ ಮೇಲಿನ ಆಣೆ . . . ಕೇಶವನ ಮೇಲಾಣೆ . . . ನೀನು ಬಾರದಿದ್ದರೆ ನಾನು ಈಗಲೆ ಸಾಯುತ್ತೇನೆ . . .'

ಆ ಕ್ಷಣದಲ್ಲಿ ಲಕ್ಷ್ಮಿಯನ್ನು ಯಾರೊ ತಬ್ಬಿ ಹಿಡಿದಂತಾಯ್ತು. ಸುಖವೂ ಅಲ್ಲದ ವಿಕಾರವೂ ಅಲ್ಲದ ಅವರ್ಣನೀಯವಾದ ಪ್ರತ್ಯಕ್ಷ ಸ್ಪರ್ಶಾನುಭವ ಲಕ್ಷ್ಮೀದೇವಿಗೆ ಆಗ ಉಂಟಾಯಿತು. ಆಪಾದಮಸ್ತಕ ಶರೀರವೆಲ್ಲ ಥರಥರ ನಡುಗಿತು.

ಒಂದು ನಿಮಿಷ ಸ್ಮೃತಿ ತಪ್ಪಿದಂತಾಯ್ತು. ಮೈ ತುಂಬಿ ಬಂದಂತಾಯ್ತು. ಅಕ್ಕ ಬಂದು ತಂಗಿಯನ್ನು ಅಪ್ಪಿಕೊಂಡಿದ್ದಳು!

ಲಕ್ಷ್ಮೀದೇವಿಯರು 'ಅಕ್ಕಾ . . . ಅಕ್ಕಾ' ಎಂದು ಕೂಗಿ ಕರೆದುದನ್ನು ರಾವು ಬಡಿದಂತೆ ದೂರದಲ್ಲಿ ನಿಂತಿದ್ದ ಅಚ್ಯುತರೂ ಗೋವಿಂದರೂ ಕೇಳಿದರು. ಆಕೆಯ ಶರೀರಾದ್ಯಂತ ಥರಥರನೆ ನಡುಗುತ್ತಿದ್ದುದನ್ನೂ ಕಂಡರು; ಆದರೂ ಆಕೆಯ ಸಹಾಯಕ್ಕೆ ಒಂದು ಹೆಜ್ಜೆ ಮುಂದಿಡುವುದಕ್ಕೂ ಅವರಿಗೆ ಆಗದಾಯಿತು. ಕಾಲ್ಗಳು ಕಟ್ಟಿಹೋಗಿದ್ದುವು. ದೇಹವೆಲ್ಲ ಸ್ಥಂಭೀಭೂತವಾಗಿಹೋಗಿತ್ತು.

ಲಕ್ಷ್ಮೀದೇವಿಗೆ ಆಗುತ್ತಿದ್ದ ಆ ಶರೀರಕಂಪನ ಒಂದೆರಡು ನಿಮಿಷಗಳ ನಂತರ ತಟ್ಟನೆ ನಿಂತಿತು. ಆಗ ಆಕೆ ಚಿಟ್ಟನೆ ಚೀರುತ್ತ ಓಡಿಹೋಗಿ, ನಿಂತಿದ್ದ ಪ್ರಭುಗಳನ್ನು ತನ್ನೆರಡು ತೋಳ್ಗಳಿಂದ ಬಲವಾಗಿ ಸುತ್ತಿಕಟ್ಟಿ ಅಪ್ಪಿಕೊಂಡು, ದೊಡ್ಡ ಧ್ವನಿಯಿಂದ 'ದೇವ, ಇಗೊ ನಾನು ಬಂದೆ . . . ಬಂದಿದ್ದೇನೆ . . . ನಿಮ್ಮ ಶಾಂತಲೆ . . . ನಾನು . . . ಬಂದಿದ್ದೇನೆ . . . ಇಲ್ಲಿ ನೋಡಿ' ಎನ್ನುತ್ತ ತನ್ನ ಸ್ವಾಮಿಯ ಮುಖವನ್ನು ನೋಡುತ್ತ ನಿಂತಳು.

§

ಸೂರ್ಯಮಂಡಲದ ಅಂಚು ಕಾಣಿಸದೆ ಹೋಗುವುದನ್ನೇ ಕಾದು ನೋಡುತ್ತಿದ್ದ ಪ್ರಭುಗಳಿಗೆ ಬಾಹ್ಯಸ್ಮರಣೆ ಇರಲಿಲ್ಲವಾದರೂ ಹೀಗೆ ಅಕಸ್ಮಾತ್ ಬಲವಾಗಿ ತಬ್ಬಿ ಹಿಡಿಯಲ್ಪಟ್ಟ ಸುಖಸ್ಪರ್ಶಾನುಭವ ಅವರ ಬಾಹ್ಯೇಂದ್ರಿಯಗಳನ್ನು ಮುಟ್ಟಿತು. ಎಚ್ಚರಿಸಿತು. ತಲೆಯ ಮೇಲೆ ಜೋಡಿಸಿ ಇಟ್ಟುಕೊಂಡಿದ್ದ ಕೈಗಳನ್ನು ತಟ್ಟನೆ ಕೆಳಕ್ಕೆ ಬಿಟ್ಟು ಪ್ರಭುಗಳು ತಮ್ಮನ್ನು ಹೀಗೆ ತಬ್ಬಿ ನಿಂತವರು ಯಾರೆಂದು ನೋಡಿದರು. ಮುಖವನ್ನು ನೋಡಿದರು. ತಮ್ಮ ಒಡಲನ್ನು ಅಷ್ಟು ಪ್ರೇಮದಿಂದ ಕಟ್ಟಿಕೊಂಡು ನಿಂತಿರುವವಳು—ಶಾಂತಲೆ! ನಿಜವಾಗಿಯೂ ತಮ್ಮ ಶಾಂತಲೆ! ಅನುಮಾನವೆ ಇಲ್ಲ. 'ಶಾಂತಲೆ . . . ಶಾಂತಲೆ' ಎಂದು ಉನ್ಮತ್ತನಾದದಿಂದ, ಉನ್ಮತ್ತಾನಂದದಿಂದ ಶಾಂತಲೆಯನ್ನು ತಮ್ಮ ಎದೆ ಬಿರಿದು ಹೃದಯ ಹೊರಚೆಲ್ಲಿ ಹೋಗದಂತೆ ಎರಡು ಕೈಗಳಿಂದಲೂ ಹೃದಯೇಶ್ವರಿಯನ್ನು ತಮ್ಮೆದೆಗೆ ಒತ್ತಿ ಹಿಡಿದುಕೊಂಡರು. ಕಣ್ಣೀರು ಧಾರೆಧಾರೆಯಾಗಿ ಪ್ರಭುಗಳು ಆಕೆಯ ಮುಖವನ್ನು ಸವರುತ್ತ ತಲೆಯನ್ನು ಸವರುತ್ತ 'ಬಂದೆಯಲ್ಲವೆ! . . . . ನೀನು

ಬಂದೆಯಲ್ಲವೆ! . . . ಕಡೆಗೂ ಬಂದೆಯಲ್ಲವೆ! ಎಷ್ಟು ಹೊತ್ತು!—ಎಷ್ಟು ಹೊತ್ತು ಮಾಡಿದೆ ಶಾಂತಲೆ! . . . ನನ್ನನ್ನು ಎಷ್ಟು ಸಂಕಟಪಡಿಸಿದೆ? ದೇವಿ, ಇದು ಮೋಸವಲ್ಲವಲ್ಲ! . . . ಭ್ರಮೆಯಲ್ಲವಲ್ಲ? ಹೀಗೇಕೆ ಮಾಡಿದೆ? . . . ಇನ್ನು ಮೋಸಮಾಡುವುದಿಲ್ಲವಷ್ಟೆ . . . ನನ್ನ ಶಾಂತಲೆ . . . ನನ್ನ ಶಾಂತಲೆ! ಹೇ ಭಗವನ್ ನಾರಾಯಣ, ನೀನು ಕರುಣಾಳು . . . ನೀನು ಕೃಪೆಗೆಯ್ದೆ . . . ನನಗೆ ಉತ್ತರ ಬಂದಿತು, ಉತ್ತರ ಬಂದಿತು . . . ನಿಜ . . . ವಿಷದಲ್ಲಿಯೂ ಅಮೃತವಿದೆ . . . ಶಾಂತಲೆ . . . ಹೇಳು . . . ಹೇಳು ನನ್ನ ದೇವಿ, ನೀನು ಬದುಕಿ ಬಂದೆಯ! ನನಗಾಗಿ ಬಂದೆಯ? ಇನ್ನು ಹೋಗುವುದಿಲ್ಲವಷ್ಟೆ? . . . ನನ್ನನ್ನು ಬಿಟ್ಟು ಹೋಗುವುದಿಲ್ಲವಷ್ಟೆ? . . . ಹೋಗಬೇಡ ಶಾಂತಲೆ, ನನ್ನನ್ನು ಬಿಟ್ಟು ಹೋಗುವುದಿಲ್ಲವಷ್ಟೆ? ಹೋಗಬೇಡ ಶಾಂತಲೆ, ನನ್ನನ್ನು ಬಿಟ್ಟು ಹೋಗಬೇಡ . . . ನಾನಿರಲಾರೆ . . . ಇರುವುದಿಲ್ಲ.'

'ನಾನೆಲ್ಲಿಯೂ ಹೋಗುವುದಿಲ್ಲ . . . ಇನ್ನು ಖಂಡಿತ ಹೋಗುವುದಿಲ್ಲ. ಪ್ರಭೂ, ನಿಮಗಾಗಿಯೆ ಬಂದೆ, ನಿಮಗಾಗಿಯೆ ಇರುತ್ತೇನೆ. ನಿಮ್ಮೊಡನೆಯೆ ಇರುತ್ತೇನೆ. ನಂಬಿರಿ.'

'ನೀನು ಇಷ್ಟು ಕಾಲ ಎಲ್ಲಿದ್ದೆ? . . . ಹೇಗಿದ್ದೆ? ನನ್ನನ್ನು ಏಕೆ ಹೀಗೆ ಬಿಟ್ಟುಹೋದೆ? ಪುನಃ ಬಿಟ್ಟುಹೋಗುತ್ತೀಯೆ. ಅಯ್ಯೋ! . . . . ಹೇಗೆ ನಂಬಲಿ? ಹೇಗೆ ನಂಬದೆ ಇರಲಿ?'

'ನಂಬಬೇಕು ದೇವ. ಖಂಡಿತವಾಗಿಯೂ ನಂಬಬೇಕು. ಇನ್ನು ನಾವಿಬ್ಬರೂ ಒಬ್ಬರನ್ನೊಬ್ಬರು ಬಿಟ್ಟಿರುವುದಿಲ್ಲ. ಇದು ಪ್ರಮಾಣ . . . ಪ್ರಮಾಣ.'

'ಹೀಗೆ ಆಗುವುದೆ? ಆಗಿದೆಯೆ? ಸತ್ತವರು ಹಿಂದಿರುಗಿ ಬಂದಿರುವರೆ? ದುಃಖಿತರ ಕಣ್ಣೀರ ಒರಸಿರುವರೆ . . . ಬೆಂದ ಹೃದಯಗಳನ್ನು ತಣಿಸಿರುವರೆ? ನೀನು ಶಾಂತಲೆಯ ವೇಷವನ್ನು ಧರಿಸಿರುವವಳಲ್ಲ ತಾನೆ? ವಂಚನೆಯಲ್ಲವಷ್ಟೆ?'

ಪ್ರಭುಗಳು ಶಾಂತಲೆಯ ಮುಖ, ತಲೆ, ಮೈ, ಕೈ ಎಲ್ಲವನ್ನೂ ಮುಟ್ಟಿ ಮುಟ್ಟಿ ನೋಡಿದರು. ಪುನಃ ಪುನಃ ಮುಖವನ್ನು ನೋಡಿದರು. 'ನಾರಾಯಣ! ನಾರಾಯಣ! . . . ನನ್ನ ಶಾಂತಲೆ! . . . ಇದು ನನ್ನ ಶಾಂತಲೆ! ನೀನೆನಗೆ ಕೊಟ್ಟೆ ಶಾಂತಲೆ. ನಾನು ಏಕೆ ಅಪನಂಬಿಕೆ ಪಡುತ್ತಿದ್ದೇನೆ! . . . ಸರ್ವಾಪರಾಧ . . . ನನ್ನದು ಸರ್ವಾಪರಾಧ' ಎನ್ನುತ್ತ ಉಕ್ಕುತ್ತಿರುವ ದುಃಖದಿಂದ

ಪ್ರೀತಿಯಿಂದ ದೇವಿಯನ್ನು ಮತ್ತೊಮ್ಮೆ ಹೃದಯತಣಿಯೆ ಅಪ್ಪಿಕೊಂಡರು. ಆಕೆಗೆ ಕಣ್ಣೀರು ಅಭಿಷೇಕ ಮಾಡಿದರು.

ಶಾಂತಲೆ ತನ್ನ ಅಮೃತಹಸ್ತಗಳಿಂದ ಪತಿಯ ಎದೆ, ಮುಖ, ಭುಜ ಇವುಗಳನ್ನು ಮೃದುವಾಗಿ ತಡವಿದಳು. ಪ್ರಭುಗಳು ಆಗ ತಿಳಿದರು, ಇದು ತನ್ನ ಶಾಂತಲೆಯ ಸ್ಪರ್ಶವೆಂದೇ, ಆಕೆ ತನ್ನ ಹೃದಯೇಶ್ವರಿಯೆಂದೇ. ಕಂದಿ ಕುಂದಿದ್ದ ಪ್ರಭುಗಳ ಮುಖದಲ್ಲಿ ಕಳೆ ಮೂಡಿತು. ಕಣ್ಣುಗಳಲ್ಲಿ ಹೊಳಪು ಕೂಡಿತು. ಮೈ ಲಘುವಾಯಿತು. ನೋವು ಮಾಯಿತು. ದಣಿವು ಮಾಯವಾಯಿತು. ದುಃಖ ಹಾರಿಹೋಯಿತು. ಪ್ರಭುಗಳು ಶಾಂತಲೆಯ ಅಮೃತಹಸ್ತವನ್ನು ಹಿಡಿದು ತಮ್ಮ ಬಾಯಿಗೊತ್ತಿಕೊಂಡು ತಣಿದರು. ತಮ್ಮ ಕಣ್ಣುಗಳಿಗೆ ಒತ್ತಿಕೊಂಡು ತಣಿದರು. ತಮ್ಮ ನೆತ್ತಿಗೆ ಒತ್ತಿ ಒತ್ತಿ ತಣಿದರು. ಬಹಳ ದೈನ್ಯದಿಂದ ಎಂದರು: 'ದೇವಿ, ನಾನು ನಿನಗೆ ಶತಾಪರಾಧ ಮಾಡಿದೆ. ನನ್ನ ಮೂರ್ಖತೆ ಈಗ ನನಗೆ ತಿಳಿದುಬಂದಿತು. ಕುವರನು ನಮಗೆ ತಿಳಿಸದೆಯೆ ಗರುಡನಾದದ್ದು ಇಷ್ಟಕ್ಕೆಲ್ಲ ಕಾರಣವಾಯಿತು. ನಿನ್ನ ಶರೀರವನ್ನು ಹೊತ್ತುಕೊಂಡು ಅನ್ನ ನಿದ್ದೆಗಳನ್ನು ಬಿಟ್ಟು, ಕಡೆಗೆ ನೀರನ್ನು ಸಹ ಬಿಟ್ಟು, ಸುಡುವ ಬಿಸಿಲಿನಲ್ಲಿ ಕಾಯ್ದ ಈ ಬಂಡೆಗಳ ಮೇಲೆ ನಿನಗಾಗಿ ಈ ಗಂಟಲು ಆರಿಹೋಗುವವರೆಗೂ ಕಾಲುಗಳು ಕುಸಿದು ಬಿದ್ದುಹೋಗುವವರೆಗೂ ಅಲೆದು ಕೊನೆಗೂ ನಾನು ಸತ್ತೆನಾದರೆ ನಿನ್ನನ್ನು ಸೇರುವೆನೆಂಬ ಆಶೆಯ ಮೇಲೆ ಸೂರ್ಯಾಸ್ತಮಯದೊಡನೆ ನಿನ್ನ ತಮ್ಮನನ್ನು ಅನುಕರಿಸಲು ನಿರ್ಧರಿಸಿದೆ. ಇನ್ನೆರಡು ನಿಮಿಷದಲ್ಲಿ ನಾನೆ ನಿನ್ನ ಬಳಿಗೆ ಬರುತ್ತಿದ್ದೆ. ಅಷ್ಟರಲ್ಲಿ ನೀನೇ ಬಂದೆ. ನನ್ನ ಭಗವಂತ ಬಂದನು. ನನ್ನ ಹೃದಯದ ದೊರೆ ಬಂದನು. ನನ್ನ ದೇವಿಗೆ ನನ್ನ ಸಂಕಟ ತಿಳಿಯಿತು. ಈ ಪುಣ್ಯ ಯಾರಿಗುಂಟು! ಈ ಭಾಗ್ಯ ಯಾರಿಗುಂಟು!'

'ಪ್ರಭು, ನಾನು ದೇಹಮುಕ್ತಳಾಗಿದ್ದೆ. ನೀವು ನನ್ನ ಕಳೇಬರವನ್ನು ಹೊತ್ತು ಇಲ್ಲಿಗೆ ತಂದಾಗ, ಅಲೆದಲೆದು ನನ್ನನ್ನು ಕೂಗಿ ಕೂಗಿ ಕರೆದಾಗ, ನನಗಾಗಿ ಕಣ್ಣೀರು ತಂದಾಗ ನಾನು ನಿಮ್ಮೊಡನೆಯೆ ಇದ್ದೆ. ವೇಲಾಪುರಿಯಲ್ಲಿಯೂ ನಿಮ್ಮೊಡನೆಯೆ ಇದ್ದೆ. ನೀವು ರಥದಲ್ಲಿ ಕುಳಿತು ಇಲ್ಲಿಗೆ ಬಂದಾಗಲೂ ನಿಮ್ಮೊಡನೆಯೆ ಬಂದೆ. ನಿಮ್ಮ ದುಃಖಕ್ಕಿಂತ ನೂರುಮಡಿ ನೋವನ್ನೂ ದುಃಖವನ್ನೂ ನಾನು ಅನುಭವಿಸಿದ್ದೇನೆ. ಪ್ರಭು, ನಾನು ಸತ್ತದ್ದು ನಿಜ. ಆದರೆ ನಿಮ್ಮನ್ನು

ಬಿಟ್ಟಿರಲಾರದೆಹೋದೆ. ಪುಡಿಪುಡಿಯಾದ ಆ ಕಳೇಬರದಲ್ಲಿ ನನ್ನ ಜೀವ ಸೇರಿ ಕೊಳ್ಳಲಾಗಲಿಲ್ಲ. ನಿಮಗೆ ಕಾಣಿಸಿಕೊಳ್ಳಲು ಶರೀರವಿಲ್ಲದೆ, ಮಾತನಾಡಲು ನಾಲಗೆಯಿಲ್ಲದೆ, ನಿಮಗಿಂತ ಹೆಚ್ಚು ಸಂಕಟವನ್ನು ಅನುಭವಿಸಿದ್ದೇನೆ. ವಿಜಯ ನಾರಾಯಣನು ನನ್ನ ತಂಗಿಯನ್ನು ಈಗ ಇಲ್ಲಿಗೆ ಕರೆತರದಿದ್ದರೆ ನಾವಿಬ್ಬರೂ ಇಷ್ಟು ಹೊತ್ತಿಗೆ ಈ ಭೂಮಿಯ ಮೇಲೆ ನಿಂತಿರುತ್ತಿರಲಿಲ್ಲ . . . . . ಆಮೇಲೆ ಲಕ್ಷ್ಮಿಯೂ ಇರುತ್ತಿರಲಿಲ್ಲ.'

'ಯಾರು? ಲಕ್ಷ್ಮಿಯೆ? ಲಕ್ಷ್ಮಿ ಇಲ್ಲಿಗೆ ಬಂದಳೆ! . . . ಹೇಗೆ ಬಂದಳು? ಯಾರು ಕರೆದುತಂದರು? ಎಲ್ಲಿ? ನನ್ನ ಲಕ್ಷ್ಮಿ ಎಲ್ಲಿ?'

'ಲಕ್ಷ್ಮಿ ಇನ್ನು ನನ್ನೊಳಗೆ, . . . ನಾನು ಇನ್ನು ಲಕ್ಷ್ಮಿಯ ಒಳಗೆ. ನಮ್ಮ ಶರೀರಗಳೂ ಈಗ ಒಂದೇ ಆದವು, ಆಗಬೇಕಾದುದೆ. ಅಣ್ಣ ಅಚ್ಯುತರೂ ಗೋವಿಂದರೂ ನನ್ನನ್ನು ಕರೆದುತಂದರು. ವಿಜಯನಾರಾಯಣನೆ ನನ್ನನ್ನು ಇಲ್ಲಿಗೆ ಕಳಿಸಿಕೊಟ್ಟನು. ನಿನ್ನೆ ನನಗೆ ನೀವು ಔಷದ ಕೊಟ್ಟಮೇಲೆ ಇಂದು ಮಧ್ಯಾಹ್ನ ಮೂರು ಗಂಟೆಗೆ ನನಗೆ ಪೂರ್ಣ ಪ್ರಜ್ಞೆಯುಂಟಾಯಿತು. ನಿನ್ನೆ ನನಗೆ ಕನಸಾಯಿತು. ದ್ವಾರವತಿಯಿಂದ ಅಯ್ಯ ಅವ್ವೆ ಇಬ್ಬರೂ ಬಂದಿದ್ದರು, ನನ್ನೊಡನೆ ಮಾತನಾಡಿದರು. ಅರ್ಥವಾಗಲಿಲ್ಲವೆ ನಿಮಗೆ! ಇನ್ನು ಲಕ್ಷ್ಮಿಯೂ ನಾನೆ, ಶಾಂತಲೆಯೂ ನಾನೆ. ಅಣ್ಣ ಅಚ್ಯುತರೂ ಗೋವಿಂದರೂ ಅಗೋ ಅಲ್ಲಿ.'

ದೂರದಲ್ಲಿ ನಿಂತಿದ್ದ ಅಚ್ಯುತ ಗೋವಿಂದರ ಕಡೆ ಶಾಂತಲೆ ಕೈನೀಡಿ ತೋರಿದಳು. ಸ್ತಂಭಿಸಿಹೋಗಿದ್ದ ಅವರ ಕಾಲುಗಳು ಆಗ ಸಡಿಲವಾದವು. ಆ ಇಬ್ಬರು ಸಚಿವರೂ ತಮ್ಮ ಕಣ್ಣ ಮುಂದೆ ನಡೆಯುತ್ತಿದ್ದ ಈ ಅದ್ಭುತವನ್ನು ಆಶ್ಚರ್ಯ ಆನಂದಗಳಿಂದ ನೋಡುತ್ತಿದ್ದರು. ಅವರು ಈಗ ಮೆಲ್ಲಮೆಲ್ಲನೆ ಪ್ರಭು ಗಳು ಇದ್ದಲ್ಲಿಗೆ ನಡೆದುಬಂದು ಸ್ವಲ್ಪ ದೂರದಲ್ಲಿ ನಿಂತು ಭಕ್ತಿ ಮರ್ಯಾದೆಗಳಿಂದ ನಮಸ್ಕರಿಸಿದರು. ತಗ್ಗಿದ ಧ್ವನಿಯಲ್ಲಿ ಪ್ರಭುಗಳು 'ನಿಮ್ಮೆಲ್ಲರನ್ನೂ ನಾರಾ ಯಣನೆ ಕರೆತಂದನು, ನನ್ನ ಉದ್ಧಾರಕ್ಕಾಗಿಯೆ ನೀವು ಬಂದುದು' ಎಂದರು. ಗೋವಿಂದರು 'ಪ್ರಭುವೆ, ನಿಜವಾಗಿಯೂ ನಾರಾಯಣನೇ ನಮ್ಮನ್ನು ಇಲ್ಲಿಗೆ ಕರೆತಂದನು, ಇದರಲ್ಲಿ ಸಂದೇಹವೇ ಇಲ್ಲ. ನಾವಿಬ್ಬರೂ ಇಲ್ಲಿಗೆ ಬರಬೇಕೆಂದು ಉದ್ದೇಶಪಟ್ಟು, "ಲಕ್ಷ್ಮೀದೇವಿಯರನ್ನು ಕರೆದುಕೊಂಡು ಹೋಗುವುದೆ?

ಅಲ್ಲಿಯೆ ಬಿಟ್ಟು ಬರುವುದೆ?" ಎಂದು ಸಂಕಟದಲ್ಲಿದ್ದಾಗ "ಕರೆದುಕೊಂಡು ಹೋಗಿರಿ" ಎಂದೇ ಭಗವಂತನ ಅಪ್ಪಣೆಯಾಯಿತು' ಎಂದರು.

ಅಚ್ಯುತರೂ ಗೋವಿಂದರೂ ಲಕ್ಷ್ಮೀದೇವಿಯನ್ನು ಆಪಾದಮಸ್ತಕ ನೋಡಿದರು. ಸಂಜೆಯ ಮುಸಕಿನಲ್ಲಿ ಆಕೆಯ ಮುಖಭಾವಗಳನ್ನು ಲಕ್ಷಿಸುವುದಕ್ಕೆ ಆಗಲಿಲ್ಲ, ಆದರೆ ಮೈ ಕೈಗಳ ಚಲನ ವಲನ ಹಾವ ಭಾವಗಳು ಎಲ್ಲವೂ ಶಾಂತಲಾದೇವಿಯವಾಗಿದ್ದವು.

ಪ್ರಭುಗಳು ಶಾಂತಲೆಯ ಕೈಹಿಡಿದುಕೊಂಡು 'ಹೇಳು ದೇವಿ, ಮೊದಲು ಹೇಳು: ಕುವರನೆಲ್ಲಿ? ನಿನ್ನೊಡನೇಕಿಲ್ಲ? ಏನಾದನು? ನಿನ್ನ ಶರೀರ ಬೇರೆಯಾದ ಮೇಲೆ ಏನಾಯಿತು? ನೀನು ಹೇಗೆ ಇದ್ದೆ? ಎಲ್ಲಿ ಇದ್ದೆ? ಇದು ನಿನಗೆ ಹೇಗೆ ಸಾಧ್ಯವಾಯಿತು?' ಎಂದು ಕೇಳಿದರು.

'ಪ್ರಭು, ಆ ವಿಷಯಗಳು ಬಹಳವಿರುವುವು. ನನ್ನ ಅನುಭವ ಹೇಳುತ್ತೇನೆ. ನಿಮ್ಮೊಡನೆ ಅಲ್ಲದೆ ಇನ್ನು ಯಾರಿಗೆ ಹೇಳಲಿ? ಅದು ನಮ್ಮಿಬ್ಬರಿಗೇ ಸೇರಿದುದು. ಈಗ ನಿಮಗೆ ಬಹಳ ಆಯಾಸವಾಗಿದೆ, ನಿಮ್ಮ ಮೈಮೇಲೆ ಆಗಿರುವ ಗಾಯಗಳು ನನಗೆ ಬಹು ದುಃಖ ಕೊಡುತ್ತಿವೆ. ಕತ್ತಲಾಗುತ್ತ ಬಂದಿತು. ಬೆಟ್ಟವಿಳಿದು ಊರಿಗೆ ಹೋಗೋಣ. ನನ್ನ ಕೈಯಿಂದ ನಿಮಗೆ ಮಜ್ಜನ ಮಾಡಿಸುತ್ತೇನೆ. ಮೈಯಲ್ಲಿ ಆಗಿರುವ ಗಾಯಗಳಿಗೆ ಔಷಧಿ ಹಚ್ಚುತ್ತೇನೆ. ನೀವು ಆಹಾರ ತೆಗೆದುಕೊಂಡರೆ ನಾನೂ ತೆಗೆದುಕೊಳ್ಳುತ್ತೇನೆ' ಎನ್ನುತ್ತ, ಅಚ್ಯುತ, ಗೋವಿಂದ ಅಮಾತ್ಯರ ಕಡೆ ತಿರುಗಿ 'ಅಣ್ಣದಿರು ನೀವು ನನಗಾಗಿ ಸ್ವಲ್ಪ ಶ್ರಮ ವಹಿಸಿದಿರೆ! ನಿಮ್ಮ ಮನಸ್ಸಿಗಾದ ಸಂಕಟವೆಷ್ಟು! ದೇಹಕ್ಕಾದ ಶ್ರಮವೆಷ್ಟು! ದಾರಿಯಲ್ಲೂ ನಾನು ನಿಮಗೆ ಶ್ರಮ ಕೊಟ್ಟೆನಲ್ಲವೆ? ನಿಮಗೆ ಎಷ್ಟು ಭಯವಾಗಿರಬೇಕು? ನಿಮ್ಮಿಬ್ಬರ ಧೈರ್ಯ, ವಿಶ್ವಾಸ, ದೈವಭಕ್ತಿ, ಇವೇ ನಮ್ಮೆಲ್ಲರನ್ನೂ ಇಂದು ಉಳಿಸಿತು. ರಾಜ್ಯವನ್ನೂ ಉಳಿಸಿತು. ದೈವವು ತಾನು ಮಾಡಬೇಕಾದ ಕೆಲಸಗಳನ್ನು ಜ್ಞಾನಿಗಳಿಂದ, ಧರ್ಮಿಗಳಿಂದ, ಭಕ್ತರಿಂದ ಮಾಡಿಸುತ್ತದೆ. ಇವರು ಮಾತ್ರವೆ ದೈವವನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲವರು. ಮಿಕ್ಕವರಿಗೆ ಅದು ದೂರವೂ ದೂರ, ಕಾಣವುದೂ ಇಲ್ಲ. ಅಣ್ಣದಿರು ನನಗಾಗಿ ಇನ್ನೂ ಶ್ರಮ ವಹಿಸಬೇಕಾಗಿದೆ. ಮೇಲೆ ಶಿಖರದಲ್ಲಿ ಎರಡು ಕಂಬಗಳ ನಡುವೆ ತೀರ್ಥದ ಹೊಂಡವಿದೆ. ಆ ಹೊಂಡದಲ್ಲಿ ನನ್ನ ತಮ್ಮ ನನಗಾಗಿ ತಂದಿಟ್ಟ ತಾಮ್ರಕಲಶದಲ್ಲಿ

ಸಿಹಿನೀರಿದೆ. ಕಲಶಕ್ಕೆ ಮುಚ್ಚಳವಿದೆ. ನೀರು ಚೆಲ್ಲದಂತೆ ಅದನ್ನು ಸುರಕ್ಷಿತವಾಗಿ ತರಿಸಿಕೊಡಿರಿ. ನನ್ನ ತಮ್ಮನ ಶ್ರಮ ಸಾರ್ಥಕವಾಗಲಿ' ಎಂದಳು. ಅಚ್ಯುತರು ಅವಾಕ್ಕಾದರು. ಕೈಕಾಲುಗಳಲ್ಲಿ ನಡುಕ ಹುಟ್ಟಿತು. ಹೆಗ್ಗಡೆಗಳೂ ಪೌರರೂ ನಿಂತಿದ್ದೆಡೆಗೆ ಬೇಗನೆ ಹೋಗಿ, ಹೆಗ್ಗಡೆಗಳಿಗೆ ಆ ಕಾರ್ಯವನ್ನು ವಹಿಸಿದರು. ಹೆಗ್ಗಡೆಗಳು ಆಶ್ಚರ್ಯಪಡುತ್ತ ಆಳೊಬ್ಬನನ್ನು ಜೊತೆಗೆ ಕರೆದುಕೊಂಡು, ಮುಸುಕು ಕತ್ತಲೆಯಲ್ಲಿ ತೀರ್ಥದ ಹೊಂಡಕ್ಕೆ ಹತ್ತಿ ಹೋದರು. ಹೋಗಿ ನೋಡುವಾಗ ಹೊಂಡದಲ್ಲಿ ಮುಚ್ಚಳ ಸಹಿತ ಒಂದು ತಾಮ್ರದ ತಂಬಿಗೆ ಇದ್ದಿತು. ಅದರಲ್ಲಿ ಜಲವಿತ್ತು. ಮಧ್ಯಾಹ್ನದ ಬಿಸಿಲಿನಲ್ಲಿ ಕಾದು ಕಾದು ಪಾತ್ರೆ ಬೆಚ್ಚಗೆ ಆಗಿದ್ದಿತು. ಹೆಗ್ಗಡೆಗಳೇ ಅದನ್ನು ತೆಗೆದುಕೊಂಡು ಮೆಲ್ಲನೆ ಜಾಗರೂಕತೆಯಿಂದ ಇಳಿದು ಬಂದರು. ಅವರ ಮನಸ್ಸು ಬಹು ಗೊಂದಲದಲ್ಲಿ ಸಿಕ್ಕಿಹೋಗಿತ್ತು. 'ಇಲ್ಲಿ ತೀರ್ಥ ವಿರುವುದನ್ನು ಅಚ್ಯುತರು ಅರಿಯರಲ್ಲ! ಅವರಿಗೆ ಇದು ತಿಳಿದ ಬಗೆ ಹೇಗೆ? ಬಹುಶಃ ಪ್ರಭುಗಳೆ ಈ ದಿನ ತಮ್ಮ ಅಲೆದಾಟದಲ್ಲಿ ಒಂದು ವೇಳೆ ಕಂಡಿದ್ದರೂ ಇರಬಹುದು' ಎಂದು ತಮಗೆ ತಾವೆ ಸಮಾಧಾನ ಹೇಳಿಕೊಂಡು, ಅಚ್ಯುತರು ಇದ್ದಲ್ಲಿಗೆ ಬಂದು ಕಲಶವನ್ನು ಅವರ ಕೈಗೆ ಕೊಟ್ಟರು. ಅಚ್ಯುತರನ್ನು ನೂರು ಪ್ರಶ್ನೆ ಕೇಳುವ ಆತುರವಿದ್ದರೂ ಇದು ಸಮಯವಲ್ಲವೆಂದು ಸುಮ್ಮನಾದರು.

ಅಷ್ಟರಲ್ಲಿ ಅಚ್ಯುತರು ಶಿವಗಂಗೆಗೆ ಜನರನ್ನು ಕಳಿಸಿ ಒಂದು ದೊಡ್ಡ ತೊಟ್ಟಿಲನ್ನೂ ದೃಢಾಂಗರಾದ ಬೋಯಿಗಳನ್ನೂ ಇಪ್ಪತ್ತು ಮೂವತ್ತು ದೀವ ಟಿಗೆಯವರನ್ನೂ ಹೊತ್ತಿಸಿದ ಪಂಜುಗಳನ್ನೂ ಕೊಂಡು ಬೇಗ ಬರುವಂತೆ ಹೇಳಿ ದ್ದರು. ಹೆಗ್ಗಡೆಗಳ ಕೈಯಿಂದ ಜಲಪಾತ್ರೆಯನ್ನು ತೆಗೆದುಕೊಳ್ಳುತ್ತ ಅಚ್ಯುತರು ಅವರನ್ನು ಕುರಿತು 'ಹೆಗ್ಗಡೆಗಳೆ, ಇಷ್ಟು ಮಾತ್ರ ಹೇಳುತ್ತೇನೆ: ಭಗವಂತನನ್ನು ಇಂದು ಅನೇಕ ರೂಪಗಳಲ್ಲಿ ಕಂಡೆವು . . . ಕಾಣುತ್ತಿದ್ದೇವೆ. ಆತ ಇಂದು ನಮ್ಮೊಡನೆಯೆ ಇದ್ದ, ಲಕ್ಷ್ಮೀದೇವಿಯರೊಡನೆ ಬಂದ. ಲಕ್ಷ್ಮೀದೇವಿಯರನ್ನು ನಾವು ಕರೆತರದೆ ಬಂದಿದ್ದರೆ ಎಲ್ಲವೂ ಮುಳುಗಿಹೋಗುತ್ತಿತ್ತು. ಪ್ರಭುಗಳೂ ಇಷ್ಟುಹೊತ್ತಿಗೆ ಇರುತ್ತಿರಲಿಲ್ಲ. ಎಲ್ಲವೂ ಲಕ್ಷ್ಮೀದೇವಿಯರ ಭಾಗ್ಯವೆಂದು ಹೇಳಬೇಕು' ಎಂದು ಹೇಳಿ ಬೇಗ ಬಂದು ನೀರಿನ ಕಲಶವನ್ನು ಲಕ್ಷ್ಮೀದೇವಿ ಯರ ಕೈಗೆ ಇತ್ತರು. ಆಕೆ ಅದನ್ನು ತೆಗೆದುಕೊಂಡು ಪ್ರಭುಗಳ ನೆತ್ತಿ ಮುಖ ಗಳನ್ನು ನೀರಿನಿಂದ ಒರಸಿದನಂತರ ನೀರನ್ನು ಗುಟುಕುಗುಟುಕಾಗಿ ಮೆಲ್ಲನೆ

ಕುಡಿಸಿ, ಅವರ ನಾಲಗೆ ಗಂಟಲು ಎಡೆ ಸ್ವಲ್ಪ ತಂಪಾದ ಮೇಲೆ ಮಿಕ್ಕಿದ್ದ ಸ್ವಲ್ಪ ನೀರನ್ನು ತಾನು ಕುಡಿದು, ತಮ್ಮನನ್ನು ನೆನೆದು, 'ಅಣುಗಾ, ನಿನ್ನ ಶ್ರಮವನ್ನು ನಾನು ವ್ಯರ್ಥಮಾಡಲಿಲ್ಲ' ಎನ್ನುತ್ತಿರುವಾಗ ಆಕೆಯ ಕಣ್ಣುಗಳಿಂದ ಕಂಬನಿಗಳು ತುಂಬಿಬಂದವು.

ಅನಂತರ ಆಕೆ ಅಚ್ಯುತರನ್ನು ನೋಡಿ 'ಈ ಪಾತ್ರೆ ಬೆಟ್ಟದ ವಿಘ್ನೇಶ್ವರನ ಗುಡಿಯ ಅರ್ಚಕರದು. ಇದನ್ನು ಅವರಿಗೆ ತಲಪಿಸಿಬಿಡಿ. ಇಷ್ಟು ನಿಧಾನವಾದುದಕ್ಕೆ ಕ್ಷಮೆ ಬೇಡಿ ಅವರ ಉಪಕಾರಕ್ಕೆ ಪುರಸ್ಕರಿಸಿರಿ. ಈ ನನ್ನ ಕಳೇಬರಕ್ಕೆ—ನೀವು ನನ್ನ ಅಣ್ಣಂದಿರು—ನೀವೆ ನಾಳೆ ಬೆಳಗ್ಗೆ ಅಗ್ನಿಸಂಸ್ಕಾರ ಮಾಡಿಬಿಡಿ. ನಾನು ಬದುಕಿದ್ದೇನೆ, ಇನ್ನು ಯಾವ ಕ್ರಿಯೆಗಳೂ ಕೂಡದು' ಎಂದಳು ಶಾಂತಲೆ.

ಅಚ್ಯುತರು 'ದೇವಿಯರ ಆಜ್ಞೆ. ಈ ಪಾತ್ರೆಯನ್ನು ನಾನೇ ನಾಳೆ ಅವರಿಗೆ ತಮ್ಮ ಧನ್ಯವಾದಗಳೊಂದಿಗೆ ತಲಪಿಸುತ್ತೇನೆ' ಎಂದು ಹೇಳಿ ಲಕ್ಷ್ಮೀದೇವಿಯರು ಕುಳಿತು ಬಂದಿದ್ದ ತೊಟ್ಟಿಲನ್ನು ಹೊರುವ ಬೋಯಿಗಳನ್ನೂ ದಾಸಿಯರನ್ನೂ ಕರೆತರಲು ಗೋವಿಂದರೊಡಗೂಡಿ ಹೋದರು. ಆಗ ಸುತ್ತಲೂ ಕತ್ತಲು ಹೆಚ್ಚಾಗಿದ್ದಿತು. ನಕ್ಷತ್ರಗಳ ಬೆಳಕೇ ಮಾರ್ಗದರ್ಶಕವಾಗಿತ್ತು.

ಪ್ರಭುಗಳೂ ಶಾಂತಲೆಯೂ ಹತ್ತಿರವಿದ್ದ ಬಂಡೆಯೊಂದರ ಮೇಲೆ ಕುಳಿತರು. ಊರಿನಿಂದ ಬೆಳಕೂ ಜನಗಳೂ ಬರುವವರೆಗೂ ಕಾಯಬೇಕಾಗಿದ್ದಿತು. ಪ್ರಭುಗಳು ಶಾಂತಲೆಯನ್ನು ನೋಡಿ 'ದೇವಿ, ಇಷ್ಟು ದುಃಖ ಅನುಭವಿಸಿದ ನನಗೆ ಈ ಸಂತೋಷ ತಡೆದುಕೊಳ್ಳಲಾರದಷ್ಟಾಗಿದೆ. ಎಷ್ಟು ನೋವನ್ನು, ಎಷ್ಟು ದುಃಖವನ್ನು ಅನುಭವಿಸಿದೆನೊ ಈಗ ಅದರ ಲಕ್ಷಪಾಲಿನಷ್ಟು ಸಂತೋಷ, ತೃಪ್ತಿ ಉಂಟಾಗಿವೆ. ವೀರನಾರಾಯಣನೆ ನಿನ್ನನ್ನು ಕರೆತಂದು ನನಗೆ ಕೊಟ್ಟ. ನಿನ್ನ ಚೆಲುವ ಕೇಶವನೆ ನಿನ್ನನ್ನು ತಂದುಕೊಟ್ಟ, ಅಲ್ಲವೆ!' ಎಂದರು.

'ನೂರು ಸಲ ಹಾಗೆ ಹೇಳಿ, ಪ್ರಭು. ನಿಮ್ಮ ಧರ್ಮವೆ, ನಿಮ್ಮ ಪುಣ್ಯವೆ, ನಿಮ್ಮ ಪ್ರೇಮವೆ ನನ್ನನ್ನು ಬರಮಾಡಿಕೊಂಡಿತು. ಪ್ರೇಮಶಕ್ತಿಗಿಂತ ದೊಡ್ಡ ಶಕ್ತಿ ಬೇರೊಂದಿಲ್ಲ.'

'ಅಮೃತವನ್ನುಂಡೆ ದೇವಿ. ನೋವು, ಬಾಯಾರಿಕೆ, ದಣಿವು, ಹಸಿವು, ಈಗ ಒಂದೂ ಇಲ್ಲ. ನೀನು ನನ್ನನ್ನು ಮುಟ್ಟಿದ ಕ್ಷಣವೆ ಅವೆಲ್ಲವೂ ಮಾಯವಾದುವು. ನಿನ್ನ ಅಮೃತಹೃದಯ ನನ್ನನ್ನು ಮುಟ್ಟಿದಾಗ, ಶಾಂತಲೆ, ನನ್ನ

ಮೈಯೊಳಗಿನ ಎಲ್ಲ ನೋವುಗಳೂ ಮಾಯವಾದವು. ನಿನ್ನನ್ನು ಈಗ ಒಂದು ಮಾತು ಕೇಳುತ್ತೇನೆ, ಬಲ್ಲೆಯಾದರೆ ಹೇಳು. ನಮ್ಮ ಮಕ್ಕಳೆಲ್ಲಿ! ಕುವರನೆಲ್ಲಿ? ಸೋವಲೆಯೆಲ್ಲಿ?'

'ಸೋವಲೆ ಮಹಾಸತಿಯಾದಳು. ಇಬ್ಬರ ಆತ್ಮಗಳೂ ಈಗ ಒಂದೇ ಆದುವು. ನಾನು ಬಂದ ಹಾಗೆ ಅವರು ಇನ್ನು ಬರಲಾರರು, ದೇವ. ಅದು ಸಾಧ್ಯವಿಲ್ಲ. ಆದರೆ ನನ್ನ ಮನಸ್ಸು ಹೇಳುತ್ತಿದೆ: ಅವರಿಗಾಗಿ ಪರಮಪದವೇ ಕಾದಿದ್ದರೂ, ಕುವರನಿಗೆ ಇನ್ನು ಜನ್ಮವಿದ್ದರೆ, ಪ್ರಭುಗಳಿಗೆ ಮಗನಾಗಿಯೆ ಬಂದಾನು. ಸೋವಲೆಯೂ ಮಗಳಾಗಿಯೊ ಸೊಸೆಯಾಗಿಯೊ ಬಂದಾಳು. ಈ ಆಶೆ ನಮ್ಮಿಬ್ಬರದೂ. ಇಷ್ಟನ್ನು ನಡಸಿಕೊಟ್ಟ ಚೆನ್ನಕೇಶವ ಇದನ್ನು ನಡಸಿ ಕೊಡದೆ ಇರಲಾರ.'

'ದೇವಿ, ನನ್ನ ಹೃದಯದಲ್ಲಿ ಆಶೆ ಹುಟ್ಟಿಸುತ್ತಿದ್ದೀಯೆ. ಮನಸ್ಸಿಗೆ ಹರ್ಷ ಉಂಟುಮಾಡುತ್ತಿದ್ದೀಯೆ. ಇದು ಯಾವ ಜನ್ಮಕ್ಕೆ? ಇನ್ನು ಯಾವ ಜನ್ಮಕ್ಕೆ?'

'ಈ ಜನ್ಮದಲ್ಲಿಯೆ ಏಕೆ ಆಗಬಾರದು, ಪ್ರಭು! ನೀವು ನನಗಾಗಿ ಕಾತರಿಸಿದಾಗ ನಾನು ಬರಲಿಲ್ಲವೆ! ಅದೃಷ್ಟವಾದ ದೈವನಿಯಮವನ್ನು ಅರಿತವರು ಯಾರು! ದುಃಖ ಸುಖವಾಗುತ್ತದೆ, ಸುಖ ದುಃಖವಾಗುತ್ತದೆ. ಇದು ಏಕೆಂದು ಭಗವಂತನೊಬ್ಬನು ಮಾತ್ರ ಬಲ್ಲ. ಈ ಘೋರವಾದ ದುಃಖ ಹೇಗೆ ಪರಿಣಮಿಸಿತು ಕಾಣಿರೆ?'

'ದೇವಿ, ನೀನು ಸ್ವರ್ಗವನ್ನೆ ಇಲ್ಲಿಗೆ ತಂದೆ. ಇಹಕ್ಕೂ ಪರಕ್ಕೂ ಒಂದು ಸಂಬಂಧವನ್ನು ಕಲ್ಪಿಸಿದೆ. ಈ ಮಹಾಸುಖಕ್ಕಾಗಿ ನಾನು ಪಟ್ಟ ಕಷ್ಟ ತೀರ ಅಲ್ಪವೆಂದು ಈಗ ನನಗೆ ಭಾವನೆಯಾಗುತ್ತದೆ. ನಿನ್ನನ್ನು ಕೇಳಬೇಕೆಂದಿರುವ ವಿಷಯಗಳು ಎಷ್ಟೋ ಇರುವುವು.'

ಲಕ್ಷ್ಮಿ ಮೃದುವಾಗಿ ನಕ್ಕಳು. ಆದರೆ ಅದು ಲಕ್ಷ್ಮಿ ನಗುವ ರೀತಿಯೆ ಅಲ್ಲ. ನಕ್ಕವಳು ಶಾಂತಲೆ. ಪ್ರಭುಗಳು ಅದನ್ನು ಚೆನ್ನಾಗಿ ಬಲ್ಲರು. ಲಕ್ಷ್ಮಿ ಮಾತನ್ನು ಮುಂದುವರಿಸಿ 'ಈಗ ಬೇಡ, ಕತ್ತಲೆ ಬಹಳ ಹೆಚ್ಚಿತು. ನೀವು ಕೇಳುವುದಕ್ಕೂ ಇನ್ನೂ ಬೇಕಾದಷ್ಟು ಸಮಯವಿದೆ. ನಾನು ಹೇಳುವುದಕ್ಕೂ ಬೇಕಾದಷ್ಟು ಸಮಯವಿದೆ. ಈಗ ಊರಿಗೆ ಹೋಗೋಣ.'

ಅಷ್ಟು ಹೊತ್ತಿಗೆ ಅಚ್ಯುತರೂ ಗೋವಿಂದರೂ ಪಂಜನ್ನು ಹೊತ್ತಿಸಿ ಹಿಡಿದುಕೊಂಡು ಪ್ರಭುಗಳ ಬಳಿಗೆ ಬಂದು ನಮಸ್ಕರಿಸಿ, 'ಪ್ರಭು, ಕತ್ತಲು ಬಹಳ

ವಾಯಿತು, ದೀವಟಿಗೆಯವರೂ ಬೋಯಿಗಳೂ, ಬಂದರು' ಎಂದು ಹೇಳಿದರು. ಪ್ರಭುಗಳೂ 'ಒಳ್ಳೆಯದು, ಹೋಗೋಣ' ಎಂದರು. ಗೋವಿಂದರು ಹೋಗಿ ಎಲ್ಲರನ್ನೂ ಪ್ರಭುಗಳಿದ್ದಲ್ಲಿಗೆ ಕರೆದುತಂದರು. ಅವರೆಲ್ಲರೂ ಪ್ರಭುಗಳಿಗೆ, ದೇವಿಯರಿಗೆ ಆನಂದದಿಂದ ಭಕ್ತಿಯಿಂದ ನಮಸ್ಕರಿಸಿದರು. ಒಂದು ತೊಟ್ಟಿಲಲ್ಲಿ ಪ್ರಭುಗಳೂ ಇನ್ನೊಂದರಲ್ಲಿ ಲಕ್ಷ್ಮೀದೇವಿಯರೂ ಕುಳಿತರು. ದಾಸಿಯರು ಲಕ್ಷ್ಮೀದೇವಿಯವರ ತೊಟ್ಟಿಲೊಡನೆ ಮೆಲ್ಲನೆ ನಡೆದರು. ಹೆಗ್ಗಡೆಯವರು ಶಾಂತಲೆಯ ಕಳೇಬರಕ್ಕೆ ಬಲವಾದ ಕಾವಲನ್ನು ನೇಮಿಸಿ, ಅವರಿಗೆ ಪಂಜುಗಳನ್ನೂ ಎಣ್ಣೆಯಲ್ಲಿ ನೆನೆಸಿದ್ದ ಪಂಜುಬಳೆಗಳನ್ನೂ ಕೊಟ್ಟರು. ಎಲ್ಲರೂ ದೀವಟಿಗೆಗಳ ಬೆಳಕಿನಲ್ಲಿ ಬೆಟ್ಟವನ್ನು ಇಳಿಯತೊಡಗಿದರು.

ಬೆಟ್ಟವನ್ನು ಇಳಿಯುತ್ತಿದ್ದಾಗ ಲಕ್ಷ್ಮೀದೇವಿ, ಪಕ್ಕದಲ್ಲಿ ನಡೆದು ಬರುತ್ತಿದ್ದ ದಾಸಿಯೊಬ್ಬಳನ್ನು ಕುರಿತು 'ಹೊನ್ನಿ . . . ದ್ವಾರವತಿಯಲ್ಲಿ ನಾವು ಶಿವಗಂಗೆಗೆ ಹೊರಡುವ ಮುನ್ನ "ನಿನ್ನ ಅವ್ವೆಗೆ ಕೊಟ್ಟು ಬಾ" ಎಂದು ನಿನ್ನ ಕೈಯಲ್ಲಿ ಕೊಟ್ಟ ಪೂಜಾಪರಿಕರಗಳನ್ನು ಕೊಟ್ಟೆಯ? ನೀನು ಬಂದು ನಮಗೆ ತಿಳಿಸಲೇ ಇಲ್ಲವಲ್ಲ! ನಿನ್ನ ಅವ್ವೆಗೆ ಸಂತೋಷವಾಯಿತೆ? ಮತ್ತೆ ನೀನು ದ್ವಾರವತಿಯಿಂದ ವೇಲಾಪುರಿಗೆ ಎಂದು ಬಂದೆ?' ಎಂದು ಕೇಳಿದಳು.

ಆ ದಾಸಿಗೆ ಗುಂಡಿಗೆ ಜಗ್ಗೆಂದಿತು, ಕೈ ಕಾಲುಗಳಲ್ಲಿ ನಡುಕ ಉಂಟಾಯಿತು. ಪ್ರಭುಗಳೂ ಲಕ್ಷ್ಮೀದೇವಿಯರೂ ದ್ವಾರವತಿಯಿಂದ ವೇಲಾಪುರಿಗೆ ಹೊರಟ ರಾತ್ರಿ, ಶಾಂತಲಾದೇವಿ ತಾನು ಶಿವಗಂಗೆಗೆ ನಾಳೆ ಪ್ರಾತಃಕಾಲ ಹೊರಡುವೆನೆಂದುಕೊಂಡಿದ್ದಾಗ, ಈ ದಾಸಿ ಹೊನ್ನಿಯನ್ನು ಕರೆದು, ಬಹು ದಿನಗಳಿಂದಲೂ ಶ್ರದ್ಧಾಭಕ್ತಿಗಳಿಂದ ವಿಶ್ವಾಸದಿಂದ ತನ್ನ ಸೇವೆಯನ್ನು ಮಾಡಿದ್ದ ಹೊನ್ನಿಯ ವೃದ್ಧಮಾತೆಗೆ ತುಂಬು ಔದಾರ್ಯದಿಂದ ಚೊಕ್ಕ ಬೆಳ್ಳಿಯಿಂದ ಮಾಡಿದ್ದ ಪೂಜಾಪರಿಕರಗಳನ್ನು ಕೊಟ್ಟು 'ಇದನ್ನು ನಮ್ಮ ಸಂತೋಷಕ್ಕಾಗಿ ಕೊಟ್ಟು ಕಳಿಸಿದೆವೆಂದೂ, ಇದನ್ನು ತೆಗೆದುಕೊಳ್ಳಬೇಕೆಂದೂ ನಿನ್ನ ಅವ್ವೆಗೆ ಹೇಳು' ಎಂದು ಹೇಳಿಕೊಟ್ಟಿದ್ದಳು. ಅನಂತರ ತಾನು ಶಿವಗಂಗೆಗೆ ಹೊರಡುವ ಮುನ್ನ ಈ ದಾಸಿಯನ್ನು ಕಂಡಿರಲಿಲ್ಲ; ಆದುದರಿಂದ ಈಗ ದಾಸಿಯನ್ನು ವಿಚಾರಿಸಿದಳು.

ದಾಸಿಗೆ ಗಂಟಲು, ನಾಲಗೆ ಒಣಗಿಹೋದವು. 'ಇದು ಯಾರು! ಇವರು ಲಕ್ಷ್ಮೀದೇವಿಯರಲ್ಲವೆ! ಪೂಜಾಪರಿಕರಗಳನ್ನು "ನಿನ್ನ ಅವ್ವೆಗೆ ಕೊಟ್ಟು ಬಾ"

ಎಂದು ಕೊಟ್ಟವರು ಶಾಂತಲೆ ಮಹಾರಾಣಿಯವರು. ಲಕ್ಷ್ಮೀದೇವಿಯರಿಗೆ ಈ ವಿಷಯವೇ ತಿಳಿಯದಲ್ಲ! ಅವರು ಆ ಮೊದಲೆ ಪ್ರಭುಗಳೊಡನೆ ವೇಲಾಪುರಿಗೆ ಹೊರಟುಹೋದರು. ಅವರಿಗೆ ಈ ವಿಷಯವೆ ತಿಳಿಯದು. "ನಾವು ಕೊಟ್ಟು ಬಾರೆಂದ ಪೂಜಾಪರಿಕರಗಳು" ಎಂದರು. ಏನಾಶ್ಚರ್ಯ! ಮಾತಾಡುವ ರೀತಿಯೂ ಲಕ್ಷ್ಮೀದೇವಿಯರದಲ್ಲ! ಶಾಂತಲೆ ಮಹಾರಾಣಿಯವರದು! ನನ್ನನ್ನು ಈಗ ಕೇಳುತ್ತಿರುವವರು ಲಕ್ಷ್ಮೀದೇವಿಯರು!' ಎಂದು ಆ ದಾಸಿ ಭೀತಿ ಆಶ್ಚರ್ಯಗಳಿಂದ ನಡುಗಿಹೋದಳು. ನಡುಗುತ್ತಿದ್ದ ಧ್ವನಿಯಲ್ಲಿ ಆ ದಾಸಿ ಹೇಳಿದಳು: 'ದೇವಿಯರು ಕೊಟ್ಟದ್ದನ್ನು, ನನ್ನವ್ವೆಗೆ ಕೊಟ್ಟೆ. ರತ್ನ ಹಾರಗಳನ್ನೆ ಕೊಟ್ಟದ್ದರೂ ನನಗೆ ಇಷ್ಟು ತೃಪ್ತಿಯಾಗುತ್ತಿರಲಿಲ್ಲವೆಂದು ಮಹಾರಾಣಿಯವರಿಗೆ ಅರಿಕೆ ಮಾಡಿಕೊಂಡೆನೆಂದು ಹೇಳು ಎಂದು ಅವರು ಬಹು ತೃಪ್ತಿ ಸಂತೋಷಗಳಿಂದ ಹೇಳಿದರು. ನನ್ನನ್ನು ಇಲ್ಲಿಗೆ ಲಕ್ಷ್ಮೀದೇವಿಯರೆ ಕರೆಸಿಕೊಂಡರು.'

ಲಕ್ಷ್ಮೀದೇವಿ: 'ಈಗ ನಮಗೂ ಸಂತೋಷವಾಯಿತು.'

ದಾಸಿಗೆ ಎದೆ ನಡುಕ ಮಾತ್ರ ನಿಲ್ಲಲಿಲ್ಲ. ಅವಳು ಇನ್ನೂ ಯೋಚಿಸುತ್ತಲೆ ಇದ್ದಳು: 'ಕೊಟ್ಟು ಕಳಿಸಿದ ಶಾಂತಲಾ ಮಹಾರಾಣಿಯವರು ಇನ್ನೆಲ್ಲಿ! ನಾವು ಕೊಟ್ಟು ಕಳಿಸಿದುದೆಂದು ಲಕ್ಷ್ಮೀದೇವಿಯರು ಹೇಳುತ್ತಿದ್ದಾರೆ! ಚೆನ್ನಕೇಶವ! ಚೆನ್ನಕೇಶವ!' ಎಂದು ಹೊನ್ನಿ ದಿಗ್ಭ್ರಮೆಗೊಂಡಳು.

ಬೆಟ್ಟವನ್ನಿಳಿದು ಎಲ್ಲರೂ ಶಿವಗಂಗೆಯನ್ನು ಸೇರಿದರು. ಶಾಂತಲಾದೇವಿ, ಕುವರವಿಷ್ಣು ಇವರಿಗಾಗಿ ಏರ್ಪಡಿಸಿದ್ದ ಬಿಡದಿಯೆ ಸಜ್ಜುಗೊಳಿಸಲ್ಪಟ್ಟಿತ್ತು. ಹೆಗ್ಗಡೆಗಳೂ, ಪುರಪ್ರಮುಖರೂ ತಮ್ಮಿಂದಾಗಬಹುದಾದ ಸಕಲ ಸೌಕರ್ಯಗಳನ್ನೂ ಕ್ಷಣಮಾತ್ರದಲ್ಲಿ ಮಾಡಿಸಿಟ್ಟರು. ಬಿಸಿ ನೀರು ಕಾಯ್ದಿತ್ತು. ಸುಖೋಷ್ಣವಾದ ನೀರಿನಿಂದ ಶಾಂತಲಾದೇವಿ ಪ್ರಭುಗಳಿಗೆ ಮಜ್ಜನಮಾಡಿಸಿದಳು. ಗಾಯಗಳಿಗೆ ವ್ರಣಹರಣತೈಲವನ್ನು ಲಘುವಾಗಿ ಲೇಪಿಸಿ, ಸುಲಭವಾಗಿ ಜೀರ್ಣವಾಗುವಂತಹ ಪಾಯಸ, ಫಲಗಳನ್ನು ಪತಿಗೆ ಭೋಜನಮಾಡಿಸಿದಳು. ತಾನೂ ಉಂಡು, ಮೃದುತಲ್ಪ ಒಂದನ್ನು ಪ್ರಭುಗಳಿಗೆ ಹಾಸಿಕೊಟ್ಟು, ಅಚ್ಯುತ, ಗೋವಿಂದರ ಮತ್ತು ಇತರರ ಊಟವಾದ ಮೇಲೆ, ಪತಿಯ ಬಳಿ ಬಂದು ಕುಳಿತು, ಮಧುರ ಸಲ್ಲಾಪಗಳಿಂದ ಅವರನ್ನು ಸಂತೋಷಗೊಳಿಸಿ, ಚೆನ್ನಕೇಶವನಿಗೆ ತನ್ನ ಅನಂತ ಧನ್ಯವಾದಗಳನ್ನು ಅರ್ಪಿಸಿದಳು. ತನ್ನ ನಳಿತೋಳುಗಳನ್ನು

ರೆಂದೂ ಎರಡು ಊರುಗಳಲ್ಲಿಯೂ ಸುದ್ದಿ ಹರಡಿ, ತಪಿಸಿಹೋಗಿದ್ದ ಜನರಿಗೆ ಬಹುಮಟ್ಟಿಗೆ ಸಮಾಧಾನ ಕೊಟ್ಟಿತಾದರೂ, ಶಾಂತಲೆ ಮಹಾರಾಣಿ, ಕುವರ ವಿಷ್ಣು ನಿಧನರಾದ ರೀತಿ, ಆ ದುಃಖ, ಜನ್ಮೇಪಿ ಮರೆಯುವಂತಿರಲಿಲ್ಲ. ಹೇಮಾದ್ರಿಗಳು ಸುದ್ದಿ ಬಂದ ಮಾರನೆಯ ದಿನವೆ ಪ್ರಭುಗಳಿಗೆ ಓಲೆ ಬರೆದು ಅವಸರದವರ ಕೈಯಲ್ಲಿ ಶಿವಗಂಗೆಗೆ ಕೊಟ್ಟು ಕಳುಹಿಸಿದರು: 'ಪ್ರಭು, ದೇಶವೆಲ್ಲ ದುಃಖದಿಂದ ಬೇಯುತ್ತಿದೆ. ತಮ್ಮ ಅಪಾರ ಸಂಕಟಕ್ಕೆ ಯಾವ ಸಮಾಧಾನವೂ ಇಲ್ಲವಾಗಿದೆ. ಪ್ರಜೆಗಳೆಲ್ಲ ದುಃಖದಿಂದ, ಭಯದಿಂದ ದಿಕ್ಕು ಕಾಣದವರಾಗಿದ್ದಾರೆ. ಪ್ರಭುಗಳು ರಾಜಧಾನಿಗೆ ಆದಷ್ಟು ಬೇಗ ಚಿತ್ತೈಸಬೇಕು, ಪ್ರಜೆಗಳಿಗೆ ಕಾಣಿಸಿಕೊಳ್ಳಬೇಕು. ಮಕ್ಕಳಂತಿರುವ ನಮ್ಮ ಪ್ರಜೆಗಳಿಗೆ ಆಗ ಧೈರ್ಯ ಉಂಟಾದೀತು, ಸ್ವಲ್ಪವಾದರೂ ನೆಮ್ಮದಿಯಾದೀತು' ಎಂದು ಒಕ್ಕಣಿಸಿತ್ತು ಆ ಓಲೆಯಲ್ಲಿ. ಪ್ರಭುಗಳು ರಾಜಧಾನಿಗೆ ಪ್ರಯಾಣ ನಿಶ್ಚಯಿಸಿದ್ದ ಹಿಂದಿನ ದಿನ ಈ ಓಲೆ ಪ್ರಭುಗಳ ಕೈ ಸೇರಿತು. ಮಾರನೆಯ ದಿನ ಪ್ರಾತಃಕಾಲ, ರಾಜಧಾನಿಗೆ ಪ್ರಯಾಣವೆಂದು ನಿಶ್ಚಿತವಾಯಿತು. ಶಿವಗಂಗೆಯ ಎಲ್ಲ ದೇವಾಲಯಗಳಲ್ಲೂ, ಧರ್ಮಾಲಯಗಳಲ್ಲೂ, ಪೂಜೆ, ಭೋಜನಾದಿಗಳು ನಡೆದವು. ಊರಿನ ಬಡಬಗ್ಗರಿಗೆಲ್ಲ ವಸ್ತ್ರದಾನ ಪ್ರಭುಗಳ ಆಜ್ಞೆಯಂತೆ ನಡೆಯಿತು. ಒಳ್ಳೆಯ ಗಳಿಗೆಯಲ್ಲಿ ಪ್ರಭುಗಳು ಲಕ್ಷ್ಮೀದೇವಿಯೊಡನೆ ರಥವನ್ನು ಹತ್ತಿ ರಾಜಧಾನಿಗೆ ಪ್ರಯಾಣ ಬೆಳಸಿದರು. ಇನ್ನೆರಡು ರಥಗಳಲ್ಲಿ ಅಮಾತ್ಯರುಗಳೂ, ದಾಸಿಯರೂ ಜೊತೆಗೆ ಹೊರಟರು. ಹೊರಡುವುದಕ್ಕೆ ಮುಂಚೆ ಪ್ರಭುಗಳು, ಹೆಗ್ಗಡೆಗಳನ್ನೂ ಪುರಪ್ರಮುಖರನ್ನೂ ಕರೆಯಿಸಿಕೊಂಡು, ಸುಮ್ಮಾನದಿಂದ ನೂತನಾಡಿ, ಉಡುಗೊರೆ, ವೀಳೆಯಗಳನ್ನು ಸ್ವಹಸ್ತದಿಂದಲೇ ಬಹುಮಾನಿಸಿ ಅವರ ಮನಸ್ಸನ್ನು ಸಂತೋಷಪಡಿಸಿದರು. ಹೊಯಿಸಳ ವಂಶವೇ ನಿಶ್ಶೇಷವಾಗುವುದನ್ನು ನಿಲ್ಲಿಸಿ, ರಾಜ್ಯಶ್ರೀಯನ್ನೂ ತನ್ನ ಶಾಂತಲೆಯನ್ನೂ ಹಿಂದಕ್ಕೆ ಕೊಟ್ಟು, ಬೆಂದುಹೋಗಿದ್ದ ಮನಸ್ಸಿಗೆ ಶಾಂತಿಯನ್ನು ಕೊಟ್ಟ ಗಂಗಾಧರೇಶ್ವರನನ್ನು ಶಾಂತೇಶ್ವರನೆಂದು ಕರೆದು ಪ್ರಭುಗಳು ಶಿವಗಂಗೆಯಲ್ಲಿ ಒಂದು ದೇವಾಲಯವನ್ನು ಕಟ್ಟಿಸಿದರು. ಶಾಂತಲೆಯ ಅಂತರಂಗದ ದೈವವೂ ಶಾಂತಿನಾಥನೆ.

§

ಅತ್ತ ಕಾಲ್ನಡೆಯಲ್ಲಿ ಶ್ರವಣಬೆಳುಗೊಳಕ್ಕೆ ಹೊರಟ ಮಾಚಿಕಬ್ಬೆ,

ಚಂದಲೆ, ಮಾರಸಿಂಗಮಯ್ಯ, ಪೆದ್ದ ದೇಚ ಇವರು, ಪ್ರಭುಗಳೂ ಲಕ್ಷ್ಮೀದೇವಿ ಯರೂ ಕುಳಿತಿದ್ದ ರಥ ದ್ವಾರವತಿಯನ್ನು ಸೇರಿದ ಹೊತ್ತಿಗೆ ಅಲ್ಲಿ ಶ್ರವಣಬೆಳು ಗೊಳವನ್ನು ಸೇರಿದರು. ಪ್ರಪಂಚದ ವಸ್ತುಗಳೆಲ್ಲವನ್ನೂ ಪ್ರಪಂಚಕ್ಕೆ ಕೊಟ್ಟು, ಪೃಥ್ವಿಯ ಸಮಸ್ತ ವಾಸನೆಗಳಿಂದ ನಿರ್ಲಿಪ್ತರಾದರು ಆ ದಂಪತಿಗಳು. ಶ್ರವಣ ಬೆಳುಗೊಳದ ಚಂದ್ರಗಿರಿಯಲ್ಲಿ ಮಗಳು ಶಾಂತಲಾದೇವಿ ನಾಲ್ಕಾರು ವರ್ಷ ಹಿಂದೆ ಶಾಂತೀಶ್ವರ ಜಿನನಿಗೆಂದು ಕಟ್ಟಿಸಿದ್ದ ಬಸದಿಯಲ್ಲಿ ಇಳಿದುಕೊಂಡರು.

ಮರುದಿನ ಪ್ರಾತಃಕಾಲ ಸೂರ್ಯೋದಯಕ್ಕೆ ಎದ್ದ ಮಾಚಿಕಬ್ಬೆ, ನಿತ್ಯವಿಧಿ ಗಳನ್ನು ಮುಗಿಸಿ, ಸ್ನಾನಮಾಡಿ ಮಡಿಯುಟ್ಟು, ಪತಿಗೆ ನಮಸ್ಕರಿಸಿ, ಆತನ ಅಪ್ಪಣೆ ಪಡೆದು, ಅನಂತರ ಸ್ಥಳದ ಗುರುಪೀಠದ ಮುನಿಗಳಿಂದ ಜಿನಧರ್ಮಾನು ರೀತ್ಯಾ ಸಂನ್ಯಾಸವನ್ನು ಕೈಕೊಂಡು, ಆ ಕ್ಷಣದಿಂದ ಸಲ್ಲೇಖನ ವ್ರತದಲ್ಲಿ ನಿಂತರು. ಚಂದ್ರಗಿರಿಯ ಬಂಡೆಯ ಮೇಲೆ ಒಂದೆಡೆ, ಬಲಪಾರ್ಶ್ವವಾಗಿ ಮಲಗಿ, ಪಂಚಪದಗಳನ್ನು ಸ್ಮರಿಸುತ್ತ, ಅನವರತ ಧ್ಯಾನದಲ್ಲಿ ನಿರತರಾದರು.

ಮಾಚಿಕಬ್ಬೆ ಸಲ್ಲೇಖನ ವ್ರತವನ್ನು ಕೈಕೊಂಡ ಕೂಡಲೆ, ಮಾರಸಿಂಗ ಮಯ್ಯನವರು ಶಿವದೀಕ್ಷೆಯನ್ನು ಕೈಕೊಂಡು, ಕಾವಿಯನ್ನು ಧರಿಸಿ, ಭಸ್ಮೋ ದ್ಧೂಳಿತರಾಗಿ, ಜಂಗಮರಾಗಿ, ದಂಡ ಜೋಳಿಗೆಗಳನ್ನು ಹಿಡಿದು, ದೇಚನನ್ನು ಶಿಷ್ಯನನ್ನಾಗಿ ಮಾಡಿಕೊಂಡು, ವಿಶ್ವೇಶ್ವರನ ಸನ್ನಿಧಿಯಾದ ವಾರಣಾಸಿಗೆ ಪಾದಚಾರಿಯಾಗಿ ಪ್ರಯಾಣ ಬೆಳಸಿದರು. ಚಂದಲೆ ಮಾಚಿಕಬ್ಬೆಯ ಸೇವೆ ಯಲ್ಲಿ ನಿಂತಳು.

ಸಲ್ಲೇಖನವನ್ನು ಕೈಕೊಂಡ ಮೊದಲ ನಾಲ್ಕು ದಿನಗಳು ಮಾಚಿಕಬ್ಬೆ ಶಾಂತೀಶ್ವರನಿಗೆ ಅಭಿಷೇಕ ಮಾಡಿದ ಜಲವನ್ನು ಶಿರೋಧಾರ್ಯಮಾಡುತ್ತ ಸಂಜೆ ಒಂದು ಬಟ್ಟಲು ಜಲಪಾನಮಾಡಿದರು. ಇದರನಂತರ ಇನ್ನೆರಡು ದಿನಗಳು ಮಧ್ಯಾಹ್ನ ಒಂದೇ ವೇಳೆ ಒಂದು ಬಟ್ಟಲು ಶೀತಲ ಜಲವನ್ನು ತೆಗೆದುಕೊಂಡರು. ಅನಂತರ ಅದನ್ನೂ ನಿಲ್ಲಿಸಿಬಿಟ್ಟರು. ಮಲಗಿದ ಸ್ಥಳದಿಂದ ಏಳಲಿಲ್ಲ, ಬಲಪಾರ್ಶ್ವ ದಿಂದ ಇನ್ನೊಂದು ಪಾರ್ಶ್ವಕ್ಕೆ ಹೊರಳಲಿಲ್ಲ, ಮುಚ್ಚಿದ ಕಣ್ಣುಗಳನ್ನು ತೆರೆಯ ಲಿಲ್ಲ, ಅರೆ ನಿಮಿಷ ಕಾಲ ಜಿನಸ್ಮರಣೆಯನ್ನು ನಿಲ್ಲಿಸಲಿಲ್ಲ. ಮಕ್ಷಿಕ ಮುಂತಾದ ಕೀಟಗಳ ಬಾಧೆಯನ್ನು ನಿವಾರಿಸುತ್ತ ಚಂದಲೆಯೊಬ್ಬಳು ಮಾಚಿಕಬ್ಬೆಯ ಬಳಿ ಕುಳಿತಳು. ಮಾಚಿಕಬ್ಬೆಯ ದೇಹ, ವ್ರತವನ್ನು ಕೈಕೊಂಡ ದಿನದಿಂದ ದಿನೇ

ದಿನೇ ಕ್ಷೀಣಿಸುತ್ತ ಬಂದಿತು, ಶಕ್ತಿಹೀನವಾಯಿತು. ಒಡಲು ಕಾಯ್ದು ಕಾಯ್ದು ಬಾಡುತ್ತ ಬಂದಿತು. ಆರು ದಿನಗಳಲ್ಲಿ ಮಾಚಿಕಬ್ಬೆ ತೀರ ಸೊರಗಿದರು.

೩

ಪ್ರಭುಗಳು ರಾಜಧಾನಿಗೆ ಬಂದರೆಂಬ ವಾರ್ತೆ, ಭಯ ದುಃಖಗಳಿಂದ ಆವೃತರಾಗಿದ್ದ ಜನರಿಗೆ, ವೈಶಾಖದ ಮುಂಗಾರಿನಷ್ಟು ಆನಂದದಾಯಕ ವಾಯಿತು. ಅಷ್ಟು ದುಃಖದಲ್ಲಿಯೂ ಪ್ರಭುಗಳು ಕ್ಷೋಭೆಗೊಳ್ಳದೆ ಇರುವು ದನ್ನು ಕಂಡು ಪ್ರಜೆಗಳೂ ಅಧಿಕಾರ ವರ್ಗದವರೂ ಆಶ್ಚರ್ಯಪಟ್ಟುಹೋದರು.

ಪ್ರಭುಗಳು ರಾಜಧಾನಿಗೆ ಬಂದ ಮಾರನೆಯ ದಿನವೆ ಅಲ್ಲಿಯ ಅಧಿಕಾರ ವರ್ಗದವರನ್ನೆಲ್ಲ ಬರಮಾಡಿಕೊಂಡರು. ಮಂತ್ರಿಗಳೊಡನೆಯೂ ಅಧಿಕಾರಿ ಗಳೊಡನೆಯೂ ಆಲೋಚಿಸಿ, ರಾಜ್ಯಕ್ಕೆ ಪ್ರಗತಿದಾಯಕವಾದ ಹೊಸ ಹೊಸ ಸಲಹೆಗಳನ್ನು ಇತ್ತು ಆಜ್ಞೆಗಳನ್ನು ಹೊರಡಿಸಿದರು. ರಾಜ್ಯದ ಎಲ್ಲೆಗಳನ್ನು ಕಾಪಾಡಿಕೊಂಡು ಬರುತ್ತಿರುವ ಅಧಿಕಾರಿಗಳಿಗೆ, ದಣ್ಣಾಯಕರುಗಳಿಗೆ, ಅಧಿ ಕಾರ ಮರ್ಯಾದೆಗಳನ್ನು ಹೆಚ್ಚಿಸಿದರು. ಬೆಳೆದ ಬೆಳೆಗಳ ಆರನೆಯ ಒಂದು ಭಾಗ ರಾಜಾದಾಯವನ್ನು, ಸುಂಕ, ತೆರಿಗೆ ಇತರ ರಾಜಮಾನ್ಯಗಳನ್ನೂ ಕ್ರಮಪಡಿಸಿ, ಅವು ಕಾಲಕ್ಕೆ ಸರಿಯಾಗಿ ರಾಜಬೊಕ್ಕಸಕ್ಕೆ ಬರುವಂತೆ ಮಾಡಿದರು. ರಾಜ ಮಾರ್ಗ, ಹೆದ್ದಾರಿ, ಕೆರೆ, ಕುಂಟೆ, ಭಾವಿ, ಸೇತುವೆ, ಗೋಭೂಮಿ ಇವುಗಳಿಗೆ ಹೆಚ್ಚು ಗಮನ ಕೊಟ್ಟರು. ಶಿಥಿಲವಾದವುಗಳನ್ನು ಭದ್ರಪಡಿಸಿದರು. ಅಗತ್ಯ ವಾಗಿದ್ದ ಸ್ಥಳಗಳಲ್ಲಿ ಹೊಸದಾಗಿ ಕಟ್ಟಿಸಿದರು. ಜನರಿಗೆ ಕಿರುಕುಳ ಉಂಟು ಮಾಡಿದ್ದ, ಮಾಡುತ್ತಿರುವ ಅಧಿಕಾರಿಗಳನ್ನು ಕಠಿಣ ಶಾಸನಕ್ಕೆ ಒಳಪಡಿಸಿದರು. ಸಮುದ್ರದ ಆಚೆಯ ದೇಶಗಳಿಂದ ಕುದುರೆಗಳನ್ನೂ, ಒಂಟೆಗಳನ್ನೂ, ಕಾಶ್ಮೀರ ದಿಂದ ಪಟ್ಟೆ, ಕಂಬಳಗಳನ್ನೂ ತರಿಸಿ ವ್ಯಾಪಾರ ನಡಸುತ್ತಿದ್ದ ಬ್ರಾಹ್ಮಣರ ಮೂಲಕ ಸೈನ್ಯಕ್ಕೆ ಹೆಚ್ಚು ಸಂಖ್ಯೆಯಲ್ಲಿ ಕುದುರೆಗಳನ್ನು ತರಿಸಿಕೊಂಡರು. ಕಾಡುಕುದುರೆಗಳನ್ನು ಪಳಗಿಸಿ, ಯುದ್ಧಕ್ರಿಯೆಗಳಿಗೆ ಉಪಯೋಗವಾಗುವಂತೆ ಮಾಡಲು ಉತ್ತರದೇಶದಿಂದ ಅನಂತಪಾಲಸಾಹಿನಿ ಎಂಬ ಅಶ್ವಶಿಕ್ಷಕನನ್ನು ಕರೆಯಿಸಿ ನೇಮಿಸಿಕೊಂಡರು. ರಾಣಿಯರಲ್ಲಿ ಕಿರಿಯಳೂ, ಅಶ್ವಹೃದಯವನ್ನು ಚೆನ್ನಾಗಿ ಬಲ್ಲವಳೂ, ಕುದುರೆಯ ಸವಾರಿಯಲ್ಲಿ ನಿಪುಣೆಯೂ ಆದ ಬಮ್ಮಲೆ

ದೇವಿಯ ನೇತೃತ್ವದಲ್ಲಿ ಈ ಅಶ್ವಶಾಲೆಯು ನಡೆಯಿತು. ಅರಸೀಯಕೆರೆಯ ತಾಲ್ಲೂಕಿನ ಒಂದು ಗ್ರಾಮವಾದ ಕೋಳಿಗುಂಡದಲ್ಲಿ ಗಜಗಳನ್ನು ಪಳಗಿಸು ವುದಕ್ಕೆ ಒಂದು ಗಜಶಾಲೆಯನ್ನೂ ಪ್ರಭುಗಳು ಸ್ಥಾಪಿಸಿದರು. ಕೇತಯ ಮಾವುತನೆಂಬ ಒಬ್ಬ ಪ್ರಖ್ಯಾತ ಮಾವುತ ಇದಕ್ಕೆ ಮುಖ್ಯಸ್ಥನಾದ. ಆ ಗ್ರಾಮ ದಲ್ಲಿದ್ದವರೆಲ್ಲ ಮಾವುತರೆ. ಪಶ್ಚಿಮ ಘಟ್ಟದ ಕಾಡುಗಳಿಂದ, ಮಲೆಯಾಳ ರಾಜ್ಯದ ಅರಣ್ಯಗಳಿಂದ ಹಿಡಿದು ತಂದ ಕಾಡಾನೆಗಳನ್ನು ಇಲ್ಲಿ ಪಳಗಿಸಲಾಗು ತ್ತಿತ್ತು. ವಿಷ್ಣುವರ್ಧನ ಪ್ರಭುವಿನ ಬಳಿ ಪಳಗಿಸಿದ ಆನೆಗಳು ಮುನ್ನೂರಕ್ಕೆ ಮೇಲೆ ಇದ್ದುವು.

ಪ್ರಭುಗಳು ಎಲ್ಲಕ್ಕಿಂತ ಹೆಚ್ಚಾಗಿ ಜನರ ವಿದ್ಯಾಭಿವೃದ್ಧಿ, ವಾಣಿಜ್ಯಾಭಿ ವೃದ್ಧಿ, ಧರ್ಮ, ಶ್ರದ್ಧೆ, ದೈವಭಕ್ತಿ, ಇವುಗಳ ಕಡೆ ಗಮನವಿಟ್ಟರು. ಧರ್ಮಶಾಸ್ತ್ರ, ಪುರಾಣ, ಮೀಮಾಂಸ ಇವುಗಳನ್ನು ಚೆನ್ನಾಗಿ ತಿಳಿದು ವಿದ್ಯಾವಿನಯಸಂಪನ್ನ ರಾದ ಬ್ರಾಹ್ಮಣರನ್ನು ಕರೆಯಿಸಿಕೊಂಡು, ಅವರಿಗೆ ಅಗ್ರಹಾರಗಳನ್ನು ಧಾರೆ ಯೆರೆದು, ಅವರ ಜೀವನಕ್ಕೆ ದತ್ತಿ ಭೂಮಿಗಳನ್ನು ಕೊಟ್ಟು, ಅವರಿಂದ ಗುರು ಕುಲಗಳನ್ನೂ ವಿದ್ಯಾಪೀಠಗಳನ್ನೂ ಸ್ಥಾಪಿಸಿದರು. ಇಂತಹ ಗುರುಕುಲ ಗಳೊಂದೊಂದರಲ್ಲಿಯೂ ನೂರಾರು ವಿದ್ಯಾರ್ಥಿಗಳು ಬಂದು, ಶಿಷ್ಯವೃತ್ತಿಯನ್ನ ವಲಂಬಿಸಿದರು. ಆಯಾ ಊರಿನವರೂ ಗ್ರಾಮಗಳವರೂ ವಿದ್ಯಾರ್ಥಿಗಳಿಗೆ ದೀಪಕ್ಕೆ ಬೇಕಾಗುವ ಎಣ್ಣೆ, ಆಹಾರಕ್ಕೆ ಹಾಲು, ಮೊಸರು ಇತ್ಯಾದಿಗಳನ್ನು ಒದಗಿಸುತ್ತಿದ್ದರು. ಹೀಗೆಯೆ ಶೈವ ಗುರುಕುಲಗಳೂ, ಜೈನ ವಿದ್ಯಾಪೀಠಗಳೂ ಸ್ಥಾಪಿತವಾದುವು. ಶ್ರೀಪಾಲತ್ರೈವಿದ್ಯದೇವರ ಮೇಲ್ವಿಚಾರಣೆಯಲ್ಲಿ ಜೈನ ವಿದ್ಯಾಪೀಠಗಳೂ ಸ್ಥಾಪಿತವಾದುವು. ವೇಲಾಪುರದ ಚೆನ್ನಕೇಶವ ದೇವಾಲಯ ದಲ್ಲಿ ಶ್ರೀವೈಷ್ಣವ ಗುರುಪೀಠ ಸ್ಥಾಪಿತವಾಯಿತು. ವೇಲಾಪುರಿಯಲ್ಲಿ ಪ್ರಭು ಗಳು ದೊಡ್ಡದೊಂದು ಅಗ್ರಹಾರವನ್ನು ಕಟ್ಟಿಸಿ ಅದನ್ನು ಈ ಬ್ರಾಹ್ಮಣರಿಗೆ ಧಾರೆಯೆರೆದು ಕೊಟ್ಟರು. ಸರ್ವಮತಧರ್ಮಗಳ ಏಳಿಗೆಗೂ, ಪ್ರಜೆಗಳಲ್ಲಿ ಧರ್ಮ ಶ್ರದ್ಧೆ, ವಿದ್ಯಾಶ್ರದ್ಧೆ, ದೈವಭಕ್ತಿ ಹೆಚ್ಚುವುದಕ್ಕೂ ಪ್ರಭುಗಳು ಉದಾರ ಮನಸ್ಸಿ ನಿಂದ ಸಕಲ ಸೌಲಭ್ಯಗಳನ್ನೂ ಕಲ್ಪಿಸಿಕೊಟ್ಟು, ಯಾವೊಂದು ಮತದಲ್ಲಿಯೂ ಪಕ್ಷಪಾತವಿಡದೆ ಆಚಂದ್ರಾರ್ಕವಾಗಿ ಯಶಸ್ಸನ್ನು ಗಳಿಸಿಕೊಂಡರು.

೬

ಶಿವಗಂಗೆಯಿಂದ ರಾಜಧಾನಿಗೆ ಬಂದ ಮೇಲೆ, ಸೋವಲೆದೇವಿಯ ಸಹಗಮನ ವೃತ್ತಾಂತ, ಅತ್ತೆಮಾವದಿರು ಪ್ರಪಂಚದಿಂದ ಪಡೆದಿದ್ದ ಸರ್ವಸ್ವವನ್ನೂ ಪ್ರಪಂಚಕ್ಕೇ ಕೊಟ್ಟು ಶ್ರವಣಬೆಳುಗೊಳಕ್ಕೆ ಹೋದದ್ದು, ಎಲ್ಲವೂ ಪ್ರಭುಗಳಿಗೆ ವರದಿಯಾಗಿತ್ತು. ಅತ್ತೆಯವರು ಶ್ರವಣಬೆಳುಗೊಳಕ್ಕೆ ಹೋದ ನಂತರ ಸಲ್ಲೇಖನ ವ್ರತವನ್ನು ಆರಂಭಿಸಿದುದೂ, ಮಾವನವರು ಕಾವಿ ಉಟ್ಟು ಕಾಶಿಗೆ ನಡೆದುಹೋದುದೂ ಎರಡು ದಿನಗಳ ಅನಂತರ ಪ್ರಭುಗಳಿಗೆ ತಿಳಿಯಿತು. ಇದೆಲ್ಲವನ್ನೂ ಪ್ರಭುಗಳು ಲಕ್ಷ್ಮೀದೇವಿಗೆ ತಿಳಿಸಿದರು. ಆಕೆ 'ಅಯ್ಯೋ! ಅಯ್ಯನನ್ನು ನೋಡುವ ಭಾಗ್ಯ ಇನ್ನು ನನಗೆ ಇಲ್ಲವಾಯಿತೆ!' ಎಂದು ದುಃಖಪಟ್ಟಳು. ಅವ್ವೆ ಶರೀರವನ್ನು ತೊರೆಯುವುದರೊಳಗೆ ನೋಡಬೇಕೆಂಬ ಆಶೆ ಇರುವುದಾಗಿ ಪ್ರಭುಗಳಲ್ಲಿ ಬಿನ್ನವಿಸಿಕೊಂಡಳು. ಪ್ರಭುಗಳು 'ಆ ಆಶೆ ನನಗೂ ಇಲ್ಲವೆ ದೇವಿ!' ಎಂದರು.

ಶಕವರ್ಷ ೧೦೫೦ ವಿರೋಧಿಕೃತು ನಾಮ ಸಂವತ್ಸರ ಚೈತ್ರ ಶುದ್ಧ ದ್ವಾದಶಿ ಪಾರಣೆಯಾದ ಅನಂತರ ಪ್ರಭುಗಳೂ ಲಕ್ಷ್ಮಿಯೂ ಶ್ರವಣಬೆಳುಗೊಳಕ್ಕೆ ಹೊರಟು, ಆ ದಿನ ರಾತ್ರಿ ಅಲ್ಲಿಗೆ ಸೇರಿದರು. ಮಗಳಿಗೆ ಕೂಡಲೆ ತಾಯನ್ನು ನೋಡುವ ಆಶೆ ಇದ್ದರೂ, ಧ್ಯಾನದಲ್ಲಿರುವವರನ್ನು ಆ ಹೊತ್ತಿನಲ್ಲಿ ತೊಂದರೆಪಡಿಸಬಾರದೆಂದು ಆ ರಾತ್ರಿಯನ್ನು ಹಾಗೆಯೇ ಕಳೆದರು.

ಮರುದಿನ ಪ್ರಾತಃಕಾಲ ರಾಜದಂಪತಿಗಳು ನಿತ್ಯವಿಧಿ ಸ್ನಾನಗಳನ್ನು ಮುಗಿಸಿ, ಮಡಿಯುಟ್ಟು, ಮಾಚಿಕಬ್ಬೆಯವರನ್ನು ಕಾಣಲು ಚಂದ್ರಗಿರಿಯನ್ನು ಹತ್ತಿ ಬಂದರು. ಬಿಸಿಲೆನ್ನದೆ, ಗಾಳಿಯೆನ್ನದೆ, ನಿರಾಹಾರಿಯಾಗಿ, ಎರಡು ದಿನಗಳಿಂದ ಜಲಸೇವನೆ ಸಹ ಇಲ್ಲದೆ, ಬಿಸಿಲಿನಲ್ಲಿ ಒಣಗಿ ಬೆಂಡಾಗಿ, ಬಲಪಾರ್ಶ್ವವಾಗಿ ಮಲಗಿ, ಅಹರ್ನಿಶಿ ಪಂಚಪದಗಳನ್ನು ಸ್ಮರಿಸುತ್ತ ಧ್ಯಾನಾಸಕ್ತರಾಗಿದ್ದ ಮಾಚಿಕಬ್ಬೆಯವರನ್ನು ಕಂಡರು. ಚಂದಲೆಯೊಬ್ಬಳು ಅವ್ವೆಯ ಬಳಿ ಕುಳಿತು, ಮಕ್ಷಿಕಬಾಧೆಯನ್ನು ನಿವಾರಿಸುತ್ತಿದ್ದವಳು ಇವರು ಬಂದುದನ್ನು ಕಂಡು ಎದ್ದು ನಿಂತಳು. ಪ್ರಭುಗಳು ಚಂದಲೆಯನ್ನು ನೋಡಿದರು. ಅಲಂಕಾರ ರಹಿತಳಾಗಿ, ಮಲಿನವಸ್ತ್ರಧಾರಿಣಿಯಾಗಿ, ಹೊತ್ತುಹೊತ್ತಿಗೆ ಅನ್ನನಿದ್ದೆಗಳಿಲ್ಲದೆ ಬಿಸಿಲಿನಲ್ಲಿ ಬೆಂದು ಬಾಡಿದ್ದರೂ, ಪ್ರಭುಗಳು ತಮ್ಮ ಶಾಂತಲೆಯನ್ನು ಹೋಲುವ ರೂಪುರೇಖೆಗಳನ್ನು ಚಂದಲೆಯಲ್ಲಿ ಕಂಡರು.

ಬಂದವರು ಯಾರೆಂದು ಚಂದಲೆಗೆ ತಿಳಿಯಿತು. ಭಕ್ತಿಯಿಂದ, ಲಜ್ಜೆ ಯಿಂದ ಬಂದ ಇಬ್ಬರಿಗೂ ನಮಸ್ಕರಿಸಿದಳು. ಲಕ್ಷ್ಮೀದೇವಿ ಚಂದಲೆಯನ್ನು ಬಳಿಗೆ ಕರೆದುಕೊಂಡು ತಲೆತಡವಿ 'ತಂಗಿ, ನೀನು ಬಹಳ ಸೊರಗಿದ್ದೀಯೆ. ಅವ್ವೆ ಹೇಗಿದ್ದಾರೆ?' ಎಂದು ಕೇಳಿದಳು. 'ಅವ್ವೆ ಜಲವನ್ನೂ ಬಿಟ್ಟು ಇಂದಿಗೆ ಎರಡನೆಯ ದಿನ. ಬಿಸಿಲಿನ ಝಳ ಬಹಳ, ಕೆಳಗೆ ಬಂಡೆಯೂ ಸುಡುತ್ತಿರುತ್ತದೆ. ಅವ್ವೆ ಮೊನ್ನೆ ಸಂಜೆಯಿಂದ ಮುಚ್ಚಿದ ಕಣ್ಣುಗಳನ್ನು ತೆರೆಯಲಿಲ್ಲ, ದಿನವೆಲ್ಲ ನಾನು ಬಳಿಯೆ ಇರುತ್ತೇನೆ. ರಾತ್ರಿಯಲ್ಲಿ ಚೈತ್ಯಾಲಯದ ಕೆಲಸಗಿತ್ತಿಯರು ಎಚ್ಚರದಿಂದ ನೋಡಿಕೊಳ್ಳುತ್ತಾರೆ' ಎಂದಳು.

ರಾಜದಂಪತಿಗಳು ಮಾಚಿಕಬ್ಬೆಯವರ ಪಾದಗಳಿಗೆ ನಮಸ್ಕರಿಸಿದರು. ಲಕ್ಷ್ಮಿ ಶುದ್ಧೋದಕದಿಂದ ಕೈಗಳನ್ನು ತೊಳೆದುಕೊಂಡು, ನೀರಿನಲ್ಲಿ ಅದ್ದಿದ್ದ ಬೆರಳುಗಳಿಂದ ತಾಯಿಯ ಕಣ್ಣುಗಳ ಮೇಲ್ಭಾಗವನ್ನು ತಂಪುಮಾಡಿ, ತನ್ನ ಇದೊಂದು ತಪ್ಪನ್ನು ಮನ್ನಿಸಬೇಕೆಂದು ಶಾಂತೀಶ್ವರನನ್ನು ಬೇಡಿ, ಅವ್ವೆಯ ಕಿವಿಯ ಬಳಿ ಮೆಲ್ಲನೆ ಮಧುರವಾಗಿ 'ಅವ್ವೆ, ನಾನು ಬಂದಿದ್ದೇನೆ. ಕಣ್ತೆರೆದು ಒಂದು ಸಲ ನೋಡವ್ವೆ, ನಾನು ಬಂದಿದ್ದೇನೆ' ಎಂದು ಒಂದೆರಡು ಬಾರಿ ಅಂದ ಮೇಲೆ, ಮಾಚಿಕಬ್ಬೆ ಮೆಲ್ಲನೆ ಕಣ್ಣುಗಳನ್ನು ತೆರೆದು ನೋಡಿದರು. ಕೃಶವಾಗಿ, ಶರೀರದ ದ್ರವವೆಲ್ಲ ಬತ್ತಿಹೋಗಿದ್ದರೂ, ಮಾಚಿಕಬ್ಬೆ ಮೆಲ್ಲಗೆ ಕಣ್ತೆರದು ತಮ್ಮ ಮಗು ಶಾಂತಲೆಯನ್ನು ಗುರುತಿಸಿ ಹಸನ್ಮುಖಿಯಾದರು. ಮೆಲ್ಲಗೆ ಮಗಳ ಕೈಯನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡರು. ಅನಂತರ ಪ್ರಭುಗಳನ್ನು ನೋಡಿದರು. ಮಾಚಿಕಬ್ಬೆಗೆ ಸಮಾಧಾನವಾಯಿತು. ಸನ್ನೆಮಾಡಿ ಚಂದಲೆ ಯನ್ನು ಬಳಿಗೆ ಕರೆದುಕೊಂಡರು. ಮಗಳೂ ಅಳಿಯಂದಿರೂ ಪಕ್ಕದಲ್ಲೆ ಕುಳಿ ತರು. ಮಾಚಿಕಬ್ಬೆ ನಡುಗುತ್ತಿದ್ದ ತಮ್ಮ ಕೈಯಿಂದ ಚಂದಲೆಯ ಬಲಗೈಯನ್ನು ಹಿಡಿದುಕೊಂಡು, ಪ್ರಭುಗಳು ಕುಳಿತಿದ್ದ ಕಡೆಗೆ ಅದನ್ನು ನೀಡಿ ಹಿಡಿದರು. ಪ್ರಭುಗಳು ತಮ್ಮ ಅತ್ತೆಯವರ ಮನೋಭಿಪ್ರಾಯವನ್ನು ಗ್ರಹಿಸಿ, ಗೌರವಿಸಿ, ಮುಂದಕ್ಕೆ ಸರಿದುಬಂದು ತಮ್ಮ ಬಲಗೈಯನ್ನು ನೀಡಿದರು. ಮಾಚಿಕಬ್ಬೆ ಅತಿ ಕಷ್ಟದಿಂದ ಚಂದಲೆಯ ಕೈಯನ್ನು ಪ್ರಭುಗಳ ಕೈಯಲ್ಲಿಟ್ಟು ಮಾತನಾಡುವುದಕ್ಕೆ ಯತ್ನಿಸಿದರು. ನಾಲಗೆಯಲ್ಲಿ ದ್ರವವಿಲ್ಲ, ಗಂಟಲಲ್ಲಿ ದ್ರವವಿಲ್ಲ, ಧ್ವನಿ ಹೊರಡ ಲಿಲ್ಲ. ಪ್ರಭುಗಳ ಮುಖವನ್ನು ನೋಡುತ್ತ, ಅಸ್ಪಷ್ಟ ಧ್ವನಿಯಲ್ಲಿ 'ಶಾಂ...ತ

. . .' ಎಂದು ಹೇಳಿ, ಮುಂದೆ ಧ್ವನಿ ಹೊರಡದೆ ಒಮ್ಮೆ ಪ್ರಭುಗಳ ಮುಖವನ್ನೂ ಒಮ್ಮೆ ಮಗಳ ಮುಖವನ್ನೂ ನೋಡಿದರು. ಇಂಗಿತವನ್ನರಿತ ಪ್ರಭುಗಳು 'ಒಪ್ಪಿಗೆ ಅವ್ವೆ, ಶಾಂತಲೆ ಎಂತಲೆ, ಭಾವಿಸುತ್ತೇನೆ' ಎಂದರು. ಮಾಚಿಕಬ್ಬೆ ತೃಪ್ತಿಯ ಮುಖಮುದ್ರೆಯನ್ನು ವ್ಯಕ್ತಪಡಿಸುತ್ತ, ಇನ್ನೊಮ್ಮೆ ತಮ್ಮ ಮಗಳ ಮುಖವನ್ನು ನೋಡಿದರು. ಅವ್ವೆಯ ಹೃದಯವನ್ನು ಅರಿತ ಜಾಣೆ ಲಕ್ಷ್ಮಿ, ಚಂದಲೆಯ ಕೈಯನ್ನು ತನ್ನ ಕೈಗೆ ತೆಗೆದುಕೊಂಡು, ತನ್ನೆಡೆಯ ಮೇಲೆ ಇರಿಸಿಕೊಂಡಳು, 'ನನ್ನ ತಂಗಿಯೆಂದೇ ಇವಳನ್ನು ಕಾಣುತ್ತೇನೆ' ಎಂಬ ಭಾವದಿಂದ. ತಾಯಿಯ ಕೊನೆಯ ಆಶೆಯೂ ಅದೇ ಇದ್ದಿತು. ಈಗ ಅದು ಪೂರ್ಣವಾಯಿತು. ಮಾಚಿಕಬ್ಬೆ ತಮ್ಮ ಎಲ್ಲ ಕೆಲಸ ತೀರಿತೆಂದು ಕಣ್ಣುಗಳನ್ನು ಕೊನೆಯ ಸಲ ಮುಚ್ಚಿಕೊಂಡರು. ಮಕ್ಕಳಿಬ್ಬರೂ ತಾಯಿಯ ಪಾದಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡರು. ಎರಡು ಮೂರು ನಿಮಿಷಗಳ ಕಾಲ ಮಾಚಿಕಬ್ಬೆ ತುಟಿ ಅಲುಗಿಸುತ್ತಿದ್ದುದನ್ನು ಕಂಡು, ಅವ್ವೆ ಜಿನಸ್ಮರಣೆ ಮಾಡುತ್ತಿದ್ದಾರೆಂದು ಅವರೆಲ್ಲ ಅಂದುಕೊಂಡರು. ಅವರು ನೋಡುತ್ತಿದ್ದಂತೆ ಮಾಚಿಕಬ್ಬೆಯವರ ಮೈ ಸ್ವಲ್ಪ ಮಾತ್ರ ಅಲುಗಿದಂತಾಗಿ, ತಲೆ ಒಂದು ಪಾರ್ಶ್ವಕ್ಕೆ ಜೋತು ಬಿದ್ದಿತು. ಆ ಕ್ಷಣವೇ ಮಾಚಿಕಬ್ಬೆಯವರ ಆತ್ಮ ದೇಹಮುಕ್ತವಾಯಿತು. ಮಕ್ಕಳಿಬ್ಬರ ಕಣ್ಣುಗಳಲ್ಲಿ ನೀರು ಧಾರೆಯಾಯಿತು. ಪ್ರಭುಗಳ ಕೊನೆಕಣ್ಣುಗಳಲ್ಲಿಯೂ ನೀರು ಕಾಣಿಸಿಕೊಳ್ಳಲು, ಅವರು ಅದನ್ನು ವಸ್ತ್ರದಿಂದ ಒರಸಿಕೊಂಡರು. ಬಹುಶಃ ಅತ್ತೆಯವರು ತಮ್ಮಿಬ್ಬರ ಬರವನ್ನೇ ನಿರೀಕ್ಷಿಸುತ್ತ ಜೀವವನ್ನು ಬಿಗಿಹಿಡಿದಿಟ್ಟುಕೊಂಡಿದ್ದರೊ ಎನ್ನಿಸಿತು ಪ್ರಭುಗಳಿಗೆ. ಅದೇ ಕ್ಷಣದಲ್ಲಿ ದೇವಿಯರೂ ಪ್ರಭುಗಳೊಡನೆ ಅದೇ ಮಾತುಗಳನ್ನು ಅಂದರು. ಭಗವಂತ ಆ ಪರಿಶುದ್ಧಾತ್ಮಳ ಅಂತಿಮ ಪ್ರಾರ್ಥನೆಯನ್ನೂ ನಡಸಿಕೊಟ್ಟ.

ಅನಂತರ ಪ್ರಭುಗಳು ಸ್ಥಳದ ಅಧಿಕಾರಿಗಳನ್ನು ಕರೆಯಿಸಿ, ಮುಂದಿನ ಕಾರ್ಯಕ್ರಮಗಳಿಗೆ ಆಜ್ಞೆಮಾಡಿದರು.

ಕ್ಷಿಪ್ರದಲ್ಲಿ ಚಿತೆ ಸಿದ್ಧವಾಯಿತು. ಮಾಚಿಕಬ್ಬೆಯವರ ಕಳೇಬರಕ್ಕೆ ಚಿತಾರೋಹಣವಾಯಿತು. ಮಕ್ಕಳಿಬ್ಬರೂ ಮಾಚಿಕಬ್ಬೆಯವರ ದೇಹಕ್ಕೆ ಮಂಗಳದ್ರವ್ಯಗಳನ್ನಿಟ್ಟರು. ಚಿತೆಗೆ ಬಲವಂದು ನಮಸ್ಕರಿಸಿದರು. ಪ್ರಭುಗಳು ಸ್ನಾನಮಾಡಿ, ಏಕವಸ್ತ್ರಧಾರಿಗಳಾಗಿ 'ದೈವ ತನ್ನ ಭಾಗಕ್ಕೆ ಈ ತಾಯಿಯ

ಅಂತ್ಯಸೇವೆಯನ್ನಾದರೂ ಕರುಣಿಸಿತಲ್ಲ' ಎಂದುಕೊಂಡು, ಅಗ್ನಿಯನ್ನು ಹಿಡಿದು ಚಿತೆಗೆ ಬಲವಂದು, ಅಗ್ನಿಸ್ಪರ್ಶ ಮಾಡಿಸಿದರು. ಮಾಚಿಕಬ್ಬೆಯ ಭೌತದೇಹ ಬೆಂದು ಭಸ್ಮವಾಯಿತು.

ಪ್ರಭುಗಳು ಆ ರಾತ್ರಿ ಆ ಊರಲ್ಲಿ ಇದ್ದು, ಮರುದಿನ ಪ್ರಾತಃಕಾಲ ಸ್ನಾನ ಮುಗಿಸಿ, ಚಿತಾಗ್ನಿಯನ್ನು ಶಾಂತಮಾಡಿ, ಉತ್ತರಕೈಂಕರ್ಯಗಳನ್ನು ನಡೆಯಿಸಿ, ಅನಂತರ ಶಾಂತೀಶ್ವರ ಬಸದಿಗೆ ಬಂದು ಅತ್ತೆಯವರ ಹೆಸರಿನಲ್ಲಿ ವಿಶೇಷ ದಾನಧರ್ಮಗಳನ್ನು ನಡಸಿ, ಅತ್ತೆಯವರ ಹೆಸರಿನಲ್ಲಿ ಶಾಂತೀಶ್ವರನಿಗೆ ಅಖಂಡ ದೀಪವನ್ನು ಏರ್ಪಡಿಸಿದರು. ಎಲ್ಲವೂ ಆದ ಮೇಲೆ, ದೇವಿಯರೊಡನೆ, ಚಂದಲೆಯೊಡನೆ, ರಥವನ್ನೇರಿ ದ್ವಾರವತಿಗೆ ಪ್ರಯಾಣ ಬೆಳಸಿ, ರಾತ್ರಿ ಹೊತ್ತಾದ ಮೇಲೆ ರಾಜಧಾನಿಯನ್ನು ಸೇರಿದರು. ಎಲ್ಲರ ಮನಗಳಲ್ಲೂ ದುಃಖ ಆವರಿಸಿದ್ದುದರಿಂದ, ದಾರಿಯಲ್ಲಿ ಯಾರೂ ಯಾರೊಡನೆಯೂ ಹೆಚ್ಚು ಮಾತನಾಡಲಾಗಲಿಲ್ಲ. ಪ್ರಭುಗಳು ಮಾತ್ರ ದೀರ್ಘಾಲೋಚನೆಯಲ್ಲಿ ಕುಳಿತಿದ್ದರು. ಚಂದಲೆಯ ಹೃದಯದಲ್ಲಿ, ದೇವಿಯರ ಹೃದಯದಲ್ಲಿ, ದುಃಖ ತುಂಬಿದ್ದಿತು. ಪ್ರಭುಗಳು ಈ ಎಂಟು ಹತ್ತು ದಿನಗಳಲ್ಲಿ ನಡೆದ ಸಾವುನೋವುಗಳನ್ನೂ ಇತರ ಸಂಗತಿಗಳನ್ನೂ ದಾರಿಯುದ್ದಕ್ಕೂ ನೆನೆದುಕೊಳ್ಳುತ್ತ, ಪ್ರಯಾಣ ಮಾಡಿದರು.

§

ರಾಜಧಾನಿಗೆ ಬಂದಮೇಲೆ ಎಲ್ಲರೂ ಶುದ್ಧಸ್ನಾನಮಾಡಿ, ನಾರಾಯಣನಿಗೆ ನಮಸ್ಕರಿಸಿ, ಅಲ್ಪಾಹಾರವನ್ನು ಸ್ವೀಕರಿಸಿದರು. ಪ್ರಭುಗಳು ನಿದ್ದೆ ಬರುವವರೆಗೂ ಚಂದ್ರಶಾಲೆಯಲ್ಲಿ ಬಂದು ಕುಳಿತರು. ಸ್ವಲ್ಪ ಹೊತ್ತಾದ ಮೇಲೆ ಪ್ರತೀಹಾರಿಯೊಬ್ಬಳನ್ನು ಕರೆದು 'ದೇವಿಯರಿಗೆ ನಾವು ಕರೆದೆವೆಂದು ಹೋಗಿ ತಿಳಿಸು' ಎಂದು ಹೇಳಿ ಕಳಿಸಿದರು.

ಚಂದಲೆಯೊಡನೆ ಮಾತನಾಡುತ್ತ ಕುಳಿತಿದ್ದ ಲಕ್ಷ್ಮೀದೇವಿ ಪ್ರಭುಗಳ ಕರೆಯನ್ನು ಕೇಳಿ, ಚಂದಲೆಗೆ 'ಮಲಗಿ ನಿದ್ರಿಸು, ತಂಗಿ' ಎಂದು ಹೇಳಿ, ಪ್ರಭುಗಳ ಬಳಿಗೆ ಬಂದು ನಮಸ್ಕರಿಸಿ ಕುಳಿತಳು. ಪ್ರಭುಗಳು ಬಹು ಯೋಚನೆಯಲ್ಲಿರುವುದನ್ನು ಮುಖಭಾವದಿಂದ ಅರಿತಳು. ಮಾತಿಗೆ ತಾನೇ ಮೊದಲು ಮಾಡಿ 'ಪ್ರಭು, ಚಂದಲೆಯೊಡನೆ ಮಾತನಾಡುತ್ತಿದ್ದೆ. ಅವ್ವೆ ಹೋದುದು ಅವಳಿಗೆ ಬಹು ದುಃಖವಾಗಿದೆ' ಎಂದಳು.

'ನಿನಗೆ ದುಃಖವಿಲ್ಲವೆ ಶಾಂತಲೆ? ನಿನ್ನ ದುಃಖಕ್ಕಿಂತ ಹೆಚ್ಚೆ ಅವಳದು?'

'ದುಃಖವಿಲ್ಲವೆ ಪ್ರಭು? ಪ್ರಪಂಚದಲ್ಲಿ ತಾಯಿಗಿಂತ ಬಂಧು ಇದ್ದಾರೆಯೆ? ನನ್ನ ಅವ್ವೆಗೆ ಎಲ್ಲರ ಮೇಲೆಯೂ ಸಮಾನ ಪ್ರೀತಿವಿಶ್ವಾಸಗಳಿದ್ದುವು. ನನ್ನ ಮೇಲಿದ್ದಷ್ಟೆ ಲಕ್ಷ್ಮಿಯ ಮೇಲೂ ಇದ್ದಿತು. ಈಗ ಚಂದಲೆಯನ್ನೂ ಅಷ್ಟೇ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದರು. ನಾನೂ ಲಕ್ಷ್ಮಿಯೂ ಅರಮನೆಗೆ ಬಂದಮೇಲೆ, ಅವ್ವೆಗೆ ಮನೆ ಬರಿದಾಯಿತು, ಮನ ಬರಿದಾಯಿತು. ಆಗ ದೈವವೆ ಅವ್ವೆಗೆ ಚಂದಲೆಯನ್ನು ತಂದುಕೊಟ್ಟಿತು. ಅದು ಯಾವ ಗತಜನ್ಮಗಳ ವಾಸನೆಯೊ ಏನೊ! ಚಂದಲೆಗೆ ನನ್ನದಾಗಿದ್ದ ವಸ್ತುಗಳಲ್ಲಿ ಅದರ ವಿಶ್ವಾಸಗಳು ಹೆಚ್ಚಿದುವು. ನನ್ನ ಉಪಾಸ್ಯದೇವತೆ ಶಾರದೆಯಲ್ಲಿ ಅವಳಿಗೆ ಭಕ್ತಿಯುಂಟಾಗಿ, ದಿನೇದಿನೇ ಅದು ವೃದ್ಧಿಯಾಯಿತು. ಅವ್ವೆ ಹೇಳುತ್ತಿದ್ದರು: 'ನೀನು ಉಡುತ್ತಿದ್ದ, ತೊಡುತ್ತಿದ್ದ ಬಟ್ಟೆಗಳನ್ನು ಅತ್ಯಾದರದಿಂದ, ವಿಶ್ವಾಸದಿಂದ, ಉಟ್ಟು ತೊಡುತ್ತಾಳೆ' ಎಂದು. ನಾನು ಬಳಸುತ್ತಿದ್ದ ವಸ್ತುಗಳೆಲ್ಲ ಅವಳಿಗೆ ಪ್ರಿಯವಾದುವು. ಅವ್ವೆಯೂ ಅಯ್ಯನೂ ಎಲ್ಲವನ್ನೂ ದಾನಧರ್ಮಮಾಡಿದಾಗ ನನ್ನದಾಗಿದ್ದ ವಸ್ತ್ರಾದಿಗಳನ್ನು ತಾನು ಬೇಡಿ ತೆಗೆದುಕೊಂಡಳಂತೆ. ಈಗ ಶಾರದೆಯ ಆರಾಧನೆಯಲ್ಲಿ ಅವಳ ಚಿತ್ತ ಮಗ್ನವಾಗಿದೆ. ದೇವಿಯನ್ನು ಪೂಜಿಸದೆ, ಧ್ಯಾನಿಸದೆ, ಊಟವಾಗಲಿ, ನಿದ್ರೆಯಾಗಲಿ ಇಲ್ಲ. ಪ್ರಭು, ಅವ್ವೆ ಅವಳನ್ನು ನಿಮ್ಮ ಕೈಯಲ್ಲಿಟ್ಟಿದ್ದೂ, ನೀವು ಅವಳನ್ನು ಪರಿಗ್ರಹಿಸಿದುದೂ ನನಗೆ ಬಹು ತೃಪ್ತಿ.'

'ದೇವಿ, ನಿನ್ನ ಮನಸ್ಸು ಬಹು ವಿಶಾಲ, ಬಹು ಆಳ. ನಿನ್ನ ಅವ್ವೆ ಅವಳನ್ನು ನನ್ನ ಕೈಯಲ್ಲಿಡುವುದಕ್ಕಾಗಿಯೆ ಉಸಿರನ್ನು ಹಿಡಿದಿಟ್ಟಿದ್ದರು. ಅದಕ್ಕಾಗಿಯೆ ದೈವವು ಅದುವರೆಗೂ ನಿನ್ನ ಅವ್ವೆಯನ್ನು ಉಳಿಸಿತ್ತು ಎನ್ನೋಣ. ಹೇಳು ದೇವಿ, ನೀನು ಸತ್ತು ಬದುಕಿದವಳು. ಹಲವಾರು ರಹಸ್ಯಗಳು ನಿನ್ನ ಅನುಭವಕ್ಕೆ ಬಂದಿರಬೇಕು. ನಾನು ಅದನ್ನು ಕೇಳಬಹುದೊ, ಕೇಳಕೂಡದೊ! ತಿಳಿದುಕೊಳ್ಳಬೇಕೆಂದು ಮನಸ್ಸು ಆತುರಪಡುತ್ತಿದೆ. ನಾನು ತಿಳಿಯಬಹುದಾಗಿದ್ದರೆ ಹೇಳು, ದೇವಿ. ಪ್ರಪಂಚದಲ್ಲಿ ಬದುಕುಸಾವುಗಳೆ ಒಂದು ಮಹಾ ವಿಚಿತ್ರ, ಒಂದು ಮಹಾ ರಹಸ್ಯ. ಒಂದೊಂದು ಮತವೂ ಒಂದೊಂದು ವಿಧವಾಗಿ ಹೇಳುತ್ತದೆ. ಒಬ್ಬೊಬ್ಬ ಮತಾಚಾರ್ಯರೂ ಒಂದೊಂದು ರೀತಿಯ ಅಭಿಪ್ರಾಯಪಡುತ್ತಾರೆ. ಎಲ್ಲರೂ ಮಹಾತ್ಮರೆ. ಯಾರನ್ನು ನಂಬುವುದು? ಯಾವು

ದನ್ನು ನಂಬುವುದು? ನನ್ನ ಮನಸ್ಸಿಗೂ ಏನೇನೊ ಹೊಳೆಯುತ್ತದೆ. ದೇವಿ, ನೀನು ಏನು ಕಂಡೆ? ನಿನ್ನ ಅನುಭವವೇನು? ಸತ್ತಮೇಲೆ ಏನಾಯಿತು?'

'ದೇವ, ನನ್ನ ಆತ್ಮಕ್ಕೆ ಯಾವ ನೋವೂ, ಯಾವ ತೊಂದರೆಯೂ ಆಗ ಲಿಲ್ಲ. ದೇಹ ಮಾತ್ರ ಪುಡಿಪುಡಿಯಾಯಿತು. ಆಗ ಅದು ಆತ್ಮದ ವಾಸಕ್ಕೆ ಅಯೋಗ್ಯವಾಯಿತು.'

'ಶಾಂತಲೆ, ಶರೀರ ಅಳಿದ ಮೇಲೆ ನೀನು ಯಾವ ರೂಪದಲ್ಲಿದ್ದೆ? ಎಲ್ಲಿದ್ದೆ?'

'ನನ್ನ ಶರೀರವು ಅಳಿದಾಗ ನನ್ನ ಆತ್ಮ ಕಣ್ಣು ಇಲ್ಲದೆ ನೋಡಬಲ್ಲುದೂ ಕಿವಿ ಇಲ್ಲದೆ ಕೇಳಬಲ್ಲುದೂ ಗಾಳಿಯೊಡನೆ ಗಾಳಿಯಾಗಿ ಮನೋವೇಗದಿಂದ ಚಲಿಸಬಲ್ಲದೂ ಆಯಿತು. ಸೂಕ್ಷ್ಮಕ್ಕಿಂತ ಸೂಕ್ಷ್ಮವಾಯಿತು. ಶೀತೋಷ್ಣ ಗಳ ಬಾಧೆಗಳು ಅದಕ್ಕೆ ಇರಲಿಲ್ಲ. ಹಸಿವು ತೃಷೆಗಳು ಅದಕ್ಕೆ ಇರಲಿಲ್ಲ. ನಿದ್ದೆ ಯಿಂದ ಎದ್ದವಳಂತೆ ಸುಖವಾಗಿ ಬೇರೊಂದು ಲೋಕದಲ್ಲಿ ಎದ್ದೆ. ನಾನು ಅಲ್ಲಿದ್ದೆ. ಆತ್ಮಗಳ ಲೋಕವದು.'

'ಕಾಲಪರಿಮಿತಿಯೂ ಇಲ್ಲವೆ? ಗಾಳಿಯಲ್ಲಿ ಬೆರೆತುಹೋಗಬಲ್ಲುದೆ!'

'ಹೌದು ಪ್ರಭು. ಆದರೆ ಮುಂದೆ ಏನಾಗುವುದೆಂಬುದು ನನ್ನ ಆತ್ಮಾನು ಭವಕ್ಕೆ ಬರಲಿಲ್ಲ. ಇಹಜೀವಿತದ ನನ್ನ ಆಯುರ್ಮಾನ ಪೂರ್ಣವಾಗದಿದ್ದುದ ರಿಂದ ಹಾಗಾಯಿತೇನೊ! ನಿಮ್ಮ ಸಾಮೀಪ್ಯಕ್ಕೇ ಹಂಬಲಿಸಿಹೋಯಿತು ನನ್ನ ಆತ್ಮ. ನಿಮ್ಮ ಸಾಮೀಪ್ಯ ಒಂದನ್ನು ಬಿಟ್ಟು ನನಗೆ ಯಾವುದೂ ಬೇಡವಾ ಯಿತು. ನನ್ನ ತಂಗಿ ಮಾತ್ರ ಆ ಸಮಯಕ್ಕೆ ಬಾರದೆ ಇದ್ದಿದ್ದರೆ ಮುಂದೆ ಏನೇ ನಾಗುತ್ತಿತ್ತೊ? ಅದೃಷ್ಟವಾದ ದೈವೀಶಕ್ತಿಯೇ ಲಕ್ಷ್ಮಿಯನ್ನೂ ಆ ಸಮಯಕ್ಕೆ ಕರೆತಂದಿತು. ದೇವ! ಪ್ರೇಮವಿಶ್ವಾಸಗಳೇ ಆತ್ಮಕ್ಕೆ ಅನ್ನ. ಆದರಿಂದಲೆ ಅದು ವರ್ಧಿಸಬೇಕು.'

'ದೇವಿ, ನಿನ್ನಿಂದ ನಾನು ಬಹು ಉಪಕೃತನಾಗುತ್ತಿದ್ದೇನೆ. ನನ್ನ ಉದ್ಧಾರಕ್ಕಾಗಿ ನಿನ್ನ ಆತ್ಮ ಲಕ್ಷ್ಮಿಯ ದೇಹವನ್ನು ಪ್ರವೇಶಿಸಿತು. ಅದರಿಂದ ಲಕ್ಷ್ಮಿಗೆ ಏನೂ ಬಾಧೆ ಆಗಲಿಲ್ಲವಷ್ಟೆ? ಆಗುತ್ತಿಲ್ಲವಷ್ಟೆ?'

'ಇಲ್ಲ ಪ್ರಭು. ನನ್ನ ತಂಗಿಗೆ ನಾನು ಬಾಧೆ ಕೊಡುವೆನೆ! ನಮ್ಮಿಬ್ಬರ ಆತ್ಮ ಗಳೂ ಗಾಳಿಯೊಡನೆ ಗಾಳಿ, ನೀರೊಡನೆ ನೀರು ಬೆರೆದಂತೆ ಬೆರೆತುಹೋಗಿವೆ.'

'ಇದು ವಿಚಿತ್ರವಾದ ಮಾತು. ಆತ್ಮಗಳು ಒಂದನ್ನೊಂದು ಅರಿತು

ನಡೆದುಕೊಂಡರೆ, ಸಮಾನ ಪ್ರೀತಿ ವಿಶ್ವಾಸಗಳನ್ನು ಬೆಳಸಿಕೊಂಡರೆ, ಒಂದೆ ಆತ್ಮವಾಗಬಲ್ಲುದೆ!'

'ನನಗೆ ಹಾಗೆನ್ನಿಸುವುದು. ಈ ಅನಂತಾನಂತ ಆತ್ಮಗಳೆಲ್ಲ ಒಂದೇ ಪರಮಾತ್ಮದ ಬಹುರೂಪಗಳೆಂದು ನನ್ನ ನಂಬಿಕೆ. ಪರಸ್ಪರ ಪ್ರೇಮವಿಶ್ವಾಸಗಳೆ ಇದಕ್ಕೆ ಆಧಾರ. ವಿಷಯವಾಸನೆಗಳಿಂದ, ಅವಿದ್ಯೆಯಿಂದ, ರುಚಿವೈಚಿತ್ರ್ಯಗಳಿಂದ, ಅರಿಷಡ್ವರ್ಗಗಳ ಪ್ರೇರಣೆ ಪೋಷಣೆಗಳಿಂದ, ಕಾಮನೆಗಳಿಂದ, ವಸ್ತು ವಿಷಯಗಳಿಗೆ ಮನಸ್ಸು ಕೊಟ್ಟಂತೆಲ್ಲ ಮೂಲವನ್ನು ಮರೆತು ಸ್ವೇಚ್ಛಾಕಲ್ಪಿತ ಜಾಲದಲ್ಲಿ ಸಿಕ್ಕಿ ಭಿನ್ನಭಿನ್ನ ರೂಪಗಳಾಗಿ ಪೇಚಾಡುತ್ತಿರುವುವು. ನಾನೂ ಲಕ್ಷ್ಮಿಯೂ ನಿಮ್ಮ ಆತ್ಮದ ಭಿನ್ನರೂಪಗಳೆ. ಇನ್ನು ಮುಂದೆ ನಮ್ಮೆಲ್ಲರ ಆತ್ಮಗಳೂ ಒಂದು ಆಗಲೇಬೇಕು. ಮನೋವಿಕಾರಗಳೂ, ಭ್ರಮೆಗಳೂ ಅಳಿಯಬೇಕು. ಪ್ರೇಮವಿಶ್ವಾಸಗಳ ಪೋಷಣೆಯೊಂದೇ ಇದಕ್ಕೆ ಸಾಧನಮಾರ್ಗ. ಆತ್ಮೀಯತೆಯೇ ಧ್ರುವ. ಇದಕ್ಕೆ ಯಾವ ಅಡ್ಡಿ ಆತಂಕ ಬಾರದಂತೆ ಪೋಷಿಸಿಕೊಳ್ಳಬೇಕು.'

'ದೇವಿ, ನನಗೆ ಇನ್ನೂ ಒಂದು ಸಂದೇಹ ಉಳಿಯಿತು. ನೀನು ನನ್ನ ಸಂಕಟವನ್ನು ಕಂಡು ನನ್ನ ಬಳಿಗೆ ಬಂದಂತೆ, ಇತರ ಆತ್ಮಗಳೂ ಅವುಗಳಿಗಾಗಿ ಪರಿತಪಿಸುವವರ ಬಳಿಗೆ ಏಕೆ ಬಾರವು? ಬಂದು ಏಕೆ ಆನಂದಪಡಿಸಲಾರವು?'

'ಅಲ್ಲಿಗೆ ಹುಟ್ಟು ಸಾವು ಮುಗಿದಂತೆ ಅಲ್ಲವೆ! ಸಾವು ಆತ್ಮದ ಉನ್ನತಿಗಾಗಲಿ, ಅವನತಿಗಾಗಲಿ ಒಂದು ಬಾಗಿಲು. ಸಾವು ಇಲ್ಲದಿದ್ದರೆ ಉದ್ಧಾರ ಎಂತು! ಹೇಗೆ? ನನಗೆ ಇನ್ನೂ ಸ್ವಲ್ಪ ಆಯುಶ್ಯೇಷವಿತ್ತೆಂದು ಕಾಣುತ್ತದೆ. ನಾನು ಹೀಗೆ ನಿಮ್ಮಲ್ಲಿಗೆ ಬಾರದೆ ಇದ್ದಿದ್ದರೆ, ಅದು ಇನ್ನಾವ ರೀತಿಯಲ್ಲಿ ಸವೆಯುತ್ತಿತ್ತೊ ಏನೊ! ಅಷ್ಟರಲ್ಲಿ ನಿಮ್ಮ ಹೃದಯದ ಕರೆ ತಡೆಯಲಾರದಷ್ಟು ಆಯಿತು. ನಿಮ್ಮ ಅಂತಿಮ ನಿರ್ಧಾರಕ್ಕೆ ನನ್ನ ಆತ್ಮ ನಡುಗಿಹೋಯಿತು. ಆಗ ಲಕ್ಷ್ಮಿ ಬರುತ್ತಿದ್ದುದನ್ನು ಕಂಡೆ. ಲಕ್ಷ್ಮಿಯೂ ನನ್ನನ್ನು ಕರೆದಳು. ಆಣೆಯಿಟ್ಟುಕೊಂಡಳು. ನಿಮ್ಮ ಕಡೆಯ ತೀರ್ಮಾನವನ್ನೇ ಅವಳೂ ನಿರ್ಧರ ಮಾಡಿದಳು. ಆಗ ನಾನು ಬಂದೆ. ಲಕ್ಷ್ಮಿ ನಮ್ಮಿಬ್ಬರಿಗಾಗಿಯೆ ಬಂದಳು.'

'ದೇವಿ, ನೀನು ದುಡುಕುವವಳಲ್ಲ. ಆದರೂ . . . ನನ್ನ ಮನಸ್ಸಿಗೆ ಬಹು ಸಂಕಟವನ್ನುಂಟುಮಾಡಿದೆ.'

'ಅನೇಕ ವೇಳೆ ಕೋಪ, ಸುಖ, ದುಃಖಗಳ ಆವೇಶದಲ್ಲಿ ಮನಸ್ಸಿನ

ಹದ ಕೆಡುತ್ತದೆ. ಆತುರ ಅನೇಕ ದೋಷಗಳಿಗೆ, ಪಾಪಕರ್ಮಗಳಿಗೆ ಮೂಲ. ಮಾಡಿದ ಬಳಿಕ ಅವಿವೇಕ ಚೆನ್ನಾಗಿ ಕಂಡುಬರುತ್ತದೆ.'

'ನೀನೇ ಹೇಳುತ್ತಿದ್ದೀಯೆ, ಆತುರದಿಂದ ಸಂಯಮ ಕೆಡುವುದೆಂದು. ನೀನೆ ಆತುರದಿಂದ ವರ್ತಿಸಿದೆಯಲ್ಲವೆ? ಇಷ್ಟೆಲ್ಲವನ್ನೂ ಬಲ್ಲ ನೀನೇ ಹೀಗೆ ಮಾಡಿದೆಯಲ್ಲವೆ?'

'ನನ್ನ ಆತ್ಮದಿಂದ ನನಗೆ ಬೇರಾವ ಸಲಹೆಯೂ ಆಗ ಬರಲಿಲ್ಲ, ಪ್ರಭು. ಈ ಕೃತ್ಯವನ್ನು ನಾನಾಗಿ ಮಾಡಿದೆನೊ, ಅಗೋಚರವಾದ ಇನ್ನಾವ ಶಕ್ತಿಯೇ ಮಾಡಿಸಿತೊ ನಾನರಿಯೆ. ಕೆಲವು ಸಂದರ್ಭಗಳಲ್ಲಿ ಯಾವುದೊ ಅದೃಶ್ಯವಾದ ಶಕ್ತಿಯೆ ನಮ್ಮನ್ನು ಹಿಡಿದು ಮಾಡಿಸುತ್ತದೆ. ಅದರ ಉದ್ದೇಶ ಪರಮಾತ್ಮನಿಗೆ ಒಬ್ಬನಿಗೆ ಬೆಳಕು. ದೈವಜ್ಞರು ಮಾತ್ರ ಇದನ್ನು ಅರಿಯಬಲ್ಲರು.'

'ಹೌದು ದೇವಿ, ಪರಮಾತ್ಮನೊಬ್ಬನಿಗೇ ಬೆಳಕು. ಇಷ್ಟೆಲ್ಲವನ್ನೂ ಹೇಳಿ, ಒಂದು ವಿಷಯವನ್ನು ಮಾತ್ರ ನೀನು ಹೇಳಲಿಲ್ಲ.'

'ಅದು ಯಾವುದು ಪ್ರಭು? ನಿಮ್ಮಿಂದ ಯಾವ ವಿಷಯವನ್ನು ಮುಚ್ಚಿಟ್ಟರೂ, ಅದು ಆತ್ಮವಂಚನೆ ಆಗುವುದು. ನಾನದನ್ನು ಮಾಡೆ.'

'ಹಾಗಿದ್ದರೆ ಹೇಳು, ನೀನು ಏತಕ್ಕೆ ಸತ್ತೆ?'

'ಪ್ರಭು, ನನಗೆ ಸಂತಾನ ಭಾಗ್ಯವಿಲ್ಲ. ನಾನು ಪಟ್ಟಮಹಿಷಿಯಾಗಿರುವಾಗ ಲಕ್ಷ್ಮಿಯನ್ನು ಪಟ್ಟಮಹಿಷಿಯಾಗಿ ಮಾಡಿಕೊಳ್ಳಲಾಗುವುದಿಲ್ಲವೆಂದಿರಿ. ನನ್ನ ಮನಸ್ಸು ಆಗ ಬಹು ಸಂಕಟಕ್ಕಿಟ್ಟುಕೊಂಡಿತು. ಆದರೂ ಕುವರನನ್ನು ಯುವರಾಜ ಪದವಿಗೆ ತಂದುಕೊಳ್ಳೋಣವೆಂದು ನೀವು ಹೇಳಿದ ಮೇಲೆ ನನ್ನ ಸಂಕಟ ನಿಶ್ಶೇಷವಾಯಿತು. ನನ್ನ ತಮ್ಮನ ಗುಣಗಳನ್ನು ನಾನು ಮೆಚ್ಚಿಕೊಂಡೆ. ನನ್ನ ಹೊಟ್ಟೆಯಲ್ಲೇ ಒಂದು ಗಂಡುಮಗುವಾದರೂ, ಕುವರನ ಉದಾತ್ತ ಗುಣಗಳು ಅವನಿಗೆ ಬರುವುದೆ? ಒಂದು ವೇಳೆ ಬಾರದಿದ್ದರೊ? ಎಂಬ ಸಂದೇಹ ಹುಟ್ಟಿ, ಕುವರನನ್ನೇ ಯುವರಾಜ ಪದವಿಗೆ ತಂದುಕೊಳ್ಳುವುದೆಂದು ನನ್ನ ಮನಸ್ಸೂ ಸಂಪೂರ್ಣವಾಗಿ ಒಪ್ಪಿತು. ಆದರೆ ನಾವು ಯಾರೂ ರಾಜಧಾನಿಯಲ್ಲಿಲ್ಲದಾಗ, ಕುವರ ನಮ್ಮಲ್ಲಿ ಯಾರನ್ನೂ ಕೇಳದೆ, ತಾನಾಗಿ ಗರುಡನಾಗಿಬಿಟ್ಟ. ಅದೇ ದಿನ ತಾನೂ ಸಹಗಮಿಸುವೆನೆಂದು ಸೋವಲೆ ಕಂಕಣ ತೊಟ್ಟಳು. ಕುವರನ ಆರು ಜನ ಸ್ನೇಹಿತರೂ, ನಾಯಕರೂ, ಸ್ನೇಹಿತನೊಡನೆ ತಾವೂ

ಹೋಗುವುದೆಂದು ಕಂಕಣ ತೊಟ್ಟರಂತೆ. ಕುವರನು ಗರುಡನಾದುದರಿಂದ ನನ್ನ ಮನಸ್ಸಿಗೆ ಅವನು ತಪ್ಪಿತಸ್ಥನೇನೂ ಆಗಲಿಲ್ಲ. ಅಮೃತದಂತಹ ಅವನ ಮನಸ್ಸನ್ನು ಸರ್ವಥಾ ಅಭಿನಂದಿಸಬೇಕಾದುದೇ. ಆದರೆ ನಿಮ್ಮಂತೆ ದೇಶದ ಹಿತ ಚಿಂತನೆಯಲ್ಲಿ ಮಗ್ನಳಾಗಿದ್ದ ನನಗೆ, ಕುವರನ ಎಡದ ಕಾಲಿನಲ್ಲಿದ್ದ ಗರುಡನ ಅಂಕಿತದ ತೊಡವನ್ನು ಕಂಡ ಕ್ಷಣವೆ ಎದೆಯೊಡೆಯುವಂತಾಯಿತು. ಬಹು ಸಂಕಟಪಟ್ಟೆ, ಬಹು ಸಂಕಟಪಟ್ಟೆ. 'ದೇಶಕ್ಕೆ ಮುಂದೇನು ಗತಿ!' ಎಂಬ ಭಯವೊಂದು ಆಗ ನನ್ನ ಎದೆಯಲ್ಲಿ ಹುಟ್ಟಿತು. ನನ್ನ ತಂಗಿಗೆ ಪುತ್ರಯೋಗ ಉಂಟೆಂದು ನನಗೆ ಮೊದಲಿಂದಲೂ ನಂಬಿಕೆ. ದತ್ತು ತೆಗೆದುಕೊಳ್ಳೋಣ ವೆಂದರೆ ಅಂತಹ ಮಕ್ಕಳು ಯಾರೂ ನನ್ನ ಮನಸ್ಸಿಗೆ ಕಾಣಬರಲಿಲ್ಲ. ಕುವರ ನನ್ನು ಬಿಟ್ಟರೆ ಬೊಪ್ಪಣನೊಬ್ಬನೆ ನನ್ನ ಮನಸ್ಸಿಗೆ ಬಂದವನು. ಆಗ ನನಗೆ ಇನ್ನೊಂದು ಭಯ ತಲೆದೋರಿತು. ಲಕ್ಷ್ಮಿಗೆ ಒಂದು ವೇಳೆ ಗಂಡುಮಗುವಾದರೆ, ಅದು ನಿಮ್ಮ ರಕ್ತವೇ ಆದರೂ ಆ ಸಂತತಿಗೆ ಸ್ಥಾನಮಾನಗಳಿಲ್ಲದೆ ಹೋಗುವು ದಲ್ಲಾ, ಮುಂದಕ್ಕೆ ರಾಜ್ಯಲೋಭದಿಂದ ಇವರಿಬ್ಬರಿಗೂ ಹೊಡೆದಾಟವಾದರೆ? ಆದ್ದರಿಂದ ಈ ಯೋಚನೆಗೂ ನನ್ನ ಮನಸ್ಸು ಒಡಂಬಡಲಿಲ್ಲ. ಏಕೆಂದರೆ, ಒಂದು ವೇಳೆ ಉದ್ಭವಿಸಬಹುದಾದ ಈ ತೊಡಕನ್ನು ಬಿಡಿಸುವುದಕ್ಕೆ ನೀವಾಗಲಿ ನಾನಾಗಲಿ ಅದುವರೆಗೆ ಇರುವೆವೆಂಬ ನಂಬಿಕೆಯೇನು? ನಾನಂತೂ 'ನಿಮ್ಮೊ ಡನೆ ಇರುವವಳೆ, ನಿಮ್ಮೊಡನೆ ಬರುವವಳೆ' ಎಂದು ಎಂದೊ ನಿರ್ಧರಿಸಿಯಾ ಗಿತ್ತು. ಆದ್ದರಿಂದ ಈ ಎಲ್ಲ ಸಮಸ್ಯೆಗಳ ಬಗೆಹರಿಸಲು ನನಗೆ ಉಳಿದುದು ಒಂದೇ ಮಾರ್ಗ. ನನ್ನ ತಂಗಿ ಪಟ್ಟಮಹಿಷಿಯಾಗಲೆಂದು ನಾನು ನನ್ನ ದೇಹವನ್ನು ತೊರೆಯಲು ನಿರ್ಧರಿಸಿದೆ. ನಮ್ಮ ವಂಶಾಭಿವೃದ್ಧಿಗಾಗಿ, ದೇಶಹಿತಕ್ಕಾಗಿ ಆತ್ಮಾ ರ್ಪಣೆ ಮಾಡಿಕೊಂಡೆ. ಇದು ನಿಮ್ಮ ಮನಸ್ಸಿಗೆ ತಪ್ಪೆಂದು ತೋರುವುದೆ?'

'ಇದು ತಪ್ಪೆಂದು ಹೇಗೆ ಹೇಳಲಿ? ಹೇಗೆ ಹೇಳದೆ ಇರಲಿ? ನೀನು ಹೋದಮೇಲೆ ಯಾರು ಇರುತ್ತಿದ್ದರು? ನಿನ್ನನ್ನು ಕಣ್ಣಿಗೆ ಒತ್ತಿಕೊಳ್ಳಬೇಕೆಂಬ ಆಶೆಯಾಗುವುದು. ನಿನ್ನ ಹೃದಯ ಎಷ್ಟು ದೊಡ್ಡದು, ಶಾಂತಲೆ!'

'ನೀವು ನನಗೆ ಸರ್ವವಿಧದಲ್ಲಿಯೂ ಹಿರಿಯರು. ನಿಮ್ಮ ಕೈಹಿಡಿದು ನಾನು ದೊಡ್ಡವಳಾದೆ.'

'ಅಯ್ಯೊ, ಯಾರೂ ಯಾರ ಕೈಹಿಡಿದೂ ದೊಡ್ಡವರಾಗುವುದಿಲ್ಲ.

ಬೆಳೆಯುವ ಪೈರು ನೋಳಕೆಯಲ್ಲೆ ಕಾಣುತ್ತದೆ. ಹಿರಿಮೆ ಚಿಕ್ಕತನದಲ್ಲಿಯೆ ತೆರೆದು ಕಾಣುತ್ತದೆ. ಅಧಿಕಾರ ಅಂತಸ್ತುಗಳಲ್ಲಿ ಹೆಚ್ಚಾಗಿ ಕಂಡುಬರುವುದು ಹಿರಿಯತನವಲ್ಲ; ಕಿರಿಯತನ, ಸೊಕ್ಕು. ಪ್ರಭುತ್ವವಿರುವಲ್ಲಿ ಹಿರಿಯತನವಿರುವುದು ಸೌಂದರ್ಯಕ್ಕೆ ಸೌಶೀಲ್ಯವೂ ಇರುವಂತೆ; ಬಹು ವಿರಳ.'

'ನನ್ನ ಆತ್ಮಾರ್ಪಣೆಯ ಫಲ ನಾನು ಎಣಿಸಿದಂತೆ ಆಗಲಿಲ್ಲ. ಸಿಡಿಲ ಮೇಲೆ ಸಿಡಿಲೆರಗಿದಂತೆ ನೀವೇ ದೇಹವನ್ನು ತೊರೆಯುವ ಸಂದರ್ಭಕ್ಕೆ ಬಂದಿತು. ಆಗ ನನ್ನ ಆತ್ಮ ತಳಮಳಿಸಿಹೋಯಿತು. "ಅಯ್ಯೋ! ನಾನೇನು ಮಾಡಿದೆ? ಏನು ಮಾಡಿದೆ?" ಎಂದು ತಪಿಸಿಹೋದೆ. ಆಗ ಲಕ್ಷ್ಮಿ ಬರುತ್ತಿದ್ದುದನ್ನು ಕಂಡೆ, ನನ್ನ ತಂಗಿ ಬರುತ್ತಿದ್ದುದನ್ನು ಕಂಡೆ, ದೈವವೇ ನನ್ನ ರಕ್ಷಣೆಗೆ ಬರುತ್ತಿದ್ದುದನ್ನು ಕಂಡೆ. ಲಕ್ಷ್ಮಿ ಬರುವುದು ಸ್ವಲ್ಪ ಸಾವಕಾಶವಾಗಿದ್ದರೆ, ಕೆಲವೇ ನಿಮಿಷ ತಡವಾಗಿದ್ದರೆ, ಏನೇನು ನಡೆದುಹೋಗುತ್ತಿತ್ತೊ! ನಿಮ್ಮ ಪೂಜೆಯನ್ನೂ ಭಕ್ತಿಯನ್ನೂ ಒಪ್ಪಿಕೊಂಡ ಆ ವಿಜಯನಾರಾಯಣನಿಂದ . . . ಇನ್ನು ಹತ್ತು ಸಲವಲ್ಲ, ನೂರು ಸಲ ಹೇಳುತ್ತೇನೆ . . . ಆ ನಾರಾಯಣನೇ ಮಹಾಸಂಕಟವನ್ನು ಗಾಳಿಗೆ ಸಿಕ್ಕಿದ ತೃಣದಂತೆ ಹಾರಿಸಿದ; ಅಗ್ನಿವರ್ಷವನ್ನು ಅಮೃತವರ್ಷವನ್ನಾಗಿ ಮಾಡಿದ ಕರುಣೆ ಅವನದು! ಅವನಲ್ಲದೆ ಯಾರದು!'

'ಚೆನ್ನಾಗಿ ಹೇಳಿದೆ ದೇವಿ, ಬಹು ಚೆನ್ನಾಗಿ ಹೇಳಿದೆ. ಈ ಸಂತೋಷವೆಲ್ಲ ನಿಸ್ಸಂದೇಹವಾಗಿ ವಿಜಯನಾರಾಯಣನದೆ. ನಿನ್ನ ತಂಗಿಗಾಗಿ ಇಷ್ಟು ಕಷ್ಟಪಟ್ಟೆಯ? ನಿನ್ನ ದೇಶಕ್ಕಾಗಿ ಜೀವವನ್ನು ಧಾರೆಯೆರೆದೆಯ? ಶಾಂತಲೆ, ನಿನ್ನ ಹೃದಯ ಇನ್ನು ಆನಂದದಿಂದ ಉಕ್ಕುವಂತೆ ಈ ವಿಷ್ಣುವರ್ಧನನು ಮಾಡುವನು. ನಾರಾಯಣನೆ ಇದಕ್ಕೆ ಸಾಕ್ಷಿ. ಲಕ್ಷ್ಮಿಯನ್ನು ಪಟ್ಟಮಹಿಷಿಯನ್ನಾಗಿ ಮಾಡಿಕೊಳ್ಳುತ್ತೇನೆ, ಅತ್ಯಾನಂದದಿಂದ ಮಾಡಿಕೊಳ್ಳುತ್ತೇನೆ, ಮಹದುತ್ಸವದಿಂದ ಮಾಡಿಕೊಳ್ಳುತ್ತೇನೆ. ನನಗೆ, ನನ್ನ ರಾಜ್ಯಕ್ಕೆ, ನನ್ನ ಶಾಂತಲೆಗೆ . . . ನನ್ನ ಮಹಾಲಕ್ಷ್ಮಿಗೆ ಗಂಡುಮಗುವಾಗುವುದು.'

'ಈಗ ನನಗೆ ಮಹದಾನಂದವಾಯಿತು. ಆ ಉತ್ಸವದಲ್ಲೆ ನನ್ನ ತಂಗಿ ಚಂದಲೆಯನ್ನೂ ಕೈ ಹಿಡಿದು, ನಿಮ್ಮ ಕಿರಿಯ ರಾಣಿಯನ್ನಾಗಿ ಮಾಡಿಕೊಳ್ಳಿರಿ.'

'ಆನಂದದಿಂದ, ಚಂದಲೆಯನ್ನೂ ನಿನ್ನನ್ನೆ ಕರೆಯುತ್ತಿದ್ದಂತೆಯೇ ನಿನ್ನ ಹೆಸರಿಂದಲೆ ಕರೆದು ಮದುವೆಯಾಗುತ್ತೇನೆ.'

ಶಾಂತಲೆಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕುಳಿತಿದ್ದ ಸ್ಥಳ ದಿಂದ ಎದ್ದು ಬಂದು ಆನಂದಪರವಶೆಯಾಗಿ ಪತಿಯನ್ನು ಗಾಢವಾಗಿ ಆಲಿಂಗಿಸಿ ಕೊಂಡಳು. ಪ್ರಭುವೂ ಅಷ್ಟೇ ಆನಂದದಿಂದ ದೇವಿಯನ್ನು ಸ್ವೀಕರಿಸಿದರು.

§

ಮರುದಿನ ಪ್ರಾತಃಕಾಲ ಲಕ್ಷ್ಮೀದೇವಿ ಕೇತಮಲ್ಲನಾಯಕ ಜಕ್ಕಿಯಬ್ಬೆ ಯರನ್ನು ಅರಮನೆಗೆ ಕರಸಿಕೊಂಡು, ತನ್ನ ಅವ್ವೆ ಸಲ್ಲೇಖನವನ್ನು ಕೈಕೊಂಡು, ದೇಹಮುಕ್ತಳಾದ ಸಂಗತಿಯನ್ನು ಅರುಹಿದಳು. ಮಾಚಿಕಬ್ಬೆಯ ಈ ಅಂತ್ಯ ವನ್ನು ಕೇತಮಲ್ಲ ದಂಪತಿಗಳು ಬಲ್ಲವರಾದರೂ ಅದು ಇಷ್ಟು ಬೇಗ ಕೊನೆ ಗಾಣುವುದೆಂದು ಎಣಿಸಿರಲಿಲ್ಲ. ದಂಪತಿಗಳಿಬ್ಬರು ಆಗ ಕೈಮುಗಿದು ಮಾಚಿ ಕಬ್ಬೆಯವರ ಮಹಾ ಆತ್ಮವನ್ನು ನೆನೆದು ವಂದಿಸಿದರು. ಲಕ್ಷ್ಮೀದೇವಿ ತನ್ನ ಮಾತನ್ನು ಮುಂದುವರಿಸಿ, ಮಾಚಿಕಬ್ಬೆಯವರು ತಮ್ಮ ಕೊನೆಯ ವಿಶ್ವಾಸಕ್ಕೆ ಮುನ್ನ ಚಂದಲೆಯ ಕೈಯನ್ನು ಪ್ರಭುಗಳ ಕೈಯಲ್ಲಿಟ್ಟು 'ಇವಳನ್ನೂ ಶಾಂತಲೆ ಯೆಂದೇ ಪರಿಗ್ರಹಿಸಬೇಕು' ಎಂದು ಹೇಳಿದ ವಿಧಾನವನ್ನೂ ಅರುಹಿದಳು. ಕೇತಮಲ್ಲ ದಂಪತಿಗಳಿಗೆ ಏಕಕಾಲದಲ್ಲಿ ಅತ್ಯಾಶ್ಚರ್ಯವೂ, ಅತ್ಯಾನಂದವೂ ಉಂಟಾಯಿತು. ತಮ್ಮ ಮಗಳು ವಿಷ್ಣುವರ್ಧನ ಪ್ರಭುಗಳ ಕೈ ಹಿಡಿಯುವ ಳೆಂದು ಅವರು ನೆನಸಿರಲಿಲ್ಲ. ಅದು ಅವರ ಊಹನೆಗೂ ಮೀರಿದ ಆಶೆ ಯಾಗಿತ್ತು. ಜಕ್ಕಿಯಬ್ಬೆ ಕಣ್ಣುಗಳಲ್ಲಿ ಆನಂದಬಾಷ್ಪಗಳನ್ನು ತಂದುಕೊಂಡು, 'ಹೋದ ಜನ್ಮದಲ್ಲಿ ಮಾಚಿಕಬ್ಬೆ ಅವಳಿಗೆ ತಾಯಿಯಾಗಿರಬೇಕು, ಚಂದಲೆಯೂ ಈ ಜನ್ಮದಲ್ಲಿ ಆಕೆಗೆ ಮಗಳಂತೆಯೆ ನಡೆದುಕೊಂಡಳು' ಎಂದರು. ಕೇತಮಲ್ಲ ನಾಯಕರು, 'ಮೂರು ನಿಮಿಷ ಸೇವೆ ಮಾಡಿದವರನ್ನೂ ಮುಕ್ಕಣ್ಣ ಮರೆಯು ವವನಲ್ಲ, ಜಕ್ಕಿ. ಇದು ನಿನ್ನ ಮಗಳ ಸೌಭಾಗ್ಯ, ಶಿವನ ಕರುಣೆ' ಎಂದರು.

ಮುಂದಿನ ವೈಶಾಖ ಶುದ್ಧ ಅಷ್ಟಮಿ ವಿವಾಹದ ದಿನವೆಂದೂ, ಆ ದಿನವೇ ಲಕ್ಷ್ಮೀದೇವಿಯರು ಪಟ್ಟವನ್ನು ಧರಿಸುವರೆಂದೂ ನಿಶ್ಚಯವಾಯಿತು. ಲಗ್ನದ ದಿನಕ್ಕೆ ಒಂದು ತಿಂಗಳ ಕಾಲವೂ ಇಲ್ಲವಾಯಿತು. ಕೆಲಸಗಳೆಂತೂ ಒಂದು ಬ್ರಹ್ಮಾಂಡದಷ್ಟು ಇದ್ದುವು. ಕೆಲಸದವರಿಗೂ, ಪೌರರಿಗೂ, ಅಧಿಕಾರವರ್ಗ ದವರಿಗೂ, ಒಂದು ತಿಂಗಳ ಕಾಲ ಹೊತ್ತಿಗೆ ಊಟವಿಲ್ಲ, ನಿದ್ದೆಯಿಲ್ಲ ಎಂದಾ

ಯಿತು. ಶಾಂತಲಾ ಮಹಾರಾಣಿಯ ಕಲ್ಯಾಣದ ದಿನಗಳಷ್ಟು ವಿಜೃಂಭಣೆಗೆ ಇದು ಸಮಯವಲ್ಲದಿದ್ದರೂ, ಪ್ರಜೆಗಳ ದುಃಖ ಆರಲೆಂದು ಪ್ರಭುಗಳು ಎಲ್ಲ ಕೆಲಸಕಾರ್ಯಗಳಿಗೂ ಬೊಕ್ಕಸದಿಂದ ಯಥೇಚ್ಛವಾಗಿ ಧನವನ್ನು ಕೊಟ್ಟರು.

ನಿಶ್ಚಿತ ದಿನ, ನಿಶ್ಚಿತ ಲಗ್ನ ಶುಭ ಮುಹೂರ್ತದಲ್ಲಿ ಕಲ್ಯಾಣವು ವರ ಪೂಜೆಯಿಂದ ಮೊದಲಾಯಿತು. ಪ್ರಭುಗಳು ಕನ್ನೆಯ ಹೆಸರನ್ನು 'ಶಾಂತಲೆ' ಎಂಬುದಾಗಿ ಬದಲಿಸಿ ಘೋಷಿಸಿದರು. ಚಂದಲೆ 'ಶಾಂತಲೆ'ಯಾದಳು. ಕೇತ ಮಲ್ಲನಾಯಕರೂ, ಜಕ್ಕಿಯಬ್ಬೆಯರೂ ಪ್ರಭುಗಳ ಕಾಲುಗಳನ್ನು ತೊಳೆದು, ಮಧುಪರ್ಕವಿತ್ತು ಉಪಚರಿಸಿ, ಸರ್ವಾಲಂಕಾರಭೂಷಿತೆಯಾಗಿ ಶಾಂತಲಾ ಮಹಾರಾಣಿಯಂತೆಯೇ ಒಪ್ಪುತ್ತಿದ್ದ ತಮ್ಮ ಮಗಳನ್ನು ಆನಂದದಿಂದ ಪ್ರಭು ಗಳಿಗೆ ಧಾರೆಯೆರೆದಿತ್ತರು. ಪ್ರಜೆಗಳೆಲ್ಲರೂ ಆನಂದಕೋಲಾಹಲ ಮಾಡಿದರು.

ಆ ಸುಮುಹೂರ್ತದಲ್ಲಿಯೆ ಪ್ರಭುಗಳು ಲಕ್ಷ್ಮೀದೇವಿಯನ್ನು ಕೈಹಿಡಿದು ಸಿಂಹಾಸನದ ಮೇಲಿಕ್ಕೆ ಕರೆದು ಕೂಡಿಸಿಕೊಂಡರು. ಕಲ್ಯಾಣಮಂಟಪದಲ್ಲಿದ್ದ ಸಮಸ್ತ ಜನರೂ ಅತ್ಯಾನಂದದಿಂದ, ಏಕಕಂಠದಿಂದ 'ಲಕ್ಷ್ಮೀದೇವಿಯರಿಗೆ, ಮಹಾರಾಣಿ ಲಕ್ಷ್ಮೀದೇವಿಯರಿಗೆ ಜಯವಾಗಲಿ, ವಿಜಯವಾಗಲಿ' ಎಂದು ಕೂಗಿದರು. ಪ್ರಭುಗಳು ಆನಂದದಿಂದ ತಮ್ಮ ಭಾಗ್ಯೇಶ್ವರಿಗೆ, ತಮ್ಮ ಶಾಂತಲೆಗೆ ಪಟ್ಟವನ್ನು ಕಟ್ಟಿದರು. ತಪೋಧನರಾದ ಮಹರ್ಷಿಗಳಿಂದ ಶಾಂತ್ಯು ದಕಗಳ ಅಭಿಷೇಕವಾಯಿತು.

ಪ್ರಭುಗಳೂ ಮಹಾರಾಣಿಯೂ ಅನಂತರ ದಿವ್ಯದುಕೂಲಗಳನ್ನು ಧರಿಸಿ ಬಂದು ಸಿಂಹಾಸನವನ್ನೇರಿ ಕುಳಿತರು. ರಾಜ್ಯಾಧಿಕಾರಿಗಳೂ, ಮಂತ್ರಿಗಳೂ, ಸೇನಾಧಿಪತಿಗಳೂ, ಸಾಮಂತರೂ, ಹೆಗ್ಗಡೆಗಳೂ, ಮಹಾರಾಜರೂ, ಅರಮನೆಗೆ ಸಂಬಂಧಪಟ್ಟವರೂ ಸಿಂಹಾಸನದ ಬಳಿ ಬಂದು, ಮಹಾರಾಣಿಯವರಿಗೂ ಪ್ರಭು ಗಳಿಗೂ ನಮಸ್ಕರಿಸಿ ತಮ್ಮ ಗೌರವ ವಿಶ್ವಾಸಗಳನ್ನು ವ್ಯಕ್ತಪಡಿಸಿದರು.

ಇದು ಮುಗಿದನಂತರ, ನವವಧುವಿನ ಮಾಂಗಲ್ಯಧಾರಣೆಯಾಯಿತು, ಸಪ್ತಪದಿಯಾಯಿತು; ಹವನ ಹೋಮ, ಶಾಂತಿ ಸ್ವಸ್ತಿವಾಚನಗಳೊಂದಿಗೆ ಮದುವೆ ಪೂರ್ಣವಾಯಿತು. ಮದುವೆಗೆ ಆಹ್ವಾನಿತರಾಗಿದ್ದವರಿಗೆ ಉಡುಗೊರೆ ಮರ್ಯಾದೆಗಳೂ, ಇತರರಿಗೆ ಸಂಭಾವನೆಗಳೂ, ಸರ್ವರಿಗೂ ಉತ್ತಮ ಭೋಜನವೂ ಎಂದಿನಂತೆ ಸಮರ್ಪಕವಾಗಿ ನಡೆದವು. ನಾಲ್ಕುದಿನಗಳ ಕಾಲ,

ಅರಮನೆಯಲ್ಲಿ, ರಾಜಧಾನಿಯಲ್ಲಿ ವೈಭವದ ಉತ್ಸವಾದಿಗಳು ಜರುಗಿದುವು.

ಮಹಾರಾಣಿ ಲಕ್ಷ್ಮೀದೇವಿಯೆ ಹಿಂದಿನ ಶಾಂತಲಾದೇವಿಯೆಂಬ ವಿಷಯ ಅಚ್ಯುತ ಗೋವಿಂದರುಗಳಿಗೆ, ಪ್ರಭುಗಳಿಂದಲೆ ಕೇಳಿ ತಿಳಿದಿದ್ದರಿಂದ ಹೇಮಾದ್ರಿಗಳಿಗೆ ಮಾತ್ರವೆ ತಿಳಿದಿದ್ದಿತು. ಅರಮನೆಯಲ್ಲಿದ್ದ ಅಧಿಕಾರವರ್ಗದವರಿಗೆ, ಇತರ ರಾಣಿಯರಿಗೆ, ದಾಸದಾಸಿಯರಿಗೆ ಲಕ್ಷ್ಮೀದೇವಿ, ಹಿಂದಿನ ಲಕ್ಷ್ಮೀದೇವಿಯರಂತೆ ಕಂಡುಬರಲಿಲ್ಲ. ಮಾತಿನಲ್ಲಿ, ನಗೆಯಲ್ಲಿ, ನಡೆಯಲ್ಲಿ, ನೋಟದಲ್ಲಿ, ಸೂಕ್ಷ್ಮದಲ್ಲಿ, ಕೆಲಸಕಾರ್ಯಗಳ ವಿಚಕ್ಷಣೆಗಳಲ್ಲಿ, ಹಿಂದಿನ ಶಾಂತಲಾ ಮಹಾರಾಣಿಯೇ ಆಗಿ ಇದ್ದುದನ್ನು ಇವರೆಲ್ಲ ಕಂಡರಾದರೂ, 'ಪಟ್ಟಕ್ಕೆ ಬಂದ ಇವರೂ ತಮ್ಮ ಅಕ್ಕನನ್ನು ಅನುವರ್ತಿಸುತ್ತಿರುವುದು ಏನಾಶ್ಚರ್ಯ!' ಎಂದುಕೊಂಡು ಸುಮ್ಮನಾದರು.

ಪ್ರಭುಗಳು ಈಗ ಮಹಾರಾಣಿ ಲಕ್ಷ್ಮಿಯನ್ನು ಒಂದು ಗಳಿಗೆಯೂ ಬಿಟ್ಟಿರಲಾರದವರಾದರು. ಏಕಾಂತದಲ್ಲಿ ಕುಳಿತು ಗಂಟೆಗಳ ಕಾಲ, ರಾಜ್ಯಕ್ಕೆ ಸಂಬಂಧಪಟ್ಟ ವಿಷಯಗಳನ್ನೂ ಇತರ ವಿಷಯಗಳನ್ನೂ ಚರ್ಚಿಸುತ್ತಿದ್ದರು. ಬಿಡುವಿದ್ದ ಸಮಯಗಳಲ್ಲಿ ದೇವಿಯರ ವೀಣೆ ನುಡಿಸುವುದನ್ನೂ ಹಾಡುವುದನ್ನೂ ಕೇಳುತ್ತ ಪ್ರಭುಗಳು ಬಹುಕಾಲ ಆನಂದದಿಂದ ಕಳೆಯುತ್ತಿದ್ದರು. ಲಕ್ಷ್ಮಿ ವೀಣೆನುಡಿಸುತ್ತಿದ್ದುದನ್ನು ಪ್ರಭುಗಳು ಹಿಂದೆ ಅನೇಕವೇಳೆ ಕೇಳಿದ್ದರಾದರೂ, 'ಈಗಿನ ನುಡಿಸುವ ಬಗೆ ಲಕ್ಷ್ಮಿಯದಲ್ಲ, ಶಾಂತಲೆಯದು. ಹಾಡುವ ಬಗೆಯೂ ಶಾಂತಲೆಯದೆ' ಎಂದು ಅರಿತರು. ಘೋರವಾದ ಅಂಧಕಾರ ಕಳೆದ ಮೇಲೆ, ಅಷ್ಟೇ ಹೆಚ್ಚು ಬೆಳಕಿನ ದಿನಗಳನ್ನೂ ಕಾಣಬಹುದಷ್ಟೆ! ಪ್ರಭುಗಳ ಜೀವನವೂ ಈಗ ಅಷ್ಟು ಸುಖಮಯವಾಗಿತ್ತು. ಲಕ್ಷ್ಮಿಯೂ ಇದ್ದಳು, ಶಾಂತಲೆಯೂ ಇದ್ದಳು. ಹೊಸ ಶಾಂತಲೆಯೊಬ್ಬಳೂ ಬಂದಿದ್ದಳು. ಪ್ರಭುಗಳು ವರ್ಷಾಕಾಲವನ್ನೆಲ್ಲ ರಾಜಧಾನಿಯಲ್ಲೆ ಕಳೆದರು. ಇನ್ನೊಂದು ವರ್ಷಾಕಾಲವೂ ಮುಗಿಯುವುದರಲ್ಲಿತ್ತು. ಹೊಸ ಶಾಂತಲೆಗೆ, ಅರ್ಥಾತ್ ಚಂದಲೆಗೆ ಒಂದು ಹೆಣ್ಣು ಮಗು ಆಯಿತು. ಮಗುವಿಗೂ 'ಚಿಕ್ಕ ಶಾಂತಲೆ' ಎಂದೇ ಪ್ರಭುಗಳು ಹೆಸರಿಟ್ಟರು. ಎಷ್ಟು ಸಂತೋಷ ಉತ್ಸಾಹಗಳಿದ್ದರೂ, ಕುವರನನ್ನೂ ಸೋವಲೆಯನ್ನೂ ಕಳೆದುಕೊಂಡ ನೋವು ಅವರ ಹೃದಯದ ಒಂದು ಭಾಗದಲ್ಲಿ ಇದ್ದೇ ಇದ್ದಿತು.

## ನಾಲ್ಕನೆಯ ಭಾಗ

§

ಪ್ರಭುಗಳು ಹೀಗೆ ಬಹುದಿನಗಳು ರಾಜಧಾನಿಯಲ್ಲಿ ಕುಳಿತಾಗ ಹಾನಗಲ್ಲಿನ ಕದಂಬರ ಮಲ್ಲಿಕಾರ್ಜುನ, ಹಿಂದಿನ ಯುದ್ಧದಲ್ಲಿ ಶರಣಾಗತನಾಗಿ ಸಾಮಂತತನವನ್ನು ಒಪ್ಪಿಕೊಂಡಿದ್ದವನು ಈಗ ಮೂರನೆಯ ಸಲ ಸ್ವತಂತ್ರನಾಗುವುದಕ್ಕೆ ಹವಣಿಸುತ್ತಿದ್ದ. ಗೋವೆಯ ಕದಂಬರ ಜಯಕೇಶಿ ಈಗ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಅಳಿಯನಾದುದರಿಂದ, ಚಾಲುಕ್ಯರ ಸಕಲ ಸೈನ್ಯಸಹಾಯವನ್ನು ಮಲ್ಲಿಕಾರ್ಜುನನಿಗೆ ಅಗತ್ಯಬಿದ್ದಾಗ ಕೊಡಿಸಿಕೊಡುವೆನೆಂದು ಮಾತುಕೊಟ್ಟಿದ್ದ. ಈ ಧೈರ್ಯಿನೆ, ಮಲ್ಲಿಕಾರ್ಜುನನಿಗೆ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲು ಆಶೆ ತುಂಬಿಸಿತು. ಈಗ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಕಾಲವೂ ಆಗಿಹೋಗಿ, ಮೂರನೆಯ ಸೋಮೇಶ್ವರನ ಕಾಲವೂ ಆಗಿ, ಎರಡನೆಯ ಜಗದೇಕಮಲ್ಲ ಚಾಲುಕ್ಯಭೂಪತಿಯಾಗಿದ್ದ. ಮಲ್ಲಿಕಾರ್ಜುನನಿಗೆ ಈಗ ಈ ಚಾಲುಕ್ಯಭೂಪತಿಯ ಸಹಾಯವೂ ಒಳಒಳಗೆ ಒದಗಿಬಂದಿತು.

ಹಾನಗಲ್ಲಿನಲ್ಲಿ ವಿಷ್ಣುವರ್ಧನನಿಂದ ಸ್ಥಾಪಿತವಾಗಿದ್ದ ಹೊಯಿಸಳ ಸೇನೆಯನ್ನು ಮಲ್ಲಿಕಾರ್ಜುನ ಬೆದರಿಸಿ ಓಡಿಸಿಬಿಟ್ಟ. ಆ ಸೇನೆ ಆಗ ಬಂಕಾಪುರದಲ್ಲಿದ್ದ ಪುನೀಸನ ಬಳಿಗೆ ಓಡಿಬಂದು, ಹಾನಗಲ್ಲಿನಲ್ಲಿ ಆದ, ಆಗುತ್ತಿರುವ ಸಂಗತಿಗಳನ್ನು ಅರಿಕೆಮಾಡಿತು. ಅಷ್ಟರಲ್ಲಿ ಮಲ್ಲಿಕಾರ್ಜುನನ ಸೇನೆ ಬಂಕಾಪುರದ ಗಡಿಯಲ್ಲೂ ಕಾಣಿಸಿಕೊಂಡಿತೆಂಬ ವರದಿ ಪುನೀಸನಿಗೆ ಬಂದಿತು. ಆ ಸುದ್ದಿಯನ್ನು ಪುನೀಸ ತತ್‌ಕ್ಷಣವೆ ದ್ವಾರವತಿಯಲ್ಲಿದ್ದ ಪ್ರಭುಗಳಿಗೆ ಅವಸರದ ಸಮಾಚಾರವಾಗಿ ಕಳಿಸಿಕೊಟ್ಟು, ಒಡನೆ ಬೊಪ್ಪಣನೊಡನೆ ಐದುಸಾವಿರ ಬಲವನ್ನು ಸಹಾಯಕ್ಕೆ ಕಳುಹಬೇಕೆಂದು ಬೇಡಿದ. ಓಲೆ ಬಂದೊಡನೆ ಪ್ರಭುಗಳು ಐದುಸಾವಿರ ಸುಶಿಕ್ಷಿತ ಸೈನ್ಯವನ್ನು ಬೊಪ್ಪಣನೊಡನೆ ಪುನೀಸನ ಸಹಾಯಕ್ಕೆ ಕೊಟ್ಟುಕಳಿಸಿ, ತಾವೂ ದೊಡ್ಡ ಪಡೆಯೊಡನೆ ಹಿಂದೆಯೇ ಬರುವೆವೆಂದು ಹೇಳಿ ಕಳಿಸಿದರು. ಪ್ರಭುಗಳು ಆ ಹೊತ್ತಿನಲ್ಲಿ ಕುವರನನ್ನು ನೆನಸಿಕೊಂಡರು;

'ನೀನೊಬ್ಬನಿದ್ದಿದ್ದರೆ ಈ ಚಾಲುಕ್ಯರ ಬೇರನ್ನು ಅಗೆದು ಬಿಸಾಡುತ್ತಿದ್ದೆ; ನಿನ್ನನ್ನು ಕಳೆದುಕೊಂಡೆನಲ್ಲಾ' ಎಂದು ಮನಸ್ಸಿನಲ್ಲಿಯೆ ಕೊರಗಿದರು.

ಪ್ರಭುಗಳೊಡನೆ ಹದಿನೈದು ಸಾವಿರ ಸೇನೆಯೂ, ಎರಡು ಸಾವಿರ ಕುದುರೆಗಳೂ, ಒಂದು ನೂರು ಆನೆಗಳೂ ಹೊರಡಬೇಕೆಂದು ನಿಶ್ಚಿತವಾಯಿತು. ಇದಕ್ಕಾಗಿ ಸಕಲ ಸಿದ್ಧತೆಗಳೂ ಭರದಿಂದ ಸಾಗಿದವು. ಚಾಲುಕ್ಯರೊಡನೆ ಇದು ಇತ್ಯರ್ಥಯುದ್ಧವೆಂದೇ ನಿಶ್ಚಯಿಸಿ, ಪ್ರಭುಗಳು ಗಡಿಸೀಮೆಗಳಲ್ಲಿದ್ದ, ಅನೇಕ ಯುದ್ಧಗಳಲ್ಲಿ ಪಳಗಿದ್ದ ಸೈನಿಕರನ್ನು ಒಟ್ಟುಗೂಡಿಸಿಕೊಂಡರು. ಈ ಸೈನ್ಯದ ಜೊತೆಗೆ ಇನ್ನೂ ಎರಡು ಸಾವಿರ ರಾವುತರೂ ರಥಿಕರೂ ಸಿದ್ಧವಾದರು. ಶಸ್ತ್ರಾಸ್ತ್ರ ಶೇಖರಣೆಗೆ, ವಸ್ತು ಆಹಾರ ಪದಾರ್ಥಗಳ ಶೇಖರಣೆಗೆ ಎರಡು ತಿಂಗಳ ಕಾಲ ಹಿಡಿಯಿತು.

ಸಮುದ್ರದಂತಿದ್ದ ಈ ಅಪಾರಸೇನೆ, ಸುಮುಹೂರ್ತದಲ್ಲಿ ದ್ವಾರವತಿಯಿಂದ ಹೊರಡಲು ಸಿದ್ಧವಾಯಿತು. ಹಿಂದಿನ ಯುದ್ಧಗಳಲ್ಲಿ ಪಾಲುಗೊಂಡಿದ್ದ ಮಹಾದಂತಿಯೊಂದು ಸೇನಾಗ್ರದಲ್ಲಿ ಸರ್ವಾಲಂಕಾರಗಳಿಂದ ಪ್ರಭುಗಳ ವಾಹನವಾಗಿ ಬಂದು ನಿಂತಿತು. ಸಾಲಿಗೆ ಮೂರು ಮೂರರಂತೆ ನೂರು ಆನೆಗಳೂ, ಎರಡು ಸಾವಿರ ಅಶ್ವಾರೋಹಿ ರಥಾರೋಹಿಗಳೂ, ಹದಿನೈದು ಸಾವಿರ ಪದಾತಿಗಳೂ, ಈ ಮಹಾಸೈನ್ಯಕ್ಕೆ ಬೇಕಾಗುವ ಸಕಲ ಸಾಮಗ್ರಿಗಳೂ, ಆಹಾರ ಪದಾರ್ಥಗಳೂ, ಸೇವಕರೂ, ವೈದ್ಯವರ್ಗ ಎಲ್ಲವೂ ಸಾಗಿದವು. ನಾಲ್ವರು ಸೇನಾಧಿಪತಿಗಳೂ, ಪ್ರಭುಗಳ ಎರಡು ಕಡೆಗಳಲ್ಲಿ ಅಂಗರಕ್ಷಕರಾಗಿ ಹೊರಟರು. ಇವರೊಡನೆ ಗರುಡ ಬಾಗಿಪ್ಪಯ್ಯ, ಗರುಡ ಬೋಕಿ ಇವರೂ ಇದ್ದರು.

ಪ್ರಭುಗಳು ಪ್ರಾತಃಕಾಲವೆ ವಾಸಂತಿಕಾದೇವಿಯನ್ನು ಪೂಜಿಸಿ, ವಿಜಯನಾರಾಯಣನನ್ನು ಪೂಜಿಸಿ, ದಿವ್ಯಾಯುಧಗಳಿಂದ ಭೂಷಿತರಾಗಿ, ಅರಮನೆಯಿಂದ ಹೊರಡುವ ಮುನ್ನ ತಮ್ಮ ರಾಣಿಯರನ್ನು ಕಾಣಲು ಹೋದರು. ಮಹಾರಾಣಿಯೂ, ಶಾಂತಲೆಯೂ ಇತರ ರಾಣಿಯರೂ ಪ್ರಭುಗಳಿಗೆ ಜಯವನ್ನು ಕೋರಿ ವಿಜಯಮಾಲೆಯನ್ನು ಹಾಕಿದರು. ಪ್ರಭುಗಳು ಲಕ್ಷ್ಮಿಯನ್ನು ಏಕಾಂತದಲ್ಲಿ ಕಂಡು 'ನಮ್ಮ ಮೇಲೆ ವಿಜಯನಾರಾಯಣನ ಕೃಪೆ ಇದೆ, ನೀನು ಅಧೀರಳಾಗಬೇಡ. ನಿನ್ನ ನರಸಿಂಹನ ಪೂಜೆ ದಿನಕ್ರಮದಂತೆ ನಡೆಯಲಿ. ನಿನ್ನ ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊ. ನಿನ್ನ ಮನಸ್ಸು ಶಾಂತಿಯಿಂದಿದ್ದರೆ,

ನಾವು ವಿಜಯೋತ್ಸಾಹಿಗಳಾಗಿರುತ್ತೇವೆ. ಬೇಗನೆ ವಿಜಯವನ್ನು ಗಳಿಸಿಕೊಂಡೇ ಬರುತ್ತೇವೆ. ಎಂಟು ಹತ್ತು ದಿನಕ್ಕೊಮ್ಮೆ ನಿನ್ನ ಆರೋಗ್ಯವನ್ನು ನಮಗೆ ಬರೆದು ತಿಳಿಸುತ್ತಿರು. ನಾವೂ ಹಾಗೆಯೇ ಮಾಡುತ್ತೇವೆ. ಇನ್ನು ನಮ್ಮನ್ನು ಸಮಾಧಾನದಿಂದ ಕಳಿಸಿಕೊಡು' ಎಂದರು.

ಲಕ್ಷ್ಮೀದೇವಿ ಹಾಗೆಯೆ ನಡೆದುಕೊಳ್ಳುತ್ತೇನೆಂದು ಮಾತು ಕೊಟ್ಟಳು. ಅನಂತರ ಹೇಳಿದಳು: 'ದೇವ, ಲಕ್ಷ್ಮಿ ಋತುಸ್ನಾನ ಮಾಡಿ ಎರಡು ತಿಂಗಳಾದುವು. ಗರ್ಭ ತಾಯಿಯ ಶರೀರದಲ್ಲಿ ವೃದ್ಧಿಹೊಂದುತ್ತಿದೆ' ಎಂದು.

ಪ್ರಭುಗಳ ಆನಂದ ಭರಿಸಲಾರದಷ್ಟಾಯಿತು. ಸಂತೋಷದಿಂದ ದೇವಿಯನ್ನು ಆಲಿಂಗಿಸಿಕೊಂಡು, 'ಲಕ್ಷ್ಮಿ ತನ್ನ ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊಳ್ಳಲಿ. ದೇವಿ, ನೀನು ನಮಗೆ ಈ ಉತ್ಸಾಹಸಮಯದಲ್ಲಿ ಮಹದಾನಂದದ ಸುದ್ದಿಯನ್ನು ಕೊಟ್ಟೆ. ನೀನು ನಮ್ಮೊಡನೆ ಇರುವಷ್ಟು ಕಾಲ ನಾವೂ ಇರುತ್ತೇವೆ. ನಿನ್ನ ಆಯುಃಪರಿಮಿತಿ ಪೂರ್ತಿಯಾದ ದಿನವೇ ನಮ್ಮದೂ ಆಗುವುದು. ನಿನ್ನ ಲಕ್ಷ್ಮಿಯನ್ನು ಚೆನ್ನಾಗಿ ಕಾಪಾಡಿಕೊಂಡು ಬಾ. ನಮ್ಮ ಕುವರನೇ ಹುಟ್ಟುವನೆಂಬ ಭರವಸೆ ನಮಗಾಗಿದೆ' ಎಂದು ಹೇಳಿ ಆನಂದಹೃದಯರಾಗಿ ಆ ಬಳಿಕ ಮಗುವಿನೊಡನೆ ಬಳಿಗೆ ಬಂದ ಶಾಂತಲೆಯನ್ನು ಅರ್ಥಾತ್ ಚಂದಲೆಯನ್ನು ಬಳಿಯಲ್ಲಿ ಕೂಡಿಸಿಕೊಂಡು ಸಲ್ಲಾಪಗೆಯ್ದು, ಚಿಕ್ಕಶಾಂತಲೆಯನ್ನು ಕೈಗಳಲ್ಲಿ ಎತ್ತಿಕೊಂಡು ಮಮತೆ ತೀರುವಷ್ಟು ಮುದ್ದಿಟ್ಟು, ಅನಂತರ ಆನೆಯನ್ನು ಹತ್ತಿ ವಿಜಯನಾರಾಯಣನನ್ನು ಸ್ಮರಿಸುತ್ತ ವಿಜಯಕಾಂಕ್ಷಿಯಾಗಿ ಹೊರಟರು. ಹೊಯಿಸಳ ಮಹಾಸೇನೆ ಸಾಗರದ ಅಲೆಗಳಂತೆ ದ್ವಾರವತಿಯಿಂದ ಹೊರಟಿತು.

§

ಅನೇಕ ದಿನಗಳ ಪ್ರಯಾಣವಾದ ಮೇಲೆ ವಿಷ್ಣುವರ್ಧನ ಪ್ರಭು ಎರಡನೆಯ ಸಲ ಹಾನಗಲ್ಲು ದುರ್ಗಕ್ಕೆ ಬಲವಾದ ಮುತ್ತಿಗೆ ಹಾಕಿದರು. ಕುಂಜುಶೆಟ್ಟಿ ಈಗ ಮಲ್ಲಿಕಾರ್ಜುನನ ಸೇವೆಯಲ್ಲಿರಲಿಲ್ಲ. ದುರ್ಗದ ರಕ್ಷಣೆಗೆ ಕದಂಬರ, ಚಾಲುಕ್ಯರ, ಪಾಂಡ್ಯರ, ಸಂಯುಕ್ತಸೇನೆ ಸಿದ್ಧವಾಗಿತ್ತು. ಯುದ್ಧ ಮೊದಲಾದ ಒಂದು ತಿಂಗಳೊಳಗೆ, ವಿಷ್ಣುವರ್ಧನ ಪ್ರಭುವಿನ ಸೈನ್ಯ ಶಿಬಿರಗಳಲ್ಲಿ ಸಾಂಕ್ರಾಮಿಕ ಉಪಟಳ ಒಂದು ಕಾಣಿಸಿಕೊಂಡಿತು. ಶತ್ರುಗಳ ಹೊಂಚಿಕೆ

ಯಿಂದಲೇ ಹೀಗಾಯಿತು. ಹೊಯಿಸಳ ಸೈನ್ಯಗಳು, ಅಶುದ್ಧ ಜಲವನ್ನು ತಿಳಿ ಯದೆ ಉಪಯೋಗಿಸಿದರು. ಇದರಿಂದ ಸ್ವಲ್ಪಮಟ್ಟಿಗೆ ಹೊಯಿಸಳರಿಗೆ ಸೈನ್ಯ ನಷ್ಟವಾಯಿತು. ಆಗ ಹೊಯಿಸಳ ಸೇನೆ ತಮ್ಮ ಉಪಯೋಗಕ್ಕೆ ಹೊಸದಾಗಿ ವಾಪೀ ಕೂಪ ತಟಾಕಾದಿಗಳನ್ನು ತತ್‌ಕ್ಷಣವೆ ನಿರ್ಮಿಸಿಕೊಳ್ಳಬೇಕಾಯಿತು. ಸೈನ್ಯವೆಲ್ಲ ಆರೋಗ್ಯಸ್ಥಿತಿಗೆ ಬರಬೇಕಾದರೆ ಹಲವು ತಿಂಗಳ ಕಾಲ ಹಿಡಿಯಿತು. ಪ್ರಭುಗಳು ಎದೆಗೆಡಲಿಲ್ಲ. ದುರ್ಗವನ್ನು ವಶಮಾಡಿಕೊಂಡಲ್ಲದೆ ಹಿಂದಿರುಗೆ ನೆಂದು ಪಣ ತೊಟ್ಟರು. ಹೊಯಿಸಳ ಸೇನೆ ಬಿರುಸಿನಿಂದ ದುರ್ಗದ ಮೇಲೆ ದಾಳಿಯಿಡಲು ಆರಂಭಿಸಿತು. ಶತ್ರುಗಳ ಸೇನೆಯೂ ಜಗ್ಗಲಿಲ್ಲ. ಎರಡು ಕಡೆಯೂ ನಷ್ಟ ಹೆಚ್ಚಾಯಿತು. ಶತ್ರುಗಳು ದುರ್ಗವನ್ನು ಈ ಸಲ ಬಹು ಭದ್ರ ಪಡಿಸಿಕೊಂಡಿದ್ದರು. ಚಳಿಗಾಲ ಕಳೆದೊಡನೆಯೆ ಹೊಯಿಸಳ ಸೇನೆ ಪ್ರಬಲ ದಾಳಿಗೆ ಮೊದಲಿಟ್ಟಿತು. ಜೀವದ ಹಂಗನ್ನು ತೊರೆದು ಯುದ್ಧಮಾಡಲು ಉಪ ಕ್ರಮಿಸಿತು. ಮಲ್ಲಿಕಾರ್ಜುನನ ಸೇನೆ ದಿನೇ ದಿನೇ ಕ್ಷಯಿಸುತ್ತ ಬಂದಿತು. ಅದನ್ನು ಕಂಡು ಮಲ್ಲಿಕಾರ್ಜುನನು ಹಿಂದಿನಂತೆ ಉಳಿದ ಸೇನೆಯೆಲ್ಲವನ್ನೂ ದುರ್ಗದೊಳಕ್ಕೆ ಕರಸಿಕೊಂಡು, ದುರ್ಗದ ಮೇಲಿನಿಂದ ಹೊಯಿಸಳ ಸೇನೆ ಯನ್ನು ನೋಯಿಸಲು ತೊಡಗಿದ. ಹಿಂದಿನ ದುರ್ಗದ ಬಾಗಿಲುಗಳು ಶಿಥಿಲ ವಾಗಿದ್ದುದರಿಂದ ಮಲ್ಲಿಕಾರ್ಜುನನು, ಹೊಸತಾಗಿ ಬಲು ಗಟ್ಟಿಯಾದ ಬಾಗಿಲು ಗಳನ್ನು ಮಾಡಿಸಿದ್ದ. ಮಲ್ಲಿಕಾರ್ಜುನನು ತನ್ನ ದುರ್ಗದ ಬಾಗಿಲುಗಳು ಅಭೇದ್ಯವೆಂದೇ ತಿಳಿದಿದ್ದ.

ದುರ್ಗದ ಬಾಗಿಲುಗಳನ್ನು ಒಡೆದು ಒಳನುಗ್ಗಿದಲ್ಲದೆ, ಈ ಯುದ್ಧ ಕೊನೆ ಗಾಣದೆಂದು ವಿಷ್ಣುವರ್ಧನಪ್ರಭು ಅರಿತರು. ಆನೆಗಳ ಕೈಗೆ ತೂಗುದಿಮ್ಮಿ ಗಳನ್ನು ಕೊಟ್ಟು ದುರ್ಗದ ಬಾಗಿಲುಗಳನ್ನು ಒಡೆಯಿಸಲು ಪ್ರಯತ್ನಿಸಿದರು. ಈ ಹೊಸ ಬಾಗಿಲುಗಳಿಗೆ ಲೋಹಪರಿಘಗಳನ್ನು ಹಾಕಿ ಬಿಗಿಸಿತ್ತಾದ್ದರಿಂದ, ಅವು ಆನೆಗಳ ದಾಳಿಯನ್ನೂ ತಡೆದುವು. ಆಗ ಪ್ರಭುಗಳಿಗೆ ಒಂದು ಯೋಚನೆ ಹೊಳೆಯಿತು: 'ಉದ್ದನೆ ದಂತಗಳಿರುವ ಆನೆಗಳನ್ನು ಬಿಟ್ಟು ಬಾಗಿಲುಗಳನ್ನು ಹಿಡಿದು ನಿಲ್ಲಿಸಿರುವ ಅಡಿಪಾಯವನ್ನೇ ಅಗೆಯಿಸಿರಿ' ಎಂದು ಆಜ್ಞೆಮಾಡಿದರು. ಆನೆಗಳು ತಮ್ಮ ದಂತಗಳಿಂದ ಪಾಯವನ್ನೇ ಅಗೆಯಲು ಪ್ರಾರಂಭಿಸಿದವು. ತಳಪಾಯವನ್ನು ಮುಟ್ಟಲು ಬಹು ಶ್ರಮವಾಯಿತು. ದುರ್ಗದ ಬಾಗಿಲ

ಮುಂಭಾಗವೆಲ್ಲ ದೊಡ್ಡ ಹಳ್ಳವಾಗಿಹೋಯಿತು. ಆನೆಗಳು ತಳಪಾಯದ ದೊಡ್ಡ ಕಲ್ಲುಗಳನ್ನು ಲೋಹದ ಸರಪಳಿಗಳಿಂದ ಮೀಟುದಿಮ್ಮಿಗಳಿಂದ ಜಗ್ಗಿಸಿ, ಜಗ್ಗಿಸಿ ಕಡೆಗೆ ಕಿತ್ತವು. ಹೆಬ್ಬಾಗಿಲೊಂದು ಕುಸಿದು ಮಹಾಶಬ್ದದೊಡನೆ ನೆಲ ಕ್ಕುರುಳಿತು. ಅದರೊಡನೆ ಮಲ್ಲಿಕಾರ್ಜುನನ ಧೈರ್ಯವೂ ಉರುಳಿಹೋಯಿತು. ಮದಿಸಿದ ಮಾತಂಗಗಳ ದಂಡು ದುರ್ಗದ ಒಳಗಿದ್ದ ಮಲ್ಲಿಕಾರ್ಜುನನ ಬಹು ಸೇನೆಯನ್ನು ತುಳಿದು ತುಳಿದು ಕೊಂದಿತು. ಶತ್ರುಸೈನಿಕರ ಸಾವಿರಾರು ನಾರಾಚಗಳು ಆ ದಂತಿಗಳ ಮೈಯನ್ನು ಕ್ಷತ ವಿಕ್ಷತ ಮಾಡಿದವು. ಈ ಯುದ್ಧ ದಲ್ಲಿ ವಿಷ್ಣುವರ್ಧನನ ಅನೇಕ ಆನೆಗಳು ಮಡಿದವು. ಆ ದಿನದ ಯುದ್ಧದಲ್ಲಿ ಪ್ರಭುವಿನ ಕತ್ತಿಯೇ ಮಾಸಣನಿಗೆ ಮಸಣವನ್ನು ಕೊಟ್ಟಿತು. ಮಲ್ಲಿಕಾರ್ಜುನನು ಈ ಸಲವೂ ವಿಷ್ಣುವರ್ಧನನಿಗೆ ಶರಣುಬಂದು 'ಇನ್ನು ಜನ್ಮೇಪಿ ಹೀಗೆ ಮಾಡೆ' ಎಂದು ಶಿವಪ್ರಸಾದವನ್ನು ಮುಟ್ಟಿ ಪ್ರಮಾಣ ಮಾಡಿದ. ದಯಾರ್ದ್ರನಾದ ವಿಷ್ಣುಪ್ರಭು ಈ ಸಲವೂ ಅವನಿಗೆ ಪ್ರಾಣಭಿಕ್ಷೆಯನ್ನಿತ್ತರು. ಆದರೆ ರಾಜ್ಯ ವನ್ನು ಬಿಟ್ಟುಕೊಡಲಿಲ್ಲ. ಮಲ್ಲಿಕಾರ್ಜುನ ಪದಭ್ರಷ್ಟನಾದ.

ಆ ದಿನ ಸೂರ್ಯನು ಮುಳುಗುತ್ತಿರುವಾಗ ಪ್ರಭುಗಳು ವಿಜಯೋತ್ಸವದಲ್ಲಿ ತಮ್ಮ ಶಿಬಿರಕ್ಕೆ ಹಿಂದಿರುಗಿದರು. ಅದೇ ಹೊತ್ತಿಗೆ ಸರಿಯಾಗಿ, ಬೊಪ್ಪಣ ತನ್ನ ತಂದೆ ಗಂಗರಾಜರ ನೆನಪಿಗಾಗಿ ದ್ವಾರವತಿಯಲ್ಲಿ ಕಟ್ಟಿಸಿದ ಬಹು ಸುಂದರ ವಾದ ಪಾರ್ಶ್ವನಾಥ ಬಸದಿಯಲ್ಲಿ ಶ್ರೀ ಪಾರ್ಶ್ವನಾಥಸ್ವಾಮಿಯ ಸ್ಥಾಪನೆ ನಡೆದು, ಸ್ವಾಮಿಯ ಶೇಷೆಯನ್ನು ಇಂದ್ರರು ದ್ವಾರವತಿಯಿಂದ ಹೊತ್ತುತಂದು, ತಟ್ಟೆಯಲ್ಲಿಟ್ಟು ಪ್ರಭುಗಳಿಗೆ ಅರ್ಪಿಸಿದರು. ಆ ಹೊತ್ತಿನಲ್ಲಿಯೇ ಮಹಾರಾಜ್ಞೀ ಲಕ್ಷ್ಮೀದೇವಿಯರಿಗೆ ಸುಖಪ್ರಸವವಾಯಿತೆಂದೂ, ಸುಪುತ್ರನೂ ಮಾತೆಯರೂ ಸುಖದಿಂದಿರುವರೆಂದೂ ಸುದ್ದಿಯನ್ನು ಹೊತ್ತು ದ್ವಾರವತಿಯಿಂದ ಬ್ರಾಹ್ಮಣರೂ ಬಂದರು. ಪ್ರಭುಗಳ ಆನಂದಕ್ಕೆ ಮೇರೆ ಇಲ್ಲವಾಯಿತು. ಇಂದ್ರರು ತಂದಿತ್ತ ಪಾರ್ಶ್ವನಾಥಸ್ವಾಮಿಯ ಶೇಷೆಯನ್ನು ಭಕ್ತಿ ಆನಂದಗಳಿಂದ ಸ್ವೀಕರಿಸಿ, ಕಣ್ಣುಗಳಿ ಗೊತ್ತಿಕೊಂಡು, ಪಾರ್ಶ್ವನಾಥಸ್ವಾಮಿಯನ್ನು ಅಂದಿನ ವಿಜಯಕ್ಕಾಗಿ 'ವಿಜಯ ಪಾರ್ಶ್ವನಾಥ'ನೆಂದು ಕರೆದು, ಆ ಹೆಸರಿನಿಂದಲೆ ಆ ಬಸದಿಗೆ ಅರಮನೆಯಿಂದ ಭೂರಿ ದತ್ತಿಗಳನ್ನು ಕೊಟ್ಟು, ದಿವಂಗತ ಗಂಗರಾಜರ ಆತ್ಮವನ್ನು ತೃಪ್ತಿಗೊಳಿಸಿ ದರು. ಹುಟ್ಟಿರುವ ಮಗನನ್ನು ನೋಡುವ ಆಶೆಯಿಂದ, ಅದೇ ರಾತ್ರಿಯೆ

ಹಲವು ಇಷ್ಟರೊಡಗೂಡಿ ದ್ವಾರವತಿಗೆ ಆತುರದ ಪ್ರಯಾಣ ಬೆಳಸಿದರು.

§

ಪ್ರಭುಗಳು ಹೆಚ್ಚಿನ ವೈಭವ ಉತ್ಸವಗಳಿಂದ ರಾಜಧಾನಿಯನ್ನು ಪ್ರವೇಶಿಸಿದರು. ಪುರಜನರು ತಮ್ಮ ಪ್ರಭುಗಳ ಮೇಲೆ ಹೆಜ್ಜೆಹೆಜ್ಜೆಗೂ ಹೂಮಳೆಗರೆದರು. ಜಯಘೋಷಿಸಿದರು. ವಿಜಯಶಾಲಿಯಾಗಿ, ಪುತ್ರೋತ್ಸವದಿಂದ ಸಂತೋಷಭರಿತರಾದ ಪ್ರಭುಗಳನ್ನು ಕಂಡು ರಾಜಧಾನಿಯ ಜನರೆಲ್ಲ ಆನಂದದಲ್ಲಿ ಓಲಾಡಿದರು.

ವಿಷ್ಣುಪ್ರಭುವು ಅರಮನೆಯನ್ನು ಸೇರಿದೊಡನೆ, ಲಕ್ಷ್ಮೀದೇವಿಯರನ್ನು ಕಂಡು, ಉಕ್ಕಿದ ಅಕ್ಕರೆಯಿಂದ ಮಾತನಾಡಿಸಿ, ಸುಂದರನಾಗಿ ಚಂದ್ರನಂತೆ ಮನಮೋಹಕನಾದ ಮಗನನ್ನು ತಮ್ಮ ಕೈಗಳಲ್ಲಿ ಎತ್ತಿಕೊಂಡು ಮುದ್ದಾಡಿ ಆನಂದಪಟ್ಟು, ಮಗುವಿಗೆ ವಿಜಯನರಸಿಂಹನೆಂದು ಆಕ್ಷಣ ಹೆಸರಿಟ್ಟು, ಯುವರಾಜ ಪಟ್ಟವನ್ನು ಆ ಮಗುವಿನ ನೆತ್ತಿಗೆ ಆಗಲೆ ಕಟ್ಟಿದರು. ಗುರುಪೀಠದವರನ್ನೂ, ವಿದ್ವಾಂಸರೂ ವೇದಾಧ್ಯಯನಸಂಪನ್ನರೂ ಆದ ಬ್ರಾಹ್ಮಣರನ್ನೂ ಕರೆಯಿಸಿಕೊಂಡು, ಮಗುವಿಗೆ ಆಶೀರ್ವಾದಗಳನ್ನು ಮಾಡಿಸಿದರು.

ದೇಶಾದ್ಯಂತ ಸಕಲ ಮಠ ದೇವಾಲಯಗಳಲ್ಲೂ ವಿಶೇಷ ಪೂಜೆ, ಉತ್ಸವಾದಿಗಳೂ, ಅನ್ನದಾನ ವಸ್ತ್ರದಾನಗಳೂ ನಡೆದವು. ಮಗು ಜನಿಸಿದೊಡನೆ ಬ್ರಾಹ್ಮಣರು ಆಶೀರ್ವದಿಸಿ, ತಾತ್ಕಾಲಿಕ ಗ್ರಹಸಂಪತ್ತಿಯನ್ನು ಅರಿತು, ಈತನೆ ಮುಂದಿನ ಹೊಯಿಸಳ ಪ್ರಭುವೆಂದು ನುಡಿದಿದ್ದರು. ಹೊಯಿಸಳ ವಂಶೋದ್ಧಾರವಾಯಿತು. ರಾಜಮಾತೆಯವರ ಅಭೀಷ್ಟ ಪೂರ್ಣವಾಯಿತು. ಶಾಂತಲೆಯ ಮೌನ ವಾಗ್ದಾನ ಸಂದಿತು.

# ಲಘು ಟಿಪ್ಪಣಿ

ಆಗಮಿಕರು (೧೨೫)—ಆಗಮಗಳನ್ನು—ಎಂದರೆ ದೇವತಾಪ್ರತಿಷ್ಠೆ, ದೇವತಾಪೂಜೆ ಮುಂತಾದವುಗಳನ್ನು ಶಾಸ್ತ್ರೋಕ್ತವಾಗಿ ಬಲ್ಲವರು.

ಆತ್ಮಾರ್ಪಣೆ—ಈ ಲಘು ಟಿಪ್ಪಣಿಯ ಕೊನೆಗೆ ನೋಡಿ.

ಇಂದ್ರರು (೨೨)—ಜೈನರ ಬಸದಿ (ದೇವಾಲಯ) ಗಳಲ್ಲಿರುವ ಅರ್ಚಕರು.

ಓಜ (೧೩೪)—ಉಪಾಧ್ಯಾಯ, ಬಲ್ಲವ. ಇಲ್ಲಿ—ಶಿಲ್ಪವನ್ನು ಬಲ್ಲವ.

ಕಟಕಾಚಾರ್ಯ (೧೪೩)—ಸೈನ್ಯವು ವಿಜಯಪ್ರಯಾಣ ಹೊರಡುವ ಮೊದಲು ವಿಜಯವಾಗಲೆಂದು ದೇವತಾಪ್ರಾರ್ಥನೆಗಳನ್ನು ನಡಸುವವ.

ಕಾಲಲಬ್ಧಿ (೫೧)—ಹಿಂದೆ ಮಾಡಿದ ಕರ್ಮ ಪಕ್ವವಾಗಿ, ಅದರ ಫಲ ಲಭಿಸುವುದು.

ಕುಕ್ಕುಟಸರ್ಪ (೩೨)—ಹಾವಿನ ಹೆಡೆಯನ್ನೂ ಕೋಳಿಯ ಮೈಯನ್ನೂ ಉಳ್ಳ ಪ್ರಾಣಿವಿಶೇಷ. ವಾಸಂತಿಕಾದೇವಿಯ ವಾಹನ.

ಗಂಡಪೆಂಡೇರ (೧೯೯)—ವೀರಾಧಿವೀರರು ಕಾಲಿನಲ್ಲಿ ಧರಿಸುವ ತೋಡ.

ಗಣಾಚಾರದವರು (೩೨)—ಅರಮನೆಯ ಉತ್ಸವಾದಿಗಳಲ್ಲಿ ಪಾಲುಗೊಳ್ಳುವ ಶಿವಾಚಾರದವರು.

ಗದ್ಯಾಣ (೩)—ಸಾಮಾನ್ಯವಾಗಿ ಚಿನ್ನದ್ದು. ಹೆಚ್ಚು ಬೆಲೆಯ ನಾಣ್ಯ.

ಗರುಡ (೨೬೩)—'ಅರಸನಿಗಾಗಿ ಬದುಕುತ್ತೇನೆ, ಅರಸನೊಡನೆ ಮಡಿಯುತ್ತೇನೆ' ಎಂದು ತನ್ನ ಜೀವವನ್ನು ಅರಸನಿಗೆ ಮುಡಿಪುಮಾಡಿ ಅರ್ಪಿಸಿಕೊಂಡ ವೀರ. ಪತ್ನಿ ಆದವಳು ಪತಿ ಮಡಿದರೆ ಸಹಗಮನ ಮಾಡಿಕೊಳ್ಳುವಂತೆ, ತನ್ನ ದೊರೆಗೆ ಹಾನಿಯಾದಲ್ಲಿ ತಾನೂ ಆತ್ಮಾರ್ಪಣೆ ಮಾಡಿಕೊಳ್ಳುವೆನೆಂದು ಪ್ರತಿಜ್ಞೆ ಮಾಡಿದ ಮಹಾಜೀವ. ('ಆತ್ಮಾರ್ಪಣೆ' ಎಂಬಲ್ಲಿ ನೋಡಿ.)

ಚೈತ್ಯಾಲಯ (೩)—ಜೈನರ ಪೂಜಾಗೃಹ, ದೇವಾಲಯ.

ತಿಲೋದಕ (೧೬೫)—ಪಿತೃಗಳಿಗೂ ಪ್ರೇತಗಳಿಗೂ ಸಲ್ಲಿಸುವ ಎಳ್ಳುನೀರು.

ತೀರ್ಥಂಕರ (೩)—ಜೈನರಿಗೆ ದೇವತಾಸ್ವರೂಪರಾದ ಮುಕ್ತಜೀವರು.

ತ್ರಿಭಂಗಿ (೨೪೩)—ಕೈ ಕಾಲು ಕಟಿಗಳನ್ನು ಕ್ರಮವರಿತು ಬಗ್ಗಿಸಿ ನಿಲ್ಲಿಸಿದ ಒಂದು ಸೊಬಗಿನ ನಿಲುವು.

ದೇವಮೂಲೆ (೯)—ಪೂಜಾಗೃಹವನ್ನು ನಿರ್ಮಿಸುವ ನೈಋತ್ಯ ದಿಕ್ಕು.

ಪಂಚಪದ (೧೮೨)—ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಲೋಕದ ಸರ್ವಸಾಧುಗಳು ಎಂಬ ಐದು ತೆರದ ಉತ್ತಮಜೀವಗಳನ್ನು ಸ್ಮರಿಸಿ,

'ಣಮೋ ಅರಿಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಯೇ ಸವ್ವಸಾಹೂಣಂ' ಎಂಬುದಾಗಿ ಶರಣು ಹೇಳುವುದು.

ಪಂಚಮಹಾವಾದ್ಯ (೧೦೩)—ಕೊಂಬು, ತಂಬಟೆ, ಶಂಖ, ಭೇರಿ, ಜಾಗಟೆ.

ಪಂಚಾಂಗಪ್ರಣಾಮ (೨೪)—ಎರಡು ಮಂಡಿ, ಎರಡು ಕೈ, ಮತ್ತು ತಲೆ ಮಾತ್ರ ನೆಲಕ್ಕೆ ತಗುಲುವಂತೆ ಸ್ತ್ರೀಯರು ಮಾಡುವ ನಮಸ್ಕಾರ.

ಬಿಡದಿ (೨೭೬)—ಬಂದವರು ತಂಗುವ ಬಿಡಾರ.

ಭೈರವ (೨೨೧)—'ಗರುಡ'ನಂತೆಯೆ ಆತ್ಮಾರ್ಪಣೆ ಮಾಡಿಕೊಂಡ ವೀರ. ಯುದ್ಧದ ಸಂದರ್ಭದಲ್ಲಿ ಮಾತ್ರ ಜೀವಕೊಡುವವನು. ('ಆತ್ಮಾರ್ಪಣೆ' ನೋಡಿ.)

ಮಧುಪರ್ಕ (೧೦೨)—ಜೇನುತುಪ್ಪ, ಹಾಲು, (ಕೆಲವು ವೇಳೆ ಬಾಳೆಯಹಣ್ಣು) ಇವುಗಳ ಸಂಮಿಶ್ರಣ.

ರಣಬಲಿ (೧೪೪)—ಯುದ್ಧಕ್ಕೆ ಮೊದಲು, ವಿಘ್ನೋಪಶಾಂತಿಗಾಗಿ ತನ್ನನ್ನು ತಾನು ಬಲಿಯಾಗಿ ಒಪ್ಪಿಸಿಕೊಳ್ಳುವುದು. ('ಆತ್ಮಾರ್ಪಣೆ' ನೋಡಿ.)

ರೂವಾರಿ (೯, ೧೩೪)—ರೂಪಕಾರಿ, ಶಿಲ್ಪಿ.

ವಾಸೋದಕ (೧೬೫)—ದೇಹವನ್ನು ಬಿಟ್ಟ ಜೀವವು ಪಿತೃಲೋಕವನ್ನು ಪಡೆಯುವ ಮೊದಲು, ಪ್ರೇತವಾಗಿರುವ ಕಾಲದಲ್ಲಿ, 'ವಾಸ'ವೆಂಬ ವಸ್ತ್ರವಿಶೇಷವನ್ನು ಹಿಂಡಿ ಅದಕ್ಕೆ ಕೊಡುವ ನೀರು.

ವಿಭೂತಿಭಟ್ಟ (೨೧೯)—ಪರಾಕ್ರಮಿಯಾದ ಯೋಧನಿಗೆ ರಾಜನಿಂದ ಸಲ್ಲುತ್ತಿದ್ದ ಒಂದು ದೊಡ್ಡ ಪ್ರಶಸ್ತಿ. ಹಣೆಯಲ್ಲಿ ಧರಿಸಬಹುದಾದ ಚಿನ್ನದ ತ್ರಿಪುಂಡ್ರ.

ವೀರಗಲ್ಲು (೧೪೪)—'ಗರುಡ'ನಾಗಿಯೊ, 'ಭೈರವ'ನಾಗಿಯೊ, ಹೀಗೆ ಯಾವುದಾದರೊಂದು ವೀರರ ರೀತಿಯಲ್ಲಿ ಆತ್ಮಾರ್ಪಣೆ ಮಾಡಿಕೊಂಡ ವೀರನ ನೆನಪಿಗಾಗಿ ನೆಡುವ ಕಲ್ಲು. ('ಆತ್ಮಾರ್ಪಣೆ' ನೋಡಿ.)

ವೈಖಾನಸರು (೨೪೮)—ವೈಖಾನಸ ಆಗಮಗಳನ್ನು ಅರಿತ ವೈಷ್ಣವರು.

ವೈತಾಳಿಕರು (೧೦೩)—ಅರಸರಿಗೆ ಸುಪ್ರಭಾತವನ್ನು ಹಾಡಿ, ಅವರನ್ನು ಎಚ್ಚರಗೊಳಿಸುವ ಗಾಯಕರು. (ವೈತಾಳಿಕರು ವಂದಿ ಮಾಗಧರು ಇದ್ದಂತೆ.)

ಶೇಷೆ (೨೪)—ಪೂಜೆಗೋ ಶುಭಕಾರ್ಯಕ್ಕೋ ಉಪಯೋಗಿಸಿ ಮಿಕ್ಕ ಹೂವು, ಅಕ್ಷತೆ, ನೈವೇದ್ಯ, ಮುಂತಾದ ಪ್ರಸಾದ.

ಸತಿ (೨೬೪)—ಪತಿಯೊಡನೆ 'ಸಹಗಮನ' ಅಥವಾ 'ಸಹಾನುಭೂತಿ' ಮಾಡಿಕೊಂಡವಳು. ವೀರರ 'ವೀರಗಲ್ಲು'ಗಳಂತೆ ಸತಿಯ ಸ್ಮಾರಕಶಿಲೆಗಳನ್ನು 'ಮಾಸ್ತಿಗಲ್ಲು' (ಮಹಾಸತಿಕಲ್ಲು) ಎನ್ನುತ್ತಾರೆ.

ಸಲ್ಲೇಖನ (೧೮೨, ೩೪೦)—ಜಿನಧರ್ಮಕ್ಕೆ ಅವಿರೋಧವಾದ ದೇಹವಿಸರ್ಜನೆಯು

ವಿಧಾನ. ಜೈನ ಆಗಮುಗಳಲ್ಲಿ ಹೇಳಿರುವ ರೀತಿಯಿಂದ ನಿರಾಹಾರ ವ್ರತವನ್ನು ನೆರವೇರಿಸ್ಸಿ, ಜೀವಕ್ಕೂ ದೇಹಕ್ಕೂ ಇರುವ ಬೆಸುಗೆಯನ್ನು ಬಿಡಿಸುವ ಒಂದು ವ್ರತ. ಸಲ್ಲೇಖನವನ್ನು ಕುರಿತು ಆಚಾರ್ಯ ಸಮಂತಭದ್ರರು ತಮ್ಮ 'ರತ್ನ ಕರಂಡಕ'ದಲ್ಲಿ ಹೀಗೆ ಹೇಳಿದ್ದಾರೆ:

'ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ
ಧರ್ಮಾಯ ತನುವಿಮೋಚನಂ ಅಹುಃ ಸಲ್ಲೇಖನಾಂ ಆರ್ಯಾಃ'

ಇದು ಗೃಹಸ್ಥಧರ್ಮದ ಒಂದು ಅಂಗವೆಂದು ಆಶಾಧರನ 'ಧರ್ಮಾಮೃತ'ವು ಹೇಳುತ್ತದೆ:

'ಸಮ್ಯಕ್ತ್ವಮಮಲಂ ಅಮಲಾನ್ಯಣುಗುಣಶಿಕ್ಷಾವ್ರತಾನಿ ಮರಣಾಂತೇ
ಸಲ್ಲೇಖನಾ ಚ ವಿಧಿನಾ ಪೂರ್ಣಃ ಸಾಗಾರಧರ್ಮೋಽಯಂ'

ಸೌಧರ್ಮ (೮೨)—ಜೈನರ ಸ್ವರ್ಗಗಳಲ್ಲಿ ಒಂದು.

ಸಿದ್ಧತಲೆ (೩೨೮)—ಸ್ವಲ್ಪ ಕಾಲಾನಂತರ ತಾನಾಗಿಯೆ ಬೀಸಿ ಬಂದು ಕತ್ತರಿಸುವ ಒಂದು ಚಂದ್ರಾಯುಧ ಸಹಿತವಾದ ಯಂತ್ರಸಾಧನದ ಮುಂದೆ, ಆಯುವರಿತು, ಸಿದ್ಧಾಸನದಲ್ಲಿ ಯೋಗಾರೂಢನಾಗಿ ಕುಳಿತು, (ಭೈರವ, ರಣಬಲಿಗಳಂತೆ) ತನ್ನ ತಲೆಯನ್ನು ಒಪ್ಪಿಸಿಕೊಡುವ ಒಂದು ವಿಶೇಷ ವಿಧಿ.

ಹಿರಣ್ಯಗೋಗರ್ಭ (೩೨೮)—'ತುಲಾಭಾರ'ದಂತಹ ಒಂದು ಅತಿಶಯವಾದ ಕ್ರತು.

ಹೆದ್ದೊರೆ (೩೨೫)—ಕೃಷ್ಣಾನದಿ.

ಹೊರೆ (೩೫೦)—ಕಾಲದ ಒಂದು ಪ್ರಮಾಣ. 2½ ಘಳಿಗೆ=1 ಹೊರೆ (೧ ಗಂಟೆ.)
3 ಹೊರೆ=1 ಜಾವ.

## ಕರ್ಣಾಟಕದಲ್ಲಿ ವೀರರ ಆತ್ಮಾರ್ಪಣೆ

ಪ್ರಾಣಕ್ಕಿಂತ ಅಮೂಲ್ಯವಾದದ್ದು, ಪವಿತ್ರವಾದದ್ದು ಮತ್ತೊಂದಿಲ್ಲ ಎಂಬುದು ಸಾಮಾನ್ಯ ತಿಳಿವಳಿಕೆಯಾದರೂ—ಅಥವಾ ಆ ತಿಳಿವಳಿಕೆ ಇದ್ದದ್ದರಿಂದಲೇ—ತಾವು ಪರಮಶ್ರೇಷ್ಠವೆಂದು ನಂಬಿದ್ದ ಕೆಲವು ಭಾವನೆಗಳಿಗಾಗಿ ತಮ್ಮ ಪ್ರಾಣವನ್ನು ನಿಶ್ಚಿಂತೆಯಾಗಿ ಸ್ವರುಚಿಯಿಂದ ತಮ್ಮ ಕೈಯಾರೆ ತಾವೇ ಅರ್ಪಿಸಿಕೊಂಡು, ಇಹಲೋಕದಿಂದ ಇತರ ಲೋಕಗಳನ್ನು ಪಡೆದ ವೀರರ ಉದಾಹರಣೆಗಳು ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಉಂಟು. ಕಳೆದ ಯುದ್ಧದಲ್ಲಿ ತಮ್ಮ ದೇಶಹಿತಕ್ಕೋಸ್ಕರ ಪ್ರಾಣವನ್ನು ತೃಣೀಕರಿಸಿ ಮುಂದೆ ಬಂದ 'suicide squads' ಈ ಜಾತಿಯ ವೀರರ ಪಡೆ. ಇತರ ದೇಶಗಳಲ್ಲಿ ಇಂತಹ ಮರಣವು ಒಂದು ಲೌಕಿಕ ವೀರವಾಗಿ ಪರಿಗಣಿತವಾದರೆ, ನಮ್ಮ ದೇಶದಲ್ಲಿ ಇದು ಒಂದು ಪರಮಾರ್ಥದ ವೀರವಾಗಿ ಎಣಿಸಲ್ಪಟ್ಟಿದೆ.

ಸಮುದ್ರನು ಲಂಕೆಗೆ ದಾರಿಕೊಡದೆ ಇದ್ದಾಗ ರಾಮನು 'ಪ್ರಾಯೋಪವೇಶ'ಕ್ಕೆ

ಉದ್ಯುಕ್ತನಾದದ್ದೂ, ಹದಿನಾಲ್ಕು ವರ್ಷಗಳನಂತರ ರಾಮನು ವನವಾಸದಿಂದ ಹಿಂದಿರುಗದಿದ್ದರೆ ತಾನು 'ಅಗ್ನಿಪ್ರವೇಶ' ಮಾಡಿ ಪ್ರಾಣತ್ಯಾಗಮಾಡುವೆನೆಂದು ಭರತನು ನಿಶ್ಚಯಿಸಿದ್ದೂ, ತನ್ನ ತಮ್ಮಂದಿರಲ್ಲಿ ಯಾವನು ಮೃತನಾದರೂ ಅವನೊಡನೆ ಅಗ್ನಿಯಲ್ಲಿ ಸಹಗಮಿಸುವೆನೆಂದು ಧರ್ಮರಾಜನು ಪ್ರತಿಜ್ಞೆಮಾಡಿದ್ದೂ, ಬದುಕು ದುರ್ಭರವಾದಾಗ ಬೆಟ್ಟದ ಶಿಖರದಿಂದ ಹಾರಿ ಪ್ರಾಣವನ್ನು ಕಳೆದುಕೊಳ್ಳುವ 'ಭೃಗುಪತನ'ವೂ—ಪುರಾಣೇತಿಹಾಸ ಕಾಲಗಳ ವೀರರ ಆತ್ಮಾರ್ಪಣೆಯ ಉದಾಹರಣೆಗಳು.

ಚರಿತ್ರೆಯ ಕಾಲಕ್ಕೆ ಬಂದರೆ, ರಾಜಪುತ್ರರ 'ಜೋಹರ್' ಪದ್ಧತಿಯನ್ನು ಅರಿಯದವರಾರು? ದಕ್ಷಿಣ ದೇಶದ—ಅದರಲ್ಲೂ ವಿಶೇಷವಾಗಿ ಕರ್ನಾಟಕದ—'ವೀರಗಲ್ಲು'ಗಳನ್ನೂ 'ಮಾಸ್ತಿಗಲ್ಲು'ಗಳನ್ನೂ ನೋಡದವರಾರು? ಕೇಳದವರಾರು?

ಪತ್ನಿ ತನ್ನ ಪತಿಯನ್ನು ಕಳೆದುಕೊಂಡು ಹಿಂದೆ ಇರಲಾರದೆ, ಆತನ ಕಳೇಬರದೊಂದಿಗೆ ಅಗ್ನಿಯಲ್ಲಿ ತಾನೂ ಬೆಂದು ಬೂದಿಯಾದ ಕುಲವಧುಗಳ ಕಥೆ ಯಾರಿಗೆ ಗೊತ್ತಿಲ್ಲ? ಇಂತಹ 'ಮಹಾಸತಿ'ಯರಂತೆಯೇ ಅನೇಕ ವೀರಪುರುಷರು ಕೂಡ ಅತ್ಯಂತವಾದ ಸ್ವಾಮಿಭಕ್ತಿಯಿಂದ, ಅತ್ಯಂತವಾದ ದೇಶಪ್ರೇಮದಿಂದ ಅನ್ಯಾಯಗಳನ್ನು ಕ್ರೌರ್ಯಗಳನ್ನು ಜೀವಹಿಂಸೆಗಳನ್ನು ಎದುರಿಸಿ ನ್ಯಾಯ ಕರುಣೆ ಜೀವದಯೆಗಳನ್ನು ಎತ್ತಿಹಿಡಿಯುವುದಕ್ಕಾಗಿ ತಮ್ಮ ಪ್ರಾಣಗಳನ್ನು ಅರ್ಪಿಸಿರುವ ಅನೇಕ ಉದಾಹರಣೆಗಳುಂಟು. ಕಳ್ಳರು ಗೋವುಗಳನ್ನು ಅಪಹರಿಸಬಂದಾಗ, ಆನೆಯೋ ಹುಲಿಯೋ ಜನರಿಗೆ ಉಪದ್ರವಕೊಟ್ಟಾಗ, ಮಹಿಳೆಯರ ಮಾನಾಪಹಾರಕ್ಕೆ ಪ್ರಯತ್ನ ನಡೆದಾಗ, ಸ್ವಾಮಿಯಾದವನಿಗೆ ಹಾನಿ ಸಂಭವಿಸಿದಾಗ, ದೇವದಾಯ ಧರ್ಮದಾಯ ಮೊದಲಾದವಕ್ಕೆ ತೊಂದರೆಯೊದಗಿದಾಗ—ಇಂತಹ ಸಂದರ್ಭಗಳಲ್ಲಿ ಧರ್ಮಪ್ರತಿಷ್ಠಾಪನೆಗೆ ಎದ್ದು ಹೋರಾಡಿ ಮಡಿದವರು ಎಷ್ಟೋ ಮಂದಿ. ಅವರ ಸ್ಮಾರಕಕ್ಕಾಗಿ ನಾಡು ನಿಲ್ಲಿಸಿದ ಕಲ್ಲುಗಳಿಗೆ 'ವೀರಗಲ್ಲು'ಗಳೆಂದು ಹೆಸರು. ಹಾಗೆಯೆ ಮಹಾಸತಿಯರ ನೆನಪಿನವು 'ಮಾಸ್ತಿಗಲ್ಲು'ಗಳು.

ಪ್ರಕೃತದ 'ಶಾಂತಲಾ' ಕಾದಂಬರಿ ಚಿತ್ರಿಸಿರುವ ಕಾಲದಲ್ಲಿ ಇಂತಹ ಆತ್ಮಾರ್ಪಣೆಗಳು ಸಮಾಜದಲ್ಲಿ ಸಾಮಾನ್ಯವಾದ ಆಚಾರಗಳಾಗಿದ್ದುವು. ಇಲ್ಲಿ ಬರುವ—ಗರುಡ—ಭೈರವ—ರಣಬಲಿ—ಸತಿ—ಸಲ್ಲೇಖನ—ಸಿದ್ಧತಲೆ—ಇವುಗಳಿಗೆಲ್ಲ ಶಾಸನಗಳ ನಿಶ್ಚಿತಾಧಾರಗಳುಂಟು. ಹೀಗೆ ಪ್ರಾಣಾರ್ಪಣೆ ಮಾಡಿಕೊಂಡ ವೀರರನ್ನೂ ವೀರೆಯರನ್ನೂ ಸುಮ್ಮನೆ 'ಸತ್ತರು' ಎನ್ನುತ್ತಿರಲಿಲ್ಲ. "ಸತ್ತು ಸುರಲೋಕಕ್ಕೆ ಸಾರಿದಂ . . . ಸುರಲೋಕ ಪ್ರಾಪ್ತನಾದನ್ . . . ಸತಿ ಸಹಾನುಭೂತಿಯಿಂ ಪೊಂದೆ ಸುರಲೋಕಕ್ಕೆ ಸಂದಳು . . . ಮಾಸೇನರ್ ಸ್ವರ್ಗಾಗ್ರಮಾನೇಱಿದಾರ್" ಎಂದು ಅವರಿಗೆ ಸದ್ಗತಿಯನ್ನೇ ಹೇಳುತ್ತಿದ್ದರು. ಹಿಂದಿನ ಆ ವೀರಯುಗದಲ್ಲಿ ಈ ರೀತಿಯ ಪ್ರಾಣಾರ್ಪಣೆ ಒಂದು ಯೋಗವೆಂದು ಪರಿಗಣಿತವಾಗಿತ್ತು.

---

# ಶಾಂತಲಾ

[illegible] ವಿಷ್ಣುವರ್ಧನನ ಕಾಂತೆ, ಹಿರಿಯರಸಿ, ಪಟ್ಟಮಹಾದೇವಿ.

[illegible] ಯನಾರಾಯಣದೇವರನ್ನು ಶ್ರೀವಿಷ್ಣು ಪ್ರತಿಷ್ಠೆ ಮಾಡಿಸಿದ ಹತ್ತಿರವೆ [illegible] ವಿ ಚೆನ್ನಕೇಶವದೇವರನ್ನು ಪ್ರತಿಷ್ಠೆ ಮಾಡಿಸಿದ್ದಾಳೆ.

[illegible] ನ ದೇವಾಲಯದ ಪೂರ್ವದ್ವಾರದ ಬಲಗಡೆ ಶಾಂತಲಾದೇವಿ, ಶ್ರೀವಿಷ್ಣು [illegible] ಪತಿಯ ವಾಮಭಾಗದಲ್ಲಿ ಮಂಡಿಸಿರುವ ಹಾಗೆ ಶಿಲೆಯಲ್ಲಿ ಕೆತ್ತನೆಯು [illegible]

ಅದೇ ದೇವಾಲಯದ ನವರಂಗದಲ್ಲಿ, ನೈಋತ್ಯದ ಕಂಬದ ತುದಿಯ [illegible] ತ್ಯ ಸರಸ್ವತಿ' ಎಂಬ ಮದನಿಕಾ ವಿಗ್ರಹವು ಶಾಂತಲಾದೇವಿಯ ಪ್ರತಿಬಿಂಬವೆಂದು ಪ್ರತೀತಿ.

ಶಾಂತಲಾದೇವಿ ತನ್ನ ಧರ್ಮಗುರುಗಳ ಹೆಸರಿನಲ್ಲಿ ತನ್ನ ಇಷ್ಟದೈವವಾದ ಶಾಂತಿಜಿನನ ಪ್ರತಿಬಿಂಬವನ್ನು ಶ್ರವಣಬೆಳ್ಗೊಳದ ಚಂದ್ರಗಿರಿಯ ಮೇಲೆ ಪ್ರತಿಷ್ಠೆ ಮಾಡಿಸಿದ್ದಾಳೆ.

ಹಳೆಯಬೀಡಿನ ಹೊಯಿಸಳೇಶ್ವರ—ಶಾಂತಳೇಶ್ವರ ಬೃಹತ್ ದೇವಾಲಯವು ಈ ರಾಜದಂಪತಿಗಳ ಅನ್ಯೋನ್ಯತೆಯ ನೆನಪಿಗಾಗಿ ಕೇತಮಲ್ಲನಾಯಕನು ಕಟ್ಟಿಸಿದ್ದು.

ಸಕಲಮಂಗಳಲಕ್ಷಣವಂತೆಯಾದ ಶಾಂತಲಾದೇವಿಯ ಗುಣಾವಳಿಗಳನ್ನು ಹಾಸನ, ಬೇಲೂರು, ಶ್ರವಣಬೆಳ್ಗೊಳಗಳ ಶಾಸನಗಳು ಮುಕ್ತಕಂಠದಿಂದ ಕೊಂಡಾಡುತ್ತವೆ.

ಕರ್ಣಾಟಕದ ಶಿಲ್ಪದಲ್ಲೂ ಶಾಸನಗಳಲ್ಲೂ ಹೀಗೆ ನೆನಪಾಗಿರುವ ಶಾಂತಲಾದೇವಿಯ ಶಾಶ್ವತವಾದ ಹಸುರು ಈ ಕೃತಿಯಲ್ಲಿ ಹೂವಾಗಿ ಪರಿಮಳಿಸಿ, ಹಣ್ಣಾಗಿ ರಸತುಂಬಿ, ಶಾಂತಲೆಯ ಭಗವಂತನ ಪಾದಗಳಲ್ಲಿ ಭಕ್ತಿಯಿಂದ ಸಮರ್ಪಿತವಾಗಿದೆ.

ವಿಷ್ಣುವರ್ಧನನ ಕಾಲದ ವೀರಜೀವನವೂ, ದೈವಭಕ್ತಿಯೂ, ಸಕಲಸಮಯ ಸಮಾನಗೌರವವೂ, ಕಲಾಪ್ರೇಮಗಳೂ ಈ ರಚನೆಯಲ್ಲಿ ಪುನರ್ಜನ್ಮವನ್ನು ಪಡೆದು ಬಂದಿವೆ.

ಹೊಯಿಸಳೇಶ್ವರನ ಸಾಮ್ರಾಜ್ಯಸಂಸಾರದ ಏರು-ತಗ್ಗುಗಳ ಕಾಂಡಪಟದ ಮೇಲೆ ರಾಜಮಾತೆಯ, ರಾಜಪತ್ನಿಯ ಗೃಹಜೀವನದ ಸಂಕಟ-ಸಮಸ್ಯೆಗಳೂ, ಸುಖ-ದುಃಖಗಳೂ, ಆಶಾ-ನಿರಾಶೆಗಳೂ ಇಲ್ಲಿ ಬಣ್ಣಬಣ್ಣವಾಗಿ ಚಿತ್ರಿತವಾಗಿವೆ.

ತಾಯಿ - ಮಕ್ಕಳ, ಅರಸು - ಮಂತ್ರಿಗಳ, ರಾಜ - ಪ್ರಜೆಗಳ, ಪತಿ - ಪತ್ನಿಯರ, ಪತ್ನಿ - ಸಪತ್ನಿಯರ, ಸಹೋದರರಲ್ಲದಿದ್ದರೂ ಸೋದರಿಕೆಯನ್ನು ಆದರ್ಶವಾಗಿ ಸಾಧಿಸಿದವರ, ಸ್ವರ್ಗ-ಮರ್ತ್ಯಗಳ ಸಂಬಂಧದ ಸೊಗಸನ್ನು ಈ 'ಶಾಂತಲಾ' ಅಚ್ಚುಕಟ್ಟಾಗಿ ತನ್ನಲ್ಲಿ ಅಡಕಮಾಡಿಕೊಂಡಿದೆ.

ತಂದೆಯಾದ ಮಾರಸಿಂಗಮಯ್ಯ ತನ್ನ ಮುದ್ದುಮಗಳಾದ ಶಾಂತಲೆಯ ನೆನಪಿಗೆ ಅಕ್ಷರರೂಪದ ಒಂದು ಮಾಸ್ತಿಕಲ್ಲನ್ನು ಸ್ಥಾಪಿಸಿದ್ದುದಾದರೆ, ಅದು ಈ 'ಶಾಂತಲಾ' ರೂಪದಲ್ಲಿ ಇದ್ದಿರಬಹುದು ಎನ್ನಿಸುತ್ತದೆ.

ವ್ಯಾಯಾಮಶಾಲಾ, ಬೆಂಗಳೂರು [illegible]